ಶ್ರೀಃ

ಶ್ರೀ ವ್ಯಾಸಮಹರ್ಷಿಪ್ರಣೀತ

# ಶ್ರೀ ಮಹಾಭಾರತವು

ಕರ್ಣಾಟಕ ವಚನ.

## ಆದಿಪರ್ವವು.

(ಎರಡನೇ ಭಾಗ)



ಪಂಡಿತ ದೇವಶಿಖಾಮಣಿ ಅಳಸಿಂಗರಾಚಾರ್ಯವಿರಚಿತವು.



ಪ್ರಕಾಶಕರು

ಕರ್ಣಾಟಕ ಡಿಪೋ,

1/59 ಸನ್ನಿಧಿ ಬೀದಿ, ತಿರುವಲ್ಲಿಕ್ಕೇಣಿ, ಮದರಾಸು.

1933

ಬೆಲೆ ೨-೦-೦.

# ವಿಷಯಾನುಕ್ರಮಣಿಕೆ.

# ಚಿತ್ರಪಟಗಳ ಪಟ್ಟಿ.





# ಸಂಭವಪರ್ವವು.

— ಅದಿತಿ ಮೊದಲಾದ ದಕ್ಷಕನ್ಯೆಯರ ವಂಶೋದ್ಭವವು —

ಶ್ರೀಮನ್ನಾರಾಯಣನಲ್ಲಿ ಇಂದ್ರನು ಹೀಗೆ ಭೂಮ್ಯುದ್ಧಾರಕ್ಕಾಗಿ ಅವತರಿಸಬೇಕೆಂದು ಪ್ರಾರ್ಥಿಸಿ, ತಾನೂ ಇತರದೇವತೆಗಳೊಡನೆ ಭೂಮಿಯಲ್ಲಿ ನಿಜಾಂಶದಿಂದ ಹುಟ್ಟುವುದಾಗಿ ತಿಳಿಸಿದನು. ದೇವೇಂದ್ರನು ಭಗವದಾಜ್ಞೆಯಿಂದ ಸಮಸ್ತ ದೇವತೆಗಳೊಡನೆ ಹಿಂತಿರುಗಿ ಸ್ವರ್ಗಕ್ಕೆ ಬಂದು ಸೇರಿದಮೇಲೆ, ದೇವತೆಗಳೆಲ್ಲರೂ ಕ್ರಮವಾಗಿ ಕ್ಷತ್ರಿಯರೂಪದಿಂದ ಭೂಮಿಯಲ್ಲಿ ಹುಟ್ಟಿರುವ ದೈತ್ಯರನ್ನು ನಾಶಗೊಳಿಸುವುದಕ್ಕಾಗಿ ತಮ್ಮತಮ್ಮ ಅಂಶದಿಂದ ಒಬ್ಬೊಬ್ಬರಾಗಿ ಬೇರೆಬೇರೆ ರೂಪದಿಂದ ಅವತರಿಸತೊಡಗಿದರು. ಕೆಲವರು ಬ್ರಹ್ಮರ್ಷಿವಂಶದಲ್ಲಿಯೂ, ಕೆಲವರು ರಾಜರ್ಷಿವಂಶದಲ್ಲಿಯೂ ಜನಿಸಿದರು. ಹೀಗೆ ನಾನಾಕಡೆಗಳಲ್ಲಿ ನಾನಾರೂಪದಿಂದ ಹುಟ್ಟಿ, ಅಲ್ಲಲ್ಲಿ ಲೋಕಕಂಟಕರಾದ ದಾನವರನ್ನೂ, ರಾಕ್ಷಸರನ್ನೂ, ದುಷ್ಟ ನಾಗರನ್ನೂ, ಗಂಧರ್ವರನ್ನೂ, ಮನುಷ್ಯಭಕ್ಷಕಗಳಾದ ಅನೇಕ ಕ್ರೂರಜಂತುಗಳನ್ನೂ ಕೊಲ್ಲುತ್ತ ಬಂದರು. ದೇವಾಂಶದಿಂದ ಹುಟ್ಟಿದ ಈ ವ್ಯಕ್ತಿಗಳಿಗೆ ಜನ್ಮಸಿದ್ಧವಾಗಿಯೇ ಬಲವೀರ್ಯಗಳು ಅಧಿಕವಾಗಿದ್ದುದರಿಂದ, ಬಾಲ್ಯದಲ್ಲಿಕೂಡ ದೈತ್ಯ, ರಾಕ್ಷಸ, ನಾಗ, ಗಂಧರ್ವರಲ್ಲಿ ಯಾರಿಂದಲೂ ಅವರಮೇಲೆ ಹಗೆತೀರಿಸುವುದಕ್ಕಾಗಲಿ, ಅವರನ್ನಡಗಿಸುವುದಕ್ಕಾಗಲಿ ಸಾಧ್ಯವಾಗಲಿಲ್ಲ'' ಎಂದನು.

ಹೀಗೆಂದು ಹೇಳಿದ ವೈಶಂಪಾಯನನನ್ನು ಕುರಿತು ಜನಮೇಜಯನು ' ಮಹರ್ಷೀ! ದೇವಾಸುರರಲ್ಲಿಯೂ, ನಾಗರಲ್ಲಿಯೂ, ಗಂಧರ್ವರಲ್ಲಿಯೂ ಯಕ್ಷ, ರಾಕ್ಷಸ ಮನುಷ್ಯಾದಿಗಳಲ್ಲಿಯೂ ಯಾರುಯಾರು, ಯಾವಯಾವ ಅಂಶದಿಂದ, ಮತ್ತು ಹೇಗೆ ಹೇಗೆ ಹುಟ್ಟಿದರೆಂಬುದನ್ನೂ, ಅವರವರು ನಡೆ

ಸಿದ ಕಾರ್ಯಗಳನ್ನೂ ನೀನು ವಿವರವಾಗಿ ನನಗೆ ತಿಳಿಸಬೇಕು ಅವನ್ನೆಲ್ಲ ನಿನ್ನಿಂದ ಚೆನ್ನಾಗಿ ಕೇಳಿ ತಿಳಿಯಬೇಕೆಂದು ಕೋರುವೆನು" ಎಂದನು.

ಅದಕ್ಕಾ ವೈಶಂಪಾಯನನು "ರಾಜೇಂದ್ರಾ! ನಿನ್ನಿಷ್ಟದಂತೆಯೇ ಆಗಲಿ, ದೇವಾದಿಗಳ ಉತ್ಪತ್ತಿ ಮೊದಲಾದ ವೃತ್ತಾಂತಗಳನ್ನೆಲ್ಲ ನಿನಗೆ ವಿವರಿಸಿ ತಿಳಿಸುವೆನು" ಎಂದು ಹೇಳಿ, ಮೊದಲು ಮನಸ್ಸಿನಿಂದ ಬ್ರಹ್ಮನನ್ನು ಧ್ಯಾನಿಸಿ, ಆ ಕಥಾವಿವರಗಳನ್ನೆಲ್ಲ ಹೇಳತೊಡಗಿದನು.

"ರಾಜೇಂದ್ರಾ! ಕೇಳು! ಮೊಟ್ಟಮೊದಲು ಮರೀಚಿ, ಅತ್ರಿ, ಅಂಗಿರಸ್ಸು, ಪುಲಸ್ತ್ಯ, ಪುಲಹ, ಕ್ರತುವೆಂಬೀ ಆರುಮಂದಿ ಮಹರ್ಷಿಗಳು ಬ್ರಹ್ಮದೇವನಿಂದ ಹುಟ್ಟಿ ಮಾನಸಪುತ್ರರೆಂದು ಪ್ರಸಿದ್ಧಿಯೊಂದಿರುವರು. ಎಂದರೆ, ಇವರೆಲ್ಲ ಬ್ರಹ್ಮನ ಮನಸ್ಸಂಕಲ್ಪದಿಂದ ಹುಟ್ಟಿದವರು. ಇವರಲ್ಲಿ ಮರೀಚಿಯ ಮಗನು ಕಶ್ಯಪನು. ಈ ಕಶ್ಯಪನಿಗೆ ಅವನ ಭಾರ್ಯೆಯರಾದ ಹದಿಮೂರು ಮಂದಿ ದಕ್ಷಕುಮಾರಿಯರಲ್ಲಿ ಅನೇಕಸಂತಾನಗಳಾದುವು. ಆ ದಕ್ಷಕನ್ಯೆಯರಿಗೆ ಕ್ರಮವಾಗಿ ಅದಿತಿ, ದಿತಿ, ದನು, ಕಾಲೆ, ದನಾಯು, ಸಿಂಹಿಕೆ, ಕ್ರೋಧೆ, ಪ್ರಾಧೆ, ವಿಶ್ವೆ, ವಿನತೆ, ಕಪಿಲೆ, ಮುನಿ, ಕದ್ರುವೆಂದು ಹೆಸರು. ಇವರಲ್ಲಿ ಒಬ್ಬೊಬ್ಬರಿಗೂ ಮಹಾಪರಾಕ್ರಮಶಾಲಿಗಳಾದ ಮಕ್ಕಳು, ಮೊಮ್ಮಕ್ಕಳು ಮೊದಲಾಗಿ ಲೆಕ್ಕವಿಲ್ಲದಷ್ಟು ಸಂತಾನಗಳಾದುವು.

ಅದಿತಿಯಲ್ಲಿ ಲೋಕೇಶ್ವರರೆನಿಸಿದ ದ್ವಾದಶಾದಿತ್ಯರು ಜನಿಸಿದರು. ಆ ಹನ್ನೆರಡುಮಂದಿ ಆದಿತ್ಯರಿಗೂ ಕ್ರಮವಾಗಿ, ಧಾತೃ, ಮಿತ್ರ, ಅರ್ಯಮ, ಶಕ್ರ, ವರುಣ, ಅಂಶ, ಭಗ, ವಿವಸ್ವಂತ, ಪೂಷ, ಸವಿತೃ, ತ್ವಷ್ಟೃ, ವಿಷ್ಣುಗಳೆಂದು ಹೆಸರು. ಈ ಆದಿತ್ಯರಲ್ಲಿ ವಿಷ್ಣುವು ಕೊನೆಯವನಾದರೂ ಗುಣಗಳಲ್ಲಿ ಬೇರೆಲ್ಲರಿಗಿಂತಲೂ ಮೇಲೆನಿಸಿದ್ದನು.

ದಿತಿಗೆ ಹಿರಣ್ಯಕಶಿಪುವೊಬ್ಬನೇ ಪುತ್ರನೆನ್ನುವರು. ಮಹಾಪ್ರಭಾವಶಾಲಿಯಾದ ಆ ಹಿರಣ್ಯಕಶಿಪುವಿಗೆ ಐದುಮಂದಿ ಪುತ್ರರಾದರು. ಅವರಲ್ಲಿ ಪ್ರಹ್ಲಾದನು ಎಲ್ಲರಿಗೂ ಜ್ಯೇಷ್ಠನು. ಅವನ ತಮ್ಮಂದಿರು ನಾಲ್ವರಿಗೂ ಕ್ರಮವಾಗಿ, ಸಂಹ್ಲಾದ, ಅನುಹ್ಲಾದ, ಶಿಬಿ, ಬಾಷ್ಕಲರೆಂದು ಹೆಸರು. ಪ್ರಹ್ಲಾದನಿಗೆ ವಿರೋಚನ, ಕುಂಭ, ನಿಕುಂಭರೆಂಬ ಮೂರುಮಂದಿ ಪುತ್ರ

ರಾದರು. ಇವರೂ ಬಹಳ ಪ್ರಖ್ಯಾತಿಗೊಂಡವರು. ವಿರೋಚನನಿಗೆ ಮಹಾ ಪರಾಕ್ರಮಿಯೆನಿಸಿದ ಬಲಿಚಕ್ರವರ್ತಿಯೊಬ್ಬನೇ ಮಗನು. ಬಾಣನೆಂಬ ಅಸುರಶ್ರೇಷ್ಠನು ಬಲಿಯ ಮಗನೆಂದು ಜನರು ಹೇಳುವರು. ಈ ಬಾಣನು ಬಹಳ ಶ್ರೀಮಂತನು. ಇವನು ಮಹಾಕಾಲನೆಂಬ ರುದ್ರನಿಗೆ ಪರಮ ಭಕ್ತನು.

ಓ ಜನಮೇಜಯರಾಜಾ! ದನುವೆಂಬವಳಿಗೆ (ನಾಲ್ವತ್ತು) ಮೂವತ್ತುನಾಲ್ಕುಮಂದಿ ಪುತ್ರರು. ಇವರಿಗೆಲ್ಲ ಮಹಾಯಶಸ್ವಿಯಾದ ವಿಪ್ರಚಿತ್ತಿಯೆಂಬವನು ರಾಜನೆನಿಸಿದ್ದನು. ಶಂಬರ, ನಮುಚಿ, ಪುಲೋಮ, ಅಸಿಲೋಮ, ಕೇಶಿ, ದುರ್ಜಯ, ಅಯಶ್ಶಿರಸ್ಸು, ಅಶ್ವಶಿರಸ್ಸು, ಅಶ್ವಶಂಖ, ಗಗನಮೂರ್ಧ, ವೇಗವಂತ, ಕೇತುಮಂತ, ಸ್ವರ್ಭಾನು, ಅಶ್ವ, ಅಶ್ವಪತಿ, ವೃಷಪವ , ಅಜಕ, ಅಶ್ವಗ್ರೀವ, ಸೂಕ್ಷ್ಮ, ತುಹುಂಡ, ಇಷುಪಾತ್ತು, ಏಕಚಕ್ರ, ವಿರೂಪಾಕ್ಷ, ಹರಾಹರ, (ಹರ+ಅಹರ) ನಿಚಂದ್ರ, ನಿಕುಂಭ, ಕುಪಟ, ಕಪಟ, ಶರಭ, ಶಲಭ, ಸೂರ್ಯ, ಚಂದ್ರರೆಂಬಿವರೆಲ್ಲರೂ ದಾನವರೆನಿಸುವರು. ಓ ಭರತೋತ್ತಮಾ! ದೇವತೆಗಳಲ್ಲಿ ಪ್ರಖ್ಯಾತರಾದ ಸೂರ್ಯಚಂದ್ರರೇ ಬೇರೆ. ಮೇಲೆ ಹೇಳಿದ ದಾನವಕುಲದ ಸೂರ್ಯಚಂದ್ರರೇ ಬೇರೆ. ಈ ದಾನವಕುಲದವರೆಲ್ಲರೂ ಬಹಳ ಪ್ರಖ್ಯಾತರು. ಬಲವೀರ್ಯಗಳುಳ್ಳವರು. ದಾನವವಂಶಾಭಿವೃದ್ಧಿಗೆ ಕಾರಣಭೂತರೆನಿಸಿ ಪ್ರಖ್ಯಾತಿಗೊಂಡ ಬೇರೆ ಹತ್ತು ಮಂದಿಯುಂಟು. ಅವರಿಗೆ ಕ್ರಮವಾಗಿ ಏಕಾಕ್ಷ, ಮೃತಪ, ಪ್ರಲಂಬ, ನರಕ, ವಾತಾಪಿ, ಶತ್ರುತಾಪನ, ಶಠ, ಗವಿಷ್ಠ, ವನಾಯು, ದೀರ್ಘಜಿಹ್ವರೆಂದು ಹೆಸರು. ಇವರಿಂದ ಹುಟ್ಟಿ ಬೆಳೆದ ಹತ್ತು ದಾನವವಂಶಗಳೂ ಬಲದಲ್ಲಿಯೂ, ವೀರ್ಯದಲ್ಲಿಯೂ ಪ್ರಖ್ಯಾತಿಗೊಂಡಿದ್ದುವು. ಈ ದಾನವರ ಮಕ್ಕಳು, ಮೊಮ್ಮಕ್ಕಳು ಮುಂತಾದ ಸಂತತಿಯವರನ್ನು ಎಣಿಸಿ ಹೇಳುವುದಕ್ಕೇ ಸಾಧ್ಯವಿಲ್ಲ.

ಸಿಂಹಿಕೆಯೆಂಬವಳಲ್ಲಿ ರಾಹು, ಚಂದ್ರಾರ್ಕಮರ್ದನ, ಸುಚಂದ್ರ, ಚಂದ್ರಹರ್ತ, ಚಂದ್ರಪ್ರಮರ್ದನರೆಂಬ ಐದುಮಂದಿ ಪುತ್ರರಾದರು.

ಸ್ವಭಾವದಲ್ಲಿಯೇ ಅತಿಕ್ರೂರಸ್ವಭಾವವುಳ್ಳ ಕ್ರೋಧೆಯೆಂಬವಳಲ್ಲಿಯೂ ಅಸಂಖ್ಯಾತರಾದ ಪುತ್ರರು ಜನಿಸಿದರು. ಇವಳ ಮಕ್ಕಳು, ಮೊಮ್ಮಕ್ಕಳು, ಮುಂತಾದ ಸಂತತಿಯುವರೆಲ್ಲರೂ ತಾಯಿಗೆ ತಕ್ಕಂತೆ ಅತಿಕ್ರೂರಕರ್ಮಿಗಳಾಗಿಯೇ ಹುಟ್ಟಿದರು. ಈ ಸಂತತಿಯುವರೆಲ್ಲರೂ ಕ್ರೋಧವಶರೆಂಬ ಹೆಸರಿನ ಒಂದು ಪ್ರತ್ಯೇಕಸಮುದಾಯಕ್ಕೆ ಸೇರಿದವರಾಗಿದ್ದರು.

ದನಾಯುವಿಗೆ ವಿಕ್ಷರ, ಬಲ, ವೀರ, ವೃತ್ರರೆಂಬ ನಾಲ್ವರು ಪುತ್ರರಾದರು. ಇವರೂ ಬಲಪರಾಕ್ರಮಗಳಿಂದ ಖ್ಯಾತಿಗೊಂಡವರು.

ಕಾಲೆಯೆಂಬವಳಿಗೆ, ವಿನಾಶನ, ಕ್ರೋಧ, ಹಂತೃ, ಕ್ರೋಧಶತ್ರುಗಳೆಂಬ ನಾಲ್ವರೂ, ಮತ್ತು ಕಾಲಕೇಯರೆಂದು ಪ್ರಸಿದ್ಧಿಗೊಂಡ ಬೇರೆ ಕೆಲವರೂ ಹುಟ್ಟಿದರು ಇವರೆಲ್ಲರೂ ಮಹಾವೀರರೆಂದು ಖ್ಯಾತಿಗೊಂಡವರು. ಯಮನಂತೆ ಶತ್ರುಹಿಂಸಕರು.

ಈ ಮೇಲೆ ಹೇಳಿದ ಅಸುರರಿಗೆಲ್ಲ ಭೃಗುಪುತ್ರನಾದ ಶುಕ್ರಾಚಾರ್ಯನು ಪುರೋಹಿತನಾಗಿದ್ದನು. ಆ ಶುಕ್ರನಿಗೆ ತ್ವಷ್ಟ್ರ, ಅತ್ರಿ, ರೌದ್ರ, ಕರ್ಮಿಗಳೆಂಬ ನಾಲ್ವರು ಪುತ್ರರಾಗಿ ಅವರೂ ಪುರೋಹಿತರೆಂದೇ ಪ್ರಖ್ಯಾತಿಗೊಂಡಿದ್ದರು. ಇವರೆಲ್ಲರೂ ಸೂರ್ಯನಂತೆ ತೇಜಸ್ವಿಗಳಾಗಿ, ಬ್ರಹ್ಮಲೋಕಕ್ಕೂ ಹೋಗಲು ಅರ್ಹತೆಯುಳ್ಳವರಾಗಿದ್ದರು.

ಜನಮೇಜಯರಾಜಾ! ಮಹಾಬಲಾಢ್ಯರೆನಿಸಿದ ಸುರರ ಮತ್ತು ಅಸುರರ ಸಂತತಿಗಳನ್ನೆಲ್ಲ ನಾನು ಪುರಾಣಗಳಲ್ಲಿ ಕೇಳಿರುವಂತೆ ನಿನಗೆ ತಿಳಿಸಿದುದಾಯಿತು ಈ ಸಂತತಿಗಳನ್ನೆಲ್ಲ ಇನ್ನೂ ಪೂರ್ಣವಾಗಿ ವಿವರಿಸಲು ಸಾಧ್ಯವೇ ಇಲ್ಲ. ಇವು ಅನೇಕ ಶಾಖೋಪಶಾಖೆಗಳಾಗಿ ವಿಸ್ತರಿಸಿರುವುವು. ಇವುಗಳೊಳಗಿನ ಅಂತಶ್ಶಾಖೆಗಳಿಗೆ ಕೊನೆಮೊದಲಿಲ್ಲ.

ತಾರ್ಕ್ಷ್ಯ, ಅರಿಷ್ಟನೇಮಿ, ಗರುಡ, ಅರುಣ, ಆರುಣಿ, ವಾರುಣಿ. ಎಂಬವರು ವಿನತೆಯ ಪುತ್ರರೆಂದು ಕರೆಯಲ್ಪಡುವರು.

ಶೇಷನೂ, ಅನಂತನೂ, ವಾಸುಕಿಯೂ, ತಕ್ಷಕನೂ ಕೂರ್ಮನೂ, ಕುಲಿಕನೂ ಕದ್ರುವಿನ ಮಕ್ಕಳು.

ಭೀಮಸೇನ, ಉಗ್ರಸೇನ, ಸುಪರ್ಣ, ವರುಣ, ಗೋಪತಿ, ಧೃತ ರಾಷ್ಟ್ರ, ಸೂರ್ಯವರ್ಚಸ್ಸು, ಸತ್ಯವಾಕ್ಕು, ಅರ್ಕಪರ್ಣ, ಪ್ರಯುತ, ಭೀಮ, ಚಿತ್ರರಥ, ಶಾಲಿಶಿರಸ್ಸು, ಪರ್ಜನ್ಯ, ಕವಿ, ನಾರದರೆಂಬ ಹದಿನಾರು ಮಂದಿಯೂ ಮುನಿಯೆಂಬವಳ ಪುತ್ರರು. ಇವರು ದೇವಜಾತಿಯ ಗಂಧ ರ್ವನಮುದಾಯಕ್ಕೆ ಸೇರಿದವರಾದುದರಿಂದ, ಇವರು ದೇವಗಂಧರ್ವರೆಂದು ಕರೆಯಲ್ಪಡುವರು.

ಪ್ರಾಧೆಯೆಂಬವಳು, ಅನವದ್ಯೆ, ಮನು, ವಂಶೆ, ಅಸುರೆ, ಮಾರ್ಗಣ ಪ್ರಿಯೆ, ಅರೂಪೆ, ಸುಭಗೆ, ಭಾಸಿಯೆಂಬ ಹೆಣ್ಣುಮಕ್ಕಳನ್ನು ಪಡೆದಳು. ಮತ್ತು ಸಿದ್ಧ, ಪೂರ್ಣ, ಬರ್ಹಿ, ಪೂರ್ಣಾಯು, ಬ್ರಹ್ಮಚಾರಿ, ರವಿಗುಣ, ಸುಪರ್ಣ, ವಿಶ್ವಾವಸು, ಭಾನು, ಸುಚಂದ್ರರೆಂಬವರು ಪ್ರಾಧೆಯಲ್ಲಿ ಹುಟ್ಟಿದ ಗಂಡುಮಕ್ಕಳು. ಇವರೂ ದೇವಗಂಧರ್ವರೆಂದೇ ಕರೆಯಲ್ಪಡುವರು.

ಓ ರಾಜೇಂದ್ರಾ! ಇನ್ನು ಶುಭಲಕ್ಷಣವುಳ್ಳವರೆಂದು ಲೋಕದಲ್ಲೆಲ್ಲ ಪ್ರಸಿದ್ಧಿಗೊಂಡ ಅಪ್ಸರಸ್ಸುಗಳ ವಂಶವನ್ನು ತಿಳಿಸುವೆನು ಕೇಳು ಇವ ರೆಲ್ಲ ಸುಭಗೆಯೆಂಬವಳಿಗೆ ದೇವರ್ಷಿಯ ಸಂಬಂಧದಿಂದ ಹುಟ್ಟಿದವರು. ಅಲಂಬುಸೆ, ಮಿಶ್ರಕೇಶಿ, ವಿದ್ಯುತ್ಪರ್ಣೆ, ತಿಲೋತ್ತಮೆ, ಅರುಣೆ, ರಕ್ಷಿತೆ, ರಂಭೆ, ಮನೋರಮೆ, ಶಶಿನಿ, ಸುಬಾಹು, ಸುರತೆ, ಸುರಜೆ, ಸುಪ್ರಿಯೆ, ಎಂಬಿವರೆಲ್ಲರೂ ಆ ಸುಭಗೆಯಲ್ಲಿ ಜನಿಸಿದ ಅಪ್ಸರಸಿಯರೇ. ಅತಿಬಾಹು ವೂ, ಪ್ರಸಿದ್ಧರಾದ ಹಾಹಾ, ಹೂಹೂ ಎಂಬಿಬ್ಬರೂ, ತುಂಬುರುವೆಂಬವನೂ ಸುಭಗೆಯ ಮಕ್ಕಳು. ಈ ನಾಲ್ವರೂ ಗಂಧರ್ವರಲ್ಲಿ ಪ್ರಧಾನರು.

ಅಮೃತವೂ, ಬ್ರಾಹ್ಮಣರೂ, ಗೋವುಗಳೂ, ಗಂಧರ್ವಾಪ್ಸರಸ್ಸು ಗಳೂ, ಕಪಿಲೆಯಿಂದ ಹುಟ್ಟಿದುದಾಗಿ ಪೂರ್ವಚರಿತ್ರಗಳಲ್ಲಿ ಹೇಳಲ್ಪಟ್ಟಿದೆ.

ಜನಮೇಜಯರಾಜಾ! ಹೀಗೆ ಸಮಸ್ತಪ್ರಾಣಿಗಳ ಉತ್ಪತ್ತಿಚರಿತ್ರವ ನ್ನೆಲ್ಲ ನಿನಗೆ ಹೇಳಿದೆನು. ಗಂಧರ್ವರು, ಅಪ್ಸರಸ್ಸುಗಳು, ನಾಗರು, ಗರು ಡರು, ರುದ್ರರು, ಆದಿತ್ಯರು, ಗೋಬ್ರಾಹ್ಮಣರು, ಇವರೆಲ್ಲರ ಜನನಕ್ರಮ ವನ್ನೂ ನೀನು ಕೇಳಿದೆಯಲ್ಲವೆ? ಇದು ಕೇಳತಕ್ಕವರಿಗೆ ಆಯುಸ್ಸನ್ನೂ, ಭಾಗ್ಯವನ್ನೂ, ಪುಣ್ಯವನ್ನೂ, ಸುಖವನ್ನೂ ಕೊಡತಕ್ಕುದು. ಅಸೂಯಾದಿ

ಕಲ್ಮಷಗಳಿಲ್ಲದ ಶುದ್ಧಮನಸ್ಸಿನಿಂದ ಶ್ರವಣ ಪಠನಗಳಿಗೆ ಯೋಗ್ಯವಾದ ಈ ಮಹಾತ್ಮರ ವಂಶಚರಿತ್ರವನ್ನು ಯಾವನು ಬ್ರಾಹ್ಮಣಗೋಷ್ಠಿಯಲ್ಲಿಯೂ, ದೇವತಾಸಾನ್ನಿಧ್ಯದಲ್ಲಿಯೂ ನಿಯಮದಿಂದ ಪಠಿಸುವನೋ, ಅವನು ಇಹಲೋಕದಲ್ಲಿ ಪೂರ್ಣವಾದ ಕೀರ್ತಿಯನ್ನೂ, ಸಂತಾನವನ್ನೂ ಪಡೆದು, ದೇಹಾವಸಾನದಲ್ಲಿ ಉತ್ತಮಲೋಕಗಳನ್ನು ಹೊಂದುವನು.

ಇದು ಅರುವತ್ತಾರನೆಯ ಅಧ್ಯಾಯವು.

## ಋಷಿಗಳು ಮೊದಲಾದವರ ವಂಶವು.

ರಾಜೇಂದ್ರಾ! ಬ್ರಹ್ಮದೇವನ ಮಾನಸಪುತ್ರರಾದ ಆರು ಮಂದಿ ಮಹರ್ಷಿಗಳನ್ನೂ ನೀನು ಮೊದಲೇ ಕೇಳಿದೆಯಲ್ಲವೆ? ಅವರಿಂದಾಚೆಗೆ (ಬ್ರಹ್ಮನ ಏಳನೆಯ ಪುತ್ರನಾದ) ಸ್ಥಾಣುವಿಗೆ ಹನ್ನೊಂದು ಮಂದಿ ಮಕ್ಕಳಾದರು. ಅವರೆಲ್ಲರೂ ದಿವ್ಯ ತೇಜಸ್ಸುಳ್ಳವರಾಗಿ ರುದ್ರರೆಂದೇ ಹೆಸರುಗೊಂಡರು. ಅವರಿಗೆ ಕ್ರಮವಾಗಿ ಮೃಗವ್ಯಾಧ, ಸರ್ಪ, ನಿಋತಿ, ಅಜೈಕಪಾತ್ತು, ಅಹಿರ್ಬುಧ್ನ್ಯ, ಪಿನಾಕಿ, ದಹನ, ಈಶ್ವರ, ಕಪಾಲಿ, ಸ್ಥಾಣು, ಭಗರೆಂದು ಹೆಸರು. ಬ್ರಹ್ಮನ ಮಾನಸಪುತ್ರರೆನಿಸಿದ ಆರುಮಂದಿಯಲ್ಲಿ ಅಂಗಿರಸ್ಸಿಗೆ ಬೃಹಸ್ಪತಿ, ಉತಥ್ಯ, ಸಂವರ್ತರೆಂಬ ಮೂವರು ಮಕ್ಕಳಾದರು. ಅತ್ರಿಗೆ ಬಹುಮಂದಿ ಮಕ್ಕಳೆಂದು ಕೇಳಿರುವೆನು. ಅವರೆಲ್ಲರೂ ವೇದತತ್ತ್ವಜ್ಞರಾಗಿ, ಮನಸ್ಸನ್ನು ನಿಗ್ರಹಿಸಿ, ತಪಸ್ಸಿದ್ಧಿಯನ್ನು ಪಡೆದವರು. ರಾಕ್ಷಸರೂ, ವಾನರರೂ (ಕುದುರೆಯ ಮುಖವುಳ್ಳ) ಕಿನ್ನರರೂ, ಯಕ್ಷರೂ, ಪುಲಸ್ತ್ಯನ ಮಕ್ಕಳು. ಸಿಂಹಗಳು, ಶರಭಗಳು, ಹುಲಿಗಳು, ಕರಡಿಗಳು, (ಈಹಾಮೃಗಗಳೆಂಬ) ತೋಳಗಳು, (ಮನುಷ್ಯರಂತೆ ಮುಖವೂ, ಕುದುರೆಯಂತೆ ದೇಹವೂ ವುಳ್ಳ) ಕಿಂಪುರುಷರು, ಇವೆಲ್ಲ ಪುಲಹನ ಸಂತತಿಗಳು. ಸತ್ಯಧರ್ಮಪರಾಯಣರೆಂದು ಪ್ರಖ್ಯಾತಿಗೊಂಡ ವಾಲಖಿಲ್ಯರು ಕ್ರತುವಿನಿಂದ ಜನಿಸಿದವರು. ಇವರು ಯಾವಾಗಲೂ ಸೂರ್ಯನೊಡನೆ ಸಂಚರಿಸತಕ್ಕವರು. ಸರ್ವವಿಧದಲ್ಲಿಯೂ ತಂದೆಯಾದ ಕ್ರತುವಿಗೆ ಸಮಾನರು.

ಓ ಜನಮೇಜಯರಾಜಾ! ಬ್ರಹ್ಮದೇವನ ಬಲಗೈಯ ಹೆಬ್ಬೆರಳಿನಿಂದ ಶಾಂತಾತ್ಮನೂ, ಮಹಾ ತಪಸ್ವಿಯೂ ಆದ ದಕ್ಷನು ಜನಿಸಿದನು. ಅದೇ ಬ್ರಹ್ಮನ ಎಡಗೈ ಹೆಬ್ಬೆರಳಿನಿಂದ ಆ ದಕ್ಷನ ಭಾರ್ಯೆಯು ಹುಟ್ಟಿದಳು. ಅವಳಲ್ಲಿ ದಕ್ಷನು ಐನೂರು ಮಂದಿ ಕನ್ಯೆಯರನ್ನು ಪಡೆದನು. ಆ ಕನ್ಯೆಯರೆಲ್ಲರೂ ನಿರ್ದುಷ್ಟವಾದ ದೇಹಾವಯವಗಳಿಂದಲೂ, ತಾವರೆಯೆಸಳಿನಂತಿರುವ ಕಣ್ಣುಗಳಿಂದಲೂ ಶೋಭಿಸುತ್ತಿದ್ದರು. ದಕ್ಷನಿಗೆ ಬೇರೆ ಗಂಡುಮಕ್ಕಳಾರೂ ಹುಟ್ಟದುದರಿಂದ ಅವನು ಆ ಕನ್ಯೆಯರನ್ನೇ ಪುತ್ರಿಕೆಯರನ್ನಾಗಿ ಮಾಡಿಕೊಂಡು ಪೋಷಿಸುತ್ತಿದ್ದನು.

ದಕ್ಷನು ಆ ಕನ್ಯೆಯರಲ್ಲಿ ಹತ್ತು ಮಂದಿಯನ್ನು ಧರ್ಮದೇವತೆಗೂ, ಇಪ್ಪತ್ತೇಳು ಮಂದಿಯನ್ನು ಚಂದ್ರನಿಗೂ, ಹದಿಮೂರು ಮಂದಿಯನ್ನು ಕಶ್ಯಪನಿಗೂ ದೇವಯೋಗ್ಯವಾದ ವಿವಾಹವಿಧಿಗಳಿಂದ ಕನ್ಯಾದಾನ ಮಾಡಿಕೊಟ್ಟನು. ಕೀರ್ತಿ, ಲಕ್ಷ್ಮಿ, ಧೃತಿ, ಮೇಧೆ, ಪುಷ್ಟಿ, ಶ್ರದ್ಧೆ, ಕ್ರಿಯೆ, ಬುದ್ಧಿ, ಲಜ್ಜೆ, ಮತಿ, ಎಂಬೀ ಗುಣಗಳಿಗೆ ಅಧಿಷ್ಠಾನದೇವತೆಗಳೆನಿಸಿದ ಮೊದಲನೆಯ ಹತ್ತು ಮಂದಿಯೂ ಧರ್ಮಪತ್ನಿಯರು. ಆದುದರಿಂದಲೇ ಲೋಕದಲ್ಲಿ ಇವರು ಹತ್ತೂ ಧರ್ಮಕ್ಕೆ ಮಾರ್ಗಗಳೆಂದು ಬ್ರಹ್ಮನು ಏರ್ಪಡಿಸಿರುವನು. ನಕ್ಷತ್ರಗಳ ಹೆಸರಿನಿಂದ ಪ್ರಖ್ಯಾತರಾದ ಇಪ್ಪತ್ತೇಳು ಮಂದಿಯೂ ಚಂದ್ರಪತ್ನಿಯರು. ಇವರೆಲ್ಲರೂ ಒಳ್ಳೆ ಶುಚಿವ್ರತವುಳ್ಳವರು. ಕಾಲನಿರ್ಣಯವನ್ನು ಮಾಡಿ, ಲೋಕಯಾತ್ರೆಯನ್ನು ನಡೆಸತಕ್ಕವರಾದುದರಿಂದ ಇವರಿಗೆ ನಕ್ಷತ್ರಗಳೆಂಬ ನಾಮವುಂಟಾಯಿತು.

ಮುನಿಯೆನಿಸಿದ ಧರ್ಮದೇವತೆಯೂ ಪಿತಾಮಹಪುತ್ರನೇ! (ಬ್ರಹ್ಮನ ಸ್ತನಾಗ್ರದಿಂದ ಹುಟ್ಟಿದವನು.) ದಕ್ಷಪ್ರಜಾಪತಿಯೂ ಬ್ರಹ್ಮಪುತ್ರನು. (ಇವನು ಬ್ರಹ್ಮನ ಕೈಯ ಹೆಬ್ಬೆರಳಿನಿಂದ ಜನಿಸಿದವನು.) ಅಷ್ಟವಸುಗಳೂ ಧರ್ಮದೇವನ ಪುತ್ರರು. ಅವರೆಂಟುಮಂದಿಯೂ ಕ್ರಮವಾಗಿ ಧರ, ಧ್ರುವ

---

ಪುತ್ರಿಕೆಯೆಂದರೆ, ಗಂಡುಮಕ್ಕಳಿಲ್ಲದ ತಂದೆಯು, ತನ್ನ ಯಾವ ಹೆಣ್ಣುಮಕ್ಕಳಲ್ಲಿ ಹುಟ್ಟಿದ ಜ್ಯೇಷ್ಠಪುತ್ರನನ್ನೇ ತಾನು ಸ್ವೀಕಾರಮಾಡಿಕೊಳ್ಳುವುದಾಗಿ ವಿವಾಹಕಾಲದಲ್ಲಿ ನಿರ್ಣಯಮಾಡಿಕೊಂಡರೆ, ಅಂತಹ ಮಗಳಿಗೆ ಪುತ್ರಿಕೆಯೆಂದು ಹೆಸರು.

ಸೋಮ, ಅಹಸ್ಸು, ಅನಲ, ಅನಿಲ, ಪ್ರತ್ಯೂಷ, ಪ್ರಭಾಸರೆಂದು ಹೆಸರು. ಧರನೆಂಬವನು ಧೂಮ್ರೆಯ ಮಗನು. ಧ್ರುವನು ಬ್ರಹ್ಮವಿತ್ತಿಯ ಮಗನು. ಸೋಮನು ಮನಸ್ವಿನಿಯ ಪುತ್ರನು. ಅನಲನು ಶ್ವಾಸೆಯ ಮಗನು. ಅಹಸ್ಸೆಂಬವನು ರತೆಯ ಮಗನು. ಅನಿಲನು ಶಾಂಡಿಲಿಯ ಪುತ್ರನು. ಪ್ರತ್ಯೂಷ ಪ್ರಭಾಸರೆಂಬವರಿಬ್ಬರೂ ಪ್ರಭಾತೆಯ ಪುತ್ರರು. ದ್ರವಿಣನೂ, ಹುತಹವ್ಯವಹನೂ ಧರನ ಮಕ್ಕಳು. ವೈತಂಡ್ಯ, ಶ್ರಮ, ಶಾಂತಮುನಿಯೆಂಬವರು ಶಿವೆಯ ಮಕ್ಕಳು. ಧ್ರುವನ ಮಗನೇ ಲೋಕಪ್ರವರ್ತಕನೆನಿಸಿದ ಭಗವಂತನಾದ ಕಾಲನು. ಲೋಕಕ್ಕೆಲ್ಲ ವರ್ಚಸ್ಸನ್ನು ಕೊಡತಕ್ಕ ವರ್ಚಸ್ಸೆಂಬವನು ಸೋಮನ ಮಗನು. ಶಿಶಿರ, ಪ್ರಾಣ, ರಮಣರೆಂಬವರು ಮೂವರೂ ಮನೋಹರೆಯ ಮಕ್ಕಳು. ಜ್ಯೋತಿಸ್ಸು, ಶಮ, ಶಾಂತಿ, ಮುನಿಯೆಂಬವರು ಅಹಸ್ಸಿನ ಮಕ್ಕಳು. ಶರವಣದಲ್ಲಿ (ನೊದೆಹುಲ್ಲಿನ ಪೊದೆಯಲ್ಲಿ) ಹುಟ್ಟಿದ ಕುಮಾರಸ್ವಾಮಿಯು ಅನಲನೆಂಬ ಅಗ್ನಿಯ ಪುತ್ರನು. ಶಾಖ, ವಿಶಾಖ, ನೈಗಮೇಯರೆಂಬಿವರು ಮೂವರೂ ಅವನಿಂದಾಚೆಗೆ ಹುಟ್ಟಿದವರು. ಕೃತ್ತಿಕಾದೇವಿಯು ಎತ್ತಿಕೊಂಡು ಬೆಳೆಸಿದುದರಿಂದ ಕುಮಾರಸ್ವಾಮಿಗೆ ಕಾರ್ತಿಕೇಯನೆಂಬ ಹೆಸರಾಯಿತು. ಶಿಲೆಯೆಂಬವಳು ಅನಿಲನ ಪತ್ನಿ. ಇವಳಲ್ಲಿ ಅನಿಲನಿಗೆ ಮನೋಜವನೆಂದೂ, ಅವಿಜ್ಞಾತಗತಿಯೆಂದೂ ಇಬ್ಬರು ಪುತ್ರರಾದರು. ದೇವಲನೆಂಬ ಮಹರ್ಷಿಯನ್ನು ಪ್ರತ್ಯೂಷೆಯ ಮಗನೆಂದು ಹೇಳುವರು. ದೇವಲನಿಗೆ ಕ್ಷಮಾವಂತರೂ, ಜ್ಞಾನಿಗಳೂ ಆದ ಇಬ್ಬರು ಪುತ್ರರಾದರು. ಬೃಹಸ್ಪತಿಯ ಸಹೋದರಿಯೂ, ಬ್ರಹ್ಮಜ್ಞಾನವುಳ್ಳವಳೂ ಆದ ಯೋಗಸಿದ್ಧಿಯೆಂಬವಳು ಲೋಕವಲ್ಲಿ ಎಲ್ಲಾ ಕಡೆಯೂ ಅಡ್ಡಿಯಿಲ್ಲದೆ ಸಂಚರಿಸುವ ಶಕ್ತಿಯುಳ್ಳವಳು. ಇವಳು ವಸುಗಳಲ್ಲಿ ಎಂಟನೆಯವನಾದ ಪ್ರಭಾಸನ ಪತ್ನಿ. ಇವಳಲ್ಲಿ ವಿಶ್ವಕರ್ಮನು ಜನಿಸಿದನು. ಶಿಲ್ಪವಿದ್ಯೆಗೆಲ್ಲ ಈತನೇ ಬ್ರಹ್ಮನೆಂದು ಹೆಸರುಗೊಂಡವನು. ಇವನಿಗೆ ತಿಳಿಯದ ಶಿಲ್ಪಕಲೆಗಳಿಲ್ಲ. ಇವನು ದೇವತೆಗಳ ಶಿಲ್ಪಿ. ಅವರಿಗೆ ಬೇಕಾದ ಭೂಷಣಗಳೆಲ್ಲವನ್ನೂ ಮಾಡಿಕೊಡತಕ್ಕವನು ಇವನೇ! ಶಿಲ್ಪಿಗಳಿಗೆಲ್ಲ ಪ್ರಧಾನನು. ದೇವತೆಗಳಿಗಾಗಿ ಆಕಾಶಗಮನವುಳ್ಳ ವಿಮಾನಗಳನ್ನೂ ಇವನೇ ನಿರ್ಮಿಸತಕ್ಕವನು. ಆ ಮಹಾತ್ಮನ ಶಿಲ್ಪ

ಕ್ರಮವನ್ನನುಸರಿಸಿಯೇ ಈಗಲೂ ಜನರು ಜೀವಿಸುತ್ತಿರುವರು. ಶಿಲ್ಪಿಗಳೆಲ್ಲರೂ ಅವ್ಯಯನಾದ ಆ ವಿಶ್ವಕರ್ಮನನ್ನೇ ತಮ್ಮ ದೈವವನ್ನಾಗಿ ಪೂಜಿಸುತ್ತಿರುವರು.

ಸಮಸ್ತ ಲೋಕಗಳಿಗೂ ಸುಖಪ್ರದನಾದ ಧರ್ಮನು ಮನುಷ್ಯರೂಪದಿಂದ ಬ್ರಹ್ಮನ ಬಲಭಾಗದ ಸ್ತನವನ್ನು ಛೇದಿಸಿಕೊಂಡು ಹೊರಗೆ ಬಂದವನು. ಈ ಧರ್ಮನಿಗೆ ಎಲ್ಲಾ ಪ್ರಾಣಿಗಳ ಮನಸ್ಸನ್ನು ಅಪಹರಿಸತಕ್ಕವರೂ, ತಮ್ಮ ತೇಜಸ್ಸಿನಿಂದ ಲೋಕವನ್ನು ಧರಿಸತಕ್ಕವರೂ ಆದ ಶಮ, ಕಾಮ, ಹರ್ಷರೆಂಬ ಮೂವರು ಪುತ್ರರಾದರು. ಇವರಲ್ಲಿ ಕಾಮನ ಪತ್ನಿಯು ರತಿ. ಶಮನ ಭಾರ್ಯೆ ಪ್ರಾಪ್ತಿ. ಹರ್ಷನ ಪತ್ನಿಯು ನಂದೆಯೆಂಬವಳು. ಲೋಕಗಳೆಲ್ಲ ಅವರಲ್ಲಿ ನೆಲೆಗೊಂಡಿರುವುವೆಂದು ತಿಳಿ!

ಓ ರಾಜೇಂದ್ರಾ! ಮರೀಚಿಯ ಮಗನು ಕಶ್ಯಪನು. ದೇವತೆಗಳೂ, ಅಸುರರೂ ಈ ಕಶ್ಯಪನ ಮಕ್ಕಳೇ. ಲೋಕಗಳ ಉತ್ಪತ್ತಿಗೂ ಅವನೇ ಮೂಲಕಾರಣಭೂತನು. ವಿಶ್ವಕರ್ಮನ ಮಗಳು ಸೂರ್ಯನ ಭಾರ್ಯೆ. ಇವಳು ಹೆಣ್ಣುಕುದುರೆಯ ರೂಪವನ್ನು ತಾಳಿ, ಆಕಾಶದಲ್ಲಿ ಅಶ್ವಿನೀದೇವತೆಗಳೆಂಬ ಅವಳಿಮಕ್ಕಳನ್ನು ಪಡೆದಳು. ಘ್ರಾಣೇಂದ್ರಿಯದ ಮೂಲಕವಾಗಿ ಶುಕ್ಲಸಂಬಂಧದಿಂದ ಹುಟ್ಟಿದವರು. ಶುಕ್ರನು ಮೊದಲಾದ ಹನ್ನೆರಡು ಮಂದಿಯೂ ಅದಿತಿಪುತ್ರರು. ಅವರಲ್ಲಿ ಕೊನೆಯಲ್ಲಿ ಹುಟ್ಟಿದವನು ವಿಷ್ಣು. ಅವನೇ ಲೋಕಕ್ಕೆಲ್ಲ ಆಧಾರನೆನಿಸಿದವನು. ಹೀಗೆ ದೇವತೆಗಳಲ್ಲಿ (ಏಕಾದಶ ರುದ್ರರು, ಅಷ್ಟವಸುಗಳು, ದ್ವಾದಶಾದಿತ್ಯರು, ಪ್ರಜಾಪತಿ ಮತ್ತು ವಷಟ್ಕಾರಗಳೆಂದು) ಮೂವತ್ತುಮೂರು ವಿಭಾಗಗಳಾಗಿವೆ. ಅವರ ವಂಶವನ್ನೂ, ಅವರ ಪಕ್ಷಗಳನ್ನೂ, ಕುಲಗಳನ್ನೂ, ಗಣಗಳನ್ನೂ ನಿನಗೆ ವಿವರವಾಗಿ ತಿಳಿಸುವೆನು ಕೇಳು. ರುದ್ರರಿಗೂ, ಸಾಧ್ಯರಿಗೂ, ಮರುತ್ತುಗಳಿಗೂ ಕೃಷ್ಣಪಕ್ಷವು. ಅವರು ಶುಕ್ರನಿಗೂ, ವಿಶ್ವೇದೇವತೆಗಳಿಗೂ, ವಸುಗಳಿಗೂ ಸೇರಿದವರು. ವಿನತೆಯ ಪುತ್ರರೂ, ಮಹಾಬಲಾಢ್ಯರೂ ಆದ ಅರುಣ ಗರುಡರಿಬ್ಬರೂ, ಬೃಹಸ್ಪತಿಯೂ, ಆದಿತ್ಯರಲ್ಲಿ ಸೇರಿದಂತೆ ಗಣಿಸಲ್ಪಟ್ಟಿರುವರು. ಅಶ್ವಿನೀ ದೇವತೆಗಳೂ, ಎಲ್ಲಾ ಔಷಧಿ

ಗಳೂ, ಪಶುಗಳೂ ಯಕ್ಷಗಣಕ್ಕೆ ಸೇರಿದುದಾಗಿ ತಿಳಿ. ದೇವವರ್ಗಗಳನ್ನೆಲ್ಲ ಕ್ರಮವಾಗಿ ನಿನಗೆ ತಿಳಿಸಿದೆನು. ಇವರನ್ನು ಕೀರ್ತಿಸುವುದರಿಂದ ಮನುಷ್ಯರು ಎಲ್ಲಾ ಪಾಪಗಳಿಂದ ಮುಕ್ತರಾಗುವರು. ಭಗವಂತನಾದ ಭೃಗು ಮಹರ್ಷಿಯು ಬ್ರಹ್ಮದೇವನ ಹೃದಯವನ್ನು ಭೇದಿಸಿಕೊಂಡು ಹೊರಗೆ ಬಂದವನು. ಕವಿಯು (ಮಹಾಜ್ಞಾನಿಯಾದ ಭೃಗುವಿನ) ಪುತ್ರನಾಗಿ, ಸ್ವತಃ ಕವಿಯೆನಿಸಿಕೊಂಡು, ಗ್ರಹಗಳಲ್ಲಿ ಒಬ್ಬನಾಗಿ, ವಿದ್ವಾಂಸನೆನಿಸಿಕೊಂಡ ಶುಕ್ರನು ಭೃಗುವಿನ ಮಗನು. ಈ ಶುಕ್ರನು ಮೂರುಲೋಕಗಳ ಜೀವಯಾತ್ರೆಗಾಗಿ, ವೃಷ್ಟಿಯನ್ನೂ, ಅನಾವೃಷ್ಟಿಯನ್ನೂ ಉಂಟುಮಾಡಿ, ಆ ಮೂಲಕವಾಗಿ ಲೋಕಕ್ಕೆ ಭಯಾಭಯಗಳನ್ನು ತೋರುವುದಕ್ಕಾಗಿ ಬ್ರಹ್ಮದೇವನಿಂದ ನಿಯುಕ್ತನಾಗಿ ಲೋಕಗಳನ್ನೆಲ್ಲ ಸುತ್ತುತ್ತಿರುವನು.

ಮಹಾಜ್ಞಾನಿಯೂ, ಸೂಕ್ಷ್ಮಬುದ್ಧಿಯುಳ್ಳವನೂ, ಜಿತೇಂದ್ರಿಯನೂ, ದೃಢವ್ರತನೂ ಆದ ಆ ಶುಕ್ರಾಚಾರ್ಯನು, ದೇವಾಸುರರಿಬ್ಬರಿಗೂ ಯೋಗಾಚಾರ್ಯನೆನಿಸಿದ್ದನು ಅವನೇ ಯೋಗಬಲದಿಂದ ಎರಡು ದೇಹಗಳನ್ನು ತಳೆದು ಇಬ್ಬರಿಗೂ ಗುರುವಾಗಿದ್ದನು. ಹೀಗೆ ಭೃಗುಪುತ್ರನಾದ ಶುಕ್ರನು ಲೋಕಗಳ ಯೋಗಕ್ಷೇಮ ಕಾರ್ಯಗಳಿಗಾಗಿ (ಲಾಭ ಮತ್ತು ಕ್ಷೇಮಗಳಿಗಾಗಿ) ಬ್ರಹ್ಮನಿಂದ ನಿಯುಕ್ತನಾಗಿರಲು, ಭೃಗುವಿಗೆ ಮಹಾತಪಸ್ವಿಯೂ, ಧರ್ಮಾತ್ಮನೂ, ಯಶಸ್ವಿಯೂ ಆದ ಚ್ಯವನನೆಂಬ ಬೇರೊಬ್ಬ ಪುತ್ರನಾದನು. ಓ ಜನಮೇಜಯ ರಾಜಾ! ಆ ಚ್ಯವನನು ತನ್ನ ತಾಯಿಯನ್ನು ಪುಲೋಮನೆಂಬ ರಾಕ್ಷಸನು ಎತ್ತಿಕೊಂಡು ಹೋಗುತಿದ್ದಾಗ, ಅವಳನ್ನು ಆ ರಾಕ್ಷಸನ ಕೈಯಿಂದ ಬಿಡಿಸುವುದಕ್ಕಾಗಿ, ಅತ್ಯಾಕ್ರೋಶದೊಡನೆ ಅವಳ ಗರ್ಭದಿಂದ ಜಾರಿಬಿದ್ದವನಾದುದರಿಂದಲೇ ಅವನಿಗೆ ಚ್ಯವನನೆಂಬ ಹೆಸರಾಯಿತು. ಮನುಪುತ್ರಿಯಾದ ಆರುಷಿಯೆಂಬವಳು ಆ ಚ್ಯವನನ ಪತ್ನಿ. ಇವಳ ತೊಡೆಯನ್ನು ಭೇದಿಸಿಕೊಂಡು ಪುತ್ರನೊಬ್ಬನು ಹುಟ್ಟಿದುದರಿಂದ ಅವನು ಔರ್ವನೆನಿಸಿಕೊಂಡನು. ಇವನು ಬಾಲನಾಗಿದ್ದಾಗಲೇ ಸಕಲ ಸದ್ಗುಣಗಳಿಂದ ಶೋಭಿಸುತ್ತ, ಮಹಾಯಶಸ್ಸಿಗೂ, ವೀರ್ಯ

ಕ್ಕೂ ಆಧಾರನಾಗಿದ್ದನು. ಈ ಔರ್ವನ ಮಗನು ಋಚೀಕನು. ಋಚೀಕನ ಮಗನು ಜಮದಗ್ನಿ. ಈ ಜಮದಗ್ನಿಗೆ ನಾಲ್ವರು ಮಕ್ಕಳಾದರು. ಅವರಲ್ಲಿ ರಾಮನೆಂಬವನು ಕಿರಿಯನು. ಇವನು ಜನ್ಮದಲ್ಲಿ ಕಿರಿಯವನಾದರೂ, ಗುಣದಲ್ಲಿ ಎಲ್ಲರಿಗಿಂತಲೂ ಹಿರಿಯನೆನಿಸಿಕೊಂಡಿದ್ದನು. ಇವನಿಗೆ ತಿಳಿಯದ ಶಾಸ್ತ್ರಗಳಿಲ್ಲ. ಕ್ಷತ್ರಿಯ ವಂಶವನ್ನೆಲ್ಲ ನಿರ್ಮೂಲಮಾಡಿದವನು ಇವನೇ! ಮತ್ತು ಇವನು ಮಹಾತಪಸ್ವಿಯೂ, ಜಿತೇಂದ್ರಿಯನೂ ಆಗಿದ್ದನು. ಔರ್ವನಿಗೆ ಜಮದಗ್ನಿ ಮೊದಲಾಗಿ ನೂರುಮಂದಿ ಮಕ್ಕಳಾದರು. ಅವರೊಬ್ಬೊಬ್ಬರಲ್ಲಿಯೂ ಅನೇಕಾನೇಕ ಸಂತತಿಗಳಾಗಿ, ಆ ಕುಟುಂಬವು ಭೂಮಿಯಲ್ಲಿ ಬಹಳವಾಗಿ ವಿಸ್ತರಿಸಿತು.

ಬ್ರಹ್ಮನಿಗೆ ಬೇರೆ ಇಬ್ಬರು ಮಕ್ಕಳುಂಟು. ಅವರಿಬ್ಬರೂ ಒಳ್ಳೆಯ ಲಕ್ಷಣವುಳ್ಳವರು. ಅವರಿಬ್ಬರಿಗೂ ಲೋಕದಲ್ಲಿ ಧಾತೃ, ವಿಧಾತೃಗಳೆಂದು ಹೆಸರು. ಇವರು ಮನುವಿನೊಡನೆ ಇರತಕ್ಕವರು. ಪದ್ಮವಾಸಿನಿಯಾದ ಲಕ್ಷ್ಮಿಯು ಅವರ ಸಹೋದರಿ. ಆಕಾಶಸಂಚಾರಿಗಳಾದ ಕುದುರೆಗಳು (ಸೂರ್ಯಕಿರಣಗಳು) ಆ ಲಕ್ಷ್ಮಿಯ ಮನಸ್ಸಿನಿಂದ ಹುಟ್ಟಿದ ಸಂತಾನಗಳು. ವರುಣನ ಭಾರ್ಯೆಯಾದ ಜ್ಯೇಷ್ಠಾದೇವಿಯೂ ಶುಕ್ರನಿಂದ ಹುಟ್ಟಿದವಳು. ಅವಳಿಗೆ ಬಲನೆಂಬ ಪುತ್ರನೂ, ದೇವತೆಗಳಿಗೆ ಆನಂದಕರಳಾದ ಸುರೆಯೆಂಬ ಪುತ್ರಿಯೂ ಆದರು. ಜನಗಳು ಹಸಿದು ಅನ್ನಾರ್ಥಿಗಳಾಗಿ ಒಬ್ಬರನ್ನೊಬ್ಬರು ಭಕ್ಷಿಸಿದುದರಿಂದ, ಆ ಸುರೆಯಲ್ಲಿ ಸಮಸ್ತಪ್ರಾಣಿಗಳನ್ನೂ ನಾಶಮಾಡತಕ್ಕ ಅಧರ್ಮನೆಂಬ ಪುತ್ರನಾದನು. ಆ ಅಧರ್ಮನ ಭಾರ್ಯೆಯೇ ನಿರ್ಋತಿ. ಆ ನಿರ್ಋತಿಯಿಂದ ಹುಟ್ಟಿದ ರಾಕ್ಷಸರು ನೈರುತರೆಂದು ಹೆಸರುಗೊಂಡರು. ಆ ನಿರ್ಋತಿಗೆ ಅತಿಕ್ರೂರರೂ, ಯಾವಾಗಲೂ ಪಾಪಪರಾಯಣರೂ ಆದ ಭಯ, ಮಹಾಭಯ, ಮೃತ್ಯುವೆಂಬ ಮೂವರು ಮಕ್ಕಳಾದರು. ಸರ್ವನಾಶಕನಾದ ಆ ಮೃತ್ಯುವಿಗೆ ಪತ್ನಿಯೂ ಇಲ್ಲ, ಸಂತಾನವೂ ಇಲ್ಲ.

ತಾಮ್ರಾದೇವಿಗೆ ಕಾಕಿ, ಶ್ಯೇನಿ, ಭಾಸಿ, ಧೃತರಾಷ್ಟ್ರಿ, ಶುಕಿಯೆಂಬ ಐದು ಮಂದಿ ಕನ್ಯೆಯರಾದರು. ಈ ಐದುಮಂದಿ ಕನ್ಯೆಯರಲ್ಲಿ ಕಾಕಿ

ಯಿಂದ ಕಾಗೆಗಳೂ, ಶ್ಯೇನಿಯಿಂದ ಗಿಡುಗಗಳೂ, ಭಾಸಿಯಿಂದ ಚಪ್ಪಾರ ಕಾಗೆಗಳೂ, ಹದ್ದುಗಳೂ, ಧೃತರಾಷ್ಟ್ರಿಯಿಂದ ಹಂಸಗಳೂ, ಕಲಹಂಸಗಳೂ, ಚಕ್ರವಾಕಗಳೂ, ಯಶಸ್ವಿನಿಯಾದ ಶುಕಿಯಿಂದ ಗಿಣಿಗಳೂ ಹುಟ್ಟಿದುವು. ಕ್ರೋಧವಶೆಯೆಂಬವಳಿಗೆ ಕೋಪದೇವತೆಗಳಿಂದ ಹುಟ್ಟಿದ ಮೃಗಿ, ಮೃಗಮಂದೆ, ಹರಿ, ಭದ್ರಮಾನಸೆ, ಮಾತಂಗಿ, ಶಾರ್ದೂಲಿ, ಶ್ವೇತೆ, ಸುರಭಿ, ಸರ್ವಲಕ್ಷಣಸಂಪನ್ನೆಯಾದ ಸುರಸೆಯೆಂಬ ಒಂಭತ್ತು ಮಂದಿ ಕನ್ಯೆಯರಾದರು. ಈ ಕನ್ಯೆಯರಲ್ಲಿ ಮೃಗಿಯಿಂದ ಮೃಗಸಂತಾನಗಳೆಲ್ಲವೂ ಹುಟ್ಟಿದುವು. ಕರಡಿಗಳೂ, ಸ್ಮರಮೃಗಗಳೂ, ಮೃಗಮಂದೆಯ ಸಂತಾನಗಳು. ಭದ್ರಮಾನಸೆಯೆಂಬವಳು ಐರಾವತವೆಂಬ ಆನೆಯನ್ನು ಹಡೆದಳು. ಲೋಕದಲ್ಲಿರುವ ಉತ್ತಮಗಜಗಳೆಲ್ಲ ಈ ಐರಾವತದ ಸಂತಾನಗಳೇ. ಕಪಿಗಳು, ಗೋಲಾಂಗೂಲಗಳು, ಸಿಂಗಳೀಕಗಳು ಇವೆಲ್ಲ ಹರಿಯೆಂಬವಳ ಸಂತಾನಗಳು. ಹುಲಿ, ಸಿಂಹ, ಚಿರತೆ ಮುಂತಾದ ಮಹಾಬಲವುಳ್ಳ ಮಾಂಸಾಹಾರಿ ಮೃಗಗಳು ಶಾರ್ದೂಲಿಯೆಂಬವಳ ಸಂತಾನಗಳು. ಮಾತಂಗಿಯಿಂದ ಆನೆಗಳು ಹುಟ್ಟಿದುವು. ಮಹಾವೇಗವುಳ್ಳ ಶ್ವೇತವೆಂಬ ದಿಗ್ಗಜವು ಶ್ವೇತೆಯೆಂಬವಳಿಂದ ಹುಟ್ಟಿತು. ಸುರಭಿಯೆಂಬವಳಿಗೆ ರೋಹಿಣಿ, ಗಂಧರ್ವಿ, ವಿಮಲೆ, ಅಚಲೆಯೆಂಬ ನಾಲ್ಕುಮಂದಿ ಕನ್ಯೆಯರಾದರು. ಈ ನಾಲ್ವರಲ್ಲಿ ರೋಹಿಣಿಯಿಂದ ಪಶುಗಳೂ, ಗಂಧರ್ವಿಯಿಂದ ಕುದುರೆಗಳೂ ಹುಟ್ಟಿದುವು. ಇರೆಯೆಂಬವಳಲ್ಲಿ ತಾವರೆಯ ಎಸಳಿನಂತೆ ಕಣ್ಣುಳ್ಳ ಮೂವರು ಕನ್ಯೆಯರು ಹುಟ್ಟಿದರು. ಅವರಿಂದ ಪುಷ್ಪಿಸದಂತೆಯೇ ಫಲಿಸುವ ಮರಗಳೂ, ಇತರ ವೃಕ್ಷಗಳೂ, ಬಳ್ಳಿಗಳೂ ಹುಟ್ಟಿದುವು. ಆ ಮೂವರಲ್ಲಿ ಲತೆ ಮತ್ತು ರುಹೆಯೆಂಬವರು ವಿಶೇಷಪ್ರಖ್ಯಾತಿಗೊಂಡವರು. ಆ ಮೂವರೂ ಹಿಂದೆ ಹೇಳಿದ ಮರಗಿಡಗಳಿಗೆಲ್ಲ ತಾಯಿಯರು. ಹೂವಿಲ್ಲದೆ ಕಾಯಿಬಿಡುವ ಗಿಡಗಳೆಲ್ಲ ಲತೆಯೆಂಬವಳ ಸಂತತಿ. ಈ ಸಸ್ಯಗಳಿಗೆ ವನಸ್ಪತಿಗಳೆಂದು ಹೆಸರು. ಮೊದಲು ಪುಷ್ಪಿಸಿ ಆಮೇಲೆ ಕಾಯಿಬಿಡುವ ವೃಕ್ಷಗಳೆಲ್ಲ ರುಹೆಯ ಸಂತತಿ. ಈ ಮೂವರಲ್ಲಿ ಇವರಿಬ್ಬರಿಗೆ ಮಾತ್ರ ಸಂತತಿಯೇ ಹೊರತು, ಮೂರನೆಯವಳಿಗೆ ಸಂತತಿಯಿಲ್ಲ. ಅನಲೆಯೆಂಬ

ವಳಿಗೆ ಪಿಂಡಫಲಗಳೆಂದು ಕರೆಯಲ್ಪಡುವ ಉಂಡೆಯಾದ ಹಣ್ಣುಳ್ಳ ವೃಕ್ಷಗಳು ಹುಟ್ಟಿದುವು. ಶುಕಿಯೆಂಬವಳು ಅನಲೆಯ ಮಗಳು. ಸುರಸೆಯ ಮಗನು ಕಂಕನು. ಅರುಣಪತ್ನಿಯಾದ ಶ್ಯೇನಿಗೆ ಮಹಾಬಲಾಢ್ಯರಾದ ಸಂಪಾತಿ, ಜಟಾಯುಗಳೆಂಬ ಇಬ್ಬರು ಮಕ್ಕಳಾದರು. ಸುರಸೆಯು ನಾಗರನ್ನೂ, ಕದ್ರುವು ಪನ್ನಗರನ್ನೂ ಸಂತತಿಯಾಗಿ ಪಡೆದರು. ವಿನತೆಗೆ ಗರುಡನೆಂದೂ, ಅನೂರುವೆಂದೂ (ಅರುಣನೆಂದೂ) ಇಬ್ಬರು ಮಕ್ಕಳಾದರು.

ಓ ಜನಮೇಜಯರಾಜಾ! ಹೀಗೆ ಮುಖ್ಯವಸ್ತುಗಳ ಉತ್ಪತ್ತಿಕ್ರಮವನ್ನೆಲ್ಲ ನಿನಗೆ ತಿಳಿಸಿದೆನು. ಈ ಸೃಷ್ಟಿಕ್ರಮವನ್ನು ಕೇಳಿದವನು ಸರ್ವಜ್ಞನಾಗುವುದಲ್ಲದೆ, ಪಾಪವಿಮುಕ್ತನಾಗಿ ಸುಖವನ್ನು ಹೊಂದುವನು.

ಇದು ಅರುವತ್ತೇಳನೆಯ ಅಧ್ಯಾಯವು.



ಜರಾಸಂಧ, ದ್ರೋಣ, ಧೃತರಾಷ್ಟ್ರ ದುರ್ಯೋಧನಾದಿಗಳ ಉತ್ಪತ್ತಿ. ಯುಧಿಷ್ಠಿರಾದಿಗಳ ಜನನವು ಧೃಷ್ಟದ್ಯುಮ್ನನ ಉತ್ಪತ್ತಿ; ಕುಂತಿಯಲ್ಲಿ ಕರ್ಣನು ಹುಟ್ಟಿದುದು ಬಲರಾಮಾದಿಗಳ ಸಂಭವವು ಕುಂತೀಮಾದ್ರಿಯರ ಮತ್ತು ದ್ರೌಪದಿಯ ಜನ್ಮವೃತ್ತಾಂತವು

ಆಗ ಜನಮೇಜಯನು ವೈಶಂಪಾಯನನ್ನು ಕುರಿತು "ಓ ಮಹಾತ್ಮಾ! ದೇವ ದಾನವ ದೈತ್ಯ ಗಂಧರ್ವ ಯಕ್ಷ ರಾಕ್ಷಸರ ಉತ್ಪತ್ತಿ ವೃತ್ತಾಂತವನ್ನೂ, ಸಿಂಹ, ವ್ಯಾಘ್ರ, ಮೃಗ, ಪಕ್ಷಿ ಮೊದಲಾದ ಇತರಪ್ರಾಣಿಗಳ ಉತ್ಪತ್ತಿಯನ್ನೂ, ಮನುಷ್ಯರಲ್ಲಿ ಮಹಾಮಹಿಮೆಯುಳ್ಳವರ ಜನನವನ್ನೂ ನಾನು ನಿನ್ನಿಂದ ಇನ್ನೂ ವಿವರವಾಗಿ ಕೇಳಬೇಕೆಂದು ಆಸೆಗೊಂಡಿರುವೆನು.

---

* ಖರ್ಜೂರ ತಾಲಹಿಂತಾಲಾಃ ತಾಳೀ ಖರ್ಜೂರಿಕಾ ತಥಾ । ಗುವಾಕಾ ನಾರಿಕೇಳಶ್ಚ ಸಪ್ತ ಪಿಂಡಫಲಾ ದ್ರುಮಾಃ'' ॥ ತೆಂಗು, ತಾಳೆ, ಖರ್ಜೂರ, ಮೊದಲಾದ ವೃಕ್ಷಗಳು ಪಿಂಡಫಲಗಳೆನಿಸುವುವು.

ಆ ಉತ್ತಮಪುರುಷರ ಜನ್ಮಗಳನ್ನೂ, ಕಾರ್ಯಗಳನ್ನೂ ನೀನು ನನಗೆ ಕ್ರಮವಾಗಿ ತಿಳಿಸಬೇಕು" ಎಂದನು. ಅದಕ್ಕಾ ವೈಶಂಪಾಯನನು "ರಾಜೇಂದ್ರಾ! ದೇವಾಸುರರಲ್ಲಿ ಯಾರುಯಾರು ಮನುಷ್ಯರಾಗಿ ಹುಟ್ಟಿದರೋ, ಅವರ ಸಂತತಿಯನ್ನು ಮೊದಲು ನಿನಗೆ ತಿಳಿಸುವೆನು. ಮೊದಲು ವಿಪ್ರಚಿತ್ತಿಯೆಂಬ ದೈತ್ಯರಾಜನಿದ್ದನಲ್ಲವೆ? ಅವನೇ ಜರಾಸಂಧನೆಂಬ ರಾಜನಾಗಿ ಹುಟ್ಟಿದವನು. ದಿತಿಪುತ್ರನಾದ ಹಿರಣ್ಯಕಶಿಪುವೇ ಮನುಷ್ಯಲೋಕದಲ್ಲಿ ಶಿಶುಪಾಲನೆಂಬ ರಾಜನಾಗಿ ಹುಟ್ಟಿದನು. ಪ್ರಹ್ಲಾದನ ತಮ್ಮನಾದ ಸಂಹ್ಲಾದನು ಶಲ್ಯನಾಗಿ ಹುಟ್ಟಿದನು. ಪ್ರಹ್ಲಾದನ ಕನಿಷ್ಠಸಹೋದರನಾದ ಅನುಹ್ಲಾದನೇ ಧೃಷ್ಟಕೇತುವೆಂಬ ರಾಜನಾಗಿ ಜನಿಸಿದನು. ಶಿಬಿಯೆಂಬ ದಿತಿಪುತ್ರನೊಬ್ಬನಿದ್ದನೆಂದು ಹೇಳಿದೆನಲ್ಲವೆ? ಅವನೇ ಭೂಮಿಯಲ್ಲಿ ದ್ರುಮನೆಂಬ ರಾಜನಾದನು. ಬಾಷ್ಕಲನೆಂಬ ಅಸುರಶ್ರೇಷ್ಠನು ಭಗದತ್ತನೆಂಬ ರಾಜನಾದನು ಅಯಃಶಿರಸ್ಸು, ಅಶ್ವಶಿರಸ್ಸು, ಅಯಶ್ಶಂಕು, ಗಗನಮೂರ್ಧ, ವೇಗವಂತರೆಂಬ ಈ ಐದು ಮಂದಿ ಅಸುರರೂ ಐದುಮಂದಿ ಕೇಕಯರಾಜರಾಗಿ ಹುಟ್ಟಿದರು. ಕೇತುಮಂತನೆಂಬವನು ಅಮಿತೌಜಸೆಂಬ ಕ್ರೂರಪರಾಕ್ರಮವುಳ್ಳ ರಾಜನಾದನು. ಸ್ವರ್ಭಾನುವೆಂಬ ಅಸುರನು ಉಗ್ರಸೇನನೆಂಬ ಕ್ರೂರಕಾರ್ಯವುಳ್ಳ ರಾಜನಾದನು. ಅಶ್ವನೆಂಬ ಅಸುರಶ್ರೇಷ್ಠನು ಮಹಾವೀರ್ಯವುಳ್ಳ ಅಶೋಕನೆಂಬ ರಾಜನಾದನು ಈ ಅಶ್ವನ ತಮ್ಮನಾದ ಅಶ್ವಪತಿಯೆಂಬ ದೈತ್ಯನೇ ಹಾರ್ದಿಕ್ಯನೆಂಬ ರಾಜನಾದನು. ವೃಷಪರ್ವನೆಂಬ ದಾನವನು ಭೂಮಿಯಲ್ಲಿ ದೀರ್ಘಪ್ರಜ್ಞನೆಂಬ ರಾಜನಾಗಿ ಹುಟ್ಟಿದನು. ಆ ವೃಷಪರ್ವನ ತಮ್ಮನಾದ ಅಜಕನು ಸಾಲ್ವನೆಂಬ ರಾಜನಾದನು. ಅಶ್ವಗ್ರೀವನೆಂಬ ಅಸುರನು ರೋಚಮಾನನೆಂಬ ರಾಜನಾಗಿ ಭೂಮಿಯಲ್ಲಿ ಹುಟ್ಟಿದನು. ಧೀಮಂತನೂ, ಯಶಸ್ವಿಯೂ ಆದ ಸೂಕ್ಷ್ಮನೆಂಬ ಅಸುರನು ಬೃಹದ್ರಥನೆಂಬ ರಾಜನಾಗಿ ಹುಟ್ಟಿದನು. ತುಹುಂಡನೆಂಬ ರಾಜನು ಸೇನಾಬಿಂದುವೆಂದ. ಪ್ರಸಿದ್ಧನಾದ ರಾಜನಾಗಿ ಹುಟ್ಟಿದನು. ಅಸುರರೊಳಗೆಲ್ಲ ಪ್ರಬಲಪರಾಕ್ರಮಿಯೆನಿಸಿಕೊಂಡ ಇಷುಪಾದನೆಂಬವನು ನಗ್ನಜಿತ್ತೆಂಬ ರಾಜ

ನಾಗಿ ಹುಟ್ಟಿದನು. ಹಾಗೆಯೇ ಏಕಚಕ್ರನೆಂಬ ಅಸುರನು ಪ್ರತಿವಿಂಧ್ಯ ನಾಗಿಯೂ, ವಿರೂಪಾಕ್ಷನೆಂಬ ದಾನವನು ಚಿತ್ರಧರ್ಮನಾಗಿಯೂ, ಹರ ನೆಂಬ ದೈತ್ಯನು ಸುಬಾಹುವಾಗಿಯೂ, ಅಹರನೆಂಬವನು ಬಾಹ್ಲೀಕನೆಂಬ ರಾಜನಾಗಿಯೂ, ಚಂದ್ರನೆಂಬ ದೈತ್ಯನು ಮುಂಜಕೇಶನೆಂಬ ರಾಜನಾಗಿ ಯೂ ಭೂಮಿಯಲ್ಲಿ ಹುಟ್ಟಿದರು. ನಿಕುಂಭನೆಂಬ ದುರ್ಜಯನಾದ ದಾನ ವನು ಭೂಮಿಯಲ್ಲಿ ದೇವಾಧಿಪನೆಂಬ ರಾಜನಾಗಿ ಹುಟ್ಟಿದನು. ಶರಭ ನೆಂಬ ಮಹಾಸುರನು ಪೌರವನೆಂಬ ರಾಜನಾದನು. ಕುಪಟನೆಂಬ ಅಸು ರೋತ್ತಮನು ಭೂಮಿಯಲ್ಲಿ ಸುಪಾರ್ಶ್ವನೆಂಬ ರಾಜನಾಗಿಯೂ, ಕಪಟ ನೆಂಬವನು ಮೇರು ಪರ್ವತಕ್ಕೆ ಸಮಾನನಾದ ಪಾರ್ವತೇಯನೆಂಬ ರಾಜ ನಾಗಿಯೂ ಹುಟ್ಟಿದನು ಆ ದೈತ್ಯರಲ್ಲಿ ಎರಡನೆಯ ಶಲಭನೆಂಬವನು ಪ್ರ ಹ್ಲಾದನೆಂಬ ಬಾಹ್ಲೀಕದೇಶದ ರಾಜನಾಗಿ ಹುಟ್ಟಿದನು. ಚಂದ್ರಸೂರ್ಯ ರೆಂಬ ಹೆಸರುಳ್ಳ ದಾನವರಿಬ್ಬರೂ ಕ್ರಮವಾಗಿ ಚಂದ್ರವರ್ಮನೆಂಬ ಕಾಂ ಭೋಜರಾಜನಾಗಿಯೂ, ಋಷಿಕನಾಗಿಯೂ ಹುಟ್ಟಿದರು ಮೃತಪ ನೆಂಬ ದೈತ್ಯರಾಜನೇ ಪಶ್ಚಿಮಾನೂಪಕನೆಂಬ ರಾಜನಾಗಿ ಹುಟ್ಟಿದನು. ಗವಿಷ್ಠನೆಂಬ ಅಸುರರಾಜನು ದ್ರುಮಸೇನನೆಂಬ ರಾಜನಾಗಿಯೂ, ಮ ಯೂರನೆಂಬ ಅಸುರನು ವಿಶ್ವನೆಂಬ ರಾಜನಾಗಿಯೂ ಭೂಮಿಯಲ್ಲಿ ಹುಟ್ಟಿದರು. ಮಯೂರನ ತಮ್ಮನಾದ ಸುವರ್ಣನೆಂಬ ದಾನವನು ಕಾಲ ಕೀರ್ತಿಯೆಂಬ ರಾಜನಾಗಿ ಹುಟ್ಟಿದನು. ಚಂದ್ರಹರ್ತನೆಂಬ ಅಸುರನು ಶುನಕನೆಂಬ ರಾಜನಾಗಿಯೂ, ಚಂದ್ರಪ್ರಮರ್ದನೆಂಬವನು ಜಾನಕಿಯೆಂ ಬ ರಾಜನಾಗಿಯೂ ಭೂಮಿಯಲ್ಲಿ ಜನಿಸಿದರು. ದೀರ್ಘಜಿಹ್ವನೆಂಬ ಅಸುರನು ಕಾಶೀರಾಜನಾಗಿ ಹುಟ್ಟಿದನು. ಸಿಂಹಿಕೆಯ ಮಗನಾದ ರಾಹು ವು ಕ್ರಾಥನೆಂಬ ಹೆಸರಿನಿಂದ ಭೂಮಿಯಲ್ಲಿ ಜನಿಸಿದನು. ದನಾಯುವಿನ ನಾಲ್ವರು ಮಕ್ಕಳಲ್ಲಿ ಮೊದಲನೆಯವನಾದ ವಿಕ್ಷರನೆಂಬ ದಾನವನು ವಸು ಮಿತ್ರನೆಂಬ ರಾಜನಾಗಿ ಹುಟ್ಟಿದನು ವಿಕ್ಷರನ ತಮ್ಮನು ಪಾಂಡ್ಯದೇ ಶಾಧಿಪತಿಯಾಗಿ ಜನಿಸಿದನು. ವೀರನೆಂಬ ದಾನವನು ಪೌಂಡ್ರಮಾತ್ಸ್ಯಕ ನೆಂಬ ರಾಜನಾಗಿಯೂ, ವೃತ್ರನೆಂಬ ಮಹಾದಾನವನು ಮಣಿಮಂತನೆಂಬ

ರಾಜನಾಗಿಯೂ ಹುಟ್ಟಿದರು. ವೃತ್ರನ ತಮ್ಮನಾದ ಕ್ರೋಧಹಂತನು ದಂಡನೆಂಬ ರಾಜನಾಗಿ ಜನಿಸಿದನು. ಕ್ರೋಧವರ್ಧನನೆಂಬ ಬೇರೊಬ್ಬ ಅರಸನು ದಂಡಧರನೆಂಬ ರಾಜನಾಗಿ ಹುಟ್ಟಿದನು. ಕಾಲೇಯರೆಂಬ ದೈತ್ಯಕುಮಾರರೆಂಟು ಮಂದಿಯೂ ಬೇರೆಬೇರೆ ರಾಜರಾಗಿ ಜನಿಸಿದರು. ಆ ಎಂಟು ಮಂದಿಯಲ್ಲಿ ಕ್ರಮವಾಗಿ ಮೊದಲನೆಯವನು ಮಗಧಾಧಿಪತಿಯಾದ ಜಯತ್ಸೇನನಾಗಿಯೂ, ಎರಡನೆಯವನು ಅಪರಾಜಿತನೆಂಬ ರಾಜನಾಗಿಯೂ, ಮೂರನೆಯವನು ನಿಷಾದಪತಿಯಾಗಿಯೂ, ನಾಲ್ಕನೆಯವನು ಶ್ರೇಣಿಮಂತನಾಗಿಯೂ, ಐದನೆಯವನು ಮಹೌಜಸ್ಸೆಂಬ ರಾಜನಾಗಿಯೂ, ಆರನೆಯವನು ಅಭೀರುವೆಂಬ ರಾಜನಾಗಿಯೂ, ಏಳನೆಯವನು ಸಮುದ್ರಾಂತವಾದ ಸಮಸ್ತಭೂಮಿಗೂ ಪತಿಯೆನಿಸಿ ಪ್ರಖ್ಯಾತಿಗೊಂಡು ಧರ್ಮಾರ್ಥಗಳನ್ನು ಚೆನ್ನಾಗಿ ಬಲ್ಲವನಾದ ಸಮುದ್ರಸೇನನೆಂಬ ರಾಜನಾಗಿಯೂ, ಎಂಟನೆಯವನಾದ ಬೃಹತ್ತೆಂಬವನು ಸರ್ವಭೂತಹಿತನೆನಿಸಿದ ಧರ್ಮಾತ್ಮನೆಂಬ ರಾಜನಾಗಿಯೂ ಜನಿಸಿದರು. ದಾನವರಲ್ಲಿ ಅತಿಬಲಾಢ್ಯನೆನಿಸಿದ ಕುಕ್ಷಿಯೆಂಬವನು ಪಾರ್ವತೀಯರಾಜನಾಗಿ ಜನಿಸಿದನು ಕ್ರಥನೆಂಬ ದೈತ್ಯರಾಜನು ಭೂಮಿಯಲ್ಲಿ ಸೂರ್ಯಾಕ್ಷನೆಂಬ ರಾಜನಾದನು. ಸೂರ್ಯನೆಂಬ ಬೇರೊಬ್ಬ ದಾನವನು ದರದನೆಂಬ ಬಾಹ್ಲೀಕರಾಜನಾಗಿ ಹುಟ್ಟಿದನು. ರಾಜೇಂದ್ರಾ! ಕ್ರೋಧವಶರೆಂಬ ಅಸುರಗಣವೊಂದುಂಟೆಂದು ನಿನಗೆ ಹೇಳಿದ್ದೆನಲ್ಲವೆ? ಅವರ ಅಂಶಗಳಿಂದಲೂ ಈ ಭೂಮಿಯಲ್ಲಿ ಅನೇಕ ವೀರರಾಜರು ಹುಟ್ಟಿದ್ದರು. ಮದ್ರಕ, ಕರ್ಣವೇಷ್ಟ, ಸಿದ್ಧಾರ್ಥ, ಕೀಟಕ, ಸುವೀರ, ಸುಬಾಹು, ಮಹಾವೀರ, ಬಾಹ್ಲೀಕ, ಕ್ರತು, ವಿಚಿತ್ರ, ಸುರಥ, ನೀಲ, ಚೀರವಾಸಸ್ಸು, ಭೂಮಿಪಾಲ, ದಂತವಕ್ರ, ದುರ್ಜಯ, ರುಕ್ಮಿ, ಜನಮೇಜಯ, ಆಷಾಢ, ವಾಯುವೇಗ, ಭೂರಿತೇಜಸ್ಸು, ಏಕಲವ್ಯ, ಸುಮಿತ್ರ, ವಾಟಧಾನ, ಗೋಮುಖ, ಕರೂಷರಾಜ, ಕ್ಷೇಮಧೂರ್ತಿ, ಶ್ರುತಾಯು, ಉದ್ವಹ, ಬೃಹತ್ಸೇನ, ಕ್ಷೇಮ, ಉಗ್ರತೀರ್ಥ, ಕುಳಿಂದಾಧಿಪತಿಯಾದ ತುಹರ, ಮತಿಮಂತ, ಈಶ್ವರರೆಂಬೀ ರಾಜಸಮೂಹಗಳೆಲ್ಲ ಆ ಕ್ರೋಧವಶರೆಂಬ ದೈತ್ಯಗಣಗಳ ಅಂಶದಿಂದ ಭೂಮಿಯಲ್ಲಿ ಹುಟ್ಟಿದವರೇ!

ಮೊದಲು ದೈತ್ಯರೊಳಗೆಲ್ಲ ಮಹಾಬಲಾಢ್ಯನೂ, ಯಶಸ್ವಿಯೂ ಆದ ಕಾಲನೇಮಿಯೆಂಬ ದಾನವಪತಿಯೊಬ್ಬನಿದ್ದನಲ್ಲವೆ? ಅವನೇ ಉಗ್ರಸೇನ ಪುತ್ರನಾದ ಕಂಸನಾಗಿ ಹುಟ್ಟಿದನು. ಇಂದ್ರಸಮಾನತೇಜಸ್ಸುಳ್ಳ ದೇವಕನೆಂಬ ರಾಜನು ಮೊದಲು ಒಬ್ಬ ಗಂಧರ್ವಶ್ರೇಷ್ಠನು. ಆ ಗಂಧರ್ವನಿಗೂ ದೇವಕನೆಂದೇ ಹೆಸರು. ದೇವರ್ಷಿಯಾದ ಬೃಹಸ್ಪತಿಯ ಅಂಶದಿಂದ ದ್ರೋಣನು ಭರದ್ವಾಜನಿಂದ ಹುಟ್ಟಿದನು. ಆ ದ್ರೋಣನು ಸಾಮಾನ್ಯ ಮನುಷ್ಯರಂತೆ ಸ್ತ್ರೀಯರ ಗರ್ಭಾಶಯದಿಂದ ಹುಟ್ಟಿದವನಲ್ಲವೆಂದು ತಿಳಿ. ಈ ದ್ರೋಣನು ಬ್ರಾಹ್ಮಣನಾಗಿದ್ದರೂ ದನುರ್ಧಾರಿಗಳಲ್ಲಿ ಮೇಲೆನಿಸಿ, ಎಲ್ಲಾ ಶಾಸ್ತ್ರಗಳನ್ನೂ ಬಲ್ಲವನಾಗಿದ್ದನು. ಮಹಾಪರಾಕ್ರಮಿಯೆಂದು ಪ್ರಖ್ಯಾತಿಗೊಂಡನು. ವೇದವಿತ್ತುಗಳಾದ ಬ್ರಾಹ್ಮಣರುಕೂಡ ಆ ದ್ರೋಣನನ್ನು ವೇದಗಳಲ್ಲಿಯೂ, ಧನುರ್ವೇದಗಳಲ್ಲಿಯೂ ಅವನಿಗೆ ಸಮಾನರಿಲ್ಲವೆಂದೂ, ಅದ್ಭುತಕರ್ಮಿಯೆಂದೂ, ತಮ್ಮ ಕುಲಕ್ಕೆ ಕೀರ್ತಿಯನ್ನು ತರತಕ್ಕವನೆಂದೂ ತಿಳಿದಿದ್ದರು. ಅವನ ಮಗನಾದ ಅಶ್ವತ್ಥಾಮನ ಮಹಿಮೆಯೋ ಅಸಾಧಾರಣವಾದುದು! ಅವನೂ ಮಹಾಪರಾಕ್ರಮಶಾಲಿ. ಶತ್ರುಭಯಂಕರನು. ತಾವರೆಯ ಎಸಳುಗಳಂತೆ ಕಣ್ಣುಳ್ಳವನು. ಪರಮಶಿವನ ಮತ್ತು ಯಮಧರ್ಮರಾಜನ ಅಂಶಗಳೆರಡೂ ಸೇರಿ ಕಾಮದಿಂದಲೂ, ಕೋಪದಿಂದಲೂ ಹುಟ್ಟಿದವನು. ಅವನು ಭೂಮಿಯಲ್ಲಿ ಸಮಸ್ತ ಜನರಿಗೂ ಆದರ್ಶಪ್ರಾಯನಾಗಿದ್ದನು. ಓ ಜನಮೇಜಯರಾಜಾ! ಅಷ್ಟವಸುಗಳು ವಸಿಷ್ಠಶಾಪದಿಂದಲೂ, ಇಂದ್ರಾಜ್ಞೆಯಿಂದಲೂ, ಗಂಗಾದೇವಿಯಲ್ಲಿ ಶಂತನುರಾಜನಿಗೆ ಮಕ್ಕಳಾಗಿ ಹುಟ್ಟಿದರು ಆ ಎಂಟು ಮಕ್ಕಳಲ್ಲಿ ಎಲ್ಲರಿಗಿಂತಲೂ ಕಿರಿಯವನೇ ಭೀಷ್ಮನು. ಅವನು ಎಲ್ಲಾ ವೇದಧರ್ಮಗಳನ್ನೂ ಬಲ್ಲವನು. ಧೀಮಂತನು. ಶತ್ರುನಾಶಕನು. ಅಸ್ತ್ರಜ್ಞರೊಳಗೆಲ್ಲ ಮೇಲೆನಿಸಿದವನು. ಕೌರವರಿಗೆ ಅಭಯಪ್ರದನಾಗಿದ್ದನು. ಇವನು ಮಹಾಪರಾಕ್ರಮಿಯಾದುದರಿಂದ ಪರಶುರಾಮನೊಡನೆ ಯುದ್ಧಮಾಡಿ ಜಯಿಸಿದನು. ಓ ರಾಜೇಂದ್ರಾ! ಕೃಪನೆಂಬ ಬ್ರಹ್ಮರ್ಷಿಯೊಬ್ಬನು ಈಗಲೂ ಭೂಮಿಯಲ್ಲಿರುವನಲ್ಲವೆ? ಮಹಾಶಕ್ತಿಯುಳ್ಳ ಆತನು ರುದ್ರಗಣಗಳಿಂದ ಹುಟ್ಟಿದವನೆಂದು ತಿಳಿ. ಈ ಲೋಕದಲ್ಲಿ ಮಹಾರಥನೆನಿಸಿದ

ಶಕುನಿಯೆಂಬ ರಾಜನಿದ್ದನಲ್ಲವೆ? ದ್ವಾಪರಯುಗವೇ ಅವನಾಗಿ ಹುಟ್ಟಿದ ನೆನ್ನುವರು. ವೃಷ್ಣಿಕುಲ ಪ್ರಧಾನನಾದ ಸಾತ್ಯಕಿಯೆಂಬವನು ದೇವತೆಗಳಲ್ಲಿ ಸಪ್ತಮರುತ್ತುಗಳ ಅಂಶದಿಂದ ಹುಟ್ಟಿದವನು. ಅವನು ಮಹಾ ಸತ್ಯಸಂಧನು. ಆಯುಧಧಾರಿಗಳಲ್ಲಿ ಮೇಲೆನಿಸಿದ ದ್ರುಪದನೂ ಕೂಡ ಆ ಮರುದ್ಗಣದಿಂದ ಹುಟ್ಟಿದವನೇ. ಕ್ಷತ್ರಿಯಶ್ರೇಷ್ಠನಾದ ಕೃತವರ್ಮನೂ, ವಿರಾಟರಾಜನೂ ಆ ಸಪ್ತಮರುತ್ತುಗಳ ಗಣದಿಂದಲೇ ಹುಟ್ಟಿದವರು. ಅರಿಷ್ಟೆಯೆಂಬವಳ ಮಗನಾದ ಹಂಸನೆಂಬ ಗಂಧರ್ವರಾಜನೇ ವ್ಯಾಸ ಮಹರ್ಷಿಯಿಂದ ಧೃತರಾಷ್ಟ್ರನೆಂಬ ಕೌರವರಾಜನಾಗಿ ಹುಟ್ಟಿದನು. ಮಹಾ ಪರಾಕ್ರಮಿಯೂ, ಪ್ರಜ್ಞಾಚಕ್ಷುವೂ (ಜ್ಞಾನವೇ ಕಣ್ಣಾಗಿ ಉಳ್ಳವನೂ) ಆದ ಆ ಧೃತರಾಷ್ಟ್ರನು ಹುಟ್ಟುವಾಗಲೇ ಕುರುಡನಾಗಿ ಹುಟ್ಟಿದನು. ಇವನ ತಾಯಿಯು ಮಾಡಿದ ತಪ್ಪಿತವೇ ಇದಕ್ಕೆ ಕಾರಣವು. ಅವಳು ಒಬ್ಬ ಋಷಿಗೆ ಕೋಪವುಂಟಾಗುವಂತೆ ಮಾಡಿ, ಅದರಿಂದ ಕುರುಡನಾದ ಮಗನನ್ನು ಪಡೆದಳು. ಓ ಜನಮೇಜಯರಾಜಾ! ಆ ಧೃತರಾಷ್ಟ್ರನಿಗೆ ತಮ್ಮನೂ, ನಿನ್ನ ತಂದೆಗೆ ತಾತನೂ, ಶಸ್ತ್ರಧಾರಿಗಳಲ್ಲಿ ಶ್ರೇಷ್ಠನೂ, ಶೌರ್ಯ ಧೈರ್ಯಾದಿ ಗುಣಗಳಿಂದ ತುಂಬಿದವನೂ ಆದ ಪಾಂಡುಮಹಾರಾಜನೂ ಕೂಡ ಸಪ್ತಮರುತ್ತುಗಳ ಗಣದಿಂದಲೇ ಹುಟ್ಟಿದವನು. ಧೀಮಂತರಲ್ಲಿ ಮೇಲೆನಿಸಿ ಬಹಳ ಧರ್ಮಜ್ಞನಾಗಿ ಪುತ್ರವಂತರಲ್ಲಿ ಮೇಲೆನಿಸಿದ ವಿದುರನು ಧರ್ಮದೇವತೆಯ ಅಂಶದಿಂದ ಭೂಲೋಕದಲ್ಲಿ ವ್ಯಾಸಮಹರ್ಷಿಗೆ ಹುಟ್ಟಿದವನೆಂದು ತಿಳಿ. ಆ ಧೃತರಾಷ್ಟ್ರನ ಮಗನಾದ ದುರ್ಯೋಧನನೆಂಬವನು ಕಲಿಯ ಅಂಶದಿಂದ ಹುಟ್ಟಿದವನು. ಆದರಿಂದಲೇ ಅವನು ಜ್ಞಾನಶೂನ್ಯನಾಗಿ, ಬುದ್ಧಿಗೆಟ್ಟು, ಕುರುವಂಶಕ್ಕೆಲ್ಲ ದೊಡ್ಡ ಅಪಕೀರ್ತಿಯನ್ನು ತರಲು ಕಾರಣನಾದನು. ಅವನ ದುರ್ಬುದ್ಧಿಯಿಂದಲೇ ಸಮಸ್ತ ಭೂಮಿಯೂ ವಿಪತ್ತಿಗೆ ಗುರಿಯಾಯಿತು. ಅವನಿಂದಲೇ ಸಮಸ್ತ ಪ್ರಾಣಿ ವಿನಾಶಕರವಾದ ದೊಡ್ಡ ವಿರೋಧವು ಎಬ್ಬಿಸಲ್ಪಟ್ಟಿತು. ಪುಲಸ್ತ್ಯಪುತ್ರರಾದ ರಾಕ್ಷಸರೆಲ್ಲ ದುಶ್ಶಾಸನನೇ ಮೊದಲಾದ ದುರ್ಯೋಧನನ ಸಹೋದರರಾಗಿ ಶತಸಂಖ್ಯೆಯಿಂದ ಹುಟ್ಟಿದರು. ದುರ್ಮುಖ, ದುಸ್ಸಹ ಮೊದಲಾಗಿ ನಾನು ಹಿಂದೆ ಹೇಳಿದ ದುಷ್ಟಾತ್ಮರೆಲ್ಲರೂ ರಾಕ್ಷಸಾಂಶದಿಂದಲೆ

ಹುಟ್ಟಿ, ಆ ದುರ್ಯೋಧನನಿಗೆ ಸಹಾಯಕರಾಗಿದ್ದರು. ಧೃತರಾಷ್ಟ್ರನಿಗೆ ವೈಶ್ಯಸ್ತ್ರೀಯಲ್ಲಿ ಹುಟ್ಟಿದ ಯುಯುತ್ಸುವೆಂಬವನು ಅವನ ಮಕ್ಕಳಲ್ಲಿ ನೂರೊಂದನೆಯವನು. ಅವನೂ ಮೊದಲು ರಾಕ್ಷಸನೇ" ಎಂದನು.

ಆಗ ಜನಮೇಜಯನು "ಓ ಮಹರ್ಷೀ! ಈ ಧೃತರಾಷ್ಟ್ರಪುತ್ರರ ಹೆಸರನ್ನೆಲ್ಲಾ ಜ್ಯೇಷ್ಠಾನುಕ್ರಮವಾಗಿ ನನಗೆ ತಿಳಿಸಬೇಕು" ಎನಲು, ವೈಶಂಪಾಯನನು "ಓ ರಾಜೇಂದ್ರಾ! ಕೇಳು! ದುರ್ಯೋಧನನು ಎಲ್ಲರಿಗಿಂತಲೂ ಮೊದಲನೆಯವನು. ಅವನಿಂದಾಚೆಗೆ ಕ್ರಮವಾಗಿ, ಯುಯುತ್ಸು, ದುಶ್ಶಾಸನ, ದುಸ್ಸಹ, ದುಶ್ಶಲ, ದುರ್ಮುಖ, ವಿವಿಂಶತಿ, ವಿಕರ್ಣ, ಜಲಸಂಧ, ಸುಲೋಚನ, ವಿಂದ, ಅನುವಿಂದ, ದುರ್ಧರ್ಷ, ಸುಬಾಹು, ದುಷ್ಪ್ರಧರ್ಷಣ, ದುರ್ಮರ್ಷಣ, ದುರ್ಮುಖ, ದುಷ್ಕರ್ಣ, ಕರ್ಣ, ಚಿತ್ರ, ಉಪಚಿತ್ರ, ಚಿತ್ರಾಕ್ಷ, ಚಾರುಚಿತ್ರ, ಅಂಗದ, ದುರ್ಮದ, ದುಷ್ಪ್ರಹರ್ಷಣ, ವಿವಿತ್ಸು, ವಿಕಟ, ಸಮ, ಊರ್ಣನಾಭ, ಪದ್ಮನಾಭ, ನಂದ, ಉಪನಂದ, ಸೇನಾಪತಿ, ಸುಷೇಣ, ಕುಂಡೋದರ, ಮಹೋದರ, ಚಿತ್ರಬಾಹು, ಚಿತ್ರವರ್ಮ, ಸುವರ್ಮ, ದುರ್ವಿರೋಚನ, ಅಯೋಬಾಹು, ಮಹಾಬಾಹು, ಚಿತ್ರಚಾಪ, ಸುಕುಂಡಲ, ಭೀಮವೇಗ, ಭೀಮಬಲ, ಬಲಾಕಿ, ಭೀಮವಿಕ್ರಮ, ಉಗ್ರಾಯುಧ, ಭೀಮಶರ, ಕನಕಾಯು, ದೃಢಾಯುಧ, ದೃಢವರ್ಮ, ದೃಢಕ್ಷತ್ರ, ಸೋಮಕೀರ್ತಿ, ಅನೂದರ, ಜರಾಸಂಧ, ದೃಢಸಂಧ, ಸತ್ಯಸಂಧ, ಸಹಸ್ರವಾಕ್, ಉಗ್ರಶ್ರವ, ಉಗ್ರಸೇನ, ಕ್ಷೇಮಮೂರ್ತಿ, ಅಪರಾಜಿತ, ಪಂಡಿತಕ, ವಿಶಾಲಾಕ್ಷ, ದುರಾಧಾರ, ದೃಢಹಸ್ತ, ಸುಹಸ್ತ, ವಾತವೇಗ, ಸುವರ್ಚಸ, ಆದಿತ್ಯಕೇತು, ಬಹ್ವಾಶಿ, ನಾಗದತ್ತ, ಅನುಯಾಯಿ, ಕವಚಿ, ನಿಷಂಗಿ, ದಂಡಿ, ದಂಡಧಾರ, ಧನುರ್ಗ್ರಹ, ಉಗ್ರ, ಭೀಮರಥ, ವೀರ, ವೀರಬಾಹು, ಅಲೋಲುಪ, ಅಭಯ, ರೌದ್ರಕರ್ಮ, ದೃಢರಥ, ಅನಾಧೃಷ್ಯ, ಕುಂಡಬೇಧಿ, ವಿರಾವಿ, ದೀರ್ಘಲೋಚನ, ದೀರ್ಘಬಾಹು, ಮಹಾಬಾಹು, ವ್ಯೂಢೋರು, ಕನಕಾಂಗದ, ಕುಂಡಜ, ಚಿತ್ರಕ, ಇವರಿಷ್ಟು ಮಂದಿಯೂ ಧೃತರಾಷ್ಟ್ರನ ಮಕ್ಕಳು. ಇವರು ಹೊರತು ನೂರೊಂದನೆಯವಳು ದುಶ್ಶಲೆಯೆಂಬ ಕನ್ಯೆ. ಧೃತರಾಷ್ಟ್ರನಿಗೆ ವೈಶ್ಯಸ್ತ್ರೀಯಲ್ಲಿ ಹುಟ್ಟಿದ

*ಯುಯುತ್ಸುವೆಂಬವನು ಇವರೆಲ್ಲರಿಗೂ ಅಚೆಯವನು. ಈಗ ನಾನು ಹೇಳಿದ ನೂರುಮಂದಿ ಪುತ್ರರೂ, ಒಬ್ಬ ಕನ್ಯೆಯೂ ಧೃತರಾಷ್ಟ್ರನಿಗೆ ಜ್ಯೇಷ್ಠಾನುಕ್ರಮವಾಗಿ ಹುಟ್ಟಿದವರೆಂದು ತಿಳಿ. ರಾಜಾ! ಈ ಧೃತರಾಷ್ಟ್ರಪುತ್ರರೆಲ್ಲರೂ ಅತಿರಥರೆನಿಸಿಕೊಂಡ ಶೂರರು. ಯುದ್ಧದಲ್ಲಿ ಪಾಂಡಿತ್ಯವುಳ್ಳವರು. ಎಲ್ಲರೂ ವೇದಶಾಸ್ತ್ರಗಳನ್ನು ಓದಿದವರು. ಯುದ್ಧಕಲೆಯಲ್ಲಿ ಚೆನ್ನಾಗಿ ತೇರಿದವರು. ಕುಲದಲ್ಲಿಯೂ ವಿದ್ಯೆಯಲ್ಲಿಯೂ ಮೇಲೆನಿಸಿಕೊಂಡವರು. ಧೃತರಾಷ್ಟ್ರನ ಕನ್ಯೆಯಾದ ದುಶ್ಶಲೆಗೆ ವಿವಾಹಯೋಗ್ಯವಾದ ವಯಸ್ಸು ಬಂದೊಡನೆ ಗಾಂಧಾರಿಯ ಅಭಿಪ್ರಾಯದಂತೆ ಧೃತರಾಷ್ಟ್ರನು ಸಿಂಧುದೇಶಾಧಿಪತಿಯಾದ ಜಯದ್ರಥನಿಗೆ ಕನ್ಯಾದಾನವನ್ನು ಮಾಡಿ ವಿವಾಹವನ್ನು ಬೆಳೆಸಿದನು. ರಾಜಾ! ಯುಧಿಷ್ಠಿರನು ಧರ್ಮದೇವನ ಅಂಶದಿಂದ ಹುಟ್ಟಿದವನು. ಭೀಮನು ವಾಯುದೇವನ ಅಂಶದಿಂದಲೂ, ಅರ್ಜುನನು ದೇವರಾಜನಾದ ಇಂದ್ರನ ಅಂಶದಿಂದಲೂ ಜನಿಸಿದವರು. ರೂಪದಲ್ಲಿ ಎಣೆಯಿಲ್ಲದ ನಕುಲಸಹದೇವರಿಬ್ಬರೂ ಅಶ್ವಿನೀದೇವತೆಗಳ ಅಂಶದಿಂದ ಅವಳಿಮಕ್ಕಳಾಗಿ ಹುಟ್ಟಿದವರು. ಅವರ ಸೌಂದರ್ಯವು ಎಲ್ಲಾ ಪ್ರಾಣಿಗಳ ಹೃದಯವನ್ನೂ ಆಕರ್ಷಿಸತಕ್ಕುದಾಗಿದ್ದಿತು. ಸೋಮಪುತ್ರನಾದ ವರ್ಚಸ್ಸೆಂಬ ದೇವಕುಮಾರನೇ ಅರ್ಜುನನ ಪುತ್ರನಾದ ಅಭಿಮನ್ಯುವಾಗಿ ಹುಟ್ಟಿದವನು. ಈ ಅಭಿಮನ್ಯುವು ಮಹಾಯಶಸ್ವಿಯೆನಿಸಿಕೊಂಡಿದ್ದನು. ಓ ಜನಮೇಜಯರಾಜಾ! ಆ ಅಭಿಮನ್ಯುವು ಅಲ್ಪಾಯುಸ್ಸಿನಲ್ಲಿಯೇ ಮೃತನಾದುದಕ್ಕೆ ಒಂದು ಪ್ರಬಲವಾದ ಕಾರಣವುಂಟು. ಅದನ್ನು ತಿಳಿಸುವೆನು ಕೇಳು. ವರ್ಚಸ್ಸೆಂಬವನು ಚಂದ್ರನಿಗೆ ಅತ್ಯಂತ ಪ್ರೇಮಪಾತ್ರನಾದ ಪುತ್ರನಾಗಿದ್ದನು. ದೇವತೆಗಳೆಲ್ಲರೂ ಭೂಮಿಯಲ್ಲಿ ತಮ್ಮತಮ್ಮ ಅಂಶದಿಂದ ಹುಟ್ಟಬೇಕೆಂದು ನಿರ್ಣಯಮಾಡಿಕೊಂಡಾಗ, ಚಂದ್ರನು ತನಗೆ ಪ್ರಾಣಕ್ಕಿಂತಲೂ ಪ್ರಿಯನಾಗಿದ್ದ ಆ ಮಗನನ್ನು ಕಳುಹಿಸಿಕೊಡಲು ಇಷ್ಟವಿಲ್ಲದೆ ದೇವತೆಗಳನ್ನು ಕುರಿತು "ನಾನು ಈ ನನ್ನ ಪ್ರಿಯಪುತ್ರನನ್ನು ಈ ಕಾರ್ಯ

---

* ಈ ಹೆಸರು ಎರಡು ಕಡೆ ಬಂದಿದೆ. ಹೀಗೆಯೇ ಅಲ್ಲಲ್ಲಿ ಕೆಲವು ಹೆಸರುಗಳು ಒಂದೇ ಆಗಿವೆ.

ಕ್ಕಾಗಿ ಕಳುಹಿಸಿಕೊಡಲಾರೆನು. ಭೂಮಿಯಲ್ಲಿ ರಾಜರೂಪದಿಂದ ಹುಟ್ಟಿರುವ ದೈತ್ಯರ ವಧವು ನಡೆಯಬೇಕಾದುದು ಅವಶ್ಯವೇ! ಅದನ್ನು ನಡೆಸಬೇಕಾದುದು ದೇವತೆಗಳಾದ ನಮಗೂ ಮುಖ್ಯಕರ್ತವ್ಯವೇ. ಆದುದರಿಂದ ಇವನು ಸ್ವಲ್ಪಕಾಲಕ್ಕೆಮಾತ್ರ ಭೂಮಿಗೆ ಹೋಗಿಬರಲಿ. ಆದರೆ ಬಹುಕಾಲದವರೆಗೆ ಇವನು ಅಲ್ಲಿರಕೂಡದು. ನಾರಾಯಣನ ಸಖನಾದ ನರನು ಅರ್ಜುನನೆಂಬ ಹೆಸರಿನಿಂದ, ಇಂದ್ರನ ಅಂಶದೊಡನೆ ಪಾಂಡುರಾಜನ ಮಗನಾಗಿ ಹುಟ್ಟುವನು. ಅವನ ಗರ್ಭದಲ್ಲಿ ಇವನು ಜನಿಸಲಿ! ಇವನು ಬಾಲ್ಯದಲ್ಲಿಯೇ ಮಹಾರಥನೆನೆಸಿಕೊಳ್ಳುವನು. ಇವನು ಹದಿನಾರು ವರ್ಷಗಳು ಮಾತ್ರವೇ ಭೂಮಿಯಲ್ಲಿರುವನು. ಇವನ ಹದಿನಾರನೆಯ ವಯಸ್ಸಿನಲ್ಲಿ ಭೂಮಿಯಲ್ಲಿ ಪ್ರಬಲ ಯುದ್ಧವೊಂದಾಗುವುದು. ಅದರಲ್ಲಿ ನಿಮ್ಮೆಲ್ಲರ ಅಂಶದಿಂದ ಹುಟ್ಟಿದ ಅನೇಕರಾಜರು ದಾನವಾಂಶದಿಂದ ಜನಿಸಿದ ಅನೇಕ ಕ್ಷತ್ರಿಯರನ್ನು ಸಂಹರಿಸುವರು, ಈ ನಡುವೆ ಆ ಯುದ್ಧ ಕಾಲದಲ್ಲಿ ನಿಮ್ಮ ಪ್ರತಿಪಕ್ಷದವರು ಒಂದು ಚಕ್ರವ್ಯೂಹವನ್ನು ರಚಿಸಿ, ನಿಮ್ಮೊಡನೆ ಯುದ್ಧವನ್ನಾರಂಭಿಸುವರು. ನರ ನಾರಾಯಣರಿಬ್ಬರೂ ಇಲ್ಲದ ಸಮಯವನ್ನು ನೋಡಿ, ಇನ್ನೂ ಬಾಲನಾದ ಆತನು ಆ ಚಕ್ರವ್ಯೂಹವನ್ನು ಭೇದಿಸಿಕೊಂಡು ಒಳಗೆ ಹೋಗಿ, ಶತ್ರುಗಳಾರೂ ತಲೆಯೆತ್ತದಂತೆ ಮಾಡಿ, ಅನೇಕರನ್ನು ಕೊಂದು, ಅನೇಕರನ್ನು ತಲೆತಗ್ಗಿಸಿಕೊಂಡು ಓಡುವಹಾಗೆ ಮಾಡುವನು. ಕೊನೆಗೆ ಅನೇಕಮಹಾರಥರು ಒಂದಾಗಿ ಸೇರಿ, ಇವನನ್ನು ನಡುವೆ ಸಿಕ್ಕಿಸಿಕೊಂಡು ಕೊಂದುಬಿಡುವರು. ಮಹಾಬಲಶಾಲಿಯಾದ ಈ ನನ್ನ ಮಗನು ಅರ್ಧದಿನದೊಳಗಾಗಿ ಒಟ್ಟು ಕೌರವ ಸೈನ್ಯದ ಕಾಲುಭಾಗವನ್ನು ಯಮಪುರಿಗೆ ಕಳುಹಿಸಿಬಿಡುವನು. ಆ ದಿನದ ಸಾಯಂಕಾಲವೇ ಇವನು ತಿರುಗಿ ನನ್ನ ಬಳಿಗೆ ಬಂದು ಸೇರುವನು. ಇವನಿಗೆ ವಂಶವೃದ್ಧಿಕರನಾದ ಒಬ್ಬನೇ ಪುತ್ರನುಂಟಾಗಿ, ಅವನು ನಷ್ಟಪ್ರಾಯವಾಗಿದ್ದ ಭಾರತವಂಶವನ್ನು ತಿರುಗಿ ಚಿಗುರಿಸಿ ನೆಲೆಗೊಳಿಸುವನು" ಎಂದನು. ದೇವತೆಗಳೆಲ್ಲರೂ ಚಂದ್ರನ ನಿರ್ಣಯಕ್ಕೆ ಒಪ್ಪಿ, "ಹಾಗೆಯೇ ಆಗಲಿ!" ಎಂದು ಚಂದ್ರನನ್ನು ಗೌರವಿಸಿದರು.

ಓ ಜನಮೇಜಯರಾಜಾ! ನಿನ್ನ ತಂದೆಯ ತಂದೆಯಾದ ಅಭಿಮನ್ಯುವಿನ ಚರಿತ್ರೆಯನ್ನು ನಿನಗೆ ಹೇಳಿದೆನು. ಮಹಾರಥನಾದ ಧೃಷ್ಟದ್ಯುಮ್ನನು ಅಗ್ನಿದೇವನ ಅಂಶದಿಂದ ಹುಟ್ಟಿದವನು. ಮೊದಲು ಸ್ತ್ರೀಯಾಗಿ ಹುಟ್ಟಿ, ಆಮೇಲೆ ಪುರುಷತ್ವವನ್ನು ಹೊಂದಿದ ಶಿಖಂಡಿಯು ರಾಕ್ಷಸಾಂಶದವನೆಂದು ತಿಳಿ. ರಾಜಾ! ದ್ರೌಪದಿಗೆ ಐದು ಮಕ್ಕಳಿದ್ದರೆಂದೂ, ಅವರು ಕ್ರಮವಾಗಿ ಪ್ರತಿವಿಂಧ್ಯ, ಸುರಸೋಮ, ಶ್ರುತಕೀರ್ತಿ, ಶತಾನೀಕ, ಶ್ರುತಸೇನರೆಂಬ ಹೆಸರುಳ್ಳವರೆಂದೂ ನಾನು ಮೊದಲೇ ನಿನಗೆ ತಿಳಿಸಿದ್ದೆನಲ್ಲವೆ? ಅವರೈದು ಮಂದಿಯೂ ವಿಶ್ವೇದೇವತೆಗಳ ಅಂಶದಿಂದ ಜನಿಸಿದ್ದವರು. ವಸುದೇವನ ತಂದೆಯಾದ ಶೂರನೆಂಬ ಯಾದವಶ್ರೇಷ್ಠನಿದ್ದನು. ಪಾಂಡವರ ತಾಯಿಯಾದ ಪೃಥೆ (ಕುಂತಿ) ಯೆಂಬವಳು ಅವನ ಔರಸಪುತ್ರಿ. ಆದರೆ, ಈ ಶೂರನು ತನ್ನ ಸೋದರತ್ತೆಯ ಪೌತ್ರನಾದ ಕುಂತಿಭೋಜನೆಂಬವನಿಗೆ ಸಂತಾನವಿಲ್ಲದಿರಲು, ತನ್ನ ಜ್ಯೇಷ್ಠಸಂತಾನವನ್ನು ಅವನಿಗೆ ದತ್ತುಮಾಡಿಕೊಡುವುದಾಗಿ ವಾಗ್ದಾನಮಾಡಿದ್ದನು. ಅದರಂತೆ ತನಗೆ ಜ್ಯೇಷ್ಠಪುತ್ರಿಯಾಗಿ ಹುಟ್ಟಿದ ಪೃಥೆಯನ್ನು ಕುಂತಿಭೋಜನಿಗೆ ಸ್ವೀಕಾರಮಾಡಿಕೊಟ್ಟುಬಿಟ್ಟನು. ಆ ಮಗಳನ್ನು ಕುಂತಿಭೋಜನು ತನ್ನ ಮನೆಗೆ ಬಂದ ಬ್ರಾಹ್ಮಣರನ್ನೂ, ಅತಿಥಿಗಳನ್ನೂ ಸತ್ಕರಿಸುವುದಕ್ಕಾಗಿ ನಿಯಮಿಸಿದ್ದನು. ಈ ಸಂದರ್ಭದಲ್ಲಿ ಅವನ ಮನೆಗೆ ಒಮ್ಮೆ ದೂರ್ವಾಸನೆಂಬ ಮಹರ್ಷಿಯು ಅತಿಥಿಯಾಗಿ ಬಂದನು. ಆ ಬ್ರಾಹ್ಮಣನೋ ಬಹಳ ಉಗ್ರಸ್ವಭಾವವುಳ್ಳವನು. ಮಹಾತಪಸ್ವಿ. ಬಹಳ ಭಯಂಕರನು. ಹೀಗಿದ್ದರೂ ಅವನು ಧರ್ಮದಲ್ಲಿ ಸದಾ ನೆಲೆಗೊಂಡವನು. ಆದರೆ ಅವನ ಧರ್ಮಬುದ್ಧಿಯೂ, ಶಾಂತಿಯೂ ಯಾವಾಗಲೂ ಗೋಪ್ಯವಾಗಿದ್ದುವೇಹೊರತು, ಹೊರಗೆ ಕಾಣಿಸುತ್ತಿರಲಿಲ್ಲ. ಆ ಮಹರ್ಷಿಯು ಸುಲಭಕೋಪಿಯಾಗಿದ್ದರೂ, ಉದಾರಮನಸ್ಸುಳ್ಳವನು. ಕುಂತಿಯು ಅವನ ಶುಶ್ರೂಷೆಯನ್ನು ಮಾಡುತ್ತ ಅವನನ್ನು ತನ್ನ ಸೇವೆಯಿಂದ ಮೆಚ್ಚಿಸಿದಳು. ಅವಳ ಶುಶ್ರೂಷೆಗೆ ಮೆಚ್ಚಿ ದೂರ್ವಾಸನು ಮಂತ್ರಯುಕ್ತವಾದ ಒಂದು ಕ್ರಿಯೆಯನ್ನು ವಿಧ್ಯುಕ್ತವಾಗಿ ಅವಳಿಗೆ ಉಪದೇಶಿಸುತ್ತ ಅವಳನ್ನು ಕುರಿತು "ಕುಮಾರೀ! ನಾನು ನಿನ್ನಲ್ಲಿ ಪ್ರಸನ್ನನಾದೆನು. ನೀನು ಈ ಮಂತ್ರದಿಂದ ಯಾವಯಾವ

ದೇವತೆಯನ್ನು ಆಮಂತ್ರಣಮಾಡುವೆಯೋ, ಆಯಾ ದೇವತೆಗಳು ನಿನ್ನ ಲ್ಲಿಗೆ ಬಂದು ಅನುಗ್ರಹಿಸಿ ಪುತ್ರರನ್ನು ಕೊಡುವರು. ಅವರ ಅಂಶದಿಂದ ಲೇ ಪುತ್ರರನ್ನು ಪಡೆಯುವೆ" ಎಂದನು. ಈ ಮಾತನ್ನು ಕೇಳಿ ಇನ್ನೂ ಬಾಲಿಕೆಯಾದ ಕುಂತಿಗೆ ಆಶ್ಚರ್ಯವಾಯಿತು. ಆ ವರಗಳನ್ನು ಪರೀಕ್ಷಿಸಿ ನೋಡಬೇಕೆಂಬ ಆತುರದಿಂದ ಕನ್ಯಾವಸ್ಥೆಯಲ್ಲಿರುವಾಗಲೇ ಮಂತ್ರವನ್ನು ಹೇಳಿ ಸೂರ್ಯದೇವನನ್ನು ಕರೆದಳು. ಒಡನೆಯೇ ಸೂರ್ಯನಿಂದ ಇವ ಳಲ್ಲಿ ಗರ್ಭವುಂಟಾಗಿ, ಒಂದು ಗಂಡುಶಿಶುವು ಜನಿಸಿತು. ದೈವಗರ್ಭದಿಂ ದಾದ ಆ ಗಂಡುಮಗುವು ಹುಟ್ಟುವಾಗಲೇ ಕವಚಕುಂಡಲಗಳೊಡನೆ, ಅತ್ಯಂತ ತೇಜೋವಿಶೇಷದಿಂದ ಜನಿಸಿತು. ಸಮಸ್ತ ಶಸ್ತ್ರಾಸ್ತ್ರಗಳನ್ನೂ ಬಲ್ಲವರಲ್ಲಿ ಮೇಲೆನಿಸಿಕೊಂಡ ಕರ್ಣನೇ ಅವನು. ಅವನು ಹುಟ್ಟುವಾಗ ಸೂರ್ಯಸಮಾನವಾದ ತೇಜಸ್ಸಿನಿಂದ ಬೆಳಗುತ್ತ, ಸರ್ವಾಲಂಕಾರಭೂಷಿತ ನಾಗಿದ್ದನು. ಈ ಶಿಶುವು ಹುಟ್ಟಿದುದನ್ನು ನೋಡಿ ಕುಂತಿಗೆ ಮನಸ್ಸಿನಲ್ಲಿ ಭಯವು ಹುಟ್ಟಿತು. ತನಗೆ ಕನ್ಯಾವಸ್ಥೆಯಲ್ಲಿಯೇ ಈ ಪ್ರಸವವಾದು ದನ್ನು ತಿಳಿದರೆ, ತನ್ನ ಬಂಧುಗಳು ಏನು ಹೇಳುವರೋ ಎಂಬ ಭಯದಿಂದ, ಆ ಮಗುವನ್ನು ಯಾರಿಗೂ ತೋರಿಸದೆ ಬಚ್ಚಿಟ್ಟು, ಒಂದು ನದೀಪ್ರವಾಹ ದಲ್ಲಿ (ತೆಪ್ಪವನ್ನು ಕಟ್ಟಿ ಮಲಗಿಸಿ) ತೇಲುಬಿಟ್ಟಳು. ಇದು ಪ್ರವಾಹದಲ್ಲಿ ತೇಲಿಬರುತ್ತ, ಒಬ್ಬ ಪ್ರಸಿದ್ಧನಾದ ಸೂತನ (ಬೆಸ್ತನ) ಕಣ್ಣಿಗೆ ಬೀಳಲು, ಅವನು ಆ ಶಿಶುವನ್ನು ತಂದು ತನ್ನ ಹೆಂಡತಿಯಾದ ರಾಧೆಯೆಂಬವಳಿಗೆ ಸಾಕುಮಗನನ್ನಾಗಿ ಕೊಟ್ಟನು. ದಂಪತಿಗಳಿಬ್ಬರೂ ಆ ಶಿಶುವನ್ನು ಪ್ರೇಮ ದಿಂದ ಪೋಷಿಸುತ್ತ ಅದಕ್ಕೆ ವಸುಷೇಣನೆಂದು ಹೆಸರಿಟ್ಟರು. ಈ ಹೆಸರೇ ಅವನಿಗೆ ಸಮಸ್ತದಿಕ್ಕುಗಳಲ್ಲಿಯೂ ಪ್ರಸಿದ್ಧವಾಯಿತು. ಆ ಬಾಲನು ದಿನದಿನಕ್ಕೆ ಪ್ರವರ್ಧಮಾನನಾಗುತ್ತ ಸಮಸ್ತ ಶಸ್ತ್ರಾಸ್ತ್ರಗಳಲ್ಲಿಯೂ ನಿಪುಣ ನೆನಿಸಿಕೊಂಡನು. ಅವನು ವೇದಾಂಗಗಳೆಲ್ಲವನ್ನೂ ಅಭ್ಯಾಸಮಾಡಿ ಕಲಿ ತನು. ಅವನು ಸತ್ಯಪರಾಕ್ರಮನಾಗಿ, ಯಾವಾಗಲೂ ಜಪಶೀಲನಾಗಿರು ತಿದ್ದನು. ಈ ಕುಮಾರನು ವೇದಗಳನ್ನು ಜಪಿಸುತಿದ್ದ ಕಾಲದಲ್ಲಿ ಯಾವ ಬ್ರಾಹ್ಮಣನು ತನ್ನಲ್ಲಿಗೆ ಬಂದು ಏನನ್ನು ಕೇಳಿದರೂ ಅದನ್ನು ಕೊಟ್ಟು ಬಿಡುತಿದ್ದನು. ಈ ಸಂಗತಿಯನ್ನು ತಿಳಿದು ದೇವೇಂದ್ರನು ತನ್ನ ಮಗ

ನಾದ ಅರ್ಜುನನ ಕ್ಷೇಮವನ್ನು ಬಯಸಿ, ಬ್ರಾಹ್ಮಣರೂಪದಿಂದ ಆ ಕರ್ಣನು ಜಪಮಾಡುತಿದ್ದ ಸ್ಥಳಕ್ಕೆ ಬಂದು, ಅವನ ಶರೀರದೊಡನೆ ಹುಟ್ಟಿದ್ದ ಕವಚ ಕುಂಡಲಗಳೆರಡನ್ನೂ ತನಗೆ ಕೊಡಬೇಕೆಂದು ಯಾಚಿಸಿದನು. ದಾನಶೂರನಾದ ಕರ್ಣನು ತನ್ನ ಸಂಕಲ್ಪಕ್ಕೆ ಸ್ವಲ್ಪವೂ ಹಿಂತೆಗೆಯದೆ, ತನ್ನ ದೇಹದೊಡನೆ ಒಂದಾಗಿದ್ದ ಕವಚಕುಂಡಲಗಳೆರಡನ್ನೂ ಚರ್ಮವನ್ನು ಸುಲಿಯುವಂತೆ ಕೈಯಿಂದ ಸುಲಿದು ಕೊಟ್ಟುಬಿಟ್ಟನು. ದೇವೇಂದ್ರನು ಅವನ ಔದಾರ್ಯಕ್ಕೆ ಸಂತೋಷಿಸಿ, ಅವನಿಗೆ ಶಕ್ತಿಯೆಂಬ ಆಯುಧವೊಂದನ್ನು ಕೊಟ್ಟು "ಓ ವೀರಾ! ಇದೋ! ಈ ಶಕ್ತಿಯನ್ನು ನೀನು ದೇವ, ದಾನವ, ಮನುಷ್ಯ, ಗಂಧರ್ವ, ನಾಗ, ರಾಕ್ಷಸರೇ ಮೊದಲಾದ ಯಾರಮೇಲೆ ಪ್ರಯೋಗಿಸಿದರೂ, ಇದು ಆ ಒಬ್ಬನ ಪ್ರಾಣವನ್ನು ನೀಗಿಸಿಬಿಡುವುದು ನಿಶ್ಚಯವು. ಈ ಶಕ್ತಿಗೆ ಗುರಿಯಾದವನು ಪ್ರಾಣದಿಂದ ಬದುಕಲಾರನು" ಎಂದನು. ಓ ಜನಮೇಜಯರಾಜಾ! ಮೊದಲು ಭೂಮಿಯಲ್ಲಿ ವಸುಷೇಣನೆಂದು ಪ್ರಸಿದ್ಧನಾಗಿದ್ದ ಅವನಿಗೆ, ಕವಚ ಕುಂಡಲಗಳನ್ನು ದೇಹದಿಂದಲೇ ಕುಯ್ದು ಕೊಟ್ಟುದರಿಂದ ಕರ್ಣನೆಂಬ ಹೆಸರಾಯಿತು. ತನ್ನ ದೇಹವನ್ನು ಸುಲಿದುಕೊಟ್ಟ ಈ ಅಸಾಧ್ಯಕಾರ್ಯಕ್ಕಾಗಿ ಅವನ ಕೀರ್ತಿಯು ಮತ್ತಷ್ಟು ಅತಿಶಯವಾಯಿತು. ಆ ಕರ್ಣನೇ ಕುಂತಿಗೆ ಹಿರಿಯ ಮಗನು. ಅವನು ಸೂತನ ಮನೆಯಲ್ಲಿ ಬೆಳೆದು, ಆಮೇಲೆ ದುರ್ಯೋಧನನಲ್ಲಿ ಸೇರಿ, ಅವನಿಗೆ ಪರಮಾಪ್ತನೂ, ಮಂತ್ರಿಯೂ ಆಗಿದ್ದನು. ಅವನು ಸೂರ್ಯನ ಅಂಶದಿಂದ ಹುಟ್ಟಿದವನು.

ರಾಜೇಂದ್ರಾ! ದೇವದೇವನೂ, ಸನಾತನನೂ ಆದ ಶ್ರೀಮನ್ನಾರಾಯಣನ ಅಂಶದಿಂದಲೇ ವಸುದೇವಪುತ್ರನಾದ ಕೃಷ್ಣನು ಅವತರಿಸಿದನು. ಅವನ ಅಣ್ಣನಾದ ಬಲರಾಮನು ಆದಿಶೇಷನ ಅಂಶವು. ತೇಜಸ್ವಿಯಾದ ಪ್ರದ್ಯುಮ್ನನು ಸನತ್ಕುಮಾರನ ಅಂಶವೆಂದು ತಿಳಿ. ಹೀಗೆಯೇ ಇನ್ನೂ ಅನೇಕ ರಾಜರು ಬೇರೆಬೇರೆ ದೇವತೆಗಳ ಅಂಶದಿಂದ ವಸುದೇವನ ವಂಶದಲ್ಲಿ ಹುಟ್ಟಿದರು. ದೇವಲೋಕದಲ್ಲಿ ಅಪ್ಸರಸ್ಸುಗಳೆಂಬ ಪ್ರತ್ಯೇಕ ಕುಲವೊಂದು ಇರುವುದೆಂದು ಹೇಳಿದೆನಲ್ಲವೇ? ಅವರೂಕೂಡ ಇಂದ್ರನ ಆಜ್ಞೆ

ಯಿಂದ ಭೂಮಿಯಲ್ಲಿ ಹುಟ್ಟಿದರು. ಕೃಷ್ಣನು ತನ್ನ ಪತ್ನಿಯರೆಂದು ಕೈಕೊಂಡ ಹದಿನಾರುಸಾವಿರ ಮಂದಿ ಸ್ತ್ರೀಯರೂ ಆ ಅಪ್ಸರಸ್ಸುಗಳೇ. ಶ್ರೀಮಹಾಲಕ್ಷ್ಮಿಯು ಭಗವದಂಶದಿಂದ ಅವತರಿಸಿದ ಕೃಷ್ಣನನ್ನು ಮೆಚ್ಚಿಸುವುದಕ್ಕಾಗಿ, ತಾನೂ ಭೂಮಿಯಲ್ಲಿ ಭೀಷ್ಮಕರಾಜನ ಅಂಶದಲ್ಲಿ **ರುಕ್ಮಿಣಿ** ಯೆಂಬ ಹೆಸರಿನಲ್ಲಿ ಅವತರಿಸಿದಳು. ಶಚಿಯು ಅಂಶದಿಂದ ಹುಟ್ಟಿದವಳು ದ್ರೌಪದಿ ಇವಳು ದ್ರುಪದನ ಮನೆಯಲ್ಲಿ ಯಜ್ಞವೇದಿಕೆಯ ನಡುವೆ ಉತ್ಪನ್ನಳಾದಳು. ಆ ದ್ರೌಪದಿಯ ಸೌಂದರ್ಯವು ಲೋಕಾತಿಶಯವಾದುದು. ಬಹಳ ಉದ್ದವೂ ಅಲ್ಲದೆ, ಕುಳ್ಳೂ ಅಲ್ಲದೆ ನಡುತರದ ಪ್ರಮಾಣದಲ್ಲಿದ್ದವಳು. ಅವಳು ಪದ್ಮಿನೀ ಜಾತಿಯವಳೆಂಬುದನ್ನು ತೋರಿಸುವಂತೆ ಅವಳು ನಿಂತಕಡೆಯಲ್ಲಿ ಸುತ್ತಲೂ ಪದ್ಮಗಂಧವು ಘಮುಘಮಿಸುತ್ತಿತ್ತು. ಅವಳಿಗೆ ತಾವರೆಯೆಸಳಿನಂತೆ ವಿಶಾಲವಾದ ಕಣ್ಣುಗಳು. ಅಂದವಾದ ನಿತಂಬಗಳು. ಆಕಾಶದಂತೆ ನೀಲವರ್ಣವಾದ ತಲೆಕೂದಲು! ವೈಡೂರ್ಯದಂತೆ ಹೊಳೆಯುವ ದೇಹಕಾಂತಿ! ಕಂದುಕುಂದಿಲ್ಲದ ಮೈಕಟ್ಟು! ಹೀಗೆ ಸರ್ವಲಕ್ಷಣಸಂಪನ್ನೆಯಾದ ಆ ನಾರೀಮಣಿಯು ಐದು ಮಂದಿ ಪಾಂಡವರಿಗೂ ತಾನೊಬ್ಬಳೇ ಪತ್ನಿಯಾಗಿ, ಅವರ ಮನಸ್ಸನ್ನು ಆಕರ್ಷಿಸುತ್ತಿದ್ದಳು. ಸಿದ್ಧಿ, ಧೃತಿ, ಎಂಬ ದೇವತಾಸ್ತ್ರೀಯರೇ ಪಂಚಪಾಂಡವರಿಗೆ ತಾಯಿಯರಾದ ಕುಂತಿ, ಮಾದ್ರಿಯರಾಗಿ ಹುಟ್ಟಿದರು. ಮತಿಯೆಂಬ ದೇವತೆಯೇ ಗಾಂಧಾರಿಯಾಗಿ ಹುಟ್ಟಿದಳು.

ಓ ಜನಮೇಜಯರಾಜಾ! ಹೀಗೆ ದೇವತೆಗಳೂ, ಅಸುರರೂ, ಗಂಧರ್ವರೂ, ಅಪ್ಸರಸ್ಸುಗಳೂ, ರಾಕ್ಷಸರೂ ತಮ್ಮತಮ್ಮ ಅಂಶದಿಂದ ಭೂಮಿಯಲ್ಲಿ ಅವತರಿಸಿದರು. ಯುದ್ಧಮದದಿಂದ ಕೊಬ್ಬಿದ ಅನೇಕರಾಜರು ಯದುವಂಶದಲ್ಲಿಯೂ ಹುಟ್ಟಿದರು. ಹೀಗೆ ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ ಕೂಡ ಬೇರೆಬೇರೆ ದೇವಾಂಶಗಳಿಂದ ಭೂಮಿಯಲ್ಲಿ ಹುಟ್ಟಿದುದನ್ನು ನಿನಗೆ ಹೇಳಿದೆನು. ಧನವನ್ನೂ, ಕೀರ್ತಿಯನ್ನೂ, ಸಂತಾನವನ್ನೂ ಆಯುಷ್ಯವನ್ನೂ, ಜಯವನ್ನೂ ಕೊಡತಕ್ಕ ಈ ಅಂಶಾವತರಣವನ್ನು

ಗಮನಿಸಿ ಕೇಳಿದವನು ಸೃಷ್ಟಿ ಸ್ಥಿತಿ ಲಯಗಳು ಪ್ರಪಂಚಕ್ಕೆ ಸಹಜವೆಂಬು ದನ್ನು ತಿಳಿದು, ಎಂತಹ ಸ್ಥಿತಿಯಲ್ಲಿಯೂ ವ್ಯಸನಪಡಲಾರನು.

ಇದು ಅರುವತ್ತೆಂಟನೆಯ ಅಧ್ಯಾಯವು.

ಕೌರುವಂಶೋತ್ಪತ್ತಿ. ಯಯಾತಿಚರಿತ್ರವನ್ನು ಸಂಕ್ಷೇಪಿಸಿ ಹೇಳಿದುದು.

ಆಗ ಜನಮೇಜಯನು "ಓ ಮಹರ್ಷೀ! ದೇವದಾನವರು ಭೂಮಿ ಯಲ್ಲಿ ತಮ್ಮತಮ್ಮ ಅಂಶದಿಂದ ಹುಟ್ಟಿದುದನ್ನು ನಿನ್ನಿಂದ ನಾನು ಚೆನ್ನಾಗಿ ಕೇಳಿದುದಾಯಿತು. ಇನ್ನು ಮೇಲೆ ಈ ಎಲ್ಲಾ ಬ್ರಹ್ಮರ್ಷಿಗಳ ನಡುವೆ ಕುರುವಂಶವನ್ನು ಕುರಿತು ಆದ್ಯಂತವಾಗಿ ನೀನು ನಮಗೆ ಹೇಳಬೇಕು" ಎಂದನು. ಅದಕ್ಕಾ ವೈಶಂಪಾಯನನು "ಓ ರಾಜೇಂದ್ರಾ! ಮಹಾಜ್ಞಾನಿ ಗಳಾದ ಆ ರಾಜರ್ಷಿಗಳ ಚರಿತ್ರವನ್ನು ಹೇಳುವೆನು ಕೇಳು. ಆ ಚರಿತ್ರವು ಧರ್ಮಾರ್ಥಕಾಮಗಳಿಂದ ಕೂಡಿ ಪವಿತ್ರವಾದುದು. ದಕ್ಷಪ್ರಜಾಪತಿಯ ವಂಶವನ್ನೂ, ವೈವಸ್ವತಮನುವಂಶವನ್ನೂ, ಭಾರತವಂಶವನ್ನೂ ಕುರು ಮತ್ತು ಅಜಮೀಢನ ವಂಶಗಳನ್ನೂ, ಪೂರುವಿನ ಸಂತತಿಯನ್ನೂ, ಯಾದ ವ, ಕೌರವ, ಭಾರತರೆಂಬ ಎಲ್ಲಾ ಪ್ರಸಿದ್ಧವಂಶಗಳನ್ನೂ ನಿನಗೆ ತಿಳಿಸು ವೆನು. ಈ ವಂಶಗಳ ಚರಿತ್ರವು ಪುಣ್ಯಕರವಾದುದು. ಸಂಪತ್ತನ್ನೂ, ಕೀರ್ತಿಯನ್ನೂ, ಆಯುಸ್ಸನ್ನೂ ಕೊಡತಕ್ಕುದು. ಮಂಗಳಕರವಾದುದು.

ಪ್ರಾಚೀನಬರ್ಹಿಯ ಮಕ್ಕಳು ಹತ್ತು ಮಂದಿ. ಇವರೆಲ್ಲರೂ ಮಹ ರ್ಷಿಗೆ ಸಮಾನವಾದ ತೇಜಸ್ಸುಳ್ಳವರು. ಒಳ್ಳೆಯ ಸತ್ಪುರುಷರಲ್ಲಿ ಗಣಿಸ ಲ್ಪಟ್ಟು, ಬಹಳ ಪುಣ್ಯಶೀಲರೆಂದು ಪ್ರಸಿದ್ಧಿಹೊಂದಿದವರು. ಹಿಂದೆ ಅವರ ಮುಖದಿಂದ ಹೊರಟ ಅಗ್ನಿಯಿಂದಲೇ ಒಳ್ಳೆಯ ಸಾರವುಳ್ಳ ವೃಕ್ಷಗಳೂ, ಓಷಧಿಗಳೂ ದಗ್ಧವಾದುವು. ಅವರಿಂದ ಹುಟ್ಟಿದವನೇ ದಕ್ಷನು ಪ್ರಾಚೀನ ಬರ್ಹಿವಂಶದಲ್ಲಿ ಹುಟ್ಟಿದುದರಿಂದ ಅವನು ಪ್ರಾಚೇತಸನೆನಿಸಿಕೊಂಡನು. ಆ ದಕ್ಷಪ್ರಜಾಪತಿಯಿಂದಲೇ ಈ ಪ್ರಜೆಗಳೆಲ್ಲರೂ ಹುಟ್ಟಿದರು. ಇದರಿಂದ

ಅವನು ಲೋಕಪಿತಾಮಹನೆನಿಸಿಕೊಂಡನು. ಪ್ರಚೇತಸ್ಸಿನ ಮಗನೂ, ಋಷಿಯೂ ಎನಿಸಿಕೊಂಡ ದಕ್ಷನು, ವೀರಣನೆಂಬವನ ಮಗಳಾದ ವೀರಣಿಯನ್ನು ಮದುವೆಯಾಗಿ ಅವಳಲ್ಲಿ ತನ್ನಂತೆಯೇ ವ್ರತನಿಷ್ಠರಾದ ಸಾವಿರ ಮಂದಿ ಮಕ್ಕಳನ್ನು ಪಡೆದನು. ಈ ಸಾವಿರ ಮಂದಿ ದಕ್ಷಪುತ್ರರೂ ಒಂದಾಗಿ ಸೇರಿದ್ದಾಗ ನಾರದನು ಅವರಿಗೆ ಮೋಕ್ಷಹೇತುವಾದ ತತ್ವಜ್ಞಾನವನ್ನು ಉಪದೇಶಿಸಿದನು. ಆಮೇಲೆ ಅವರು ಅದೃಶ್ಯವಾಗಿ ಹೊರಟುಹೋಗಬೇಕೆಂಬ ಉದ್ದೇಶದಿಂದ ನಾರದನು ಅವರನ್ನು ದಿಕ್ಕುಗಳ ಕೊನೆಯನ್ನು ಕಂಡುಬರಬೇಕೆಂದು ನಿಯಮಿಸಿ ಕಳುಹಿಸಿಬಿಟ್ಟನು. ಆಮೇಲೆ ದಕ್ಷನು ತಿರುಗಿ ಪ್ರಜೆಗಳನ್ನು ಪಡೆಯುವ ಉದ್ದೇಶವುಳ್ಳವನಾಗಿ ಐವತ್ತು ಮಂದಿ ಕನ್ಯೆಯರನ್ನು ಪಡೆದನು. ಆ ಕನ್ಯೆಯರಲ್ಲಿ ಧರ್ಮದೇವತೆಗೆ ಹತ್ತು ಮಂದಿಯನ್ನೂ, ಕಶ್ಯಪನಿಗೆ ಹದಿಮೂರು ಮಂದಿಯನ್ನೂ, ಚಂದ್ರನಿಗೆ ಕಾಲಗತಿಯನ್ನು ತಿಳಿಸುವುದಕ್ಕೆ ತಕ್ಕ ಇಪ್ಪತ್ತೇಳು ಮಂದಿ ಕನ್ಯೆಯರನ್ನೂ ಕೊಟ್ಟು ಮದುವೆಮಾಡಿದನು. ಮರೀಚಿಪುತ್ರನಾದ ಕಶ್ಯಪನು ತಾನು ವರಿಸಿದ ಹದಿಮೂರು ಮಂದಿ ಪತ್ನಿಯರಲ್ಲಿ ಮೊದಲನೆಯವಳಾದ ಅದಿತಿಯೆಂಬ ದಕ್ಷಕುಮಾರಿಯಲ್ಲಿ ಇಂದ್ರಾದಿದೇವತೆಗಳನ್ನು ಮಕ್ಕಳನ್ನಾಗಿ ಪಡೆದನು. ಸೂರ್ಯನಿಂದ ವೈವಸ್ವತನೆಂದು ಕರೆಯಲ್ಪಡುವ ಲೋಕಪ್ರಭುವಾದ ಯಮನು ಹುಟ್ಟಿದನು. ಯಮಿಯೆಂಬ ಹೆಸರುಳ್ಳ ಯಮುನಾನದಿಯು ಆ ಸೂರ್ಯನಿಂದಲೇ ಹುಟ್ಟಿದ ಕನ್ಯೆ. ಮಹಾಜ್ಞಾನಿಯಾದ ಮನುವೂ ಸೂರ್ಯನ ಪುತ್ರನೇ. ಧರ್ಮಾತ್ಮನಾದ ಆ ಮನುವು ಮಾನವವಂಶಕ್ಕೆ ಮೂಲಾಧಾರನು. ಬ್ರಹ್ಮ ಕ್ಷತ್ರಿಯರು ಮೊದಲಾಗಿ ನಾಲ್ಕು ವರ್ಣದವರೂ ಮನುಸಂತತಿಯವರಾದುದರಿಂದಲೇ ಮಾನವರೆನಿಸಿದರು. ಬ್ರಾಹ್ಮಣರೂ, ಕ್ಷತ್ರಿಯರೂ ಒಂದಾಗಿಯೇ ಕಲೆತಿದ್ದು, ಕ್ಷತ್ರಿಯರಿಗೆ ಬ್ರಾಹ್ಮಣರು ಅಂಗಗಳೊಡಗೂಡಿದ ಸಮಸ್ತವೇದಾಂಗಗಳನ್ನೂ ಕಲಿಸಿಕೊಟ್ಟರು. ಓ ರಾಜೇಂದ್ರಾ? ಆ ಮನುವಿನಿಂದ ವೇನ, ಧೃಷ್ಣು, ನರಿಷ್ಯಂತ, ನಾಭಾಗ, ಇಕ್ಷ್ವಾಕು, ಕಾರೂಷ, ಶರ್ಯಾತಿಯೆಂಬ ಪುತ್ರರೂ, ಇಳೆಯೆಂಬ ಕನ್ಯೆಯೂ ಹುಟ್ಟಿದರು. ಕ್ಷತ್ರಧರ್ಮಪರಾಯಣನಾದ ಪೃಷಧ್ರನು ಒಂಭತ್ತನೆಯವನು. ನಾಭಾಗನೆಂದೂ, ಅರಿಷ್ಟನೆಂದೂ ಪ್ರಖ್ಯಾತನಾದ

ವನು ಆ ಮನುವಿನ. ಹತ್ತನೆಯ ಮಗನು. ಇವರಲ್ಲದೆ ಬೇರೆ ಐವತ್ತು ಮಂದಿ ಮನುಪುತ್ರರು ಭೂಮಿಯಲ್ಲಿ ಹುಟ್ಟಿದ್ದರೆಂದೂ, ಅನ್ಯೋನ್ಯ ವಿರೋಧದಿಂದ ಅವರೆಲ್ಲರೂ ನಾಶಹೊಂದಿದರೆಂದೂ ನಾವು ಕೇಳಿರುವೆವು.

ಮನುಪುತ್ರಿಯಾದ ಇಳೆಯಲ್ಲಿ ಮಹಾವಿದ್ವಾಂಸನೆನಿಸಿಕೊಂಡ ಪುರೂರವನು ಹುಟ್ಟಿದನು. ಆ ಇಳೆಯೇ ಪುರೂರವನಿಗೆ ತಾಯಿಯೂ, ತಂದೆಯೂ ಆಗಿದ್ದುದಾಗಿ ನಾವು ಕೇಳಿರುವೆವು. ಹದಿಮೂರು ಸಮುದ್ರದ್ವೀಪಗಳನ್ನೂ ಸ್ವಾಧೀನಪಡಿಸಿಕೊಂಡು, ಮಹಾಯಶಸ್ಸನ್ನು ಪಡೆದ ಪುರೂರವನು ಕೇವಲ ಮನುಷ್ಯಮಾತ್ರನಾಗಿದ್ದರೂ, ದೇವತೆಗಳೂಕೂಡ ಆಗಾಗ ಇವನ ಸಹಾಯವನ್ನು ಕೋರುತ್ತಿದ್ದರು. ವೀರ್ಯಮದದಿಂದ ಕೊಬ್ಬಿದ ಆ ಪುರೂರವನು ಒಮ್ಮೆ ಬ್ರಾಹ್ಮಣರೊಡನೆ ವಿರೋಧಿಸಿ ಯುದ್ಧವನ್ನಾರಂಭಿಸಿದನು. ಬ್ರಾಹ್ಮಣರು ಮೊರೆಯಿಡುತ್ತಿದ್ದರೂ ಲಕ್ಷ್ಯಮಾಡದೆ ಅವರಲ್ಲಿದ್ದ ರತ್ನಗಳನ್ನೆಲ್ಲ ಅಪಹರಿಸಿದನು. ಸನತ್ಕುಮಾರನೇ ಬ್ರಹ್ಮಲೋಕದಿಂದ ಬಂದು ಅವನಿಗೆ ಶಾಸ್ತ್ರಗಳನ್ನೂ, ವಿವೇಕಗಳನ್ನೂ ತಿಳಿಸಿದರೂ, ಅವನು ಅದನ್ನು ನಿರಾಕರಿಸಿದನು. ಹೀಗೆ ಪೇರಾಸೆಗೊಂಡು ಮದೋನ್ಮತ್ತನಾದ ಆ ರಾಜನು ವಿವೇಕಭ್ರಷ್ಟನಾಗಿ ಹೋದುದರಿಂದ ಮಹರ್ಷಿಗಳು ಕೋಪಗೊಂಡು, ಅವನನ್ನು ಶಪಿಸಲು ಅವನು ಒಡನೆಯೇ ನಾಶಹೊಂದಿದನು. ದಿವ್ಯತೇಜೋವಿರಾಜಿತನಾಗಿದ್ದ ಆ ಚಕ್ರವರ್ತಿಯು ಊರ್ವಶಿಯೊಡಗೂಡಿ ಗಂಧರ್ವಲೋಕದಿಂದ ಮೂರು ಅಗ್ನಿಗಳನ್ನು (ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯವೆಂಬ ಅಗ್ನಿತ್ರಯವನ್ನು) ಶಾಸ್ತ್ರೋಕ್ತವಾದ ಯಜ್ಞವನ್ನು ಮಾಡುವುದಕ್ಕಾಗಿ ಅಲ್ಲಿಂದ ಭೂಮಿಗೆ ಸಾಗಿಸಿತಂದನು. ಇಳೆಯ ಮಗನಾದ ಆ ಪುರೂರವನಿಗೆ ಊರ್ವಶಿಯಲ್ಲಿ ಆಯು, ಧೀಮಂತ, ಅಮಾವಸು, ದೃಢಾಯು, ವನಾಯು, ಶತಾಯುವೆಂಬ ಆರುಮಂದಿ ಮಕ್ಕಳು ಹುಟ್ಟಿದರು. ಈ ಆರುಮಂದಿಯಲ್ಲಿ ಮೊದಲನೆಯವನಾದ ಆಯುವಿಗೆ ಸ್ವರ್ಭಾನವಿಯೆಂಬ ಪತ್ನಿಯಲ್ಲಿ ನಹುಷ, ವೃದ್ಧಶರ್ಮ, ರಜಿ, ಗಯ, ಅನೇನಸ್ಸು ಎಂಬ ಪುತ್ರರಾದರು. ಆಯುವಿನ ಮಗನಾದ ನಹುಷನು ಸತ್ಯಪರಾಕ್ರಮನೂ, ಧೀಮಂತನೂ ಎನಿಸಿಕೊಂಡು, ಬಹಳ ದೊಡ್ಡ ರಾಜ್ಯ

ವನ್ನು ಧರ್ಮದಿಂದ ಪರಿಪಾಲಿಸುತ್ತಿದ್ದನು. ಇವನು ತನ್ನ ಅಧಿಕಾರಗರ್ವ ದಿಂದ ಪಿತೃಗಳನ್ನೂ, ದೇವತೆಗಳನ್ನೂ, ಋಷಿಗಳನ್ನೂ, ನಾಗ, ಗಂಧರ್ವ, ಯಕ್ಷ ರಾಕ್ಷಸರನ್ನೂ ತನ್ನ ಆಜ್ಞೆಗೆ ಒಳಪಡಿಸಿಕೊಂಡು ಕ್ಷತ್ರಿಯ ವೈಶ್ಯಾದಿ ವರ್ಣದವರನ್ನೂ ಅಡಗಿಸಿ ಪರಿಪಾಲಿಸುತ್ತಿದ್ದನು. ಅವನು ಅಲ್ಲಲ್ಲಿ ಕೊಳ್ಳೆ ಗಾರರ ಗುಂಪನ್ನು ನಿಗ್ರಹಿಸಿ ಅವರಿಂದ ಬ್ರಾಹ್ಮಣರಿಗೂ, ಋಷಿಗಳಿಗೂ ಕಪ್ಪವನ್ನೂ ಕೊಡಿಸಿದನು. ಆದರೆ ಮದಾಂಧನಾದ ಅವನು ಒಮ್ಮೆ ಮಹರ್ಷಿಗಳನ್ನು ನಿರ್ಬಂಧಿಸಿ, ಎತ್ತುಗಳು ಹೇಗೋಹಾಗೆ ಅವರು ತನ್ನನ್ನು ಹೊರುವಂತೆ ಮಾಡಿದನು. ದೇವತೆಗಳನ್ನೆಲ್ಲ ಧಿಕ್ಕರಿಸಿ ಇಂದ್ರನ ಅಧಿ ಕಾರವನ್ನು ತಾನೇ ನಡೆಸಿದನು. ಇದರಿಂದ ನಹುಷನು ಬ್ರಾಹ್ಮಣಶಾಪಕ್ಕೆ ಗುರಿಯಾಗಿ ತನ್ನ ತೇಜಸ್ಸು, ತಪಸ್ಸು, ಶಕ್ತಿ, ಉತ್ಸಾಹಗಳನ್ನೆಲ್ಲ ಕಳೆದು ಕೊಂಡು, ಅಜಗರ (ಹೆಬ್ಬಹಾವು) ನಾದನು. ಈ ನಹುಷನಿಗೆ ಯತಿ, ಯಯಾತಿ, ಸಂಯಾತಿ, ಆಯಾತಿ, ಅಯತಿ, ಧ್ರುವವೆಂಬ ಆರುಮಂದಿ ಪುತ್ರ ರಿದ್ದರು. ಅವರಲ್ಲಿ ಯತಿಯೆಂಬವನು ಯೋಗಾಭ್ಯಾಸದಲ್ಲಿ ಬಿದ್ದು ಋಷಿ ಯಾಗಿ ಬ್ರಹ್ಮಸಾಯುಜ್ಯವನ್ನು ಹೊಂದಿದನು. ಯಯಾತಿಯು ಚಕ್ರ ವರ್ತಿಯೆನಿಸಿಕೊಂಡು ಭೂಮಿಯನ್ನು ಪರಿಪಾಲಿಸುತ್ತ ಅನೇಕ ಯಾಗ ಗಳನ್ನು ನಡೆಸಿದನು. ನಿಯಮನಿಷ್ಠನಾಗಿ ಪಿತೃಗಳನ್ನೂ, ದೇವತೆಗ ಳನ್ನೂ ಭಕ್ತಿಯಿಂದ ಆರಾಧಿಸುತಿದ್ದನು. ಸಮಸ್ತ ಪ್ರಜೆಗಳಿಗೂ ಕ್ಷೇಮ ವನ್ನುಂಟುಮಾಡುತ್ತಿದ್ದನು. ಈ ಯಯಾತಿಗೆ ಶರ್ಮಿಷ್ಠೆಯೆಂದೂ, ದೇವ ಯಾನಿಯೆಂದೂ ಇಬ್ಬರು ಪತ್ನಿಯರಿದ್ದರು. ಇವರಿಬ್ಬರಲ್ಲಿಯೂ ಒಳ್ಳೇ ಗುಣಸಂಪನ್ನರಾದ ಪುತ್ರರು ಹುಟ್ಟಿದರು. ದೇವಯಾನಿಯಲ್ಲಿ ಯದು ಮತ್ತು ದುರ್ವಸುವೆಂಬ ಪುತ್ರರಾದರು. ಶರ್ಮಿಷ್ಠೆಯಲ್ಲಿ ದ್ರುಹ್ಯನೆಂದೂ ಅನುವೆಂದೂ, ಪೂರುವೆಂದೂ ಮೂವರು ಪುತ್ರರಾದರು. ಈ ಯಯಾ ತಿಯು ಅನೇಕ ಸಂವತ್ಸರಗಳವರೆಗೆ ಧರ್ಮದಿಂದ ಪ್ರಜೆಗಳನ್ನು ಪಾಲಿಸು ತ್ತಿರಲು, ಅವನಿಗೆ ಮುಪ್ಪು ತಲೆದೋರಿತು. ಅಂದವನ್ನೂ, ಬಲವನ್ನೂ ಕೆಡಿಸಿ, ಭಯಂಕರವೆನಿಸಿಕೊಂಡ ವಾರ್ಧಕದಶೆಯು ತನ್ನ ದೇಹದಲ್ಲಿ ಕಂಡು ದನ್ನು ನೋಡಿ ಆ ಯಯಾತಿಯು ತನ್ನ ಮಕ್ಕಳೆಲ್ಲರನ್ನೂ ಕರೆದು “ ಎಲೈ ಪುತ್ರರೆ! ನನಗೆ ಇನ್ನೂ ಯೌವನಸುಖವನ್ನು ಅನುಭವಿಸಬೇಕೆಂಬ ಆಸೆ

ಯು ಬಹಳವಾಗಿದೆ. ಇನ್ನೂ ಕೆಲವು ಕಾಲದವರೆಗೆ ಸ್ತ್ರೀಯರೊಡಗೂಡಿ ಭೋಗಗಳನ್ನನುಭವಿಸಬೇಕೆಂದು ಕೋರುವೆನು. ಇದಕ್ಕಾಗಿ ಯೌವನವುಳ್ಳ ನೀವು ನನಗೆ ಸಹಾಯಮಾಡಬೇಕು" ಎಂದನು.

ಆಗ ದೇವಯಾನಿಯ ಮೊದಲನೆಯ ಪುತ್ರನಾದ ಯದುವು "ನಮ್ಮಲ್ಲಿ ಯೌವನವಿದ್ದ ಮಾತ್ರಕ್ಕೆ ನಿನಗೆ ಪ್ರಯೋಜನವೇನು?" ಎನಲು, ಯಯಾತಿಯು "ನನ್ನ ವಾರ್ಧಕವನ್ನು ನೀವು ತೆಗೆದುಕೊಂಡು ನಿಮ್ಮ ಯೌವನವನ್ನು ನನಗೆ ಕೊಡಬೇಕು. ಆ ಯೌವನವನ್ನು ಪರಿಗ್ರಹಿಸಿ ನಾನು ಭೋಗಗಳನ್ನು ಅನುಭವಿಸುವೆನು. ಹಿಂದೆ ದೀರ್ಘಕಾಲದವರೆಗೆ ನಾನು ಸತ್ರಯಾಗವನ್ನು ನಡೆಸುತಿದ್ದುದರಿಂದಲೂ, ಮಹರ್ಷಿಯಾದ ಶುಕ್ರಾಚಾರ್ಯನ ಶಾಪದಿಂದಲೂ ನನಗೆ ಕಾಮವೆಂಬ ಪುರುಷಾರ್ಥವು ಇನ್ನೂ ಪೂರ್ಣವಾಗಲಿಲ್ಲ. ಆದುದರಿಂದ ನಾನು ಬಹಳವಾಗಿ ಕೊರಗುತ್ತಿರುವೆನು. ಪುತ್ರರೆ! ನಿಮ್ಮಲ್ಲಿ ಯಾವನೊಬ್ಬನಾದರೂ ಭೋಗವಿಮುಖನಾಗಿ ಮುದಿತನವನ್ನು ತೆಗೆದುಕೊಂಡು, ರಾಜ್ಯಕಾರ್ಯವನ್ನು ನೋಡಿಕೊಳ್ಳುತ್ತಿದ್ದರೆ, ನಾನು ಹೊಸಯೌವನದಿಂದ ಕಾಮಸುಖವನ್ನು ಅನುಭವಿಸುತ್ತಿರುವೆನು" ಎಂದನು. ಯದು ಮೊದಲಾದ ನಾಲ್ಕುಮಂದಿ ಪುತ್ರರೂ ಇದಕ್ಕೆ ಸಮ್ಮತಿಸದೆ ನಿರಾಕರಿಸಿಬಿಟ್ಟರು. ಆಗ ಕಿರಿಯ ಮಗನಾದ ಪೂರುವೆಂಬವನು ಬಹಳ ಧೀರಸ್ವಭಾವವುಳ್ಳವನಾದುದರಿಂದ, ತಂದೆಯನ್ನು ನೋಡಿ "ಜನಕಾ! ಇದೋ! ನಾನು ನನ್ನ ಯೌವನವನ್ನು ಕೊಡುವೆನು. ಸ್ವೀಕರಿಸು. ನೀನು ಬೇಕಾದ ವಿಷಯಸುಖಗಳನ್ನನುಭವಿಸುತ್ತಿರು. ನಿನ್ನ ಮುಪ್ಪನ್ನು ನಾನು ತೆಗೆದುಕೊಂಡು, ಮುದುಕನಾಗಿಯೇ ರಾಜ್ಯಕಾರ್ಯಗಳನ್ನು ನೋಡಿಕೊಳ್ಳುವೆನು" ಎಂದನು.

ಈ ಮಾತನ್ನು ಕೇಳಿದೊಡನೆ ಯಯಾತಿಯು ಸಂತೋಷಗೊಂಡು ತನ್ನ ತಪಃಪ್ರಭಾವದಿಂದ, ತನ್ನ ಮುಪ್ಪನ್ನು ಪೂರುವಿಗೆ ಕೊಟ್ಟು, ಆ ಪೂರುವಿನ ಯೌವನವನ್ನು ತಾನು ಗ್ರಹಿಸಿ ಸುಖಭೋಗಗಳಲ್ಲಿ ಮಗ್ನನಾಗಿದ್ದನು. ಪೂರುವೂ ವೃದ್ಧನಂತಾಗಿ, ರಾಜ್ಯಕಾರ್ಯಗಳನ್ನು ನೋಡುತಿದ್ದನು. ಯಯಾತಿಯು ಅನೇಕ ಸಹಸ್ರವರ್ಷಗಳವರೆಗೆ ನಿಶ್ಚಿಂತನಾಗಿ,

ತನ್ನ ಇಬ್ಬರು ಪತ್ನಿಯರಲ್ಲಿ ರಮಿಸುತ್ತಿದ್ದನು. ಆಮೇಲೆ ವಿಶ್ವಾಚಿಯೆಂಬ ಅಪ್ಸರಸಿಯೊಡಗೂಡಿ ಚೈತ್ರರಥವೆಂಬ ಕುಬೇರನ ಉದ್ಯಾನವನಕ್ಕೆ ಹೋಗಿ ಅಲ್ಲಿಯೂ ಅನೇಕ ವರ್ಷಕಾಲದವರೆಗೆ ರಮಿಸಿದನು. ಎಷ್ಟಾದರೇನು? ಎಷ್ಟು ದಿನಗಳಾದರೂ ಅವನಿಗೆ ಭೋಗದಲ್ಲಿ ತೃಪ್ತಿಯಿಲ್ಲದೆಹೋಯಿತು. ಆಗ ಅವನು ತನ್ನಲ್ಲಿತಾನೇ ಈ ಕೆಳಗಿನ ಗಾಥೆಗಳನ್ನು ಹೇಳಿಕೊಳ್ಳುವನು.

**"ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।**
**ಹವಿಷಾ ಕೃಷ್ಣವರ್ತ್ಮೇವ ಭೂಯಏವಾಭಿವರ್ಧತೇ ॥**
**ಯತ್ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ ।**
**ನಾಲಮೇಕಸ್ಯ ತತ್ಸರ್ವಮಿತಿ ಮತ್ವಾ ಶಮಂ ವ್ರಜೇತ್ ॥"**

"ಕಾಮವೆಂಬುದು ತನಗೆ ಅಪೇಕ್ಷಿತವಾದುವುಗಳನ್ನು ಅನುಭವಿಸುವುದರಿಂದ ಎಂದಿಗೂ ಶಾಂತವಾಗುವುದಿಲ್ಲ. ತುಪ್ಪವನ್ನು ಸುರಿದಷ್ಟೂ ಬೆಂಕಿಯು ಉರಿಯನ್ನು ಕೆದರುವಂತೆ ಕಾಮವನ್ನು ತೃಪ್ತಿಗೊಳಿಸಿದಷ್ಟೂ ಕಾಮಾಗ್ನಿಯೆಂಬುದು ಮೇಲೆಮೇಲೆ ಪ್ರಬಲವಾಗುವುದು. ಈ ಭೂಮಿಯೊಳಗಣ ಎಲ್ಲಾ ಬೆಳೆಗಳು, ಬಂಗಾರ, ಪಶುಗಳು, ಸ್ತ್ರೀಯರು ಮುಂತಾಗಿ ಯಾವಯಾವುವುಂಟೋ ಅವನ್ನೆಲ್ಲ ಸೇರಿಸಿಕೊಟ್ಟರೂ ಒಬ್ಬ ಮನುಷ್ಯನ ತೃಪ್ತಿಗೆ ಸಾಲದು" ಎಂಬುದನ್ನು ತಿಳಿದುಕೊಂಡು ಮನುಷ್ಯರು ಇದ್ದುದರಲ್ಲಿ ಶಮನವನ್ನು ವಹಿಸಬೇಕು.

ಮನುಷ್ಯನು ತನ್ನ ಮನಸ್ಸಿನಿಂದಾಗಲಿ, ಮಾತಿನಿಂದಾಗಲಿ, ಕಾರ್ಯದಿಂದಾಗಲಿ ಯಾವಾಗಲೂ ಯಾವ ಪ್ರಾಣಿಗಳಿಗೂ ಕೇಡನ್ನು ಮಾಡದಿದ್ದರೆ, ಆಗ ಅವನು ಬ್ರಹ್ಮವನ್ನು ಹೊಂದುವನು. ತಾನು ಭಯಪಡದೆ ತನ್ನಿಂದ ಬೇರೆಯವರಿಗೂ ಭಯವಿಲ್ಲದಂತೆ ನಡೆಯುತ್ತ, ಕಾಮದ್ವೇಷಗಳನ್ನು ಬಿಟ್ಟಿರುವವನು ಯಾವನೋ ಅವನೇ ಬ್ರಹ್ಮಲೋಕವನ್ನು ಪಡೆಯುವನು" ಎಂದು ತನ್ನೊಳಗೆ ನಿಶ್ಚಯಿಸಿಕೊಂಡನು. ಆ ಯಯಾತಿಯು ಸ್ವತಃ ಪ್ರಾಜ್ಞನಾದುದರಿಂದ ತನ್ನಲ್ಲಿತಾನೇ ವಿವೇಕವನ್ನು ತಂದುಕೊಂಡು, ಕಾಮಸುಖಗಳು ಹೇಯವೆಂಬುದನ್ನು ತಿಳಿದು, ದೃಢಮನಸ್ಕನಾಗಿ, ತನ್ನ

ಮಗನಿಗೆ ಕೊಟ್ಟಿದ್ದ ಮುಪ್ಪನ್ನು ತಿರುಗಿ ತಾನೇ ತೆಗೆದುಕೊಂಡನು. ಪೂರುವಿಗೆ ಯೌವನವನ್ನು ಹಿಂತಿರುಗಿ ಕೊಟ್ಟು, ಅವನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕವನ್ನೂ ಮಾಡಿದನು. ಹೀಗೆ ಎಷ್ಟಾದರೂ ಕಾಮುಗಳಲ್ಲಿ ತೃಪ್ತಿಹೊಂದದಿದ್ದ ಆ ಯಯಾತಿಯು ತನ್ನ ಮಗನಾದ ಪೂರುವನ್ನು ಕುರಿತು "ಕುಮಾರಾ! ನೀನೇ ನನಗೆ ವಂಶಾಭಿವೃದ್ಧಿಕರನಾದ ಪುತ್ರನು. ನಿನ್ನೊಬ್ಬನಿಂದಲೇ ನಾನೂ ಪುತ್ರವಂತನೆನಿಸಿದೆನು. ನಿನ್ನಿಂದಲೇ ನನ್ನ ವಂಶವು ಪೌರವವಂಶವೆಂದು ಲೋಕದಲ್ಲಿ ಪ್ರಖ್ಯಾತಿಹೊಂದಲಿ" ಎಂದು ಹೇಳಿ ಭೃಗುತುಂಡವೆಂಬ ಪರ್ವತಕ್ಕೆ ತಪಸ್ಸಿಗಾಗಿ ಹೊರಟುಬಿಟ್ಟನು. ಅಲ್ಲಿ ಅವನು ಬಹುಕಾಲದವರೆಗೆ ಪತ್ನೀಸಮೇತನಾಗಿ ವ್ರತೋಪವಾಸಗಳನ್ನು ನಡೆಸುತ್ತ, ತಪಸ್ಸಿನಿಂದ ಪುಣ್ಯವನ್ನು ಗಳಿಸಿ, ದೇಹವಿಯೋಗವನ್ನು ಹೊಂದಿ ಪತ್ನಿಯೊಡನೆಯೇ ಸ್ವರ್ಗಸ್ಥನಾದನು.

ಇದು ಅರುವತ್ತೊಂಭತ್ತನೆಯ ಅಧ್ಯಾಯವು.

---

{ ಯಯಾತಿಚರಿತ್ರವು. ಶುಕ್ರನು ಸುರಾಪಾನವನ್ನು ನಿಷೇಧಿಸಿದುದು. }

ಆಮೇಲೆ ಜನಮೇಜಯನು ವೈಶಂಪಾಯನನನ್ನು ಕುರಿತು "ಓ ತಪೋಧನಾ! ದಕ್ಷಪ್ರಜಾಪತಿಯ ಹತ್ತನೆಯ ಸಂತತಿಯವನೂ, ನಮ್ಮ ವಂಶಕ್ಕೆ ಕೂಟಸ್ಥನೂ ಆದ ಯಯಾತಿಯು ಕ್ಷತ್ರಿಯದುರ್ಲಭಳಾದ ಶುಕ್ರನ ಮಗಳನ್ನು ಮದುವೆಯಾದುದು ಹೇಗೆ? ನನಗೆ ಆ ವೃತ್ತಾಂತವನ್ನು ವಿಸ್ತಾರವಾಗಿ ಕೇಳಬೇಕೆಂಬ ಅಪೇಕ್ಷೆಯು ಹುಟ್ಟಿರುವುದು. ಆಯಾವಂಶಗಳಿಗೆ ಮೂಲಪುರುಷರಾದ ಬೇರೆಬೇರೆ ರಾಜರನ್ನೂ, ಅವರ ತಲೆಮುರೆಗಳನ್ನೂ ನನಗೆ ವಿವರವಾಗಿ ತಿಳಿಸು" ಎಂದನು.

ಅದಕ್ಕಾ ವೈಶಂಪಾಯನನು "ಓ ಜನಮೇಜಯರಾಜಾ! ಯಯಾತಿಯು ದೇವೇಂದ್ರನಿಗೆ ಸಮಾನವಾದ ಕಾಂತಿಯಿಂದ ಬೆಳಗುತಿದ್ದವನು. ಆತನನ್ನು ಶುಕ್ರನೂ, ವೃಷಪರ್ವನೆಂಬ ಅಸುರರಾಜನೂ ತಮ್ಮತಮ್ಮ ಕನ್ಯೆ

ಯರಿಗೆ ವರನನ್ನಾಗಿ ಮಾಡಿಕೊಳ್ಳಬೇಕೆಂದು ಪ್ರಯತ್ನಿಸಿದ ರೀತಿಯನ್ನು ನಿನಗೆ ತಿಳಿಸುವೆನು. ಸ್ಥಾವರಜಂಗಮಾತ್ಮಕವಾದ ತ್ರಿಲೋಕಾಧಿಪತ್ಯದ ವಿಷಯದಲ್ಲಿ ದೇವತೆಗಳಿಗೂ, ಅಸುರರಿಗೂ ಯುದ್ಧವು ನಡೆಯಿತು. ಆಗ ದೇವತೆಗಳು ದೈತ್ಯರನ್ನು ಜಯಿಸಬೇಕೆಂಬ ಉದ್ದೇಶದಿಂದ, ಒಂದು ಯಜ್ಞವನ್ನು ಸಕ್ರಮಿಸಿ, ಆ ಯಜ್ಞಕ್ಕೆ ಬೃಹಸ್ಪತಿಯನ್ನು ಪುರೋಹಿತನನ್ನಾಗಿ ಮಾಡಿಕೊಂಡರು. ಹಾಗೆಯೇ (ಭೃಗು) ಪುತ್ರನಾದ ಶುಕ್ರನು ಅಸುರರಿಗೆ ಪುರೋಹಿತನಾದನು. ಆ ಬ್ರಾಹ್ಮಣೋತ್ತಮರಿಬ್ಬರೂ ಯುಕ್ತಿಯಲ್ಲಿ ಒಬ್ಬರನ್ನೊಬ್ಬರು ಮೀರಿಸುತಿದ್ದವರು. ಆ ಯುದ್ಧದಲ್ಲಿ ಶುಕ್ರಾಚಾರ್ಯನು ಅಸುರರ ಕಡೆಯಲ್ಲಿ ಸತ್ತವರೆಲ್ಲರನ್ನೂ ತನ್ನ ವಿದ್ಯಾಪ್ರಭಾವದಿಂದ ಬದುಕಿಸುತ್ತಿದ್ದನು. ಹಾಗೆ ಬದುಕಿಸಿದವರು ತಿರುಗಿ ಯುದ್ಧಕ್ಕೆ ಬರುತಿದ್ದರು. ಅಸುರರಿಂದ ಕೊಲ್ಲಲ್ಪಟ್ಟ ದೇವತೆಗಳನ್ನಾದರೋ ಬೃಹಸ್ಪತಿಯು ಬದುಕಿಸಲಾರದೆಹೋದನು. ಶುಕ್ರಾಚಾರ್ಯನಿಗೆ ತಿಳಿದಿದ್ದ ಸಂಜೀವನಿಯೆಂಬ ವಿದ್ಯೆಯು ಬೃಹಸ್ಪತಿಗೆ ತಿಳಿಯದು. ಇದರಿಂದ ದೇವತೆಗಳಿಗೆ ಭೀತಿ ಹುಟ್ಟಿತು. ತಮ್ಮ ಪುರೋಹಿತನಾದ ಬೃಹಸ್ಪತಿಗೆ ಹಿರಿಯಮಗನಾದ ಕಚನ ಬಳಿಗೆ ಹೋಗಿ 'ನಿನ್ನನ್ನು ನಂಬಿ ಬಂದ ನಮಗೆ ನೀನೊಂದು ಉಪಕಾರವನ್ನು ಮಾಡಿ ಬದುಕಿಸಬೇಕು. ಶುಕ್ರನಲ್ಲಿರುವ ಮೃತಸಂಜೀವನೀ ವಿದ್ಯೆಯನ್ನು ಜಾಗ್ರತೆಯಾಗಿ ಕಲಿತುಕೊಂಡು ಬಾ! ಆಗ ನಿನಗೂ ನಮ್ಮೊಡನೆ ಯಜ್ಞಗಳಲ್ಲಿ ಹವಿರ್ಭಾಗವು ಸಿಕ್ಕುವುದು. ನೀನು ಶುಕ್ರಾಚಾರ್ಯನನ್ನು ವೃಷಪರ್ವನ ಸಮೀಪದಲ್ಲಿ ಯಾವಾಗಲೂ ನೋಡಬಹುದು. ಆತನು ಅಲ್ಲಿದ್ದುಕೊಂಡು ಬಹಳ ಎಚ್ಚರಿಕೆಯಿಂದ ಅಸುರರನ್ನು ಕಾಪಾಡುತ್ತಿರುವನು. ಅಸುರರಲ್ಲದವರನ್ನು ಅವನು ಕೆಡಿಸುವನು. ನೀನಾದರೋ ಇನ್ನೂ ಯುವಕನಾದುದರಿಂದ, ಆ ಶುಕ್ರನಿಗೆ ತಕ್ಕ ಶುಶ್ರೂಷೆಗಳನ್ನು ಮಾಡಿ, ಆತನನ್ನು ಸಂತೋಷಪಡಿಸಬಲ್ಲೆ. ಅಲ್ಲದೆ ಆತನ ಕುಮಾರಿಯಾದ ದೇವಯಾನಿಯನ್ನು ಯುಕ್ತಿ ಚಮತ್ಕಾರಗಳಿಂದಲೂ, ಪ್ರಿಯವಾಕ್ಯಗಳಿಂದಲೂ, ಮುಖಸ್ತುತಿಯಿಂದಲೂ, ಗುಣಗಳಿಂದಲೂ, ಶೀಲದಿಂದಲೂ ಸಂತೋಷಪಡಿಸಲು ನೀನೇ ಶಕ್ತನು. ದೇವಯಾನಿಗೆ ಸಂತೋಷವನ್ನುಂಟುಮಾಡಿದರೆ, ನಿನಗೆ ಆ ವಿದ್ಯೆಯು ಸುಲಭವಾಗಿ ಲಭಿಸುವುದು" ಎಂದರು.

ಕಚನು ದೇವತೆಗಳ ಪ್ರಾರ್ಥನೆಗೆ ಒಪ್ಪಿ, ಅವರ ಪೂಜೆಗಳನ್ನೆಲ್ಲ ಕೈಕೊಂಡು, ಒಡನೆಯೇ ವೃಷಪರ್ವನ ಪಟ್ಟಣಕ್ಕೆ ಬಂದನು. ಅಲ್ಲಿ ಶುಕ್ರಾಚಾರ್ಯನ ಸಮೀಪಕ್ಕೆ ಹೋಗಿ ಆತನನ್ನು ಕುರಿತು "ನಾನು ಅಂಗಿರಸ ಮಹರ್ಷಿಯ ಪೌತ್ರನು. ಸಾಕ್ಷಾತ್ತಾಗಿ ಬೃಹಸ್ಪತಿಯ ಜ್ಯೇಷ್ಠಪುತ್ರನು. ನನ್ನ ಹೆಸರು ಕಚನು. ನನ್ನನ್ನು ನೀವು ನಿಮ್ಮ ಶಿಷ್ಯನನ್ನಾಗಿ ಪರಿಗ್ರಹಿಸಬೇಕು. ಗುರುಗಳಾದ ತಮ್ಮಲ್ಲಿ ನಾನು ಒಂದು ಸಹಸ್ರವರ್ಷಗಳವರೆಗೆ ಶುಶ್ರೂಷೆಯನ್ನು ಮಾಡುವೆನು. ಬ್ರಾಹ್ಮಣೋತ್ತಮಾ! ನೀನು ನನಗೆ ಅನುಜ್ಞೆಯನ್ನು ಕೊಡು" ಎಂದನು. ಆಗ ಶುಕ್ರಾಚಾರ್ಯನು "ಆಗಲಿ! ನಿನಗೆ ಸ್ವಾಗತವು. ನಿನ್ನ ಪ್ರಾರ್ಥನೆಯನ್ನು ಅಂಗೀಕರಿಸುವೆನು. ನೀನು ನನಗೆ ಗೌರವಾರ್ಹನಾದುದರಿಂದ ಗೌರವಿಸುವೆನು. ಇದರಿಂದ ಬೃಹಸ್ಪತಿಗೂ ಮರ್ಯಾದೆಯನ್ನು ಮಾಡಿದಂತಾಗುವುದು" ಎಂದನು. ಕಚನು ಅದರಂತೆ ಅಲ್ಲಿ ಬ್ರಹ್ಮಚರ್ಯವನ್ನು ಕೈಕೊಂಡನು. ಭರತಕುಲೋತ್ತಮಾ! ಆಗ ಕಚನು ಶುಕ್ರಾಚಾರ್ಯನು ತನಗೆ ನೇಮಿಸಿದವರೆಗೆ ಆತನ ಶುಶ್ರೂಷೆಗಳನ್ನು ಮಾಡುತ್ತಿದ್ದುದಲ್ಲದೆ, ಒಳ್ಳೇ ಯೌವನವುಳ್ಳ ಆತನ ಮಗಳಾದ ದೇವಯಾನಿಯನ್ನು ಸಂತೋಷಪಡಿಸುವುದಕ್ಕೂ ನಾನಾವಿಧವಾದ ಪ್ರಯತ್ನಗಳನ್ನು ನಡೆಸುತಿದ್ದನು. ಹಾಡುಗಳನ್ನು ಹಾಡುವುದು! ಆಟಗಳನ್ನಾಡುವುದು! ವಾದ್ಯಗಳನ್ನು ನುಡಿಸುವುದು! ಇವೇ ಮುಂತಾದುವುಗಳಿಂದ ಆ ದೇವಯಾನಿಯನ್ನು ಸಂತೋಷಪಡಿಸುತಿದ್ದನು. ಆತನು ಆ ದೇವಯಾನಿಯೊಡನೆ ಸ್ನೇಹಭಾವವನ್ನು ಸೂಚಿಸುತ್ತ, ಹೂಗಳನ್ನು ಕುಯ್ದು ತರುವುದು, ಆ ಹೂಗಳನ್ನು ಕಟ್ಟುವುದು, ಆಕೆಯು ಹೇಳಿದ ಕೆಲಸಗಳನ್ನು ಮಾಡುವುದು, ಈ ರೀತಿಯಲ್ಲಿ ಆಕೆಗೂ ಸಂತೋಷವನ್ನು ಹೆಚ್ಚಿಸುತ್ತಿದ್ದನು. ಆಕೆಯೂ ಈ ಬ್ರಾಹ್ಮಣಯುವಕನೊಡನೆ ಏಕಾಂತವಾಗಿ ಆಡುತ್ತಲೂ, ಹಾಡುತ್ತಲೂ, ಆತನು ತನ್ನನ್ನು ಉಪಚರಿಸಿದಂತೆಯೇ ಆತನನ್ನು ತಾನೂ ಉಪಚರಿಸುತ್ತಲೂ ಇದ್ದಳು. ಯುವತಿಯರು ಸಾಮಾನ್ಯವಾಗಿ ಹಾಡುವವನು, ಹಣವನ್ನು ಕೊಡತಕ್ಕವನು, ಹಿತವಾದ ಮಾತುಗಳನ್ನಾಡತಕ್ಕವನು, ಸುಂದರ ದೇಹವುಳ್ಳವನು, ಹೂಗಳನ್ನು ಮುಡಿದವನು, ಇಂತವರನ್ನೇ ಪ್ರೀತಿಸುವರು.

ಕಚನು ಹೀಗೆ ಒಂದು ನೂರುವರ್ಷಗಳ ಕಾಲವನ್ನು ಬ್ರಹ್ಮಚರ್ಯದಲ್ಲಿ ಕಳೆದನು. ಅಸುರರಿಗೆ ಈ ಕಚನು ಯಾರೆಂದು ತಿಳಿದುಹೋಯಿತು. ತಮ ಗೆ ಬೃಹಸ್ಪತಿಯಲ್ಲಿದ್ದ ದ್ವೇಷವನ್ನು ತೀರಿಸುವುದಕ್ಕಾಗಿಯೂ, ಆ ಕಚನು ಶುಕ್ರಾಚಾರ್ಯನಿಂದ ಸತ್ತವರನ್ನು ಬದುಕಿಸುವ ವಿದ್ಯೆಯನ್ನು ಕಲಿತು ಕೊಂಡು ಹೋಗದಂತೆ ಮಾಡುವುದಕ್ಕಾಗಿಯೂ, ಸಮಯನಿರೀಕ್ಷಣೆಯಲ್ಲಿ ದ್ದು, ಆತನು ಕಾಡಿನಲ್ಲಿ ಏಕಾಕಿಯಾಗಿ ದನಗಳನ್ನು ಮೇಯಿಸುತ್ತಿರುವು ದನ್ನು ನೋಡಿ, ಆತನನ್ನು ಕೊಂದು, ಅವನ ದೇಹವನ್ನು ತುಂಡುತುಂಡಾ ಗಿ ಕತ್ತರಿಸಿ ನಾಯಿಗಳಿಗೆ ಹಾಕಿದರು. ಆಮೇಲೆ ಹಸುಗಳಿಗೆ ಕಾವಲಿಲ್ಲದೆ ಅವುಮಾತ್ರ ಮನೆಗೆ ಬಂದುವು. ಕಚನು ಬಾರದೆ ಪಶುಗಳುಮಾತ್ರ ಹಿಂತಿರುಗಿ ಬರುವುದನ್ನು ನೋಡಿದ ದೇವಯಾನಿಯು, ತನ್ನ ತಂದೆಯನ್ನು ಕುರಿತು “ಅಪ್ಪಾ! ನಿನ್ನ ಅಗ್ನಿಹೋತ್ರವೂ ಮುಗಿಯಿತು. ಸೂರ್ಯನೂ ಅಸ್ತಮಿಸಿದನು. ನಮ್ಮ ಹಸುಗಳುಮಾತ್ರ ಕಾಡಿನಿಂದ ಕಾವಲಿಲ್ಲದೆ ಬಂದುಬಿಟ್ಟವು. ಕಚನೆಲ್ಲಿಯೋ ಕಾಣೆನು. ಕಚನು ಕೊಲ್ಲಲ್ಪಟ್ಟಿರಬೇಕು. ಅಥವಾ ಅವನೇ ಹೇಗೋ ಸತ್ತಿರಬೇಕು. ಇದರಲ್ಲಿ ಯಾವ ಸಂದೇಹವೂ ಇಲ್ಲ. ಅವನನ್ನು ಬಿಟ್ಟು ನಾನು ಬದುಕಿರಲಾರೆನು. ಸತ್ಯವಾಗಿ ಹೇಳುವೆ ನು” ಎಂದಳು. ಅದಕ್ಕೆ ಶುಕ್ರಾಚಾರ್ಯನು “ಅಮ್ಮಾ! ಚಿಂತಿಸಬೇಡ! ನಾನು ಅವನನ್ನು ಈಗಲೇ ಬದುಕಿಸುವೆನು. ನಾನು ಈಗ ಅವನ ಹೆಸ ರನ್ನು ಹಿಡಿದು ಕರೆದಮಾತ್ರಕ್ಕೆ ಬರಮಾಡುವೆನು” ಎಂದು ಹೇಳಿ, ಸಂಜೀವ ನವಿದ್ಯೆಯನ್ನುಪಯೋಗಿಸಿ, ಆ ಕಚನನ್ನು ಕರೆದನು. ಆ ವಿದ್ಯೆಯ ಸಹಾ ಯದಿಂದ ಕರೆಯಲ್ಪಟ್ಟೊಡನೆಯೇ, ಆ ಕಚನು ನಾಯಿಗಳ ದೇಹವನ್ನು ಭೇದಿಸಿಕೊಂಡು ಬಂದು, ಜೀವಂತನಾಗಿ ಸಂತೋಷದಿಂದ ಮುಂದೆ ನಿಂತನು. ದೇವಯಾನಿಯು “ಇಷ್ಟು ಆಲಸ್ಯವೇಕೆ ಮಾಡಿದೆ?” ಎಂದು ಕೇಳಲು, ಆತನು ಆಕೆಯನ್ನು ಕುರಿತು “ಓ ನಾರೀಮಣೀ! ನಾನು ಸಮಿ ತ್ತು, ದರ್ಭೆ, ಮುಂತಾದುವುಗಳನ್ನು ಗಂಟುಕಟ್ಟಿ ಹೊತ್ತುಕೊಂಡು ಬರು ತ್ತಾ, ಆಯಾಸದಿಂದ ಆಲದಮರದ ನೆಳಲಲ್ಲಿ ನಿಂತೆನು. ಹಸುಗಳ ಮುಂದೆ ಯೂ ಅಲ್ಲಿಗೆ ಬಂದು ನಿಂತಿತು. ರಾಕ್ಷಸರು ಅಲ್ಲಿ ನನ್ನನ್ನು ನೋಡಿ ‘ನೀನು ಯಾರೆ’ಂದು ಕೇಳಿದರು. ಆಗ ನಾನು ‘ಬೃಹಸ್ಪತಿಪುತ್ರನು. ನನ್ನ ಹೆಸರು

ಕಚ 'ನೆಂದು ಹೇಳಲು, ಅವರು ನನ್ನನ್ನು ಕೊಂದು, ತುಂಡುತುಂಡುಮಾಡಿ ನಾಯಿಗಳಿಗೆ ಹಾಕಿ, ಸಂತೋಷದಿಂದ ತಮ್ಮ ಪಟ್ಟಣಕ್ಕೆ ಹೋದರು. ಕಲ್ಯಾಣೀ! ಮಹಾತ್ಮನಾದ ನಿನ್ನ ತಂದೆಯು ತನ್ನ ಮಂತ್ರಪ್ರಭಾವದಿಂದ ನನ್ನನ್ನು ಕರೆದೊಡನೆಯೇ ಎಷ್ಟೋ ಪ್ರಯಾಸದಿಂದ ನಾನು ಜೀವಂತನಾಗಿ ನಿನ್ನ ಬಳಿಗೆ ಬಂದು ಸೇರಿದೆನು. ಇಲ್ಲದಿದ್ದರೆ ನಾನು ಸತ್ತಂತೆಯೇ'' ಎಂದನು. ಮತ್ತೊಮ್ಮೆ ದೇವಯಾನಿಯು "ಬ್ರಾಹ್ಮಣಾ! ನನಗೆ ಹೂಗಳನ್ನು ಕುಯ್ದು ತಾ''ರೆಂದು ಹೇಳಲು, ಕಚನು 'ಹಾಗೆಯೇ ಆಗ' ಲೆಂದು ಹೇಳಿ, ಹೂಗಳನ್ನು ತರಲು ವನಕ್ಕೆ ಹೋದನು. ರಾಕ್ಷಸರು ಪುನಃ ಅವನನ್ನು ಕೊಂದು ಸಮುದ್ರದಲ್ಲಿ ಬಿಸಾಡಿದರು. ಆ ಕನ್ಯೆಯು ಪುನಃ ತನ್ನ ತಂದೆಯಬಳಿಗೆ ಹೋಗಿ 'ಆತನು ಹೋಗಿ ಬಹಳ ಹೊತ್ತಾಯಿತು' ಎಂದಳು. ಶುಕ್ರನು ತಿರುಗಿ ತನ್ನ ವಿದ್ಯೆಯಿಂದ ಆತನನ್ನು ಕರೆಯಲು, ಆತನು ಜೀವಂತನಾಗಿ ಬಂದು ನಿಂತು, ನಡೆದ ವೃತ್ತಾಂತಗಳೆಲ್ಲವನ್ನೂ ಯಥಾವತ್ತಾಗಿ ತಿಳಿಸಿದನು. ಮೂರನೆಯ ಸಾರಿಯೂ, ರಾಕ್ಷಸರು ಆತನನ್ನು ಕೊಂದು, ಆತನ ಮಾಂಸವನ್ನು ಕುಯ್ದು, ಅದನ್ನು ಸುಟ್ಟು ಭಸ್ಮಮಾಡಿ, ಮದ್ಯದಲ್ಲಿ ಕದಡಿ, ಅದನ್ನು ಬ್ರಾಹ್ಮಣನಾದ ಶುಕ್ರಾಚಾರ್ಯನಿಗೇ ಕುಡಿಸಿದರು. ಶುಕ್ರಾಚಾರ್ಯನು ಮದ್ಯದೊಡನೆ ಆ ಕಚನ ದೇಹಭಸ್ಮವನ್ನು ಕುಡಿದುಬಿಟ್ಟನು. ಆ ದೇವಯಾನಿಯು, ತಿರುಗಿ ಪಾಲಕನಿಲ್ಲದೆ ಬರುತ್ತಿರುವ ಹಸುಗಳನ್ನು ನೋಡಿ ಸಂಶಯಪಟ್ಟು, ತನ್ನ ತಂದೆಯನ್ನು ಕುರಿತು, "ಹೂಗಳನ್ನು ತಾರೆಂದು ನಾನು ಕಚನಿಗೆ ಹೇಳಿಕಳುಹಿಸಿದೆನು. ಆತನಿನ್ನೂ ಬಾರಲಿಲ್ಲವಲ್ಲಾ! ಅಪ್ಪಾ! ಕಚನು ಸಂಹೃತನಾಗಿರಬೇಕು. ಇಲ್ಲದಿದ್ದರೆ ಹೇಗೋ ಸತ್ತಿರಬೇಕು. ಇದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ಆ ಕಚನನ್ನು ಬಿಟ್ಟು ನಾನು ಹೇಗೆ ಬದುಕಿರಲಿ!'' ಎಂದಳು.

ಈ ಮಗಳ ಮಾತನ್ನು ಕೇಳಿ ಶುಕ್ರನು, ಕಚನು ತನ್ನ ಹೊಟ್ಟೆಯಲ್ಲಿಯೇ ಇರುವುದನ್ನು ತಿಳಿಯದೆ, ಆತನು ಹೊರಗೆ ಎಲ್ಲಿಯೋ ಇರಬಹುದೆಂದು ಭಾವಿಸಿ, ಮಂತ್ರೋಚ್ಚಾರಣೆ ಮಾಡಿ ಆತನನ್ನು ಕರೆಯುತ್ತ, ತನ್ನ ಮಗಳನ್ನು ಕುರಿತು, "ಅಮ್ಮಾ, ಕುವರೀ! ಬೃಹಸ್ಪತಿ ಕುಮಾರನಾದ

ಕಚನು ಮೃತಪಟ್ಟಿರುವನು. ನನ್ನ ವಿದ್ಯಾಪ್ರಭಾವದಿಂದ ನಾನು ಆತನನ್ನು ಬದುಕಿಸುತಿದ್ದರೂ, ಆತನು ಈ ರೀತಿಯಲ್ಲಿ ಹತನಾಗುತ್ತಿರುವನು. ನಾವೇನು ಮಾಡುವುದು? ದೇವಯಾನೀ! ವೇದಗಳು, ಬ್ರಾಹ್ಮಣರು, ಇಂದ್ರಾದಿ ದೇವತೆಗಳು, ಅಷ್ಟವಸುಗಳು, ಅಶ್ವಿನೀದೇವತೆಗಳು, ಅಸುರರು, ಮತ್ತು ಜಗತ್ತೆಲ್ಲವೂ ನಿನ್ನ ಸಮೀಪಕ್ಕೆ ಬಂದೊಡನೆಯೇ ನಿನ್ನ ಪ್ರಭಾವವನ್ನು ನೋಡಿ ತಲೆತಗ್ಗುವರು. ಇಂಥಾ ಮಹಿಮೆಯುಳ್ಳ ನೀನು ವ್ಯಸನಪಡುವುದೇಕೆ? ಅಳಬೇಡ. ನಿನ್ನಂತವರು ಸತ್ತವರಿಗಾಗಿ ದುಃಖಪಡುವುದು ಸರಿಯಲ್ಲ. ಈ ಬ್ರಾಹ್ಮಣನನ್ನು ಬದುಕಿಸುವುದು ಇನ್ನು ಸಾಧ್ಯವಲ್ಲ. ಬದುಕಿಸಿದರೂ ಪುನಃ ಕೊಲ್ಲಲ್ಪಡುವನು" ಎಂದನು. ಅದಕ್ಕೆ ದೇವಯಾನಿಯು "ಯಾವನಿಗೆ ಅಂಗೀರಸಮಹರ್ಷಿಯು ಪಿತಾಮಹನೋ, ಯಾವನಿಗೆ ತಪೋನಿಧಿಯಾದ ಬೃಹಸ್ಪತಿಯೇ ಪಿತನೋ, ಅಂತಹ ಮಹಾತ್ಮರ ಪೌತ್ರನೂ, ಪುತ್ರನೂ ಆದ ಕಚನ ಮರಣಕ್ಕಾಗಿ ನಾನು ದುಃಖಿಸದಿರಲಾರೆನು. ನಾನು ಹೇಗೆತಾನೇ ವ್ಯಸನಪಡದಿರಲಿ? ಆತನು ಬ್ರಹ್ಮಚಾರಿ! ತಪೋಧನನು! ಪ್ರಯತ್ನಶೀಲನು! ಕಾರ್ಯನಿಪುಣನು! ಕಚನು ಹೋದ ದಾರಿಯನ್ನೇ ನಾನೂ ಅನುಸರಿಸುವೆನು. ಇನ್ನು ನಾನು ಆಹಾರವನ್ನು ಮುಟ್ಟಲಾರೆನು. ಸುಂದರಾಕಾರನಾದ ಕಚನಲ್ಲಿ ನನಗೆ ಬಹಳ ಪ್ರೀತಿಯಿರುವುದು" ಎಂದಳು. ಆಗ ಶುಕ್ರನು ನಿರಪರಾಧಿಯಾದ ನನ್ನ ಶಿಷ್ಯನನ್ನು ಕೊಂದು, ಆ ರಾಕ್ಷಸರು ನನಗೇ ವಿರೋಧಿಗಳಾಗುತ್ತಿರುವರು. ಕ್ರೂರಕರ್ಮಿಗಳಾದ ರಾಕ್ಷಸರು ಅಡಿಗಡಿಗೆ ನನ್ನ ಮಾತುಗಳನ್ನೂ ಮೀರಿ ತಮಗೆ ಬ್ರಾಹ್ಮಣಸಹಾಯವು ದೊರಕದಂತೆ ಮಾಡಿಕೊಳ್ಳುತ್ತಿರುವರು. ಈ ಪಾಪಕ್ಕೆ ಈ ಲೋಕದಲ್ಲಿ ಪ್ರತೀಕಾರವುಂಟೇ? ಬ್ರಹ್ಮಹತ್ಯಾಪಾತಕವನ್ನು ಮಾಡಿದವನು ದೇವೇಂದ್ರನಾದರೂ ಆ ಪಾಪವು ಆತನನ್ನು ದಹಿಸದೆ ಬಿಡುವುದಿಲ್ಲ" ಎಂದನು. ಪುನಃ ದೇವಯಾನಿಯು ಮೊರೆಯಿಡಲು, ಶುಕ್ರಾಚಾರ್ಯನು ರಾಕ್ಷಸರಮೇಲೆ ಕೋಪಗೊಂಡು ಬೃಹಸ್ಪತಿಪುತ್ರನಾದ ಕಚನನ್ನು ಕರೆದನು. ಮಂತ್ರಪ್ರಭಾವದಿಂದ ಆ ಕಚನಿಗೆ ಪ್ರಜ್ಞೆಬಂದರೂ, ಗುರುವಿಗಾಗಿ ಭಯಪಡುತ್ತ, ಆತನ ಹೊಟ್ಟೆಯೊಳಗಿಂದಲೇ ಮೆಲ್ಲಗೆ "ಮಹಾತ್ಮಾ! ನನ್ನನ್ನು ಅನುಗ್ರಹಿಸಬೇಕು. ನಾನು

ಕಚನು. ನಿಮಗೆ ನಮಸ್ಕರಿಸುವೆನು. ನಿಮ್ಮ ಹೊಟ್ಟೆಯಲ್ಲಿ ಬೆಳೆಯುವ ಮಗನಂತೆ ನನ್ನನ್ನು ಕಾಣಬೇಕು" ಎಂದನು. ಶುಕ್ರನು ಆತನನ್ನು ಕುರಿತು "ಬ್ರಾಹ್ಮಣಾ! ನೀನು ನನ್ನ ಹೊಟ್ಟೆಯಲ್ಲಿರುವೆಯಾ! ನೀನು ಹೇಗೆ ನನ್ನ ಹೊಟ್ಟೆಯನ್ನು ಪ್ರವೇಶಿಸಿದೆ ಹೇಳು" ಎಂದನು. ಆಗ ಕಚನು, "ತಮ್ಮ ಪ್ರಭಾವದಿಂದ ನನಗೆ ಸ್ಮೃತಿಯು ತಪ್ಪಲಿಲ್ಲ ನಡೆದ ವಿಷಯವೆಲ್ಲವೂ ನನ್ನ ಜ್ಞಾಪಕದಲ್ಲಿದೆ. ಇದೇ ರೀತಿಯಲ್ಲಿ ನನ್ನ ತಪಸ್ಸೂ ಕೆಡದಿರಬೇಕು. ಅದಕ್ಕಾಗಿಯೇ ನಾನು ಬಾಧೆಗಳೆಲ್ಲವನ್ನೂ ಸಹಿಸುತ್ತಿರುವೆನು. ಓ ಕವಿಪುತ್ರಾ! ರಾಕ್ಷಸರು ನನ್ನನ್ನು ಕೊಂದು, ನನ್ನ ದೇಹವನ್ನು ಕತ್ತರಿಸಿ, ಸುಟ್ಟು, ಮದ್ಯದೊಡನೆ ಕಲೆಸಿ ನಿನಗೆ ಆಹಾರವಾಗಿ ಕುಡಿಸಿದರು. ನಿನಗೆ ಬ್ರಾಹ್ಮಣಮಾಯೆ, ಅಸುರಮಾಯೆ, ದೇವತೆಗಳ ಮಾಯೆ, ಇವುಗಳೆಲ್ಲವೂ ಚೆನ್ನಾಗಿ ತಿಳಿದಿರುವುದರಿಂದ, ಯಾರೂ ನಿನ್ನನ್ನು ಕೆಡಿಸಲಾರರು. ಹೀಗಿರುವಾಗ ನಾನು ನಿನ್ನ ಹೊಟ್ಟೆಯನ್ನು ಸೀಳಿಕೊಂಡು ಹೇಗೆ ಬರಬಲ್ಲೆನು" ಎಂದನು. ಶುಕ್ರಾಚಾರ್ಯನು ತನ್ನ ಮಗಳನ್ನು ಕುರಿತು "ಅಮ್ಮಾ! ಈಗ ನಿನಗೆ ಪ್ರಿಯವಾವುದು ಹೇಳು! ನಾನು ಸತ್ತರೆ ಕಚನು ಬದುಕಬಲ್ಲನು. ನನ್ನ ಹೊಟ್ಟೆಯಲ್ಲಿರುವ ಕಚನು ಹೊಟ್ಟೆಯನ್ನು ಭೇದಿಸಿಕೊಂಡೇ ಹೊರಗೆ ಬರಬೇಕು" ಎಂದನು. ಆ ಮಾತನ್ನು ಕೇಳಿದ ದೇವಯಾನಿಯು "ನನಗೆ ಕಚನು ಸಾಯುವುದೂ, ನೀನು ಸಾಯುವುದೂ ಎರಡೂ ಒಂದೇ. ಇವೆರಡು ದುಃಖಗಳೂ ನನ್ನನ್ನು ಬೆಂಕಿಯಂತೆ ಸುಡುವುವು. ಕಚನು ಸತ್ತರೂ ನನಗೆ ಸುಖವಿಲ್ಲ. ನೀನು ಮೃತನಾದರೂ ನಾನು ಬದುಕುವುದು ಪ್ರಯಾಸವು" ಎಂದಳು.

ಅದನ್ನು ಕೇಳಿ ಶುಕ್ರನು "ಬೃಹಸ್ಪತಿ ಕುಮಾರಾ! ನಿನಗೆ ಸಂಪೂರ್ಣವಾಗಿ ಕಾರ್ಯಸಿದ್ಧಿಯಾಗಿರುವುದು. ನೀನು ದೇವಯಾನಿಯಲ್ಲಿ ಪೂರ್ಣವಾದ ಭಕ್ತಿಯನ್ನಿಟ್ಟಿರುವೆ. ನೀನು ಕಚವೇಷವನ್ನು ಧರಿಸಿಬಂದ ದೇವೇಂದ್ರನೇ ಆಗಿಲ್ಲದಪಕ್ಷದಲ್ಲಿ, ನಿನಗೆ ಈಗ ಸಂಜೀವಿನಿಯೆಂಬ ವಿದ್ಯೆಯನ್ನು ಉಪದೇಶಿಸುವೆನು. ಬ್ರಾಹ್ಮಣರುಹೊರತು ಮತ್ತೆ ಯಾರೂ ನನ್ನ ಹೊಟ್ಟೆಯಿಂದ ಜೀವಿಸಿ ಬರಲಾರರು. ಆದುದರಿಂದ ನೀನು ಈ

ವಿದ್ಯೆಯನ್ನು ಸ್ವೀಕರಿಸು. ನೀನು ನನ್ನ ಮಂತ್ರಪ್ರಭಾವದಿಂದ ಹೊಟ್ಟೆಯಲ್ಲಿ ಹುಟ್ಟಿದ ಪುತ್ರನಂತೆ ನನ್ನ ದೇಹದಿಂದ ಹೊರಗೆ ಬಂದಮೇಲೆ, ನೀನು ನನ್ನನ್ನು ತಿರುಗಿ ಬದುಕಿಸುವೆಯಷ್ಟೆ? ಗುರುವಿನ ಬಳಿಯಲ್ಲಿ ಉಪದೇಶವನ್ನು ಹೊಂದಿ, ವಿದ್ಯಾವಂತನಾದ ನಿನಗೆ ಈ ಧರ್ಮಬುದ್ಧಿಯು ಮಾತ್ರ ತಪ್ಪದಿರಲಿ!" ಎಂದನು.

ತನ್ನ ಗುರುವಾದ ಶುಕ್ರಾಚಾರ್ಯನಿಂದ ಉಪದೇಶವನ್ನು ಹೊಂದಿ ವಿದ್ವಾಂಸನಾದ ಆ ಕಚನು ಆತನ ದೇಹವನ್ನೇ ಭೇದಿಸಿಕೊಂಡು, ಶುಕ್ಲಪಕ್ಷದ ಪೂರ್ಣಿಮೆಯ ದಿನದಲ್ಲಿ ಚಂದ್ರನು ಉದಯಿಸುವಂತೆ ಹೊರಗೆ ಬಂದನು. ವೇದವೇ ಮನುಷ್ಯರೂಪವನ್ನು ತಾಳಿ ಬಂದಂತಿದ್ದ ಆ ಶುಕ್ರಾಚಾರ್ಯನು ಒಡನೆಯೇ ಮೃತನಾಗಿ ಕೆಳಗೆ ಬೀಳಲು, ಅದನ್ನು ನೋಡಿ ಕಚನು, ಆತನನ್ನು ಮಂತ್ರವಿದ್ಯಾಪ್ರಭಾವದಿಂದ ಬದುಕಿಸಿ ಅವನಲ್ಲಿ ತಾನು ಕಲಿತ ವಿದ್ಯೆಯನ್ನು ಸಫಲಗೊಳಿಸಿದನು. ಗುರುವನ್ನು ನಮಸ್ಕರಿಸಿ, ಆತನೊಡನೆ "ವಿದ್ಯಾಹೀನನಾದವನ ಕಿವಿಗೆ ವಿದ್ಯೆಯೆಂಬ ಅಮೃತವನ್ನು ಸುರಿದ ನಿಮ್ಮಂತಹ ಆಚಾರ್ಯರನ್ನು ನಾನು ತಂದೆಯಂತೆಯೂ, ತಾಯಿಯಂತೆಯೂ ಭಾವಿಸುವೆನು. ಗುರುವಿನಿಂದ ತನಗಾದ ಉಪಕಾರವನ್ನು ತಿಳಿದವರು ಆತನಿಗೆ ಕೇಡನ್ನು ಬಯಸರು. ಎಲ್ಲಕ್ಕಿಂತಲೂ ಉತ್ತಮವಾದ ವಿದ್ಯೆಯನ್ನು ಉಪದೇಶಿಸಿದವನೂ, ಉತ್ತಮವಿದ್ಯೆಗಳಿಗೆ ನಿಧಿಯೂ, ಪೂಜಾರ್ಹನೂ ಆದ ಗುರುವಿನಿಂದ ವಿದ್ಯೆಯನ್ನು ಕಲಿತು, ಆತನನ್ನೇ ಯಾರು ಪೂಜಿಸದಿರುವರೋ, ಅವರು ನಿಂದಾರ್ಹರಾಗಿ ನರಕಕ್ಕೇ ಹೋಗುವರು" ಎಂದನು. ವಿದ್ವಾಂಸನೂ, ಮಹಾನುಭಾವನೂ ಆದ ಶುಕ್ರನು ಮದ್ಯಪಾನದಿಂದ ತಾನು ಬುದ್ಧಿಗೆಟ್ಟು, ಕ್ರೂರವಾದ ಉನ್ಮಾದವನ್ನು ಹೊಂದಿ, ತನಗೆ ಅತಿಪ್ರಿಯನಾದ ಕಚನ ಮಾಂಸವನ್ನೇ ತಾನು ಸೇವನೆಮಾಡಿದುದನ್ನು ಜ್ಞಾಪಕಕ್ಕೆ ತಂದುಕೊಂಡು, ಬ್ರಾಹ್ಮಣರಿಗೆ ಹಿತವನ್ನುಂಟುಮಾಡುವ ಉದ್ದೇಶದಿಂದ ಹೀಗೆಂದು ಶಪಿಸುವನು. "ಇದು ಮೊದಲು ಯಾವ ಬ್ರಾಹ್ಮಣನು ಬುದ್ಧಿಗೆಟ್ಟು ಮದ್ಯಪಾನಮಾಡುವನೋ, ಅಂಥವನು ಬುದ್ಧಿವಿಕಲ್ಪವುಳ್ಳವನಾಗಿ, ಧರ್ಮಭ್ರಷ್ಟನಾಗಿ, ಬ್ರಹ್ಮಹತ್ಯಾದೋಷವನ್ನು ಹೊಂದಿ, ಇಹಪರ

ಗಳೆರಡರಲ್ಲಿಯೂ ನಿಂದಾರ್ಹನಾಗುವನು. ಸಮಸ್ತಲೋಕಗಳಿಗೂ ಮಾರ್ಗಪ್ರದರ್ಶಕವಾದ ಈ ಬ್ರಾಹ್ಮಣಧರ್ಮವನ್ನು ನೆಲೆಗೊಳಿಸುವುದಕ್ಕಾಗಿಯೇ ಈ ಸಿದ್ಧಾಂತವನ್ನು ವಿಧಿಸಿರುವೆನು. ಈ ನನ್ನ ವಾಕ್ಯಗಳನ್ನು ಗುರುಗಳ ಬಳಿಯಲ್ಲಿ ಶಾಸ್ತ್ರಗಳನ್ನು ಅಭ್ಯಾಸಮಾಡಿದ ಸತ್ಪುರುಷರಾದ ಬ್ರಾಹ್ಮಣರೂ, ದೇವತೆಗಳೂ, ಸಮಸ್ತಜನರೂ ಕೇಳಲಿ'' ಎಂದನು. ಅಪಾರ ಮಹಿಮನೂ, ತಪೋನಿಧಿಯೂ ಆದ ಶುಕ್ರನು ಹೀಗೆ ಹೇಳಿ, ಅಸುರರನ್ನು ಕರೆದು ''ಎಲೈ ಅಸುರರೇ! ನಿಮಗೆ ಹೇಳಬೇಕಾದ ಮಾತೊಂದುಂಟು. ನೀವು ಇನ್ನೂ ಮೂಢರಾಗಿಯೇ ಇರುವಿರಿ. ಕಚನಾದರೋ ತನ್ನ ಕಾರ್ಯವನ್ನು ಸಾಧಿಸಿಕೊಂಡನು. ಮಹಾತ್ಮನಾಗಿ, ನನಗೆ ಸಮಾನ ಪ್ರಭಾವವುಳ್ಳ ಈ ಬ್ರಾಹ್ಮಣನು, ನನ್ನಿಂದ ಸಂಜೀವನೀ ವಿದ್ಯೆಯನ್ನು ಹೊಂದಿ, ಬ್ರಹ್ಮಸಮನಾಗಿ ನನ್ನ ಬಳಿಯಲ್ಲಿಯೇ ಇರುವನು. ಕಚನು ದೇವತೆಗಳಿಗಾಗಿ ಈ ದುಸ್ಸಹವಾದ ಕಾರ್ಯವನ್ನು ಕೈಕೊಂಡನು. ಅವನ ಕೀರ್ತಿಯು ಶಾಶ್ವತವಾಗಿರುವುದು. ಆತನು ಯಜ್ಞಭಾಗಗಳಿಗೂ ಅರ್ಹನಾಗುವನು!'' ಎಂದು ಹೇಳಿ ಸುಮ್ಮನಾದನು. ಅಸುರರು ಆಶ್ಚರ್ಯವಶರಾಗಿ ತಮ್ಮ ಮನೆಗಳಿಗೆ ಹೋದರು. ಆ ಕಚನಾದರೋ ಒಂದು ಸಾವಿರ ವರ್ಷದವರೆಗೆ ಗುರುವಿನ ಬಳಿಯಲ್ಲಿ ವಾಸಮಾಡಿಕೊಂಡಿದ್ದನು. ಆ ಅವಧಿಯು ಮುಗಿದೊಡನೆ ಗುರುವಿನಿಂದ ಅಪ್ಪಣೆಯನ್ನು ಪಡೆದು ಸ್ವರ್ಗಕ್ಕೆ ಹೋಗಬೇಕೆಂದುದ್ದೇಶಿಸಿದನು.

ಇದು ಎಪ್ಪತ್ತನೆಯ ಅಧ್ಯಾಯವು.



(ಕಚನಿಗೂ, ದೇವಯಾನಿಗೂ ವಿವಾಹವಿಷಯವಾಗಿ ಸಂವಾದವು. ಅವರಿಬ್ಬರೂ ಒಬ್ಬರಿಗೊಬ್ಬರು ಶಪಿಸಿದುದು.)

ಕಚನು ಬ್ರಹ್ಮಚರ್ಯವನ್ನು ಮುಗಿಸಿ, ವ್ರತಸ್ನಾನಮಾಡಿದಮೇಲೆ ದೇವಲೋಕಕ್ಕೆ ಹೋಗಲು ಗುರುವಿನ ಅಪ್ಪಣೆಯನ್ನು ಕೇಳಿದನು. ಆಗ ದೇವಯಾನಿಯು ಆತನನ್ನು ಕುರಿತು ''ಓ ಆಂಗೀರಸಪುತ್ರಾ! ಶೀಲ

ವಿದ್ಯೆ, ತಪಸ್ಸು, ಜಿತೇಂದ್ರಿಯತ್ವ ಮುಂತಾದ ಗುಣಗಳಿಂದ ನೀನು ಶೋಭಿಸುತ್ತಿರುವೆ. ಮಹಾಯಶಸ್ವಿಯಾದ ಆಂಗೀರಸಮಹರ್ಷಿಯು ನನ್ನ ತಂದೆಗೂ ಪೂಜಾರ್ಹನು ಅದಕ್ಕಿಂತಲೂ ಅಧಿಕವಾಗಿ ನಿನ್ನ ತಂದೆಯಾದ ಬೃಹಸ್ಪತಿಯು ನನಗೆ ಪೂಜಾರ್ಹನು. ನೀನು ಬ್ರಹ್ಮಚರ್ಯವ್ರತವನ್ನವಲಂಬಿಸಿದ್ದಾಗ, ಆ ವ್ರತಕ್ಕೆ ಭಂಗವುಂಟಾಗದಿರಲು ನಾನು ಹೇಗೆ ಸಹಕಾರಿಯಾದೆನೋ, ಹಾಗೆಯೇ ವಿದ್ಯಾವಂತನಾದ ನೀನು ನಿನ್ನಲ್ಲಿ ಪ್ರೀತಿಗೊಂಡಿರುವ ನನ್ನನ್ನು ಪರಿಗ್ರಹಿಸಲು ಅರ್ಹನಾಗಿರುವೆ ಮಂತ್ರಪೂರ್ವಕವಾಗಿಯೂ, ಶಾಸ್ತ್ರೋಕ್ತವಾಗಿಯೂ ನನ್ನನ್ನು ಪಾಣಿಗ್ರಹಣಮಾಡಿಕೊಳ್ಳಬೇಕು" ಎಂದಳು. ಆಗ ಕಚನು "ಸುಂದರೀಮಣೀ ! ಗುರುವಾದ ನಿನ್ನ ತಂದೆಯು ನನ್ನ ಪೂಜೆಗೂ, ಗೌರವಕ್ಕೂ ಹೇಗೆ ಅರ್ಹನೋ, ಅದೇ ರೀತಿಯಲ್ಲಿ, ಅಥವಾ ಅದಕ್ಕಿಂತಲೂ ಅಧಿಕವಾಗಿ, ನೀನು ನನಗೆ ಪೂಜಾರ್ಹಳು. ಮಹಾತ್ಮನಾದ ಶುಕ್ರಾಚಾರ್ಯನು ನನ್ನಲ್ಲಿ ಪ್ರಾಣಕ್ಕಿಂತಲೂ ಅಧಿಕವಾದ ಪ್ರೀತಿಯನ್ನಿಟ್ಟಿರುವನು. ಗುರುಪುತ್ರಿಯಾದ ನೀನೂ ಧರ್ಮಾನುಸಾರವಾಗಿ ಪೂಜಾರ್ಹಳೇ. ದೇವಯಾನೀ ! ನನ್ನ ಗುರುವೂ, ನಿನ್ನ ತಂದೆಯೂ ಆದ ಶುಕ್ರಾಚಾರ್ಯನು ಯಾವಾಗಲೂ ನನಗೆ ಹೇಗೆ ಪೂಜಾರ್ಹನೋ ಹಾಗೆಯೇ ನೀನೂ ಪೂಜ್ಯಳಾದುದರಿಂದ, ನನ್ನೊಡನೆ ಈ ರೀತಿಯಾಗಿ ಮಾತನಾಡಬಾರದು" ಎಂದನು. ಆಗ ದೇವಯಾನಿಯು ಆತನನ್ನು ಕುರಿತು "ನೀನು ನನ್ನ ತಂದೆಗೆ ಗುರುವಾದ ಆಂಗೀರಸನ ಮಗನ ಮಗನೇ ಹೊರತು, ನನ್ನ ತಂದೆಗೆ ನೀನು ಮಗನಲ್ಲ. ಬ್ರಾಹ್ಮಣೋತ್ತಮಾ ! ನನ್ನ ಪೂಜೆಗಳನ್ನೂ, ಮರ್ಯಾದೆಗಳನ್ನೂ ಹೊಂದಲು ನೀನು ಯೋಗ್ಯನಾಗಿರುವೆ. ಓ ಕಚಾ ! ನಿನ್ನನ್ನು ರಾಕ್ಷಸರು ಹಲವು ಬಾರಿ ವಧಿಸಿದಾಗ, ನಾನು ನಿನ್ನಲ್ಲಿ ತೋರಿಸುತಿದ್ದ ಅನುರಾಗವನ್ನಾದರೂ ನೀನು ಗಮನಿಸಬೇಡವೆ ? ಸ್ನೇಹಭಾವದಿಂದಲೂ, ಕಾಮದಿಂದಲೂ ನಾನು ನಿನ್ನಲ್ಲಿ ತೋರಿಸಿದ ಪ್ರೀತಿಯು ನಿನಗೂ ಗೊತ್ತಿದೆ. ಓ ಧರ್ಮಜ್ಞಾ ! ನಾನು ನಿನ್ನಲ್ಲಿ ಭಕ್ತಿಯುಳ್ಳವಳು. ನಿನ್ನಲ್ಲಿ ಯಾವ ತಪ್ಪನ್ನೂ ಮಾಡದವಳು. ಇಂತಹ ನನ್ನನ್ನು ಉಪೇಕ್ಷಿಸಬಾರದು" ಎಂದಳು.

ಆಗ ಕಚನು "ದೇವಯಾನೀ! ಮಾಡಬಾರದ ಕೆಲಸವನ್ನು ಮಾಡುವಂತೆ ನನ್ನನ್ನು ಬಲಾತ್ಕಾರಿಸುವುದು ನಿನಗೆ ಯುಕ್ತವಲ್ಲ. ನೀನು ನನ್ನಲ್ಲಿ ದಯೆಯಿಡು. ನನಗೆ ನೀನು ಗುರುವಿಗಿಂತಲೂ ಹೆಚ್ಚು ಪೂಜ್ಯಳು. ಓ ವಿಶಾಲಾಕ್ಷೀ! ಯಾವ ಶುಕ್ರನ ಗರ್ಭದಲ್ಲಿ ನೀನು ಹುಟ್ಟಿದೆಯೋ, ಅದೇ ಗರ್ಭದಲ್ಲಿ ನಾನೂ ಇದ್ದು ಬಂದವನು. ವಿಲಾಸವತೀ! ಧರ್ಮಕ್ಕನುಸಾರವಾಗಿ ನೀನು ನನಗೆ ಸಹೋದರಿ! ನೀನು ಹೀಗೆ ಹೇಳಬಹುದೇ! ನೀನು ನನ್ನಲ್ಲಿ ಎಷ್ಟೋ ವಿಶ್ವಾಸವುಳ್ಳವಳು. ನಾನು ನಿಮ್ಮ ಮನೆಯಲ್ಲಿ ಪೋಷಿಸಲ್ಪಟ್ಟವನು. ನನಗೆ ಸ್ವಲ್ಪವೂ ಕೋಪವಿಲ್ಲ. ದಯೆಯಿಟ್ಟು ನನಗೆ ಅನುಮತಿಕೊಟ್ಟರೆ ನಾನು ಹೋಗಿಬರುವೆನು. ನನಗೆ ಸುಖಪ್ರಯಾಣವನ್ನು ಬಯಸು. ಧರ್ಮಕ್ಕೆ ವಿರೋಧವು ಬಾರದಂತೆ ಆಗಾಗ ನನ್ನನ್ನು ಭಾವಿಸು. ಯಾವ ಕೊರತೆಯನ್ನೂ ಇಟ್ಟುಕೊಳ್ಳದೆ ಬೇಸರವನ್ನು ಬಿಟ್ಟು ಗುರುವಾದ ಶುಕ್ರಾಚಾರ್ಯನಿಗೆ ಯಾವಾಗಲೂ ಶುಶ್ರೂಷೆ ಮಾಡಿಕೊಂಡಿರುವಳಾಗು" ಎಂದನು. ಈ ಮಾತನ್ನು ಕೇಳಿ ದೇವಯಾನಿಯು "ಕಚಾ! ಕಾಮದಿಂದ ನಾನು ನಿನ್ನನ್ನು ಎಷ್ಟು ಬೇಡಿಕೊಳ್ಳುತ್ತಿದ್ದರೂ, ಧರ್ಮವನ್ನು ತಿಳಿದ ನೀನೇ ನನ್ನನ್ನು ತಿರಸ್ಕರಿಸುತ್ತಿರುವೆ. ಆದುದರಿಂದ ನೀನು ನನ್ನ ತಂದೆಯಿಂದ ಕಲಿತುಕೊಂಡ ವಿದ್ಯೆಯು ನಿನಗೆ ಫಲಿಸದಿರಲಿ!" ಎಂದು ಶಪಿಸಿದಳು. ಅದಕ್ಕಾ ಕಚನು "ನಾನು ಗುರುಪುತ್ರಿಯೆಂದು ತಿಳಿದು, ನಿನ್ನ ಕೋರಿಕೆಯಂತೆ ನಡೆದುಕೊಳ್ಳದಿರುವೆನೇ ಹೊರತು, ನಿನ್ನಲ್ಲಿ ದೋಷವನ್ನು ಭಾವಿಸಿ ಬಿಟ್ಟವನಲ್ಲ. ಈ ವಿವಾಹಕ್ಕೆ ಗುರುವೂ ನನಗೆ ಅನುಮತಿಕೊಡಲಿಲ್ಲ. ನೀನು ನಿನಗೆ ಮನಬಂದ ರೀತಿಯಲ್ಲಿ ನನ್ನನ್ನು ಶಪಿಸಬಹುದು. ಓ ದೇವಯಾನೀ! ಋಷಿಗಳಿಂದ ವಿಧಿಸಲ್ಪಟ್ಟ ಉತ್ತಮವಾದ ಧರ್ಮಕ್ಕನುಸಾರವಾಗಿ ನಾನು ಹೇಳುತ್ತಿರುವೆನು. ನಾನು ಶಾಪಕಾರಣನಲ್ಲದಿದ್ದರೂ, ಧರ್ಮವನ್ನು ಬಿಟ್ಟು, ಕೇವಲ ಕಾಮಾಪೇಕ್ಷೆಯಿಂದ ನೀನು ನನ್ನನ್ನು ಶಪಿಸಿದುದರಿಂದ, ನಿನ್ನ ಶಾಪವು ಪೂರ್ಣವಾಗಿ ಫಲಿಸಲಾರದು. ನಿನ್ನನ್ನು ಋಷಿಪುತ್ರನಾವನೂ ಮದುವೆಯಾಗದಿರಲಿ! ನೀನು ನನ್ನನ್ನು ನೋಡಿ "ನಿನಗೆ ವಿದ್ಯೆಯು ಫಲಿಸದು" ಎಂದು ಹೇಳಿದಂತೆ, ನನಗೆ ಫಲಿಸದಿದ್ದರೂ ಹೋಗಲಿ! ಆದರೆ, ನಾನು

ಬೇರೆ ಯಾರಿಗೆ ಆ ವಿದ್ಯೆಯನ್ನು ಬೋಧಿಸುವೆನೋ, ಅದು ಅವರಿಗೆ ಫಲಿಸುವುದು" ಎಂದು ಹೇಳಿ, ಒಡನೆಯೇ ವೇಗದಿಂದ ಸ್ವರ್ಗಕ್ಕೆ ಹೊರಟನು. ಆತನು ಬಂದುದನ್ನು ನೋಡಿ ಇಂದ್ರನೇ ಮೊದಲಾದ ದೇವತೆಗಳು ಬೃಹಸ್ಪತಿಯನ್ನು ಗೌರವಿಸಿ, ಕಚನನ್ನು ಕುರಿತು "ನಮ್ಮೆಲ್ಲರಿಗೆ ಹಿತವೂ, ಆಶ್ಚರ್ಯಕರವೂ ಆದ ಕೆಲಸವನ್ನು ನೀನು ಮಾಡಿದೆಯಾದುದರಿಂದ, ನಿನ್ನ ಕೀರ್ತಿಯು ಶಾಶ್ವತವಾಗಿರುವುದು. ನೀನು ಯಜ್ಞಭಾಗಕ್ಕೆ ಅರ್ಹನಾದೆ" ಎಂದರು.

ಇದು ಎಪ್ಪತ್ತೊಂದನೆಯ ಅಧ್ಯಾಯವು.



ದೇವತೆಗಳು ಕಚನಿಂದ ಸಂಜೀವನಿವಿದ್ಯೆಯನ್ನು ಪಡೆದುದು. ಇಂದ್ರನು ಶುಕ್ರ ವೃಷಪರ್ವರಲ್ಲಿ ವಿರೋಧವನ್ನು ಹುಟ್ಟಿಸುವುದಕ್ಕಾಗಿ ಮಾಡಿದ ತಂತ್ರದಮೇಲೆ, ಸೀರೆಯ ವಿಷಯವಾಗಿ ದೇವಯಾನಿಗೂ, ಶರ್ಮಿಷ್ಠೆಗೂ, ನಡೆದ ವಿವಾದಗಳು. ಶರ್ಮಿಷ್ಠೆಯು ದೇವಯಾನಿಯನ್ನು ಬಾವಿಗೆ ತಳ್ಳಿದುದು. ಆ ಸಮಯಕ್ಕೆ ಯಯಾತಿಯು ಬಂದು ಅವಳನ್ನೆತ್ತಿದುದು.

ಓ ಪುರುಷೋತ್ತಮಾ! ಆಮೇಲೆ ದೇವತೆಗಳು ಬಹಳ ಸಂತೋಷದಿಂದ ಕಚನಿಂದ ಆ ವಿದ್ಯೆಯನ್ನು ಕಲಿತು, ಇಷ್ಟಸಿದ್ಧಿಯನ್ನು ಹೊಂದಿದರು. ಅವರೆಲ್ಲರೂ ಸೇರಿ ಇಂದ್ರನನ್ನು ಕುರಿತು "ಪುರಂದರಾ! ಇನ್ನು ನೀನು ನಿನ್ನ ಪರಾಕ್ರಮವನ್ನು ತೋರಿಸಲು ತಕ್ಕ ಸಮಯವಾಗಿದೆ. ಶತ್ರುಗಳನ್ನು ಯುದ್ಧಕ್ಕೆ ಕರೆ" ಎಂದರು. ಇಂದ್ರನು ಹಾಗೆಯೇ ಆಗಲೆಂದು ಹೊರಟು, ಮಾರ್ಗಮಧ್ಯದಲ್ಲಿದ್ದ ವನವೊಂದರಲ್ಲಿ ಸ್ತ್ರೀಯರು ಆಡುತಿದ್ದುದನ್ನು ಕಂಡನು. ಚೈತ್ರರಥವೆಂಬ ಕುಬೇರನ ಉದ್ಯಾನವನಕ್ಕೆ ಸಮಾನವಾದ ಆ ವನದಲ್ಲಿ ಯುವತಿಯರು ಜಲಕ್ರೀಡೆಗಳನ್ನಾಡುತಿದ್ದರು. ಆತನು ಗಾಳಿಯೆಬ್ಬಿಸಿ ಆ ಕನ್ಯೆಯರ ಸೀರೆಗಳನ್ನೆಲ್ಲ ಹಾರಿಸಿಬಿಟ್ಟನು. ಆ ಕನ್ಯೆಯರು ಲಜ್ಜೆಯಿಂದ ಮೇಲೆದ್ದು ಬಂದು, ತಮ್ಮತಮ್ಮ ಕೈಗೆ ಸಿಕ್ಕಿದ ಸೀರೆ

ಗಳನ್ನೆತ್ತಿ ಸುತ್ತಿಕೊಂಡರು. ಆಗ ವೃಷಪರ್ವನ ಮಗಳಾದ ಶರ್ಮಿಷ್ಠೆಯು, ತನ್ನ ಸೀರೆಯು ಮಾರಿಹೋದುದನ್ನು ತಿಳಿಯದೆ, ತನ್ನ ಸೀರೆಯನ್ನಿಟ್ಟಿದ್ದ ಸ್ಥಳದಲ್ಲಿದ್ದ ದೇವಯಾನಿಯ ಸೀರೆಯನ್ನು ಸುತ್ತಿಕೊಂಡು ಬಿಟ್ಟಳು. ಒಡನೆ ಸೀರೆಯ ವಿಚಾರವಾಗಿ ಶರ್ಮಿಷ್ಠೆಗೂ, ದೇವಯಾನಿಗೂ ವಿವಾದವು ಜರುಗಿತು. ದೇವಯಾನಿಯು ಶರ್ಮಿಷ್ಠೆಯನ್ನು ಕುರಿತು “ಎಲೆ ರಾಕ್ಷಸಿ! ನೀನು ನನ್ನ ಶಿಷ್ಯಳಾಗಿರುವಾಗ, ನನ್ನ ಸೀರೆಯನ್ನು ನೀನು ಹೇಗೆ ಉಟ್ಟುಕೊಳ್ಳಬಹುದು? ಮರ್ಯಾದೆಯನ್ನು ಬಿಟ್ಟ ನಿನಗೆ ಎಂದಿಗೂ ಮೇಲಾಗದು” ಎಂದಳು. ಅದಕ್ಕೆ ಶರ್ಮಿಷ್ಠೆಯು “ನನ್ನ ತಂದೆಯು ಕುಳಿತಿದ್ದರೂ, ಮಲಗಿದ್ದರೂ, ಅವನ ಬಳಿಯಲ್ಲಿ ನಿನ್ನ ತಂದೆಯು ಬಹಳ ವಿನೀತನಂತೆ ನಮ್ರನಾಗಿದ್ದು, ಅವನನ್ನು ಹೊಗಳುಭಟನಂತೆ ಯಾವಾಗಲೂ ಸ್ತೋತ್ರಮಾಡುತ್ತಿರುವನು. ನೀನು, ಯಾಚಕನೂ, ಹೊಗಳುಭಟನೂ, ದಾನಕ್ಕೆ ಕೈಯೊಡ್ಡತಕ್ಕವನೂ ಆದ ಆ ಬಡಬ್ರಾಹ್ಮಣನ ಮಗಳು. ನಾನಾದರೋ, ಹೊಗಳಿಸಿಕೊಳ್ಳತಕ್ಕವನೂ, ಕೊಡುವವನೂ, ಎಂದಿಗೂ ಕೈನೀಡಿ ಯಾಚಿಸದವನೂ ಆದವನ ಮಗಳು. ಎಲೆ ಹುಚ್ಚೀ! ಬೇಕಾದಹಾಗೆ ಚಚ್ಚಿಕೋ! ಉರುಳಾಡು! ಕೋಪಿಸು! ದ್ವೇಷಿಸು. ಆಯುಧಪಾಣಿಗಳೊಡನೆ ನಿರಾಯುಧರಂತೆ ನನ್ನೊಡನೆ ನೀನು ಹೋರಾಡುತ್ತಿರುವೆ. ನಿನ್ನ ಜಗಳಕ್ಕೆ ನಾನಲ್ಲ? ನಿನಗೆ ಬೇರೆ ಯಾರೂ ಇಲ್ಲವೋ? ಎಲೆ ಭಿಕ್ಷುಕೀ! ನಿನ್ನನ್ನು ನಾನು ಲಕ್ಷ್ಯಮಾಡುವೆನೆ! ಇನ್ನುಮೇಲೆ ಎಚ್ಚರಿಕೆ! ಎಂದಾದರೂ ನನ್ನನ್ನು ಧಿಕ್ಕರಿಸಿ ಮಾತನಾಡಿದರೆ, ಇನ್ನು ನಾನು ನಿನ್ನನ್ನು ಮನ್ನಿಸಲಾರೆನು” ಎಂದು ಹೇಳಿ, ಕೋಪೋದ್ರೇಕದಿಂದ ತನ್ನ ಸೀರೆಯನ್ನು ಹಿಡಿದುಕೊಂಡಿದ್ದ ದೇವಯಾನಿಯನ್ನು ಬಾವಿಗೆ ತಳ್ಳಿ, ತನ್ನ ಪಟ್ಟಣಕ್ಕೆ ಹೋದಳು. ದುಷ್ಟಳಾದ ಆ ಶರ್ಮಿಷ್ಠೆಯು ದೇವಯಾನಿಯು ಸತ್ತಳೆಂದೇ ಭಾವಿಸಿಕೊಂಡು, ಹಿಂತಿರುಗಿಯೂ ನೋಡದೆ ಬಂದುಬಿಟ್ಟಳು. ಇಷ್ಟರಲ್ಲಿ ನಹುಷಪುತ್ರನಾದ ಯಯಾತಿಯು ರಥವನ್ನೇರಿ, ಒಂದು ಜಿಂಕೆಯನ್ನು ಅಟ್ಟಿಕೊಂಡು ಬರುತ್ತಾ, ಕುದುರೆಗಳು ಬಳಲಿರಲು, ದಾಹದಿಂದ ಆ ಬಾವಿಯ ಬಳಿಗೆ ಬಂದನು. ಆ ರಾಜನು ನೀರಿನಲ್ಲಿ ಬಿದ್ದಿದ್ದ ಅಗ್ನಿಜ್ವಾಲೆಗೆ ಸಮಾನಕಾಂತಿಯುಳ್ಳ ಆಕೆಯನ್ನು ನೋಡಿದನು. ಆ ರಾಜನು ದೇವ



ಪುಟ ೩೬೦. ಶರ್ಮಿಷ್ಠೆಯು ತನ್ನ ಸೀರೆಯನ್ನು ಕಟ್ಟಿಕೊಂಡುದುದಕ್ಕಾಗಿ ದೇವಯಾನಿಯು ಆಕ್ಷೇಪಿಸಿ ಬೈದುದು.

ಶಾಸಮಾನವಾದ ರೂಪವುಳ್ಳ ಆ ಕನ್ಯೆಯನ್ನು ನೋಡಿ ಬಹಳ ಮೃದು ವಾಕ್ಯದಿಂದ ಅವಳನ್ನು ಕುರಿತು "ರತ್ನಕುಂಡಲಗಳನ್ನು ಧರಿಸಿ, ಯೌವನ ದಿಂದ ಕೂಡಿರುವ ನೀನು ಯಾರು? ಹೀಗೇಕೆ ಕೊರಗುತ್ತಿರುವೆ? ದುಃಖ ದಿಂದೇಕೆ ಹೀಗೆ ನಿಟ್ಟುಸಿರನ್ನು ಬಿಡುತ್ತಿರುವೆ? ಹುಲ್ಲುಪೊದೆಗಳು ತುಂಬಿ ರುವ ಈ ಬಾವಿಯೊಳಗೆ ನೀನು ಬಿದ್ದುದು ಹೇಗೆ? ನೀನು ಯಾರ ಮಗ ಳು? ಓ ನಾರೀಮಣೀ! ನಡೆದ ಸಂಗತಿಯನ್ನು ತಿಳಿಸು" ಎಂದು ಕೇಳಿ ದನು. ಅದಕ್ಕೆ ದೇವಯಾನಿಯು "ಓ ಸುಮುಖಾ! ನಾನು ದೇವತೆ ಗಳಿಂದ ಹತರಾದ ರಾಕ್ಷಸರನ್ನೆಲ್ಲ ತನ್ನ ಮಂತ್ರವಿದ್ಯಾಬಲದಿಂದ ರಕ್ಷಿಸು ತ್ತಿರುವ ಶುಕ್ರಾಚಾರ್ಯನ ಮಗಳು. ಆತನಿಗೆ ಈ ನನ್ನ ಸ್ಥಿತಿಯು ಇನ್ನೂ ತಿಳಿದಿಲ್ಲ! ಓ ಪಯಾತೀ! ಇದೋ! ಈ ನನ್ನ ಬಲಗೈಯನ್ನು ನೀಡಿರು ವೆನು. ಇದನ್ನು ಹಿಡಿದು ನನ್ನನ್ನು ಮೇಲಕ್ಕೆತ್ತಿ ಬಿಡು. ನೀನು ದೊಡ್ಡ ಕುಲದಲ್ಲಿ ಹುಟ್ಟಿದವನೆಂದು ತೋರುವುದು. ಮತ್ತು ಮಹಾತೇಜಸ್ವಿ ಯಾಗಿಯೂ, ಶಕ್ತಿವಂತನಾಗಿಯೂ, ಕೀರ್ತಿಶಾಲಿಯಾಗಿಯೂ ಇರುವಂತೆ ತೋರುತ್ತಿರುವೆ. ಆದುದರಿಂದ ಬಾವಿಯಲ್ಲಿ ಬಿದ್ದಿರುವ ನನ್ನನ್ನು ಕೈಹಿಡಿದು ಮೇಲಕ್ಕೆತ್ತಲು ನೀನು ಅರ್ಹನು" ಎಂದಳು. ಆಗ ಯಯಾತಿಯು, ಆಕೆಯು ಬ್ರಾಹ್ಮಣಕನ್ಯೆಯೆಂದು ತಿಳಿದು, ಆಕೆಯ ಬಲಗೈಯನ್ನು ಹಿಡಿದು ಕೊಂಡು ಬಾವಿಯಿಂದ ಮೇಲಕ್ಕೆತ್ತಿದನು. ರಾಜನು ತನ್ನ ಬಾಹುಬಲ ದಿಂದ ಆ ಸುಂದರಾಂಗಿಯನ್ನು ಆ ಬಾವಿಯಿಂದ ಮೇಲಕ್ಕೆತ್ತಿ "ಕಲ್ಯಾ ಣೀ! ಇನ್ನು ನೀನು ಇಷ್ಟಬಂದಂತೆ ಹೋಗಬಹುದು. ಭಯಪಡಬೇಡ" ಎಂದನು. ಹೀಗೆ ಹೇಳಿದ ರಾಜನನ್ನು ನೋಡಿ ದೇವಯಾನಿಯು ಆತ ನನ್ನು ಕುರಿತು "ನೀನೇ ನನ್ನನ್ನು ಜಾಗ್ರತೆಯಾಗಿ ಕರೆದುಕೊಂಡು ಹೋ ಗು. ನನಗೆ ನೀನೇ ಪ್ರಿಯನು. ನೀನು ನನ್ನ ಪಾಣಿಗ್ರಹಣಮಾಡಿ ದವನು. ಆದುದರಿಂದ ನೀನೇ ನನಗೆ ಪತಿಯಾಗು" ಎಂದಳು. ಆಗ ರಾಜನು "ರಮಣೀ! ನಾನು ಕ್ಷತ್ರಿಯಕುಲದಲ್ಲಿ ಹುಟ್ಟಿದವನು. ನೀನಾ ದರೋ ಬ್ರಾಹ್ಮಣಕನ್ಯೆ. ನಿನಗೆ ನನ್ನೊಡನೆ ವಿವಾಹವು ಯೋಗ್ಯವಲ್ಲ. ಶುಕ್ರನು ಸಮಸ್ತ ಲೋಕಗಳಿಗೂ ಆಚಾರ್ಯನು. ನೀನು ಆತನ ಮಗ ಳು. ನನಗೆ ಭಯವಾಗುತ್ತಿದೆ. ಕಲ್ಯಾಣೀ! ನೀನು ನನಗೆ ತಕ್ಕವ

ತಿಲ್ಲ" ಎಂದನು. ದೇವಯಾನಿಯು "ರಾಜಾ! ನನ್ನ ಮಾತಿನ ಮೇಲೆ ನೀನು ನನ್ನನ್ನು ಈಗಲೇ ವಿವಾಹವಾಗದಿದ್ದರೂ, ನನ್ನ ತಂದೆಯ ಸಹಾಯದಿಂದಲಾದರೂ ನಾನು ನಿನ್ನನ್ನೇ ಮದುವೆಯಾಗುವೆನು. ಆತನಿಂದಲೇ ನೀನು ನನ್ನನ್ನು ಪಡೆಯುವೆ! ಹೋಗಿ ಬಾ!" ಎಂದಳು. ಯಯಾತಿಯು ದೇವಯಾನಿಯ ಅನುಮತಿಯನ್ನು ಪಡೆದು ತನ್ನ ಪಟ್ಟಣಕ್ಕೆ ಹೊರಟುಹೋದನು.

ಯಯಾತಿಯು ಹೊರಟುಹೋದಮೇಲೆ ದೇವಯಾನಿಯು ಅಲ್ಲಿಯೇ ಒಂದು ಕಡೆ ಅಳುತ್ತಾ ಒಂದು ಮರದ ಕೆಳಗೆ ನಿಂತುಬಿಟ್ಟಳು. ಇತ್ತಲಾಗಿ ಶುಕ್ರಾಚಾರ್ಯನು, ತನ್ನ ಮಗಳು ಮನೆಬಿಟ್ಟು ಬಹಳ ಹೊತ್ತಾದರೂ ಬಾರದುದನ್ನು ನೋಡಿ, ಆಕೆಯಲ್ಲಿ ತನಗಿದ್ದ ಪ್ರೇಮವಿಶೇಷದಿಂದ ಸಂತಪಿಸುತ್ತ, ಆಕೆಯ ದಾದಿಯನ್ನು ಕರೆದು "ಧಾತ್ರೀ! ದೇವಯಾನಿಯನ್ನು ನೀನು ಹುಡುಕಿ ಬೇಗನೆ ಕರೆದುಕೊಂಡು ಬಾ!" ಎಂದನು. ಒಡನೆಯೇ ದಾದಿಯು ಹೊರಟು, ಆ ದೇವಯಾನಿಯು ತನ್ನ ಗೆಳತಿಯರೊಡನೆ ಎಲ್ಲೆಲ್ಲಿಗೆ ಆಡುವುದಕ್ಕೆ ಹೋಗುತಿದ್ದಳೋ, ಆ ಸ್ಥಳಗಳನ್ನೆಲ್ಲ ಹುಡುಕಿ ನೋಡಿದಳು. ಕೊನೆಗೆ ಅಕಸ್ಮಾತ್ತಾಗಿ ದೇವಯಾನಿಯು ಬಹಳ ದೈನ್ಯದಿಂದ ಅಳುತ್ತ ನಿಂತಿರುವುದನ್ನು ನೋಡಿದಳು. ಆಗ ಅವಳನ್ನು ಕುರಿತು "ಕಲ್ಯಾಣೀ! ಏನಿದು? ಬೇಗನೆ ತಿಳಿಸು. ನಿನ್ನ ತಂದೆಯು ನಿನ್ನನ್ನು ಕರೆಯುತ್ತಿರುವನು" ಎಂದಳು. ಅದಕ್ಕೆ ದೇವಯಾನಿಯು ಶೋಕದಿಂದ ಕುದಿಯುತ್ತ, ಆ ದಾದಿಗೆ ಶರ್ಮಿಷ್ಠೆಯು ಮಾಡಿದ ಪಾಪಕೃತ್ಯವನ್ನೆಲ್ಲ ತಿಳಿಸಿ "ಸಖಿ! ನೀನು ಜಾಗ್ರತೆಯಾಗಿ ಹೋಗು. ನಾನು ಇನ್ನುಮೇಲೆ ವೃಷಪರ್ವನ ಪಟ್ಟಣದಲ್ಲಿ ಕಾಲಿಡುವುದಿಲ್ಲವೆಂದು ಒಡನೆಯೇ ನನ್ನ ತಂದೆಗೆ ಹೋಗಿ ಹೇಳಿಬಿಡು" ಎಂದಳು. ದಾದಿಯು ಒಡನೆ ಆತುರದಿಂದ ರಾಕ್ಷಸಗೃಹಕ್ಕೆ ಹೋಗಿ ಶುಕ್ರಾಚಾರ್ಯನನ್ನು ಕುರಿತು "ದೇವಯಾನಿಗೆ ವೃಷಪರ್ವನ ಮಗಳಾದ ಶರ್ಮಿಷ್ಠೆಯಿಂದಾದ ಭಂಗವನ್ನು ತಿಳಿಸಿದಳು. ಅದನ್ನು ಕೇಳಿದೊಡನೆ ಶುಕ್ರಾಚಾರ್ಯನು ದುಃಖದಿಂದ ತಪಿಸುತ್ತ ತನ್ನ ಮಗಳನ್ನು ನೋಡಲು ಹೊರಟುಬಂದನು. ಕಾಡಿನಲ್ಲಿ ದೈನ್ಯದಿಂದ ಅಳು

ತಿದ್ದ ತನ್ನ ಪ್ರಿಯಪುತ್ರಿಯನ್ನು ಕಂಡು ದುಃಖದಿಂದ ತನ್ನ ಎರಡು ಕೈಗಳಿಂದಲೂ ಅವಳ ಕೈಗಳನ್ನು ಹಿಡಿದುಕೊಂಡು “ ಅಮ್ಮಾ! ಜನರ ಸುಖದುಃಖಗಳಿಗೆ ಅವರವರ ಸುಗುಣದುರ್ಗುಣಗಳೇ ಕಾರಣಗಳಲ್ಲದೆ ಬೇರೆ ಕಾರಣವಿಲ್ಲ. ನಿನ್ನಲ್ಲಿ ಯಾವುದೋ ತಪ್ಪಿರಬೇಕು. ಅದಕ್ಕೆ ಪ್ರತೀಕಾರವಾಗಿ ಇದು ನಡೆದಿರಬೇಕೆಂದು ಭಾವಿಸುವೆನು ” ಎಂದನು. ಅದಕ್ಕೆ ದೇವಯಾನಿಯು “ ಅಪ್ಪಾ! ಇದು ನನಗೆ ಪ್ರತಿಕಾರರೂಪವಾಗಿರಲಿ! ಇಲ್ಲದಿರಲಿ! ಆ ವೃಷಪರ್ವನ ಮಗಳಾದ ಶರ್ಮಿಷ್ಠೆಯು ನನ್ನನ್ನು ಕುರಿತು ಆಡಿದ ನಿಂದಾವಾಕ್ಯಗಳನ್ನು ನೀನು ಕೇಳಿದರೆ, ಆಗ ನಿನಗೇ ತಿಳಿಯುವುದು. ಜನಕಾ! ನೀನು ಅಸುರರ ಬಳಿಯಲ್ಲಿ ಹೊಗಳುಭಟನೆಂದು ಆಕೆಯು ಹೇಳುವುದು ನಿಜವೇನು? ಆ ಶರ್ಮಿಷ್ಠೆಯು ತಾನು ವೃಷಪರ್ವನ ಮಗಳೆಂಬ ಅಹಂಕಾರದಿಂದ ನ್ಯಾಯನೀತಿಗಳನ್ನು ಬಿಟ್ಟು ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು, ನನ್ನನ್ನು ಕುರಿತು “ ನೀನು ನಮ್ಮ ಮುಂದೆ ನಿಂತು ಹೊಗಳುವವನೂ, ಯಾಚಕನೂ, ದಾನಗಳಿಗೆ ಕೈಯೊಡ್ಡತಕ್ಕವನೂ ಆದವನ ಮಗಳು. ನಾನಾದರೋ, ಹೊಗಳಿಸಿಕೊಳ್ಳುವವನೂ, ಕೊಡತಕ್ಕವನೂ, ದಾನಗಳಿಗೆ ಕೈನೀಡದವನೂ ಆದವನ ಮಗಳು ” ಎಂದು ಗರ್ವದಿಂದ ಕರ್ಣಕಠೋರವಾದ ಮಾತುಗಳನ್ನಾಡಿದಳು. ಆ ವೃಷಪರ್ವನ ಮಗಳು ಒಂದು ಸಾರಿಯಲ್ಲ! ಎರಡು ಸಾರಿಯಲ್ಲ! ಅನೇಕಾವರ್ತಿ ನನ್ನನ್ನು ನೋಡಿ ಗರ್ವದಿಂದ ಇದೇ ಮಾತುಗಳನ್ನಾಡಿರುವಳು. ಅಪ್ಪಾ! ಅದೂ ಹೋಗಲಿ! ಆಮೇಲೆ ನಾನೇ ಅವಳಿಗೆ ತಗ್ಗಿಹೋಗಿ, ನಾನು ಆಕೆಯೊಡನೆ “ ನಾನು ಸ್ತೋತ್ರಮಾಡತಕ್ಕವನ ಮತ್ತು ದಾನಗಳಿಗೆ ಕೈನೀಡುವವನ ಮಗಳೇ ಆಗುವೆನು. ನನ್ನಲ್ಲಿ ದಯೆಯಿಡು. ನಿನ್ನನ್ನು ಕೇಳಿಕೊಳ್ಳುವೆ ”ನೆಂದು ಅವಳಿಗೆ ಎಷ್ಟೋ ಸಾರಿ ಹೇಳಿದೆನು. ಅಷ್ಟು ಹೇಳಿದರೂ ನಿಷ್ಕಾರುಣ್ಯದಿಂದ ಆಕೆಯು, ನಿರ್ಜನವಾದ ಅರಣ್ಯದ ನಡುವೆ ಒಂದು ಬಾವಿಯಲ್ಲಿ ನನ್ನನ್ನು ನೂಕಿ ಮನೆಗೆ ಹೋದಳು ” ಎಂದಳು. ಶುಕ್ರಾಚಾರ್ಯನು ಈ ಮಾತುಗಳನ್ನು ಕೇಳಿ, “ ದೇವಯಾನೀ! ನೀನು ಸ್ತುತಿಪಾಠಕನೂ, ಯಾಚಕನೂ, ದಾನಗಳಿಗೆ ಕೈಯೊಡ್ಡತಕ್ಕವನೂ ಆದವನ ಮಗಳಲ್ಲ! ಪರರನ್ನು ಸ್ತುತಿಸದೆ, ಎಲ್ಲರಿಂದ ಹೊಗಳಿಸಿಕೊಳ್ಳುವವನ

ಮಗಳೇ! ನಾನೇ ಇದನ್ನು ಹೇಳಿಕೊಳ್ಳಬೇಕಾಗಿಲ್ಲ. ವೃಷಪರ್ವನಿಗೂ ಇದು ಚೆನ್ನಾಗಿ ತಿಳಿಯುವುದು. ದೇವೇಂದ್ರನಿಗೂ ತಿಳಿಯುವುದು. ನಹುಷಪುತ್ರನಾದ ಯಯಾತಿಗೂ ಇದು ತಿಳಿದಿದೆ. ಅಚಿಂತ್ಯವೂ, ಈಶ್ವರನಿಂದ ಅನುಗ್ರಹಿಸಲ್ಪಟ್ಟುದೂ ಆದ ನನ್ನ ಮಂತ್ರವೇ ನನಗೆ ಅಸಮಾನವಾದ ಬಲವು. ಲೋಕದಲ್ಲಿ ಯಾವಾಗಲೂ ನಾಶಹೊಂದದ ಸಂಜೀವನೀಯೆಂಬ ವಿದ್ಯೆಯು ನನಗೆ ಚೆನ್ನಾಗಿ ಗೊತ್ತಿದೆ. ಆ ವಿದ್ಯೆಯ ಸಹಾಯದಿಂದ, ಸತ್ತ ಜಂತುಗಳನ್ನು ನಾನು ಮತ್ತೆ ಬದುಕಿಸಬಲ್ಲೆನು. ಸಜ್ಜನರು ತಮ್ಮ ಗುಣಗಳನ್ನು ತಾವೇ ಹೊಗಳಿಕೊಳ್ಳುವುದರಿಂದ ಆಮೇಲೆ ಪಶ್ಚಾತ್ತಾಪಪಡಬೇಕಾಗುವುದು. ಆದುದರಿಂದ ನನ್ನ ಬಲವನ್ನು ನಾನೇ ಹೊಗಳಿಕೊಳ್ಳಬಾರದು. ನನ್ನ ಶಕ್ತಿಯು ನಿನಗೂ ತಿಳಿದೇ ಇರಬಹುದು. ನಾನು ಹೊಸದಾಗಿ ತಿಳಿಸಬೇಕಾದುದಿಲ್ಲ. ಕುಲಕ್ಕೆ ಕೀರ್ತಿಯನ್ನು ತರುವ ಎಲೆ ವತ್ಸೇ! ಓ ವಿಶಾಲಾಕ್ಷೀ! ನನ್ನ ಬಲವನ್ನು ನೀನು ತಿಳಿದಿರುವಾಗ ಹೀಗೇಕೆ ದುಃಖಿಸುವೆ. ಬಾ! ಸಂತೋಷದಿಂದ ಮನೆಗೆ ಹೋಗುವೆವು. ಸತ್ಪುರುಷರಿಗೆ ಕ್ಷಮೆಯೇ ಬಲವು. ಭೂಮಿಯಲ್ಲಿಯೂ, ಸ್ವರ್ಗದಲ್ಲಿಯೂ ಇತರ ಸ್ಥಳಗಳಲ್ಲಿಯೂ ಇರುವವರೆಲ್ಲರಿಗೂ ನಾನು ಪ್ರಭುವೆಂದು ಬ್ರಹ್ಮನೇ ಸಂತೋಷದಿಂದ ನನ್ನನ್ನು ಕುರಿತು ಹೇಳಿರುವನು. ನಾನು ಲೋಕಕ್ಷೇಮಕ್ಕಾಗಿ ಮಳೆಯನ್ನೂ ಸುರಿಸಬಲ್ಲೆನು. ಎಲ್ಲಾ ಔಷಧಿಗಳನ್ನೂ ವೃದ್ಧಿಮಾಡುವೆನು. ಇದನ್ನು ನಾನು ನಿನಗೆ ಸತ್ಯವಾಗಿ ಹೇಳುವೆನೆಂದು ತಿಳಿ" ಎಂದನು. ಹೀಗೆ ಶುಕ್ರಾಚಾರ್ಯನು ದುಃಖಕೋಪಗಳಿಂದ ಕುದಿಯುತಿದ್ದ ತನ್ನ ಮಗಳಿಗೆ ಹಿತವಾಕ್ಯಗಳನ್ನಾಡಿ, ಸಮಾಧಾನಪಡಿಸಿದನು.

ಇದು ಎಪ್ಪತ್ತೆರಡನೆಯ ಅಧ್ಯಾಯವು.



## ಶುಕ್ರ ದೇವಯಾನಿಯರ ಸಂವಾದಗಳು.

ಶುಕ್ರನು ದೇವಯಾನಿಗೆ ಇನ್ನೂ ಅನೇಕ ನೀತಿವಾಕ್ಯಗಳನ್ನು ಬೋಧಿಸುತ್ತ “ ಕುಮಾರೀ! ತನ್ನನ್ನು ಕುರಿತು ಬೇರೆಯವರು ಆಡುವ ನಿಂದಾವಾಕ್ಯಗಳನ್ನು ಯಾವನು ಅಧಿಕಶಾಂತತೆಯಿಂದ ಸಹಿಸುವನೋ, ಆತನೇ ಈ ಲೋಕವನ್ನೆಲ್ಲ ಜಯಿಸಿದವನೆಂದು ತಿಳಿ. ದುಷ್ಟಾಶ್ವವನ್ನು ಸ್ವಾಧೀನದಲ್ಲಿಟ್ಟುಕೊಂಡು ನಡೆಸುವವನೇ ಒಳ್ಳೇ ಸಾರಥಿಯೆಂದು ಸಜ್ಜನರು ಹೇಳುವರಲ್ಲದೆ, ಸುಮ್ಮನೆ ಕೈಯಲ್ಲಿ ಕಡಿವಾಣಹಿಡಿದವರನ್ನೆಲ್ಲ ಸಾರಥಿಯೆಂದು ಕರೆಯುವುದಿಲ್ಲ. ಮಿತಿಮೀರಿ ಬಂದ ಕೋಪವನ್ನು ಅಡಗಿಸಿಕೊಳ್ಳುವುದರಲ್ಲಿ ಯಾವನು ಶಕ್ತನೋ, ಅವನೇ ಲೋಕವನ್ನೆಲ್ಲ ಜಯಿಸಿದವನೆಂದು ತಿಳಿ. ಹಾವು ತನ್ನ ಹಳೆಯ ಚರ್ಮವನ್ನು ಸುಲಿದು ಬಿಸುಡುವಂತೆ, ಯಾವನು ಕೋಪವನ್ನು ಕ್ಷಮೆಯಿಂದ ನಿಗ್ರಹಿಸಬಲ್ಲನೋ ಅವನೇ ಪುರುಷನು. ಯಾವನು ಕೋಪವನ್ನು ಅಡಗಿಸಿಕೊಳ್ಳುವನೋ, ಯಾವನು ನಿಂದೆಗಳನ್ನು ಸಹಿಸುವನೋ, ಇತರರು ವ್ಯಾಕುಲವನ್ನುಂಟುಮಾಡಿದರೂ ವ್ಯಸನಕ್ಕೆ ಯಾವನು ಗುರಿಯಾಗದಿರುವನೋ ಅವನೇ ಕಾರ್ಯಸಿದ್ಧಿಗೆ ಪಾತ್ರನಾಗುವನು. ನೂರುವರ್ಷಗಳವರೆಗೆ ಪ್ರತಿಮಾಸದಲ್ಲಿಯೂ ಕಷ್ಟಕ್ಕೆ ಹಿಂಜರಿಯದೆ ಯಾಗಮಾಡತಕ್ಕವನೂ, ಯಾವ ಸಂದರ್ಭದಲ್ಲಿಯೂ ಕೋಪಿಸಿಕೊಳ್ಳದವನೂ, ಇವರಿಬ್ಬರಲ್ಲಿ ಕೋಪಿಸಿಕೊಳ್ಳದಿರತಕ್ಕವನೇ ಶ್ರೇಷ್ಠನು. ಆದುದರಿಂದ ಕೋಪವಿಲ್ಲದವನೇ ಎಲ್ಲರಿಗಿಂತಲೂ ಮೇಲಾದವನು. ಕಾಮಕ್ರೋಧಗಳೆರಡೂ ನಿಂದ್ಯಗಳು. ಆದುದರಿಂದ ಎಲೆ ಭದ್ರೆ! ಕೋಪವನ್ನು ಬಿಟ್ಟವನಿಗೇ ಯಜ್ಞ, ದಾನ, ತಪಸ್ಸು, ಇವೆಲ್ಲ ಅಧಿಕಫಲಕಾರಿಗಳೇ ಹೊರತು, ಕೋಪಿಸಿಕೊಳ್ಳತಕ್ಕವನಿಗೆ ಇವೊಂದೂ ಫಲಪ್ರದಗಳಲ್ಲ. ಯಾವನು ಕೋಪಕ್ಕೆ ಗುರಿಯಾಗುವನೋ ಅವನು ಯತಿಯೂ ಅಲ್ಲ! ತಪಸ್ವಿಯೂ ಅಲ್ಲ! ಯಜ್ಞಶೀಲನೂ ಅಲ್ಲ! ಆತನು ಯಾವ ಧರ್ಮಕ್ಕೂ ಭಾಗಿಯಲ್ಲ. ಆತನಿಗೆ ಇಹಪರಗಳೆರಡೂ ಇಲ್ಲ. ಕೋಪಸ್ವಭಾವವುಳ್ಳವನಿಗೆ ಮಗನೂ, ಸೇವಕನೂ, ಸ್ನೇಹಿತರೂ, ಸಹೋದರರೂ, ಹೆಂಡತಿಯೂ, ಧರ್ಮವೂ ಎಲ್ಲವೂ ತೊಲಗಿಹೋಗುವುವು. ಇದು ನಿಶ್ಚ

ಯುವು. ಒಂದುವೇಳೆ ಅರಿಯದ ಹುಡುಗರೂ, ಹುಡುಗಿಯರೂ ಬುದ್ಧಿ ಗೆಟ್ಟು ವೈರವನ್ನು ತಾಳಬಹುದು. ಮಕ್ಕಳಿಗೆ ಕೋಪ, ತಾಳ್ಮೆ ಇವುಗಳ ಬಲಾಬಲಗಳು ತಿಳಿಯುವು. ಪ್ರಾಜ್ಞರಾದವರು ಅದನ್ನನುಸರಿಸಬಾರದು" ಎಂದನು.

ಇದನ್ನು ಕೇಳಿ ದೇವಯಾನಿಯು "ಅಪ್ಪಾ! ನಾನಿನ್ನೂ ಚಿಕ್ಕ ವಯಸ್ಸಿನ ಬಾಲಿಕೆಯಾಗಿದ್ದರೂ, ನನಗೂ ಧರ್ಮಸೂಕ್ಷ್ಮವು ತಿಳಿಯದೇ ಇಲ್ಲ! ಸಹನೆಗೂ, ನಿಂದೆಗೂ ಇರುವ ಬಲಾಬಲಗಳನ್ನು ನಾನೂ ಬಲ್ಲೆನು. ಆದರೆ, ಸ್ವವೃತ್ತಿಯನ್ನು ನಡೆಸದೆ ಧರ್ಮವನ್ನು ಬಿಟ್ಟು, ಅಶಿಷ್ಯನಂತೆ ವರ್ತಿಸುವ ಶಿಷ್ಯನಲ್ಲಿ ಕ್ಷಮೆಯನ್ನು ತೋರಿಸಿ, ಅದರಿಂದ ಮೇಲ್ಮೆಯನ್ನು ಕೋರುವುದು ನ್ಯಾಯವಲ್ಲ. ಹೇಳಿದ ಮಾತಿನಂತೆ ನಡೆನಬೇಕಾದ ಶಿಷ್ಯನು ತನ್ನ ಧರ್ಮವನ್ನು ಬಿಟ್ಟುಹೋದರೆ ಅಪ್ರಯೋಜಕನೇ ಆಗುವನು. ಆದುದರಿಂದ ನಡವಳಿಕೆತಪ್ಪಿದವರ ಮಧ್ಯದಲ್ಲಿರುವುದು ನನಗೆ ಎಂದಿಗೂ ಸರಿಬೀಳದು. ಯಾರು ತಮ್ಮ ಆಸ್ತಿಯಿಂದಲೂ, ತಾವೇ ದೊಡ್ಡವರೆಂಬ ಹೆಮ್ಮೆಯಿಂದಲೂ ಇತರರನ್ನು ನಿಂದಿಸುವರೋ, ಅಂತಹ ಪಾಪಬುದ್ಧಿಯುಳ್ಳವರ ನಡುವೆ ಶ್ರೇಯಃಕಾಂಕ್ಷಿಗಳಾದ ಯಾವ ಪ್ರಾಜ್ಞರೂ ವಾಸಿಸಲಾರರು. ನಡೆವಳಿಕೆಯಿಂದಲೂ, ಕುಲದಿಂದಲೂ ಯಾರು ಯಾರನ್ನು ಸರಿಯಾಗಿ ಆದರಿಸುವರೋ ಆ ಸಾಧುಗಳನಡುವೆ ವಾಸಿಸಬಹುದು. ಅಂತಹ ಸಹವಾಸವೇ ಉತ್ತಮವಾದುದು. ಧನವಿಲ್ಲದ ದರಿದ್ರರಾದರೂ ತಮ್ಮನ್ನು ತಾವು ಅಡಗಿಸಿಕೊಳ್ಳುವರೇ ಮೇಲು. ಕೆಟ್ಟ ನಡೆವಳಿಕೆಯುಳ್ಳವರಾಗಿ ಪಾಪಕೃತ್ಯಗಳನ್ನು ಮಾಡುತ್ತಿರುವವರು ಧನವಂತರಾದರೂ ಚಂಡಾಲರೇ. ಜನ್ಮದಿಂದ ಮಾತ್ರವೇ ಚಂಡಾಲರಾಗುವುದಿಲ್ಲ. ತಮಗೆ ಯೋಗ್ಯವಾದುದನ್ನು ಬಿಟ್ಟು, ಕುಲ, ಧನ, ವಿದ್ಯೆ ಎಂಬಿವುಗಳಲ್ಲಿ ಆಶೆಯಿಟ್ಟವರು ಚಂಡಾಲರಿಗ ಸಮಾನರೇ! ಅಂತವರು ಕಾರಣವಿಲ್ಲದೆ ಪರರನ್ನು ದ್ವೇಷಿಸುವರು. ಇತರನ್ನು ದೂಷಿಸುವರು. ಅಂತವರ ಮಧ್ಯದಲ್ಲಿ ಸಜ್ಜನರು ಕ್ಷಣಮಾತ್ರವೂ ವಾಸಮಾಡಬಾರದು. ಪಾಪಿಗಳೊಡನೆ ವಾಸಿಸಿದವರೆಲ್ಲರೂ ಪಾಪಿಗಳೇ ಆಗುವರು. ಪುಣ್ಯಪಾಪಗಳೆರಡರಲ್ಲಿ ಯಾವನು ಯಾವ ದಾರಿಯಲ್ಲಿ

ಬಿದ್ದರೆ, ಅವನಿಗೆ ಅದಕ್ಕನುಗುಣವಾದ ಆಶೆಯೇ ತಪ್ಪದೆ ಉಂಟಾಗು ವುದು. ಆದುದರಿಂದ ಪಾಪಮಯವಾದ ದ್ವೇಷವನ್ನು ತೋರಿಸಬಾರದು. ವೃಷಪರ್ವನ ಮಗಳು ನನ್ನಲ್ಲಿ ಆಡಿದ ನಿಂದಾವಾಕ್ಯಗಳು ಬಹಳ ಘೋರ ವಾಗಿದ್ದುದರಿಂದ, ಅಗ್ನಿಯನ್ನು ಕೋರತಕ್ಕವನು ಅರಣಿಯನ್ನು ಜಿಜ್ಞದರೆ ಹೇಗೋ ಹಾಗೆ ಅವು ನನ್ನ ಮನಸ್ಸನ್ನು ದಹಿಸಿ ಕಲಗಿಸುತ್ತಿವೆ. ನಮ್ಮ ಬಡತನಕ್ಕಾಗಿ ನಾವು ಅವರ ಸೇವೆಮಾಡಿ ಸದಾ ಸ್ತೋತ್ರಮಾಡುತ್ತಿರುವೆ ವಂತೆ. ಭಾಗ್ಯಹೀನನಾದರೂ, ಯಾವನು ತನ್ನ ಪ್ರತಿಪಕ್ಷದವಳಲ್ಲಿ ಬೆಳಗು ತ್ತಿರುವ ಐಶ್ವರ್ಯಕ್ಕಾಗಿ ಕಾದಿರುವನೋ ಅವನಿಗಿಂತಲೂ ಹೀನನೊಬ್ಬನೂ ಇಲ್ಲ. ಅದಕ್ಕಿಂತಲೂ ಬೇರೆ ಹೀನಕಾರ್ಯವು ಮೂರು ಲೋಕದಲ್ಲಿಯೂ ಇಲ್ಲವೆಂದೇ ನನಗೆ ತೋರುವುದು. ಅದಕ್ಕಿಂತ ಮರಣವೇ ಮೇಲೆಂದೂ ವಿದ್ವಾಂಸರು ಹೇಳುವರು. ನೀಚರ ಸೇವೆಯಲ್ಲಿರತಕ್ಕವರು ಕಾಲಕ್ರಮದಲ್ಲಿ ಅವಮಾನಕ್ಕೆ ಗುರಿಯಾಗುವುದೇ ನಿಶ್ಚಯವು. ನೀಚರ ಬಾಯಿಗಳಿಂದ ನಿಂದೆಯ ಮಾತುಗಳೇ ಹೊರಬೀಳುವುವು. ಅಂತಹ ಮಾತುಗಳಿಂದ ಬಾಧಿತನಾದವನು ಹಗಲು ರಾತ್ರಿಯೂ ದುಃಖಿಸುತ್ತಲೇ ಇರುವನು. ಆ ವಾಕ್ಯಗಳು ಮರ್ಮಸ್ಥಾನಗಳಲ್ಲಿಯೇ ನಾಟಿಕೊಳ್ಳುವುವು. ಆದುದರಿಂದ ಬುದ್ಧಿಶಾಲಿಗಳಾದವರು ಇತರರನ್ನುದ್ದೇಶಿಸಿ ಇಂತಹ ಮಾತುಗಳನ್ನಾಡ ಬಾರದು. ಆಯುಧಗಳಿಂದ ಕಡಿದ ಗಾಯಗಳೂ ಗುಣವಾಗುವುವು. ಬೆಂಕಿಯಿಂದ ಸುಟ್ಟ ಗಾಯಗಳೂ ಆರಿಹೋಗುವುವು. ಮಾತುಗಳಿಂದಾದ ಗಾಯಗಳಾದರೋ ಪ್ರಾಣಿಗಳಿಗೆ ದೇಹವಿರುವವರೆಗೂ ಆರುವುದಿಲ್ಲ. ಬಾಣದಿಂದ ಭೇದಿಸಲ್ಪಟ್ಟ ಮತ್ತು ಕೊಡಲಿಯಿಂದ ಕಡಿಯಲ್ಪಟ್ಟ ವನವು ಮತ್ತೆ ಬೆಳೆಯುವುದು. ದುರ್ವಾಕ್ಯಗಳಿಂದಾದ ವ್ರಣವು ಮಾತ್ರ ಆರು ವುದೇ ಇಲ್ಲ'' ಎಂದಳು.

ಇದು ಎಪ್ಪತ್ತುಮೂರನೆಯ ಅಧ್ಯಾಯವು.



ಶುಕ್ರವೃಷಪರ್ವರ ಸಂಭಾಷಣಗಳು. ವೃಷಪರ್ವನ ಆಜ್ಞೆ ಯಂತೆ ಶರ್ಮಿಷ್ಠೆಯು ದೇವಯಾನಿಗೆ ದಾಸಿಯಾದುದು. ಶುಕ್ರನು ದೇವಯಾನಿಯೊಡನೆ ಪುರವನ್ನು ಪ್ರವೇಶಿಸಿದುದು.

ಆಮೇಲೆ ಶುಕ್ರನು ಸಿಂಹಾಸನಾಸೀನನಾದ ವೃಷಪರ್ವನ ಬಳಿಗೆ ಹೋಗಿ, ಕೋಪಾವೇಶದಿಂದ ಹಿಂದುಮುಂದು ನೋಡದೆ, ಆತನನ್ನು ಕುರಿತು “ ಮಾಡಿದ ಪಾಪವು ಸಾಕಿದ ಹಸುವಿನಂತೆ ಮನುಷ್ಯನಿಗೆ ಒಡನೆಯೇ ಫಲವನ್ನು ಕೊಡುವುದಿಲ್ಲ. ತಿರುಗಿತಿರುಗಿ ಅದೇ ಮಾರ್ಗಕ್ಕೆ ಅವನನ್ನೆಳೆದು ಕಾಲಕ್ರಮದಲ್ಲಿ ಪರಿಪಾಕಹೊಂದಿ, ಪಾಪಮಾಡಿದವನನ್ನು ಸಮೂಲವಾಗಿ ನಾಶಮಾಡಿಬಿಡುವುದು. ಒಂದುವೇಳೆ ಅದು ಹಾಗೆ ದುಷ್ಕರ್ಮಮಾಡಿದವನಲ್ಲಿಯೇ ಫಲಿಸದೆಹೋದರೂ, ಅವನ ಮಕ್ಕಳಲ್ಲಿಯಾಗಲಿ, ಮೊಮ್ಮಕ್ಕಳಲ್ಲಿಯಾಗಲಿ ತಪ್ಪದೆ ಫಲವನ್ನು ತೋರಿಸುವುದು. ಅಧಿಕವಾಗಿ ತಿಂದ ಆಹಾರವು ಹೊಟ್ಟೆಯಲ್ಲಿ ಹೇಗೆ ತನ್ನ ಗುಣವನ್ನು ತೋರಿಸದೆ ಬಿಡದೋ, ಹಾಗೆಯೇ ಅದು ನಿಶ್ಚಯವಾಗಿಯೂ ತನ್ನ ಫಲವನ್ನು ತೋರಿಸದೆ ಬಿಡದು. ರಾಜಾ! ಕಚನು ನನ್ನ ಮನೆಯಲ್ಲಿ ಓದುತ್ತಿದ್ದವನು. ನನಗೆ ಪ್ರಿಯನಾದವನು. ಗಂಭೀರಸ್ವಭಾವವುಳ್ಳವನು. ಜಿತೇಂದ್ರಿಯನು, ಪಾಪರಹಿತನು, ಧರ್ಮಗಳನ್ನು ತಿಳಿದವನು. ನನ್ನ ಗೃಹದಲ್ಲಿಯೇ ಇದ್ದು ಭಕ್ತಿಯಿಂದ ನನಗೆ ಶುಶ್ರೂಷೆಮಾಡುತ್ತಿದ್ದವನು. ಮತ್ತು ಬೃಹಸ್ಪತಿಕುಮಾರನು. ಆ ಬ್ರಾಹ್ಮಣನನ್ನು ನೀನು ಕೊಲ್ಲಿಸಿದೆ! ಅದೂ ಹಾಗಿರಲಿ! ಪ್ರಭೂ! ನಮ್ಮ ದೇವಯಾನಿಯೋ ಮಾನವತಿ! ನಿನ್ನ ಮಗಳಾದ ಶರ್ಮಿಷ್ಠೆಯು ಅವಳಲ್ಲಿ ವಿರೋಧಿಸಿ, ನಿಷ್ಠುರೋಕ್ತಿಗಳನ್ನಾಡಿ, ಕೋಪದಿಂದ ಆಕೆಯನ್ನು ಬಾವಿಗೂ ತಳ್ಳಿದಳು. ಆದುದರಿಂದ ನನ್ನ ಮಗಳಾದ ದೇವಯಾನಿಯು ಇನ್ನುಮೇಲೆ ಇಲ್ಲಿ ವಾಸಮಾಡುವುದಕ್ಕೆ ಇಷ್ಟಪಡಳು. ಆಕೆಯನ್ನು ಬಿಟ್ಟು ನಾನುಮಾತ್ರ ಇಲ್ಲಿ ಹೇಗೆ ಜೀವಿಸಲಿ? ರಾಜಾ! ನಾನೂ ನಿನ್ನ ದೇಶವನ್ನು ಬಿಟ್ಟುಹೋಗುವೆನು. ನಾನು ಕಾರಣವಿಲ್ಲದೆ ಹೋಗುವವನಲ್ಲ. ನೀನು ಕೊಲ್ಲಬಾರದ ಬ್ರಾಹ್ಮಣಬಾಲಕನನ್ನು ಕೊಲ್ಲಿಸಿದೆ. ನಿನ್ನ ಮಗಳೂ ಈಗ ನನ್ನ ಮಗಳನ್ನು ಕೊಲ್ಲಲು ಯತ್ನಿಸಿದಳು.

ಇದರಿಂದ ನಾನು ನಿನ್ನನ್ನೂ, ನಿನ್ನ ಬಂಧುಬಳಗವನ್ನೂ ತ್ಯಜಿಸುವೆನು. ಎಲೈ ರಾಜನೇ ! ಇನ್ನು ನಿನ್ನ ದೇಶದಲ್ಲಿ ನಿನ್ನೊಡನೆ ವಾಸಿಸುವುದು ನನಗೆ ಸರಿಬೀಳದು. ಆದರೆ, ಇದಕ್ಕಾಗಿ ನೀನು ವ್ಯಸನಪಡಬೇಡ. ನನ್ನಲ್ಲಿ ಕೋಪಿಸಿಕೊಳ್ಳಬೇಡ. ದೇವಯಾನಿಯನ್ನು ಬಿಟ್ಟು ನಿನ್ನ ದೇಶದಲ್ಲಿ ವಾಸಮಾಡುವುದು ನನಗೆ ಸಾಧ್ಯವಿಲ್ಲ. ಆಕೆಯಿರುವ ಸ್ಥಳವೇ ನನ್ನ ಸ್ಥಳವು. ಆಕೆಯ ಪ್ರಿಯವೇ ನನಗೂ ಪ್ರಿಯವು '' ಎಂದನು.

ಅದಕ್ಕೆ ವೃಷಪರ್ವನು '' ಬ್ರಾಹ್ಮಣೋತ್ತಮಾ ! ಈ ವಿಷಯದಲ್ಲಿ ನನ್ನ ಅಪರಾಧವೇನಿದೆ? ಶರ್ಮಿಷ್ಠೆಯಿಂದ ದೇವಯಾನಿಯನ್ನು ನಾನು ಹೊಡೆಯಿಸಿದ್ದರೂ, ದೂಷಿಸಿದ್ದರೂ, ನಾನು ಹೀನಗತಿಗೆ ಹೋಗುವೆನು '' ಎಂದನು. ಆಗ ಶುಕ್ರನು '' ಈಗಿನ ನಿನ್ನ ದೋಷಕ್ಕೆ ನೀನು ಪರಿಹಾರವನ್ನು ಮಾಡದೆ ಉಪೇಕ್ಷಿಸುತ್ತಿರುವುದನ್ನು ನೋಡಿದರೆ, ನಾನೇ ಸುಳ್ಳಾಡುವೆನೆಂದು ನೀನು ಹೇಳುವಂತಿದೆ '' ಎಂದನು. ಅದಕ್ಕೆ ವೃಷಪರ್ವನು '' ಭೃಗುಪುತ್ರಾ ! ನಿನ್ನಲ್ಲಿ ಅಧರ್ಮವಾಗಲಿ, ಅಸತ್ಯವಾಗಲಿ ಇರುವುದೆಂದು ನಾನು ಹೇಳಲಿಲ್ಲ. ನಿನ್ನಲ್ಲಿ ಧರ್ಮವೂ, ಸತ್ಯವೂ ನೆಲೆಗೊಂಡಿವೆ. ನೀನು ನಮ್ಮನ್ನು ಬಿಟ್ಟುಹೋಗುವುದಾದರೆ, ನೀನು ಹೋಗುವುದಕ್ಕೆ ಮುಂಚೆಯೇ ನಾನೂ, ನನ್ನ ಬಂಧುಗಳೂ, ಸಮುದ್ರವನ್ನಾಗಲಿ, ಪಾತಾಳವನ್ನಾಗಲಿ, ಅಗ್ನಿಯನ್ನಾಗಲಿ ಪ್ರವೇಶಿಸುವೆವು. ನಮಗೆ ಬೇರೆ ಗತಿಯಿಲ್ಲ. ಗ್ರಹಗಳಲ್ಲಿ ಶ್ರೇಷ್ಠನಾದ ಓ ಶುಕ್ರಾಚಾರ್ಯ ! ನೀನು ನಮ್ಮನ್ನು ಬಿಟ್ಟು ದೇವತೆಗಳ ಪಕ್ಷವನ್ನು ಸೇರಿದರೆ, ನಾನು ಸಮಸ್ತವನ್ನೂ ಬಿಟ್ಟು ಅಗ್ನಿಯಲ್ಲಿ ಬೀಳುವೆನು '' ಎಂದನು. ಶುಕ್ರಾಚಾರ್ಯನು '' ಅಸುರರೇ ! ನೀವು ಸಮುದ್ರದಲ್ಲಿಯಾದರೂ ಬೀಳಿರಿ ! ದಿಕ್ಕುಗೆಟ್ಟು ಓಡಿಹೋದರೂ ಹೋಗಿರಿ ! ನನ್ನ ಮಗಳ ದುಃಖವನ್ನು ನಾನು ಸಹಿಸಲಾರೆನು. ಅವಳು ನನಗೆ ಬಹಳ ಪ್ರಿಯಪಾತ್ರಳು. ದೇವಯಾನಿಯನ್ನು ನೀನೇ ಹೋಗಿ ಸಮಾಧಾನಪಡಿಸಿ ಬಾ ! ನನ್ನ ಪ್ರಾಣವೇ ಅವಳಲ್ಲಿರುವುದು. ಹಾಗೆ ಮಾಡಿದರೆಮಾತ್ರ ಬೃಹಸ್ಪತಿಯು ಇಂದ್ರನಿಗೆ ಹೇಗೋ ಹಾಗೆ ನಾನೂ ನಿನಗೆ ಕ್ಷೇಮವನ್ನುಂಟುಮಾಡುವೆನು '' ಎಂದನು. ವೃಷಪರ್ವನು

“ಭೃಗುಪುತ್ರಾ! ಅಸುರೇಂದ್ರರಲ್ಲಿ ಯಾವಯಾವ ವಸ್ತುಗಳುಂಟೋ, ಮತ್ತು ಭೂಮಿಯಲ್ಲಿ ಆನೆ, ಕುದುರೆ, ಗೋಧನ, ಮೊದಲಾದುವು ಯಾವುವುಂಟೋ ಅವೆಲ್ಲಕ್ಕೂ ನೀನೇ ಪ್ರಭು. ನಾನಲ್ಲ. ನನಗೂ ನೀನೇ ಪ್ರಭು. ನನ್ನನ್ನು ಮನ್ನಿಸು” ಎಂದನು. ಅದನ್ನು ಕೇಳಿ ಶುಕ್ರನು “ಅಸುರೇಂದ್ರಾ! ಅಸುರರಾಜರ ಧನಕ್ಕೂ ಮತ್ತು ನಿನಗೂ ನಾನು ಪ್ರಭುವೆಂಬುದು ನಿಜವಾಗಿದ್ದರೆ, ಈ ನನ್ನ ಆಜ್ಞೆಯನ್ನು ನೀನು ಈಗಲೇ ನಡಿಸಬೇಕು. ದೇವಯಾನಿಯನ್ನು ನೀನು ಹೋಗಿ ಸಮಾಧಾನಪಡಿಸು” ಎಂದನು. ಅದಕ್ಕೆ ವೃಷಪರ್ವನು ‘ಹಾಗೆಯೇ ಆಗಲೆಂದು’ ಒಪ್ಪಲು ಶುಕ್ರನು ದೇವಯಾನಿಯ ಬಳಿಗೆ ಬಂದು ವೃಷಪರ್ವನು ಹೇಳಿದುದೆಲ್ಲವನ್ನೂ ತಿಳಿಸಿದನು.

ಆಗ ದೇವಯಾನಿಯು ತಂದೆಯನ್ನು ಕುರಿತು “ಅಪ್ಪಾ! ಆ ರಾಜನ ಧನಕ್ಕೆಲ್ಲ ನೀನೇ ಪ್ರಭುವಾಗಿರುವೆಯೆಂದು ನೀನು ಹೇಳಿದಮಾತ್ರಕ್ಕೆ ನಾನು ನಂಬಲಾರೆನು. ಅದನ್ನು ರಾಜನೇ ನನಗೆ ತಿಳಿಸಲಿ” ಎಂದಳು. ಶುಕ್ರನು ದೇವಯಾನಿಯು ಹೇಳಿದುದನ್ನು ವೃಷಪರ್ವನಿಗೆ ತಿಳಿಸಲು, ಆತನು ತನ್ನ ಬಂಧುಗಳೊಡನೆ ದೇವಯಾನಿಯ ಸಮೀಪಕ್ಕೆ ಹೋಗಿ ‘ದೇವಯಾನೀ! ಪ್ರಸನ್ನಳಾಗು’ ಎಂದು ನೆಲದಮೇಲೆ ಬಿದ್ದು, ಆಕೆಯ ಪಾದಗಳಿಗೆ ನಮಸ್ಕರಿಸಿ “ಕಲ್ಯಾಣೀ! ನಿನ್ನ ತಂದೆಯೇ ಯಾವಾಗಲೂ ನನ್ನಿಂದ ಸ್ತೋತ್ರನಮಸ್ಕಾರಗಳನ್ನು ಮಾಡಿಸಿಕೊಳ್ಳತಕ್ಕವನು. ನೀನು ಯಾವುದನ್ನಪೇಕ್ಷಿಸಿದರೂ, ಅದು ಎಷ್ಟು ದುರ್ಲಭವಾಗಿದ್ದರೂ ಅದನ್ನು ನಾನು ನಿನಗೆ ಕೊಡುವೆನು” ಎಂದನು. ಅದಕ್ಕೆ ದೇವಯಾನಿಯು “ಶರ್ಮಿಷ್ಠೆಯು ತನ್ನ ಸಾವಿರಮಂದಿ ಸಖಿಯರೊಡನೆ ನನಗೆ ದಾಸಿಯಾಗಬೇಕು. ನನ್ನನ್ನು ನನ್ನ ತಂದೆಯು ಎಲ್ಲಿಗೆ ಮದುವೆಮಾಡಿ ಕೊಡುವನೋ, ಅಲ್ಲಿಗೂ ಅವರು ನನ್ನೊಡನೆ ಬಂದು ನನ್ನ ಸೇವೆಮಾಡುತ್ತಿರಬೇಕು” ಎಂದಳು. ಆಗ ವೃಷಪರ್ವನು ಧಾತ್ರಿಯನ್ನು ನೋಡಿ “ಧಾತ್ರೀ! ನೀನು ಹೋಗಿ ಒಡನೆ ಶರ್ಮಿಷ್ಠೆಯನ್ನು ಇಲ್ಲಿಗೆ ಕರೆದುಕೊಂಡು ಬಾ. ದೇವಯಾನಿಗೆ ಇಷ್ಟವಾದ ಕಾರ್ಯಗಳನ್ನು ಶರ್ಮಿಷ್ಠೆಯು ಮಾಡುತ್ತಿರಲಿ. ಕುಲಕ್ಷೇಮಕ್ಕಾಗಿ ಒಬ್ಬನನ್ನು ಬಿಡಬೇಕಾದುದೇ! ಒಂದು ದೇಶದ ಕ್ಷೇಮ

ಕ್ಕಾಗಿ ಒಂದು ಗ್ರಾಮವನ್ನಾದರೂ ತೊರೆದುಬಿಡಬೇಕು. ತನ್ನ ಕ್ಷೇಮ ಕ್ಕಾಗಿ ಭೂಮಿಯನ್ನೇ ಬಿಡಬೇಕು" ಎಂದನು. ದಾದಿಯು ಒಡನೆಯೇ ಶರ್ಮಿಷ್ಠೆಯ ಬಳಿಗೆ ಹೋಗಿ "ಭದ್ರೇ! ಶರ್ಮಿಷ್ಠೇ! ಏಳು. ನಿನ್ನ ಬಂಧುಗಳಿಗೆ ಕ್ಷೇಮವನ್ನುಂಟುಮಾಡು. ದೇವಯಾನಿಯ ಪ್ರೇರಣೆಯಿಂದ ಶುಕ್ರನು ನಮ್ಮನ್ನೆಲ್ಲ ತ್ಯಜಿಸುವುದರಲ್ಲಿರುವನು. ಆಕೆಯು ಅಪೇಕ್ಷಿಸು ವಂತೆ ಈಗ ನೀನು ಅವಳ ದಾಸಿಯಾಗಬೇಕು" ಎಂದಳು. ಶರ್ಮಿಷ್ಠೆಯು ಆಕೆಯನ್ನು ಕುರಿತು "ಏನು? ದೇವಯಾನಿಗಾಗಿ ಶುಕ್ರನು ನಮ್ಮನ್ನು ತ್ಯಜಿಸುವನೆ? ಹಾಗಿದ್ದರೆ ಆಕೆಯು ಯಾವುದನ್ನಪೇಕ್ಷಿಸುವಳೋ ಅದ ನ್ನು ನಾನು ಈಗಲೇ ಮಾಡುವೆನು. ನನ್ನ ತಪ್ಪಿಗಾಗಿ ಶುಕ್ರನು ಹೋಗ ಬೇಕಾದುದಿಲ್ಲ. ದೇವಯಾನಿಯೂ, ನನಗಾಗಿ ಹೊರಟುಹೋಗಬೇಕಾದು ದಿಲ್ಲ" ಎಂದಳು.

ಆಮೇಲೆ ಶರ್ಮಿಷ್ಠೆಯು ತನ್ನ ಸಾವಿರಮಂದಿ ಸಖಿಯರೊಡನೆ ಪಲ್ಲ ಕ್ಕಿಯಲ್ಲಿ ಕುಳಿತು, ತನ್ನ ತಂದೆಯ ಅಪ್ಪಣೆಯುಮೇರೆಗೆ ಅಂತಃಪುರದಿಂದ ಹೊರಟಳು. ದೇವಯಾನಿಯ ಸಮೀಪಕ್ಕೆ ಬಂದು ಆಕೆಯನ್ನು ಕುರಿತು, "ನಾನು ನನ್ನ ಸಾವಿರಮಂದಿ ಸಖಿಯರೊಡನೆ ನಿನ್ನ ದಾಸಿಯಾಗುವೆನು. ನಿನ್ನ ತಂದೆಯು ನಿನ್ನನ್ನು ಎಲ್ಲಿಗೆ ಕೊಡುವನೋ, ಅಲ್ಲಿಗೆ ನಾನೂ ನಿನ್ನೊ ಡನೆ ಬರುವೆನು" ಎಂದಳು. ಆಗ ದೇವಯಾನಿಯು "ನಾನು ನಿಮ್ಮ ನ್ನು ಸದಾ ಸ್ತುತಿಸುವವನೂ, ಯಾಚಕನೂ, ದಾನಧರ್ಮಗಳಿಗೆ ಕೈಯೊ ಡ್ಡತಕ್ಕವನೂ ಆದವನ ಮಗಳಲ್ಲವೇ?" ಎಂದಳು. ಅದನ್ನು ಕೇಳಿ ಶರ್ಮಿಷ್ಠೆಯು "ದೇವಯಾನೀ! ಬಂಧುಗಳು ದುಃಖಕ್ಕೊಳಗಾಗಿರುವಾಗ ಮಾಡಬಾರದ ಕಾರ್ಯವನ್ನು ಮಾಡಿಯಾದರೂ ಅವರಿಗೆ ಸೌಖ್ಯವನ್ನುಂಟು ಮಾಡಬೇಕಾದುದು ಧರ್ಮವು. ಆದುದರಿಂದ ನಾನು ನಿನ್ನ ದಾಸಿ! ನಿನ್ನ ತಂದೆಯು ನಿನ್ನನ್ನು ವಿವಾಹಮಾಡಿಕೊಡುವ ಸ್ಥಳಕ್ಕೂ ನಿನ್ನಹಿಂದೆ ಬರು ವೆನು" ಎಂದಳು. ರಾಜೋತ್ತಮಾ! ವೃಷಪರ್ವನ ಮಗಳು ತನಗೆ ಸೇವ ಕಿಯಾಗಿ ಬರುವಂತೆ ಪ್ರತಿಜ್ಞೆಮಾಡಿದಮೇಲೆ, ದೇವಯಾನಿಯು ತನ್ನ ತಂದೆಯನ್ನು ಕುರಿತು "ಅಪ್ಪಾ! ಇನ್ನು ನಾನು ತೃಪ್ತಳಾದೆನು. ನಿನ್ನೊ

ಡನೆ ಪಟ್ಟಣಕ್ಕೆ ಬರುವೆನು. ಬ್ರಾಹ್ಮಣೋತ್ತಮನಾದ ನಿನ್ನ ಜ್ಞಾನವೂ, ವಿದ್ಯಾಬಲವೂ ವ್ಯರ್ಥವಾಗಿ ಹೋಗುವುದಿಲ್ಲ” ಎಂದಳು. ಮಹಾಯಶಸ್ವಿಯಾದ ಆ ಬ್ರಾಹ್ಮಣಶ್ರೇಷ್ಠನು ಹೀಗೆ ತನ್ನ ಮಗಳು ಹೇಳಿದ ಮಾತುಗಳನ್ನು ಕೇಳಿ, ಎಲ್ಲಾ ಅಸುರರಿಂದಲೂ ಪೂಜಿತನಾಗಿ, ಸಂತೋಷದಿಂದ ವೃಷಪರ್ವನ ಪಟ್ಟಣಕ್ಕೆ ಬಂದನು.

ಇದು ಎಪ್ಪತ್ತುನಾಲ್ಕನೆಯ ಅಧ್ಯಾಯವು.

ಬೇಟೆಗೆ ಹೋದ ಯಯಾತಿಯು ಪುನಃ ದೇವಯಾನಿಯನ್ನು ನೋಡಿದುದು. ಶುಕ್ರಾಜ್ಞೆಯಿಂದ ಅವರಿಬ್ಬರಿಗೂ ವಿವಾಹವಾದುದು. ದೇವಯಾನೀ ಶರ್ಮಿಷ್ಠೆಯರೊಡನೆ ಯಯಾತಿಯು ಪಟ್ಟಣಕ್ಕೆ ಪ್ರವೇಶಿಸಿದುದು.

ರಾಜಶ್ರೇಷ್ಠಾ! ಕೆಲವು ಕಾಲಕ್ಕೆ ಮೇಲೆ ದೇವಯಾನಿಯು ತನ್ನ ಸಾವಿರ ಸಖಿಯರೊಡಗೂಡಿದ ಶರ್ಮಿಷ್ಠೆಯೊಡನೆ ಕ್ರೀಡಾರ್ಥವಾಗಿ ತಾವು ಹಿಂದೆ ಹೋದ ವನಕ್ಕೇ ಹೋದಳು. ಅಲ್ಲಿ ಆಕೆಯು ಆ ಸಖಿಯರೊಡನೆ ಬಹಳ ಸಂತೋಷದಿಂದ ವಿಹರಿಸುತಿದ್ದಳು. ಅವರೆಲ್ಲರೂ ಅಲ್ಲಲ್ಲಿ ಹೂವಿನಲ್ಲಿ ಜೇನನ್ನು ಸವಿನೋಡುವುದು, ಆಗಾಗ ನಾನಾವಿಧ ಭಕ್ಷ್ಯಗಳನ್ನು ಭುಜಿಸುವುದು, ಹಣ್ಣುಗಳನ್ನು ಕಚ್ಚಿ ತಿನ್ನುವುದು, ಹೀಗೆ ವಿನೋದದಿಂದ ಕಾಲಕಳೆಯುತಿದ್ದರು. ನಹುಷಪುತ್ರನಾದ ಯಯಾತಿಯು ತಿರುಗಿ ಜಿಂಕೆಯನ್ನು ಹುಡುಕಿಕೊಂಡು ಆಯಾಸಪಟ್ಟು, ಜಲಾರ್ಥಿಯಾಗಿ ಅಕಸ್ಮಾತ್ತಾಗಿ ಅಲ್ಲಿಗೇ ಬಂದು ಸೇರಿದನು. ಅಲ್ಲಿ ದೇವಯಾನಿಯೂ, ಶರ್ಮಿಷ್ಠೆಯೂ, ಅವರ ಸಖಿಯರೂ ಉತ್ತಮಾಭರಣಗಳನ್ನು ಧರಿಸಿಕೊಂಡು, ವಿನೋದದಲ್ಲಿದ್ದರು. ಆ ಸುಂದರೀಮಣಿಯರ ನಡುವೆ, ರತ್ನಾಲಂಕೃತವಾದ ಒಂದು ಉನ್ನತಾಸನದಲ್ಲಿ ಚೆಲುವಾದ ಮುಗುಳ್ನಗೆಯಿಂದ ಕೂಡಿ, ನಿರತಿಶಯವಾದ ಸೌಂದರ್ಯದಿಂದೊಪ್ಪುತಿದ್ದ ದೇವಯಾನಿಯನ್ನೂ, ಅವಳಿಗೆ ಸ್ವಲ್ಪ ತಗ್ಗಾಗಿ ಕುಳಿತು, ಆ ಬ್ರಾಹ್ಮಣಕನ್ಯೆಯ ಪಾದಗಳನ್ನು ಹಿಸುಕುತಿದ್ದ ಅಸುರರಾಜಕುಮಾರಿಯಾದ ಶರ್ಮಿಷ್ಠೆಯನ್ನೂ ಕಂಡನು. ಭರತ

ಕುಲಶ್ರೇಷ್ಠಾ! ಹಾಡುತ್ತಲೂ, ಆಡುತ್ತಲೂ, ವಾದ್ಯಗಳನ್ನು ನುಡಿಸುತ್ತಲೂ ಇದ್ದ ಆ ಬಾಲಿಕೆಯರೂಕೂಡ ಅಪ್ರತಿಮ ರೂಪವಂತನಾದ ಯಯಾತಿಯನ್ನು ನೋಡಿ, ನಾಚಿಕೆಯಿಂದ ತಲೆಬಾಗಿಸಿ ನಿಂತುಬಿಟ್ಟರು. ಆಗ ಯಯಾತಿಯು ದೇವಯಾನಿಯನ್ನು ಕುರಿತು "ಕಲ್ಯಾಣೀ! ನಿಮ್ಮಿಬ್ಬರನ್ನೂ ಸುತ್ತಿ ಎರಡುಸಾವಿರಮಂದಿ ಕನ್ಯೆಯರು ಸೇವಿಸುತ್ತಿರುವರು. ನೀವು ಯಾರು! ನಿಮ್ಮಿಬ್ಬರ ಕುಲವನ್ನೂ, ಹೆಸರನ್ನೂ ತಿಳಿಯಲಪೇಕ್ಷಿಸುವೆನು" ಎಂದನು. ಆಗ ದೇವಯಾನಿಯು "ರಾಜಾ! ಹೇಳುವೆನು ಕೇಳು. ಶುಕ್ರನೆಂಬ ದೈತ್ಯಗುರುವಿರುವನಲ್ಲವೆ! ನಾನು ಆತನ ಮಗಳು. ಈಕೆಯು ಅಸುರರಾಜನಾದ ವೃಷಪರ್ವನ ಮಗಳು. ಇವಳ ಹೆಸರು ಶರ್ಮಿಷ್ಠೆ. ಈಕೆಯು ನನಗೆ ದಾಸಿಯೂ, ಸಖಿಯೂ ಆಗಿರುವಳು. ನಾನು ಎಲ್ಲಿಗೆ ಹೋದರೂ ಅಲ್ಲಿಗೆ ಆಕೆಯು ನನ್ನೊಡನೆ ಬರತಕ್ಕವಳು" ಎಂದಳು. ಯಯಾತಿಯು ದೇವಯಾನಿಯನ್ನು ಕುರಿತು "ಅಸುರರಾಜಕುಮಾರಿಯಾದ ಈ ಸುಂದರೀಯು ನಿನಗೆ ಸಖಿಯೆಂದರೆ ಅದು ನ್ಯಾಯವೇ. ಇವಳು ನಿನಗೆ ದಾಸಿಯಾಗಿರುವುದೇಕೆ? ಇದನ್ನು ಕೇಳಲು ನನಗೆ ಕುತೂಹಲವುಂಟಾಗಿದೆ. ಇಂತಹ ರೂಪವತಿಯನ್ನು ದೇವ, ಗಂಧರ್ವ, ಯಕ್ಷ, ರಾಕ್ಷಸ, ಕಿನ್ನರ ಸ್ತ್ರೀಯರಲ್ಲಾಗಲಿ, ಭೂಲೋಕದಲ್ಲಿರುವ ಸ್ತ್ರೀಯರಲ್ಲಾಗಲಿ ನಾನು ಇದುವರೆಗೆ ನೋಡಿದುದಿಲ್ಲ. ಕಮಲ ನೇತ್ರಿಯೂ, ಸರ್ವ ಶುಭಗುಣಸಂಪನ್ನಳೂ, ಸರ್ವಾಭರಣಾಲಂಕೃತಳೂ ಆಗಿ, ಲಕ್ಷ್ಮೀದೇವಿಯಂತೆ ಪ್ರಕಾಶಿಸುತ್ತ, ಅಸುರರಾಜ ಕುವರಿಯೆನಿಸಿದ ಈ ಕನ್ಯೆಯು ತನ್ನ ದೌರ್ಭಾಗ್ಯವಿಶೇಷದಿಂದ ಹೀಗೆ ಅವಮಾನಿತಳಾದಳೇ? ಅಥವಾ ನಿನ್ನ ತಪಃಪ್ರಭಾವದಿಂದ ಹೀಗೆ ನಿನಗೆ ದಾಸಿಯಾದಳೆ? ಬೇರೆ ಯಾವ ಕಾರಣದಿಂದಲೂ ಇಂತಹ ಸರ್ವಾಂಗಸುಂದರಿಯಾದ ಮಾನಿನಿಯು ದಾಸಿಯಾಗುವ ಸಂಭವವಿಲ್ಲ. ನಿನ್ನ ರೂಪವೂ ಇವಳ ಸೌಂದರ್ಯಕ್ಕೆ ಸಾಟಿಯಲ್ಲ. ಹಾ! ಕಷ್ಟವು. ಪೂರ್ವಜನ್ಮದಲ್ಲಿ ಮಾಡಿದ ಪಾಪದಿಂದಲೇ ಈ ಕನ್ಯೆಯು ನಿನಗೆ ದಾಸಿಯಾಗಿರುವಳು" ಎಂದನು. ಅದಕ್ಕೆ ದೇವಯಾನಿಯು "ಪುರುಷೋತ್ತಮಾ! ಯಾರೂ ವಿಧಿಯನ್ನು ಮಿೀರಲಾರರು. ಎಲ್ಲರೂ ದೈವಕ್ಕನುಸಾರವಾಗಿ ನಡೆಯಬೇಕು. ವಿಧಿವಶದಿಂದಲೇ ಹೀ

ಗಾಗಿರುವುದೆಂದು ತಿಳಿ. ಇನ್ನು ಈ ಮಾತುಗಳನ್ನು ಇಷ್ಟಕ್ಕೇ ನಿಲ್ಲಿಸು. ನಿನ್ನ ರೂಪವೂ, ವೇಷವೂ ರಾಜನೆಂಬ ಭಾವವನ್ನು ತೋರಿಸುತ್ತಿರುವುದು. ನಿನ್ನ ಮಾತನ್ನು ಕೇಳಿದರೆ ಬ್ರಾಹ್ಮಣನಂತೆ ತೋರುವೆ! ನೀನು ಯಾರು? ಎಲ್ಲಿಂದ ಬಂದವನು? ನೀನು ಯಾರ ಮಗನೆಂಬುದನ್ನು ತಿಳಿಸು" ಎಂದಳು. ಅದಕ್ಕಾ ಯಯಾತಿಯು "ನಾನು ಬ್ರಹ್ಮಚರ್ಯವ್ರತದಲ್ಲಿದ್ದು ವೇದಾಧ್ಯಯನ ಮಾಡಿದವನು. ನಾನು ಕ್ಷತ್ರಿಯಕುಮಾರನು. ಈಗ ನಾನೇ ರಾಜನು. ಯಯಾತಿಯೆಂಬ ಹೆಸರುಳ್ಳವನು" ಎಂದನು.

ಆಗ ದೇವಯಾನಿಯು "ರಾಜಾ! ನೀನು ಯಾವ ಕಾರ್ಯೋದ್ದೇಶದಿಂದ ಇಲ್ಲಿಗೆ ಬಂದೆ? ಇಲ್ಲಿನ ತಾವರೆ ಮುಂತಾದ ಜಲಪುಷ್ಪಗಳಿಗೆ ಆಸೆಪಟ್ಟು ಬಂದೆಯಾ? ಅಥವಾ ಮೃಗಯಾವಿಹಾರಕ್ಕಾಗಿಯೋ" ಎಂದು ಕೇಳಿದಳು. ಅದಕ್ಕಾ ಯಯಾತಿಯು "ಕಲ್ಯಾಣೀ! ನಾನು ಜಿಂಕೆಯನ್ನು ಹುಡುಕಿಕೊಂಡು ಬಂದವನು. ಬಾಯಾರಿಕೆಯಿಂದ ನೀರು ಕುಡಿಯುವುದಕ್ಕಾಗಿ ಇಲ್ಲಿಗೆ ಬಂದೆನು. ಮೃಗವು ಓಡಿಹೋದುದರಿಂದ ಈಗ ನಾನು ಬಹಳ ಆಯಾಸಪಟ್ಟಿರುವೆನು. ಇನ್ನು ಅನುಮತಿಯನ್ನು ಕೊಡು ಹೋಗುವೆನು" ಎಂದನು. ದೇವಯಾನಿಯು ರಾಜನನ್ನು ಕುರಿತು "ನಾನು ಈ ಎರಡು ಸಾವಿರಮಂದಿ ಸಖಿಯರೊಡನೆ ಮತ್ತು ನನ್ನ ದಾಸಿಯಾದ ಈ ಶರ್ಮಿಷ್ಠೆಯೊಡನೆ ನಿನ್ನ ವಶಳಾಗುವೆನು. ನಿನಗೆ ಶುಭವಾಗಲಿ! ನೀನೇ ನನ್ನ ಪ್ರಾಣಪ್ರಿಯನೂ, ಸಖನೂ ಆಗಬೇಕು" ಎಂದಳು. ಆದರೆ, ಆಗ ರಾಜನಿಗೆ ಅಲ್ಲಿದ್ದ ಅಸುರರಾಜಕುಮಾರಿಯಲ್ಲಿ ಮನಸ್ಸು ನಾಟಿತು. ಆಕೆಯೇ ತನ್ನ ಪಟ್ಟದ ರಾಣಿಯಾಗಬೇಕೆಂದು ಭಾವಿಸಿ, ದೇವಯಾನಿಯನ್ನು ಕುರಿತು "ಭಾಮಿನೀ! ನೀನು ಶುಕ್ರಾಚಾರ್ಯನ ಮಗಳಲ್ಲವೆ? ನಾನು ಕ್ಷತ್ರಿಯನು. ನಿನಗೆ ತಕ್ಕವನಲ್ಲ. ನಿನಗೆ ಸುಖವಾಗಲಿ! ನಿನ್ನ ತಂದೆಯೊಡನೆ ವಿವಾಹಸಂಬಂಧವನ್ನು ಬೆಳೆಸಲು ನಮ್ಮಂತಹ ಕ್ಷತ್ರಿಯರಿಗೆ ಯೋಗ್ಯವಲ್ಲ. ಮೊದಲು ಮತ್ತೊಬ್ಬರಿಗೆ ಪತ್ನಿಯಾದವಳು, ತನ್ನ ಸಹೋದರಿ, ತನಗಿಂತಲೂ ಮೇಲಿನ ಜಾತಿಯಲ್ಲಿ ಹುಟ್ಟಿದವಳು, ಸಗೋತ್ರ

ಳು, ಪತಿತೆ, ಸೊಸೆ, ಜಾತಿಯಲ್ಲಿ ಬಹಳ ಹೀನಳಾದವಳು, ಹುಚ್ಚಳು, ವ್ಯಾಧಿಗ್ರಸ್ಥಳು, ಭಿಕ್ಷುಕಿ, ಇವರೆಲ್ಲ ವಿವಾಹಯೋಗ್ಯರಲ್ಲವೆಂದು ಪ್ರಾಜ್ಞರು ಹೇಳುವರು " ಎಂದನು. ಆದಕ್ಕೆ ದೇವಯಾನಿಯು [1] " ಬ್ರಾಹ್ಮಣ ಕ್ಷತ್ರಿಯ ಜಾತಿಗಳೆರಡೂ ಅನ್ಯೋನ್ಯವಾಗಿ ಕಲೆತೇ ಇರುವುವು. ಸೂಕ್ಷ್ಮವಾಗಿ ವಿಚಾರಿಸಿ ನೋಡಿದರೆ, ಆ ಎರಡು ಜಾತಿಗಳು ಬೇರೆಬೇರೆಯಲ್ಲ. ನಹುಷಪುತ್ರಾ ! ನೀನು ರಾಜರ್ಷಿ ! ರಾಜರ್ಷಿಪುತ್ರನೂ ಆಗಿರುವೆ. ನನ್ನನ್ನು ವಿವಾಹವಾಗು " ಎಂದಳು. ಅದಕ್ಕೆ ಯಯಾತಿಯು " ನಾರೀಮಣೀ ! ನಾಲ್ಕು ವರ್ಣಗಳೂ ಒಂದೇ ದೇಹದಲ್ಲಿ (ಎಂದರೆ, ಒಂದೇ ಬ್ರಹ್ಮಶರೀರದಲ್ಲಿ) ಹುಟ್ಟಿದುವಾದರೂ, ಬೇರೆಬೇರೆ ವರ್ಣದವರಿಗೆ ಧರ್ಮಗಳೂ ಆಚಾರಗಳೂ ಬೇರೆಬೇರೆಯಾಗಿರುವುವೇ ಹೊರತು ಸಮಾನವಲ್ಲ. ಅದರಲ್ಲಿಯೂ ಬ್ರಾಹ್ಮಣ ವರ್ಣವು ಸರ್ವೋತ್ತಮವಾದುದು " ಎಂದನು. ಆಗ ದೇವಯಾನಿಯು " ನಹುಷಪುತ್ರಾ ! ನನಗೆ ಪಾಣಿಗ್ರಹಣವೆಂಬ ಕರ್ಮವು ನಿನ್ನಲ್ಲಿ ಹೊರತು ಬೇರೆ ಯಾರೊಡನೆಯೂ ನಡೆಯಲಿಲ್ಲ. ಈ ನನ್ನ ಕೈಯನ್ನು ಮೊದಲು ಗ್ರಹಿಸಿದವನು ನೀನೇ. ಆದುದರಿಂದ ನಾನು ನಿನ್ನನ್ನೇ ವರಿಸುವೆನು. ಋಷಿಪುತ್ರನೂ, ಸ್ವತಃ ಋಷಿಯೂ ಆದ ನಿನ್ನಿಂದ ಮೊದಲು ಗ್ರಹಿಸಲ್ಪಟ್ಟ ನನ್ನ ಹಸ್ತಗಳನ್ನು ಇತರಪುರುಷನು ಹೇಗೆತಾನೇ ಮುಟ್ಟಬಲ್ಲನು ? " ಎಂದಳು.

ಅದಕ್ಕೆ ಯಯಾತಿಯು " ಭದ್ರೇ ! ಕೋಪಗೊಂಡ ವಿಷಸರ್ಪಕ್ಕಿಂತಲೂ, ಸರ್ವತೋಮುಖವಾಗಿ ಉರಿಯುವ ಅಗ್ನಿಗಿಂತಲೂ ಬ್ರಾಹ್ಮಣನು ತೀವ್ರನೆಂಬುದನ್ನು ವಿವೇಕಿಯಾದವನು ಮರೆಯಬಹುದೆ ? " ಎಂದನು. ಆಗ ದೇವಯಾನಿಯು " ಪುರುಷಲಲಾಮಾ ! ಬ್ರಾಹ್ಮಣರು ವಿಷವುಳ್ಳ ಕ್ರೂರಸರ್ಪಕ್ಕಿಂತಲೂ, ಸುತ್ತಲೂ ವ್ಯಾಪಿಸಿದ ಅಗ್ನಿಗಿಂತಲೂ ತೀವ್ರ

---

[1] ಕ್ಷತ್ರಿಯವಂಶವು ವಿಚ್ಛಿನ್ನವಾದಾಗ, ತಿರುಗಿ ಬ್ರಾಹ್ಮಣವೀರ್ಯದಿಂದ ಆ ಕ್ಷತ್ರಿಯ ಜಾತಿಯು ಹುಟ್ಟಿ ತಲೆಯೆತ್ತಿತು. ಹಾಗೆಯೇ ಲೋಪಾಮುದ್ರೆ ಮೊದಲಾದ ಕ್ಷತ್ರಿಯ ಕನ್ಯೆಯರಲ್ಲಿ ಬ್ರಾಹ್ಮಣರ ಉತ್ಪತ್ತಿಯಾಗಿದೆ. ಆದುದರಿಂದಲೇ ಈ ಎರಡು ವರ್ಣಗಳಿಗೂ ಕಲೆತಿವೆಯೆಂದು ಇಲ್ಲಿನ ಅಭಿಪ್ರಾಯವು.

ರೆಂದು ಹೇಗೆ ಹೇಳುವೆ ?" ಎಂದು ಕೇಳಲು, ಯಯಾತಿಯು "ಸರ್ಪವು ಒಬ್ಬನನ್ನುಮಾತ್ರ ಕೊಲ್ಲುವುದು. ಆಯುಧದಿಂದ ಒಬ್ಬನುಮಾತ್ರ ಸಾಯುವನು. ಪ್ರಬಲಕೋಪವುಳ್ಳ ಬ್ರಾಹ್ಮಣನು ಅನೇಕದೇಶಗಳನ್ನೂ, ಪಟ್ಟಣಗಳನ್ನೂ ಏಕಕಾಲದಲ್ಲಿ ನಾಶಮಾಡಿ ಬಿಡುವನು. ಅದರಿಂದಲೇ ಬ್ರಾಹ್ಮಣನು ಬಹಳ ಅಪಾಯಕರನೆಂದು ನನ್ನ ಭಾವವು. ಆದುದರಿಂದ ಎಲೆ ಕಲ್ಯಾಣೀ! ನಿನ್ನ ತಂದೆಯು ನಿನ್ನನ್ನು ಇಷ್ಟಪಟ್ಟು ಕೊಟ್ಟಲ್ಲದೆ ನಾನು ನಿನ್ನನ್ನು ಮದುವೆಯಾಗುವವನಲ್ಲ" ಎಂದನು.

ದೇವಯಾನಿಯು "ರಾಜಾ! ಹೇಗಿದ್ದರೂ ನಾನು ನಿನ್ನನ್ನು ವರಿಸಿರುವೆನು. ನನ್ನ ತಂದೆಯು ಮದುವೆಮಾಡಿಕೊಟ್ಟಮೇಲೆಯೇ ನನ್ನನ್ನು ವಿವಾಹವಾಗಬಹುದು. ತಾನು ಕೇಳದಿದ್ದರೂ ಇತರರು ತಾವಾಗಿ ಕೊಟ್ಟ ಕನ್ಯೆಯನ್ನು ಕೈಹಿಡಿಯುವುದರಲ್ಲಿ ಏನೂ ಭಯವಿಲ್ಲವಷ್ಟೆ? ರಾಜಾ! ನೀನು ಸ್ವಲ್ಪ ಹೊತ್ತು ಇಲ್ಲಿರು. ನನ್ನ ತಂದೆಗೆ ಹೇಳಿಕಳುಹಿಸುವೆನು" ಎಂದು ಹೇಳಿ, ತನ್ನ ದಾದಿಯನ್ನು ಕರೆದು "ದಾದೀ! ನೀನು ಜಾಗ್ರತೆಯಾಗಿ ಹೋಗಿ ತಂದೆಯನ್ನು ಇಲ್ಲಿಗೆ ಕರೆದುಕೊಂಡು ಬಾ! ಯಯಾತಿಯನ್ನು ನಾನು ಸ್ವಯಂವರದಿಂದ ವರಿಸಿರುವುದನ್ನೂ ಈಗಲೇ ಆತನಿಗೆ ತಿಳಿಸು" ಎಂದಳು. ದಾದಿಯು ಒಡನೆಯೇ ಹೋಗಿ ಆ ವೃತ್ತಾಂತವೆಲ್ಲವನ್ನೂ ಶುಕ್ರನಿಗೆ ಯಥಾವತ್ತಾಗಿ ತಿಳಿಸಿದಳು. ಇದನ್ನು ಕೇಳಿದೊಡನೆ ಶುಕ್ರಾಚಾರ್ಯನು ರಾಜನಲ್ಲಿಗೆ ಬಂದನು. ಯಯಾತಿಯು ಶುಕ್ರಾಚಾರ್ಯನಿಗೆ ನಮಸ್ಕರಿಸಿ, ಕೈಗಳನ್ನು ಜೋಡಿಸಿ ನಿಂತಾಗ, ದೇವಯಾನಿಯು "ಅಪ್ಪಾ! ನಹುಷಕುಮಾರನಾದ ಈ ಮಹಾರಾಜನು ನನ್ನ ಆಪತ್ಕಾಲದಲ್ಲಿ ಹಿಂದೆ ಯಾರೂ ಮುಟ್ಟಲ್ಲದ ನನ್ನ ಕೈಯನ್ನು ಹಿಡಿದಿರುವನು. ಇವನಿಂದಲೇ ಆಗ ನಾನು ಆ ಆಪತ್ತಿನಿಂದ ರಕ್ಷಿಸಲ್ಪಟ್ಟವಳು. ನಿನಗೆ ನಮಸ್ಕಾರವು. ನನ್ನನ್ನು ಈತನಿಗೇ ಮದುವೆಮಾಡು. ಈ ಲೋಕದಲ್ಲಿ ಬೇರೆ ಯಾರನ್ನೂ ಪತಿಯನ್ನಾಗಿ ವರಿಸಲು ನನಗೆ ಸಾಧ್ಯವಿಲ್ಲ" ಎಂದಳು. ಅದಕ್ಕೆ ಶುಕ್ರನು "ಧರ್ಮನಿರ್ಣಯವೇ ಬೇರೆ! ನಿನ್ನ ಕೋರಿಕೆಯೇ ಬೇರೆ! ಆದರೂ ಹಿಂದೆ ಕಚನು ನಿನ್ನನ್ನು ಶಪಿಸಿರುವುದರಿಂದ

ನೀನು ಹೀಗೆ ಈ ಕ್ಷತ್ರಿಯನನ್ನು ಪತಿಯನ್ನಾಗಿ ವರಿಸಿರುವೆ. ಅದು ಹಾಗೆಯೇ ನಡೆಯಬೇಕು. ಓ ರಾಜಾ! ನನ್ನ ಪ್ರೀತಿಪಾತ್ರಳಾದೀ ಮಗಳು ನಿನ್ನನ್ನು ವರಿಸಿರುವಳು. ಬ್ರಾಹ್ಮಣ ಕನ್ಯೆಯನ್ನು ತಾನಾಗಿ ಒಬ್ಬನು ಬಲಾತ್ಕರಿಸಿ ಕೈಹಿಡಿದರೆ ವರ್ಣಸಂಕರವಾಗುವುದು. ಅದೇನೋ ಮಹಾದೋಷವೇ! ಆದರೆ, ಈಗ ನಾನಾಗಿ ಧಾರೆಯೆರೆದು ಕೊಟ್ಟ ಈ ಕೋಮಲೆಯನ್ನು ನೀನು ಪಟ್ಟದ ರಾಣಿಯನ್ನಾಗಿ ಅಂಗೀಕರಿಸಬಹುದು. ಅದು ದೋಷವಲ್ಲ” ಎಂದನು.

ಯಯಾತಿಯು “ಭೃಗುಪುತ್ರಾ! ಬ್ರಾಹ್ಮಣೋತ್ತಮಾ! ಈ ಕಾರ್ಯದಿಂದ ವರ್ಣಸಂಕರವಾಗಿ, ಅದರಿಂದ ಪ್ರಾಪ್ತವಾಗುವ ದೊಡ್ಡ ಅಧರ್ಮವು ನನ್ನ ಮೇಲೆ ಬೀಳದಿರಬೇಕೆಂದು ನಾನು ನಿನ್ನನ್ನು ಬೇಡಿಕೊಳ್ಳುವೆನು” ಎಂದನು. ಆಗ ಶುಕ್ರನು “ನಿನ್ನನ್ನು ಈ ಅಧರ್ಮದಿಂದ ನಾನು ತಪ್ಪಿಸುವೆನು. ನಿನಗೆ ಬೇಕಾದ ವರವನ್ನು ಬೇಡು. ಈ ವಿವಾಹಕ್ಕಾಗಿ ವ್ಯಸನಪಡಬೇಡ. ನಾನು ನಿನ್ನ ಪಾಪವನ್ನು ಹೋಗಲಾಡಿಸುವೆನು. ಸುಂದರಾಂಗಿಯಾದೀ ದೇವಯಾನಿಯನ್ನು ನಿನ್ನ ಧರ್ಮಪತ್ನಿಯನ್ನಾಗಿ ವರಿಸು. ಈಕೆಯಲ್ಲಿ ಅಸಮಾನವಾದ ಪ್ರೀತಿಯನ್ನು ತೋರಿಸು. ರಾಜಾ! ರಾಜಕುಮಾರಿಯೂ, ವೃಷಪರ್ವನ ಮಗಳೂ ಆದ ಈ ಶರ್ಮಿಷ್ಠೆಯೂ ಕೂಡ ಯಾವಾಗಲೂ ನಿನ್ನ ಗೌರವಕ್ಕೆ ಪಾತ್ರಳಾಗಿರಲಿ! ಆದರೆ, ಆಕೆಯನ್ನು ನಿನ್ನ ಶಯನಗೃಹಕ್ಕೆಮಾತ್ರ ಸೇರಿಸಬಾರದು. ಅವಳೊಡನೆ ನೀನು ಏಕಾಂತದಲ್ಲಿ ಮಾತನಾಡಬಾರದು. ಆಕೆಯನ್ನು ಮುಟ್ಟಲೂ ಕೂಡದು. ಬೇಕಾದರೆ ಇವಳನ್ನೂ ನೀನು ಮದುವೆಮಾಡಿಕೊಳ್ಳುವನಾಗು. ನಿನಗೆ ಶ್ರೇಯಸ್ಸಾಗಲಿ! ನಿನ್ನ ಇಷ್ಟಾರ್ಥಗಳೆಲ್ಲ ನೆರವೇರುವುವು” ಎಂದನು. ಆತನು ಹೀಗೆ ಹೇಳಿದಮೇಲೆ ಯಯಾತಿಯು, ಶುಕ್ರನಿಗೆ ಪ್ರದಕ್ಷಿಣೆಮಾಡಿ, ಶಾಸ್ತ್ರೋಕ್ತವಾಗಿ ವಿವಾಹವನ್ನು ಮಾಡಿಕೊಂಡನು. ಶುಕ್ರನ ಬಳಿಯಲ್ಲಿದ್ದ ಅಧಿಕ ಸಂಪತ್ತನ್ನೂ ಎರಡುಸಾವಿರ ದಾಸಿಯರೊಡಗೂಡಿದ ಶರ್ಮಿಷ್ಠೆಯನ್ನೂ ಉತ್ತಮ ಕಾಂತೆಯಾದ ದೇವಯಾನಿಯನ್ನೂ ಸಂಗಡ ಕರೆದು

ಕೊಂಡು, ಶುಕ್ರನಿಂದಲೂ, ರಾಕ್ಷಸರಿಂದಲೂ ಪೂಜಿತನಾಗಿ, ಸಂತೋಷ ದಿಂದ ತನ್ನ ನಗರಕ್ಕೆ ಹೋದನು.

ಇದು ಎಪ್ಪತ್ತೈದನೆಯ ಅಧ್ಯಾಯವು.

## ಯಯಾತಿಗೆ ದೇವಯಾನಿಯಲ್ಲಿಯೂ, ಶರ್ಮಿಷ್ಠೆಯಲ್ಲಿಯೂ ಪುತ್ರರು ಹುಟ್ಟಿದುದು.

ಯಯಾತಿಯು ಇಂದ್ರನಗರಕ್ಕೆ ಸಮಾನವಾದ ತನ್ನ ಪಟ್ಟಣವನ್ನು ಸೇರಿ, ತನ್ನ ಅಂತಃಪುರದಲ್ಲಿ ದೇವಯಾನಿಯನ್ನಿರಿಸಿದನು. ದೇವಯಾನಿಯ ಅನುಮತಿಯುಮೇರೆಗೆ ವೃಷಪರ್ವನ ಮಗಳಾದ ಶರ್ಮಿಷ್ಠೆಯನ್ನು ಅಶೋಕವನಿಕೆಯೆಂಬ ತನ್ನ ಅಂತಪುರೋದ್ಯಾನದ ಸಮೀಪದಲ್ಲಿ ಒಂದು ಗೃಹವನ್ನು ಕಟ್ಟಿಸಿ, ಅಲ್ಲಿ ಆಕೆಯ ವಾಸಕ್ಕಾಗಿ ಏರ್ಪಡಿಸಿದನು. ಮತ್ತು ಆ ಯಯಾತಿಯು ಸಾವಿರಮಂದಿ ದಾಸಿಯರೊಡಗೂಡಿದ್ದ ವೃಷಪರ್ವಕುಮಾರಿಯಾದ ಶರ್ಮಿಷ್ಠೆಗೆ, ವಿವಿಧ ವಸ್ತ್ರಗಳನ್ನೂ, ಅನ್ನಪಾನಗಳನ್ನೂ ಒದಗಿಸಿ ಅತ್ಯಾದರದಿಂದ ಸತ್ಕರಿಸುತಿದ್ದನು. ದೇವಯಾನಿಯೊಡನೆಯೂ ಸುಖಸಂತೋಷಗಳಿಂದ ಅನೇಕವರ್ಷಗಳನ್ನು ಕಳೆದನು. ದೇವಯಾನಿಯು ಆಗಾಗ ರಮಣೀಯವಾಗಿಯೂ, ಉಲ್ಲಾಸಕರವಾಗಿಯೂ ಇರುವ ಅಶೋಕವನಕ್ಕೆ ಬಂದು, ಶರ್ಮಿಷ್ಠೆಯೊಡನೆ ಆಟವಾಡುತಿದ್ದು, ಆಮೇಲೆ ಶರ್ಮಿಷ್ಠೆಯನ್ನು ಅಲ್ಲಿಯೇ ಬಿಟ್ಟು ರಾಜನೊಡನೆ ಅರಮನೆಗೆ ಹೋದಳು. ಈ ರೀತಿಯಲ್ಲಿ ಆ ರಾಜನು ಆಕೆಯೊಡನೆ ಸ್ನೇಹದಿಂದಲೂ, ಸಂತೋಷದಿಂದಲೂ ಇದ್ದು, ದೇವತೆಗಳಂತೆ ಮನಸ್ಸಿನಲ್ಲಿ ಹರ್ಷವನ್ನೂ, ಸುಖವನ್ನೂ ಹೊಂದಿ, ಅನೇಕ ವರ್ಷಗಳವರೆಗೆ ಅವಿಚ್ಛಿನ್ನವಾಗಿ ವಿನೋದದಿಂದ ಕಾಲಕಳೆಯುತಿದ್ದನು. ಆ ದೇವಯಾನಿಗೆ ಋತುಕಾಲವು ಪ್ರಾಪ್ತವಾಗಿ, ಆಕೆಯು ಮೊದಲನೆಯ ಗರ್ಭವನ್ನು ಧರಿಸಿದಳು. ಆಕೆಗೆ ಒಬ್ಬ ಮಗನು ಹುಟ್ಟಿದನು. ವೃಷಪರ್ವನ ಮಗಳಾದ ಶರ್ಮಿಷ್ಠೆಗಾದರೋ, ಹಾಗೆಯೇ ಹಲವುವರ್ಷಗಳು ಕಳೆದಮೇಲೆ ಯೌವನದಶೆಯು ಬಂದಿತು.

ಆ ಯೌವನವು ಪ್ರಾಪ್ತವಾದಮೇಲೆ, ತನ್ನ ಋತುಕಾಲವನ್ನು ಹೇಗೆ ಸಫಲಗೊಳಿಸುವುದೆಂದು ಚಿಂತೆಪೊಂದಿದಳು. ಆಗ ಶರ್ಮಿಷ್ಠೆಯು ಸ್ನಾನಮಾಡಿ, ಶುಚೀಭೂತಳಾಗಿ, ಸರ್ವಾಲಂಕಾರಗಳನ್ನೂ ಧರಿಸಿಕೊಂಡು, ಹೂಗೊಂಚಲುಗಳಿಂದ ತುಂಬಿದ ಒಂದು ಅಶೋಕವೃಕ್ಷದ ಕೊನೆಯನ್ನು ಹಿಡಿದು ನಿಂತು, ಅಲ್ಲಿ ಕನ್ನಡಿಯಲ್ಲಿ ತನ್ನ ಮುದ್ದುಮುಖವನ್ನು ನೋಡಿಕೊಳ್ಳುತ್ತ, ಪತಿದರ್ಶನಲಾಲಸೆಯಾಗಿ ಶೋಕಮೋಹಾವೇಶದಿಂದ ತನ್ನಲ್ಲಿ ತಾನು "ಓ ಅಶೋಕವೇ! ನೀನು ಶೋಕವುಳ್ಳವರ ಮನಸ್ಸಿನ ಶೋಕವೆಲ್ಲವನ್ನೂ ನೀಗಿಸಬಲ್ಲೆಯಲ್ಲವೆ? ನನಗೆ ಪತಿಯನ್ನು ತೋರಿಸಿ, ನನ್ನನ್ನೂ ನಿನ್ನ ಹೆಸರುಳ್ಳವಳನ್ನಾಗಿ (ಅಶೋಕೆಯನ್ನಾಗಿ) ಮಾಡು" ಎಂದು ಹೇಳಿ, ತಿರುಗಿ "ಅಯ್ಯೋ! ನನಗೆ ಋತುಕಾಲವು ಪ್ರಾಪ್ತವಾಯಿತು. ನನಗೆ ಇನ್ನೂ ಪತಿಯಿಲ್ಲ. ನನ್ನ ಗತಿಯೇನು? ಏನು ಮಾಡಲಿ! ಏನು ಮಾಡಿದರೆ ನನಗೆ ಸುಖವುಂಟಾಗುವುದು? ದೇವಯಾನಿಯು ಆಗಲೇ ಪುತ್ರವತಿಯಾಗಿರುವಳು. ನನಗೆ ಈ ಯೌವನವು ಬಂದೂ ಪ್ರಯೋಜನವೇನು? ಅದು ಕೇವಲವ್ಯರ್ಥವಲ್ಲವೆ? ಆಕೆಯು ರಾಜನನ್ನು ತಾನೇ ಪ್ರಾರ್ಥಿಸಿ ಪತಿಯನ್ನಾಗಿ ವರಿಸಿದಂತೆಯೇ ನಾನೂ ಆತನನ್ನು ಭರ್ತನನ್ನಾಗಿ ವರಿಸುವೆನು. ನನಗೆ ಆ ರಾಜನೇ ಪುತ್ರಫಲವನ್ನು ಕೊಡಬೇಕೆಂದು ನನ್ನ ಮನಸ್ಸಿನಲ್ಲಿ ಸಂಕಲ್ಪಿಸಿಕೊಂಡಿರುವೆನು. ಧರ್ಮಾತ್ಮನಾದ ರಾಜನು ನನಗೆ ಏಕಾಂತದಲ್ಲಿ ಹೇಗೆ ದೊರಕುವನು? ನನಗೆ ಅನುರೂಪನಾದ ಆ ರಾಜನು ಇಲ್ಲಿಗೆ ಬಂದರೆ, ತಲೆಬಗ್ಗಿಸಿ ವಂದಿಸಿ ಅವನನ್ನು ಬೇಡಿಕೊಳ್ಳುವೆನು. ಆತನು ದೇವಯಾನಿಯ ಮುಗನನ್ನೇ ಮಾತುಮಾತಿಗೂ ನೋಡುವನು. ಆಕೆಯ ಅಂತಃಪುರದಲ್ಲಿಯೇ ಕ್ರೀಡಿಸುತ್ತಿರುವನು. ಈನಡುವೆ ಅವನಿಗೆ ಯಾವಾಗಲಾದರೂ ಅವಕಾಶವು ದೊರೆತು, ಅವನಿಗೆ ಇಲ್ಲಿಗೆ ಬರುವ ಅಪೇಕ್ಷೆಯು ಬರುವುದೆ?" ಎಂದು ಹೇಳಿಕೊಳ್ಳುತಿದ್ದಳು. ಈ ಸಮಯಕ್ಕೆ ಸರಿಯಾಗಿ ದೈವವಶದಿಂದ ಆ ರಾಜನೂ ಅಂತಃಪುರವನ್ನು ಬಿಟ್ಟುಬಂದು, ಅಶೋಕವೃಕ್ಷದ ಬಳಿಯಲ್ಲಿ ನಿಂತಿದ್ದ ಶರ್ಮಿಷ್ಠೆಯನ್ನು ನೋಡಿದನು. ಆತನು ಒಂಟಿಯಾಗಿ ಏಕಾಂತದಲ್ಲಿ ಬಂದಿರುವುದನ್ನು ನೋಡಿ ಶರ್ಮಿಷ್ಠೆಯು, ಋಂಪವಾದ ಆಭರಣಗಳಿಂದಲಂಕೃತಳಾಗಿ, ಆತನನ್ನು ಇದಿರುಗೊಂಡು,

ಕೈಗಳನ್ನು ಜೋಡಿಸಿ ರಾಜನನ್ನು ನೋಡಿ “ ನಹುಷಕುಮಾರಾ ! ಇಂದ್ರ, ವಿಷ್ಣು, ಯಮ, ವರುಣಾದಿದೇವತೆಗಳ ಗೃಹಗಳಲ್ಲಿಯೂ, ನಿನ್ನ ಗೃಹದಲ್ಲಿಯೂ ಇರುವ ಸುಂದರಾಂಗಿಯರನ್ನು ಬೇರೆ ಯಾರೂ ಕಣ್ಣೆತ್ತಿಯೂ ನೋಡಲಾರರು ? ಆದುದರಿಂದ ನನ್ನನ್ನು ದಯೆಯಿಂದ ನೋಡತಕ್ಕವನು ನೀನೊಬ್ಬನೇ ! ನಿನ್ನೊಬ್ಬನನ್ನು ಬಿಟ್ಟರೆ, ನನಗೆ ಬೇರೆ ಯಾರೂ ದೊರೆಯಲಾರರು. ರಾಜಾ ! ನಿನಗೆ ನನ್ನ ರೂಪವೂ, ಕುಲವೂ, ಶೀಲವೂ, ತಿಳಿದೇ ಇವೆ. ನಿನಗೆ ತಿಳಿಯದುದು ಯಾವುದೂ ಇಲ್ಲ. ನಾನು ನಿನ್ನನ್ನು ಬೇಡಿಕೊಳ್ಳುವೆನು. ನನ್ನಲ್ಲಿ ಅನುಗ್ರಹವನ್ನಿಡು. ನನಗೆ ಋತುಫಲವನ್ನು ದಯೆಪಾಲಿಸು ” ಎಂದಳು. ಅವಕ್ಕೆ ಯಯಾತಿಯು “ ನೀನು ಒಳ್ಳೆಯ ಶೀಲವತಿಯೆಂದೂ, ದೈತ್ಯರಾಜನ ಕುಮಾರಿಯೆಂದೂ, ಕುಲಶೀಲದಲ್ಲಿ ಯಾವ ಕುಂದೂ ಇಲ್ಲದವಳೆಂದೂ ಬಲ್ಲೆನು. ನಿನ್ನ ರೂಪದಲ್ಲಿ ಒಂದು ಸೂಜಿಯ ಮೊನೆಯಷ್ಟು ಲೋಪವೂ ಕಾಣುವುದಿಲ್ಲ ನಾರೀಮಣೀ ! ನಿನ್ನನ್ನು ನೋಡಿದುದು ಮೊದಲು, ರಾತ್ರಿ ಹಗಲೂ ನನ್ನ ಯೋಚನೆಗಳೆಲ್ಲವೂ ನಿನ್ನ ಮೇಲೆಯೇ ಇವೆ. ಆದರೆ ಒಂದು ರಹಸ್ಯವುಂಟು. ನಾನು ದೇವಯಾನಿಯನ್ನು ಮದುವೆಯಾದಾಗ, ಕವಿಯಾದ ಶುಕ್ರನು ನನ್ನೊಡನೆ ‘ ಈ ವೃಷಪರ್ವನ ಮಗಳನ್ನು ನೀನು ಶಯ್ಯೆಗೆಮಾತ್ರ ಕರೆಯಲೇ ಕೂಡದು. ದೇವಯಾನಿಗೇ ಎಲ್ಲಾ ಪ್ರಿಯವನ್ನುಂಟುಮಾಡುತ್ತ, ಶರ್ಮಿಷ್ಠೆಯನ್ನು ಕೇವಲಪೋಷಣೆಯೊಂದರಿಂದ ಮಾತ್ರ ಪ್ರೀತಿಗೊಳಿಸು ’ ಎಂದು ಹೇಳಿರುವನಲ್ಲವೆ ? ” ಎಂದನು. ಆಗ ಶರ್ಮಿಷ್ಠೆಯು ರಾಜನನ್ನು ಕುರಿತು “ ಪರಿಹಾಸಗಳಲ್ಲಿಯೂ, ಸ್ತ್ರೀಯರಲ್ಲಿಯೂ, ವಿವಾಹಕಾಲದಲ್ಲಿಯೂ, ತನಗೆ ಪ್ರಾಣಹಾನಿ ಸಂಭವಿಸಿದಾಗಲೂ, ಸಮಸ್ತಧನವೂ ಅಪಹೃತವಾಗುವಾಗಲೂ, ಸುಳ್ಳು ಹೇಳಿದರೂ ಅದು ದೋಷವಲ್ಲ. ಈ ಐದು ಸಂಭವಗಳೂ ಪಾಪಕಾರಿಗಳಲ್ಲವೆಂದು ಹೇಳುವರು. ಸಾಕ್ಷ್ಯವನ್ನು ಕೇಳಿದಾಗ ಸುಳ್ಳಾಡಿದವನನ್ನು ಪಾಪಿಷ್ಠನೆನ್ನುವರು. ಒಂದು ಕಾರ್ಯವನ್ನು ನಿಶ್ಚಯಿಸಿದಾಗ ಸುಳ್ಳುಹೇಳುವವನನ್ನು ಆ ಸುಳ್ಳೇ ಹಿಂಸೆಗೆ ಗುರಿಮಾಡುವುದು. ಸ್ತ್ರೀಯರೊಡನೆಯೂ, ಪರಿಹಾಸಕ್ಕಾಗಿಯೂ, ವಿವಾಹಕ್ಕಾಗಿ

ಯೂ, ಧನನಷ್ಟವಾಗುವ ಸಂಭವಗಳಲ್ಲಿಯೂ ಆಡುವ ಸುಳ್ಳು ಸುಳ್ಳಾಗುವುದಿಲ್ಲ. ಆದರಿಂದ ಮೇಲ್ಮೆಯೇ ಉಂಟಾಗುವುದು ” ಎಂದಳು.

ಆಗ ಯಯಾತಿಯು “ ರಾಜನೇ ಸಮಸ್ತಪ್ರಜೆಗಳಿಗೂ ಪ್ರಮಾಣವು. ಆದರ್ಶಭೂತನು. ಆತನೇ ಸುಳ್ಳುಹೇಳಿದರೆ, ಲೋಕವೇ ಕೆಟ್ಟು ಹೋಗುವುದಲ್ಲವೆ? ಎಂತಹ ಕಾರ್ಯಸಂಕಟವು ಬಂದರೂ ನಾನು ಸುಳ್ಳುಹೇಳಲಾರೆನು ” ಎಂದನು. ಅದಕ್ಕೆ ಶರ್ಮಿಷ್ಠೆಯು “ ರಾಜಾ! ತನ್ನ ಪತಿಯೂ, ತನ್ನ ಸಖಿಯ ಪತಿಯೂ ಇಬ್ಬರೂ ಬೇರೆಬೇರೆಯಲ್ಲ. ಒಬ್ಬರೇ ಎಂದು ಭಾವಿಸಲ್ಪಡುವರು. ಒಟ್ಟುಗೂಡುವುದನ್ನಲ್ಲವೇ ವಿವಾಹವೆಂದು ಹೇಳುವರು. ನನ್ನ ಪ್ರಾಣಸಖಿಯು ನಿನ್ನನ್ನು ಪತಿಯಾಗಿ ವರಿಸಿಯೇ ಇರುವಳು. ಜ್ಞಾನಿಯಾದ ಶುಕ್ರನು, ದೇವಯಾನಿಗೆ ಸಮಾನವಾಗಿ ನಾನೂ ಸತ್ಕಾರಾರ್ಹಳೆಂದೂ, ಪೋಷಣೆಗೆ ಯೋಗ್ಯಳಾದವಳೆಂದೂ ಹೇಳಿಯೇ ನನ್ನನ್ನೂ ನಿನ್ನ ವಶಕ್ಕೆ ಕೊಟ್ಟಿರುವನು. ಆ ಮಾತನ್ನು ನೀನು ಸುಳ್ಳುಮಾಡಬಾರದು. ಬಂಗಾರ, ಮಣಿ, ಮುತ್ತು, ವಸ್ತ್ರ, ಆಭರಣಗಳು, ಪಶುಗಳು, ಭೂಮಿ ಮುಂತಾದುವನ್ನೆಲ್ಲಾ ನೀನು ಯಾಚಿಸುವವರಿಗೆ ಕೊಡುತ್ತಿರುವೆ. ಅವೆಲ್ಲವೂ ಶರೀರಕ್ಕಿಂತ ಬೇರೆಯಾದ ದಾನವೆಂದು ಹೇಳಲ್ಪಟ್ಟಿದೆಯೇಹೊರತು, ಶರೀರದಾನಕ್ಕೆ ಸಮವಲ್ಲ. ಪುತ್ರನನ್ನು ಕೊಡುವುದೂ, ತನ್ನನ್ನು ಕೊಡುವುದೂ ಬಹಳ ದುಷ್ಕರವು. ಶರೀರವನ್ನು ಕೊಡುವುದರಿಂದ ಮಿಕ್ಕೆಲ್ಲವನ್ನೂ ಕೊಟ್ಟಂತಾಗುವುದು. ಯಾರು ಯಾರಿಗೆ ಯಾವುಯಾವುದು ಅಪೇಕ್ಷಿತವೋ, ಅವರವರಿಗೆ ಆಯಾ ಕೋರಿಕೆಗಳೆಲ್ಲವನ್ನೂ ನಡೆಸುವೆನೆಂದು ನೀನೇ ಹಿಂದೆ ನಿನ್ನ ಪಟ್ಟಣದಲ್ಲಿ ಸಾರಿಸಿರುವೆ. ರಾಜಾ! ಆ ನಿನ್ನ ಪ್ರತಿಜ್ಞೆಯೂ, ನಿನ್ನ ಪ್ರಕಟನೆಯ ಆಡಂಬರಗಳೂ ಸುಳ್ಳಾಗಿ ಹೋಗುವುವಲ್ಲವೆ? ರಾಜೇಂದ್ರಾ! ನೀನು ಕುಬೇರನಿಗೆ ಸಮಾನನು. ನಿನ್ನ ಮಾತನ್ನು ಸತ್ಯವಾಗಿ ಮಾಡು ” ಎಂದಳು. ಅದಕ್ಕೆ ಯಯಾತಿಯು “ ನಾರೀಮಣೀ! ಅದು ವಾಸ್ತವವೇ! ಅವರವರಿಗೆ ಬೇಕಾದುವುಗಳನ್ನು ಕೊಡಬೇಕೆಂಬುದೇ ನಾನು ಕೈಕೊಂಡಿರುವ ನಿಯಮವು. ನೀನು ನನ್ನನ್ನು ಯಾಚಿಸುತ್ತಿರುವುದೇನು ಹೇಳು! ನಿನ್ನ ಅಪೇಕ್ಷೆಯೇ

ನೋ ತಿಳಿಸು. ನಿನಗೆ ಧನವನ್ನು ಕೊಡಲೇ? ರಾಜ್ಯವನ್ನು ಕೊಡಲೆ?" ಎಂದು ಕೇಳಿದನು. ಶರ್ಮಿಷ್ಠೆಯು "ರಾಜಾ! ಬೇರೇನೂ ಬೇಡ. ಅಧರ್ಮದಿಂದ ನನ್ನನ್ನು ರಕ್ಷಿಸು. ನನ್ನ ಸ್ತ್ರೀಧರ್ಮವನ್ನು ಕಾಪಾಡು. ಪುತ್ರಪತಿಯಾಗಬೇಕೆಂಬುದೇ ನನ್ನ ಅಪೇಕ್ಷೆ. ಪುತ್ರನನ್ನು ಬಿಟ್ಟು ಬೇರೊಂದನ್ನೂ ನಿನ್ನಲ್ಲಿ ನಾನು ಯಾಚಿಸುವುದಿಲ್ಲ. ನಿನ್ನಿಂದ ಪುತ್ರನನ್ನು ಪಡೆದು, ಲೋಕದಲ್ಲಿ ಉತ್ತಮವಾದ ಧರ್ಮವನ್ನು ಆಚರಿಸುವೆನು. ರಾಜಾ! ಹೆಂಡತಿ, ದಾಸಿ, ಮಗನೆಂಬೀ ಮೂವರೂ ಧನಸ್ವಾತಂತ್ರ್ಯವಿಲ್ಲದವರು. ಇವರು ಯಾರ ಬಳಿಯಲ್ಲಿರುವರೋ, ಅವರದೆಲ್ಲ ಆ ಪ್ರಭುಗಳ ಧನವೇ ಆಗುವರು. ಪುತ್ರನನ್ನು ಪಡೆಯುವುದು, ಗಂಡನನ್ನು ಪೋಷಿಸುವುದು, ಇವುಗಳಿಗಾಗಿಯೇ ಬ್ರಹ್ಮನು ಸ್ತ್ರೀಯರನ್ನು ಸೃಷ್ಟಿಸಿರುವನು. ಯಾವ ಕನ್ಯೆಗೆ ಗಂಡನಿಲ್ಲವೋ, ಯಾರಿಗೆ ಸಂತಾನವಿಲ್ಲವೋ, ಆಕೆಯು ಲೋಕದಲ್ಲಿ ಹುಟ್ಟಿದುದೇ ವ್ಯರ್ಥವು. ಆಕೆಗೆ ಪರಲೋಕಗಳೂ ಇಲ್ಲ. ನಾನು ದೇವಯಾನಿಗೆ ದಾಸಿ. ಆ ದೇವಯಾನಿಯು ನಿನಗೆ ವಶಳಾಗಿರುವಳು. ರಾಜಾ! ಆಕೆಯನ್ನೂ, ಆಕೆಯ ಸ್ವತ್ತಾದ ನನ್ನನ್ನೂ ಹೊಂದಲು ನೀನೇ ಯೋಗ್ಯನು. ಆದುದರಿಂದ ನನ್ನ ಕೈ ಹಿಡಿ" ಎಂದಳು ಆಕೆಯು ಹೀಗೆ ಹೇಳಲು, ರಾಜನೂ ಅವಳ ಮಾತಿಗೆ ಸಮ್ಮತಿಸಿ, ಶರ್ಮಿಷ್ಠೆಯನ್ನು ಗೌರವಿಸಿ, ಆಕೆಯ ಧರ್ಮವನ್ನು ಕಾಪಾಡುವ ಉದ್ದೇಶದಿಂದ ಶರ್ಮಿಷ್ಠೆಯನ್ನು ಕೈಹಿಡಿದು ವರಿಸಿದನು. ಆ ಮೇಲೆ ಒಬ್ಬರನ್ನೊಬ್ಬರು ಗೌರವಿಸುತ್ತ, ತಾವು ಬಂದ ದಾರಿಯಲ್ಲಿ ಹೊರಟುಹೋದರು. ಹಸನ್ಮುಖಿಯೂ, ಸುಂದರನಯನಳೂ ಆದ ಆ ಶರ್ಮಿಷ್ಠೆಯು ಆ ರಾಜಶ್ರೇಷ್ಠನಿಂದ ಮೊದಲನೆಯ ಗರ್ಭವನ್ನು ಧರಿಸಿದಳು.

ಓ ಜನಮೇಜಯರಾಜಾ! ಆ ನಾರೀಮಣಿಗೆ ಪ್ರಸವಸಮಯವು ಬರಲು, ತಾವರೆಯ ದಳದಂತೆ ಕೋಮಲವಾದ ಕಣ್ಣುಳ್ಳವನೂ, ದೇವಕುಮಾರನಂತೆ ಪ್ರಕಾಶಿಸುವವನೂ, ಸರ್ವಲಕ್ಷಣ ಸಂಪನ್ನನೂ ಆದ ಪುತ್ರನೊಬ್ಬನನ್ನು ಪಡೆದಳು.

ಇದು ಎಪ್ಪತ್ತಾರನೆಯ ಅಧ್ಯಾಯವು.

ದೇವಯಾನೀ ಶರ್ಮಿಷ್ಠೆಯರ ಸಂವಾದವು. ಶರ್ಮಿಷ್ಠೆಗೆ ಮಕ್ಕಳು ಹುಟ್ಟಿದುದನ್ನು ದೇವಯಾನಿಯು ಶುಕ್ರನಿಗೆ ತಿಳಿಸಲು, ಆತನ ಶಾಪದಿಂದ ಯಯಾತಿಯು ಆಗಲೇ ಮುದುಕನಾದುದು.

ಯಯಾತಿ ಚಕ್ರವರ್ತಿಯು ಪ್ರಕಾಶಮಾನವಾದ ಶುಕ್ಲಪಕ್ಷದ ಚಂದ್ರನಿಂದಲೂ, ಶುಭ ನಕ್ಷತ್ರಗಳಿಂದಲೂ ಕೂಡಿದ ಆ ದಿನದಲ್ಲಿ ಶರ್ಮಿಷ್ಠೆಯೊಡನೆ ಕಾಮಸುಖವನ್ನನುಭವಿಸುತ್ತ ಸಂತೋಷದಿಂದಿದ್ದಾಗ, ತನ್ನಲ್ಲಿ ತಾನು "ಆಹಾ! ಪಕ್ಕದಲ್ಲಿ ಭಾಗ್ಯಲಕ್ಷ್ಮಿಯಿದ್ದಂತೆ ನನಗೆ ಶರ್ಮಿಷ್ಠೆಯು ದೊರಕಿರುವಳು. ಉಗ್ರಸರ್ಪದಂತೆ ದೇವಯಾನಿಯು ನನ್ನಲ್ಲಿ ಸೇರಿರುವಳು. ಪೈರುಗಳಿಗೆ ಮೇಘದಂತೆಯೂ, ದೇವತೆಗಳಿಗೆ ಅಮೃತದಂತೆಯೂ ನನಗೆ ಶರ್ಮಿಷ್ಠೆಯು ಲಭಿಸಿದಳು" ಎಂದು ಮನಸ್ಸಿನಲ್ಲಿ ಭಾವಿಸಿ, ದೇವಯಾನಿಯನ್ನು ಅಲಕ್ಷ್ಯಮಾಡಿ ಬಿಟ್ಟನು. ಭಾರತಾ! ಹಸನ್ಮುಖಿಯಾದ ದೇವಯಾನಿಯು ಶರ್ಮಿಷ್ಠೆಗೆ ಮಗನು ಹುಟ್ಟಿರುವನೆಂಬ ವಿಷಯವನ್ನು ಕೇಳಿ, ಮಾತ್ಸರ್ಯದಿಂದ ಕುದಿಯುತ್ತ ಆಕೆಯ ಸಮೀಪಕ್ಕೆ ಬಂದು "ಇದೇನು ಶರ್ಮಿಷ್ಠೇ! ಕಾಮಸುಖಕ್ಕೆ ಆಶೆಪಟ್ಟು ಪಾಪಕಾರ್ಯವನ್ನು ಮಾಡಿದೆಯೇನು?" ಎಂದು ಕೇಳಿದಳು. ಅದಕ್ಕೆ ಶರ್ಮಿಷ್ಠೆಯು "ಕೋಮಲಾಂಗೀ! ಹಾಗೇನೂ ಇಲ್ಲ. ಧರ್ಮಾತ್ಮನೂ, ವೇದಪಾರಂಗತನೂ ಆದ ಋಷಿಯೊಬ್ಬನು ನನ್ನಲ್ಲಿಗೆ ಬಂದಾಗ, ಆತನು ವರಪ್ರದನೆಂದು ನಾನು ಧರ್ಮಯುಕ್ತವಾದ ಕೋರಿಕೆಯನ್ನೇ ಅವನಲ್ಲಿ ಯಾಚಿಸಿದೆನು. ಧರ್ಮಕ್ಕೆ ವಿರುದ್ಧವಾಗಿ ನಾನೇನೂ ಅವನಲ್ಲಿ ಕೇಳಲಿಲ್ಲ. ಬೇರೇನೂ ಇಲ್ಲ. ನನಗೆ ಸಂತಾನವನ್ನು ಕೊಡೆಂದು ಆತನನ್ನು ಬೇಡಿದೆನು. ನಾನು ಅನ್ಯಾಯದಿಂದ ಕಾಮಸುಖವನ್ನು ಪಡೆಯತಕ್ಕವಳಲ್ಲ. ಆ ಋಷಿಯಿಂದಲೇ ನನಗೆ ಮಗನು ಹುಟ್ಟಿದನೆಂದು ಸತ್ಯವಾಗಿ ಹೇಳುವೆನು" ಎಂದಳು. ಅದಕ್ಕೆ ದೇವಯಾನಿಯು "ಭೀರೂ! ನೀನು ಹೇಳಿದಂತೆ ನಡೆದಿದ್ದರೆ ಸರಿಯೇ! ಅದರಿಂದ ತಪ್ಪೇನೂ ಇಲ್ಲ. ಆ ಋಷಿಯು ಯಾರೆಂದು ನೀನು ಬಲ್ಲೆಯಾ? ಆತನ ಗೋತ್ರವನ್ನೂ, ಹೆಸರನ್ನೂ, ಕುಲವನ್ನೂ ತಿಳಿಯಬೇಕೆಂದು ಅಪೇಕ್ಷಿಸುವೆನು" ಎಂದು ಕೇಳಿದಳು. ಅದಕ್ಕೆ ಶರ್ಮಿ

ಷ್ಠೆಯು "ಶುಚಿಸ್ಮಿತೆ! ಆತನು ತಪಸ್ಸಿನಿಂದಲೂ, ತೇಜಸ್ಸಿನಿಂದಲೂ ಸೂರ್ಯನಂತೆ ಬೆಳಗುತಿದ್ದನು. ಅಂತವನನ್ನು ನೋಡಿದೊಡನೆ ಯಾವು ದನ್ನು ಕೇಳುವುದಕ್ಕೂ ನನಗೆ ಶಕ್ತಿಯಿಲ್ಲದೆ ಹೋಯಿತು" ಎಂದಳು. ಆಗ ದೇವಯಾನಿಯು "ಶರ್ಮಿಷ್ಠೇ! ಜ್ಯೇಷ್ಠನೂ, ಶ್ರೇಷ್ಠನೂ ಆದ ದ್ವಿಜನಿಂ ದ ನಿನಗೆ ಸಂತಾನಪ್ರಾಪ್ತಿಯಾದರೆ, ಆಗ ನಿನ್ನಮೇಲೆ ನನಗೆ ಕೋಪವಿಲ್ಲ. ಸಂತೋಷವೇ" ಎಂದಳು. ಅವರಿಬ್ಬರೂ ಹೀಗೆ ಮಾತನಾಡಿ ನಗುತಿ ದ್ದರು. ಶರ್ಮಿಷ್ಠೆಯು ಹೇಳಿದುದು ನಿಜವೆಂದೇ ನಂಬಿ ದೇವಯಾನಿಯು ತನ್ನ ಅಂತಃಪುರಕ್ಕೆ ಹೋದಳು. ಯಯಾತಿಮಹಾರಾಜನು ದೇವಯಾ ನಿಯಿಂದ ಇಂದ್ರನಿಗೂ, ವಿಷ್ಣುವಿಗೂ ಸಮಾನರಾದ ಯದು ಮತ್ತು ತುರ್ವಸುವೆಂಬ ಇಬ್ಬರು ಮಕ್ಕಳನ್ನು ಪಡೆದನು.

ಹೀಗಿರುವಾಗ ಒಮ್ಮೆ ಯಯಾತಿಯು, ಪುಷ್ಪಮಧುವಿನಿಂದ ಮಿಶ್ರಿ ತವೂ, ವಿಶೇಷ ಮದಕಾರಿಯೂ, ಕೆಂಪು ಮತ್ತು ಹಳದಿ ಬಣ್ಣವುಳ್ಳದೂ ಆದ ಮದ್ಯವನ್ನು ತರಿಸಿ, ದೇವಯಾನಿಗೆ ಕುಡಿಸಿದನು. ದೇವಯಾನಿಯು ಆ ಮಧುವನ್ನು ಬಾರಿಬಾರಿಗೂ ಹೆಚ್ಚಾಗಿ ಕುಡಿದುಬಿಟ್ಟುದರಿಂದ ಮೈಮರೆ ತು ಮತ್ತಳಾದಳು. ಈ ಮದ್ಯಮದದಿಂದ ಅವಳಿಗೆ ಮೈಮೇಲೆ ಪ್ರಜ್ಞೆ ತಪ್ಪಿತು. ಆಗಾಗ ಅಳುವುದು, ಹಾಡುವುದು, ಕುಣಿದಾಡುವುದು, ಸಿಕ್ಕಿದ ಹಾಗೆ ಮಾತನಾಡುವುದು, ಇಂತಹ ವಿಪರೀತಚೇಷ್ಟೆಗಳನ್ನು ಮಾಡುತ್ತ ಕೊನೆಗೆ ರಾಜನನ್ನು ಕುರಿತು "ಓ ಬ್ರಾಹ್ಮಣಶ್ರೇಷ್ಠಾ! ನಿನ್ನ ರೂಪವೂ ವೇಷವೂ ರಾಜನಂತಿರುವುದು. ಏತಕ್ಕಾಗಿ ನೀನು ಇಲ್ಲಿಗೆ ಬಂದೆ? ನಿರ್ಜ ನವೂ, ದುರ್ಗಮವೂ ಆದ ಈ ಅರಣ್ಯಕ್ಕೆ ಯಾವ ಕಾರ್ಯಕ್ಕಾಗಿ ಬಂದೆ? ಯಯಾತಿಯೆಂಬ ಇಲ್ಲಿನ ರಾಜಶ್ರೇಷ್ಠನೋ ಬಹುಕ್ರೂರನು. ಆದುದ ರಿಂದ ಬ್ರಾಹ್ಮಣಾ! ನಿನಗೆ ಒಳ್ಳೆಯದಾಗಬೇಕೆಂಬ ಅಭಿಲಾಷೆಯಿದ್ದರೆ, ಇಲ್ಲಿಂದ ಓಡಿಹೋಗು" ಎಂದಳು. ಹೀಗೆ ಏನೇನೋ ಪ್ರಲಾಪಿಸುತ್ತ, ಪರರ ನಿಂದೆಗೆ ಪಾತ್ರಳಾಗಿ, ಅಸತ್ಪ್ರಲಾಪಗಳಿಂದ ಕೋಪವನ್ನು ಹೆಚ್ಚಿಸು ತ್ತಿರುವ ಆ ದೇವಯಾನಿಯನ್ನು ಯಯಾತಿಯು ತರ್ಜನವಾಕ್ಯಗಳಿಂದ ಹೆದರಿಸಿ, ಅವಳ ಕಾವಲಿಗಾಗಿ ಮೂಗರು, ಅಂಗಹೀನರು, ವೃದ್ಧರು, ಕುಂ

ಟರು ಮುಂತಾದವರನ್ನು ನಿಯಮಿಸಿ, ತಾನು ಶರ್ಮಿಷ್ಠೆಯೊಡನೆ ಬಹು ಕಾಲದವರೆಗೆ ಸುಖಸಂಭೋಗಗಳನ್ನು ಅನುಭವಿಸುತ್ತಿದ್ದನು. ಅವಳಿಗೂ ಆ ರಾಜರ್ಷಿಯಿಂದ ದ್ರುಹ್ಯು, ಅನು, ಪೂರುವೆಂಬ ಮೂವರು ಮಕ್ಕಳಾದರು.

ಜನಮೇಜಯರಾಜಾ! ಆಮೇಲೆ ಒಂದಾನೊಂದು ಸಮಯದಲ್ಲಿ ದೇವಯಾನಿಯು ಯಯಾತಿಯೊಡನೆ ನಿರ್ಜನವಾದ ಆ ವನಕ್ಕೆ ಹೋಗಲು, ಅಲ್ಲಿ ಅವಳಿಗೆ ದೇವತೆಗಳಂತೆ ಲಕ್ಷಣಯುಕ್ತರಾಗಿ, ವಿನೋದದಿಂದ ಆಟ ಮಾಡುತಿದ್ದ ಮಕ್ಕಳು ದೃಷ್ಟಿಗೆ ಬಿದ್ದರು. ಆಗ ಅವಳು ಆಶ್ಚರ್ಯಪಟ್ಟು, ರಾಜನನ್ನು ನೋಡಿ "ರಾಜಾ! ದೇವಕುಮಾರರಂತೆ ಸುಂದರಾಕೃತಿಯುಳ್ಳ ಇವರು ಯಾರ ಮಕ್ಕಳು? ಇವರು ವರ್ಚಸ್ಸಿನಲ್ಲಿಯೂ, ರೂಪಿನಲ್ಲಿಯೂ ನಿನ್ನನ್ನೇ ಹೋಲುವಂತೆ ತೋರುತ್ತಿರುವುದು" ಎಂದು ಕೇಳಿದಳು. ಹೀಗೆ ರಾಜನನ್ನು ಪ್ರಶ್ನೆಮಾಡಿದಮೇಲೆ, ಆ ಮಕ್ಕಳನ್ನೂ ಅದೇ ವಿಷಯವಾಗಿ ಪ್ರಶ್ನೆಮಾಡಿದಳು. ಆಗ ಆ ಮಕ್ಕಳ ದಾದಿಯು ಆ ಮಕ್ಕಳನ್ನು ಕುರಿತು "ಮಕ್ಕಳಿರಾ! ದ್ವಿಜಶ್ರೇಷ್ಠನು ನಿಮಗೆ ತಂದೆಯೆಂದು ನೀವೇಕೆ ಹೇಳಬಾರದು" ಎಂದು ಕೇಳಿದಳು. ಆಗ ಕುಮಾರರು "ಋಷಿಯೂ, ವೇದಾಧ್ಯಯನ ಸಂಪನ್ನನೂ ಆದ ಒಬ್ಬ ದ್ವಿಜನೇ ನಮಗೆ ತಂದೆ. ನಮ್ಮ ತಾಯಿ ಶರ್ಮಿಷ್ಠೆಯು ಹೇಳಿದುದು ಸುಳ್ಳಲ್ಲ. ದೇವಯಾನೀ! ನಮ್ಮನ್ನು ಕ್ಷಮಿಸು" ಎಂದರು. ಅದಕ್ಕೆ ದೇವಯಾನಿಯು "ಮಕ್ಕಳಿರಾ! ನಿಮ್ಮ ತಂದೆಯಾದ ಬ್ರಾಹ್ಮಣನ ಹೆಸರೇನು? ಅವನ ಗೋತ್ರವಾವುದು? ಆತನು ಯಾರವನು? ಆತನು ಎಲ್ಲಿರುವನು? ನಿಜವಾಗಿ ಹೇಳಿರಿ. ಆತನು ಯಾರೆಂಬುನನ್ನು ತಿಳಿಯಲಪೇಕ್ಷಿಸುವೆನು" ಎಂದು ಕೇಳಿದಳು. ಅದಕ್ಕಾ ಕುಮಾರರು, ತಮ್ಮ ತೋರುಬೆರಳಿನಿಂದ ಆ ರಾಜಶ್ರೇಷ್ಠನನ್ನೇ ತೋರಿಸಿ, ಶರ್ಮಿಷ್ಠೆಯು ತಮಗೆ ತಾಯಿಯೆಂದೂ ಹೇಳಿದರು. ಹೀಗೆ ಹೇಳುತ್ತಾ ಆ ಮಕ್ಕಳೆಲ್ಲರೂ ರಾಜನಬಳಿಗೆ ಓಡಿಹೋದರು. ಆದರೆ, ದೇವಯಾನಿಯು ಸಮೀಪದಲ್ಲಿದ್ದುದರಿಂದ, ಆತನು ಆ ಮಕ್ಕಳನ್ನು ಆದರಿಸಿ, ಕರೆದು ಅಪ್ಪಿಕೊಳ್ಳಲಿಲ್ಲ. ಆಗ ಮಕ್ಕಳು ಅಳುತ್ತಾ ತಮ್ಮ ತಾಯಿಯಾದ

ಶರ್ಮಿಷ್ಠೆಯ ಬಳಿಗೆ ಹೋದರು. ಆವರೇನು? ಮಹಾಸಾಧ್ವಿಯಾದ ಶರ್ಮಿಷ್ಠೆಯು ರಾಜನನ್ನು ನೋಡಿ ಯಾವ ಮಾತನ್ನೂ ಆಡದೆ, ದೂರದಲ್ಲಿ ತಲೆ ಬಗ್ಗಿಸಿ ನಿಂತಳು. ರಾಜನು ಆ ಮಕ್ಕಳಾಡಿದ ಮಾತುಗಳನ್ನು ಕೇಳಿಯೂ ನಾಚಿಕೆಯಿಂದ ಮಾತಾಡಲಾರದೆ ಸುಮ್ಮನೆ ನಿಂತಿದ್ದನು.

ಆಗ ದೇವಯಾನಿಯು ಆ ಬಾಲಕರಿಗೆ ರಾಜನಲ್ಲಿದ್ದ ವಿಶ್ವಾಸವನ್ನು ನೋಡಿ, ನಡೆದ ವಿಷಯಗಳನ್ನೆಲ್ಲ ಚೆನ್ನಾಗಿ ಮನಸ್ಸಿಗೆ ತಂದುಕೊಂಡು, ಶರ್ಮಿಷ್ಠೆಯನ್ನು ಕುರಿತು "ಶರ್ಮಿಷ್ಠೇ! ನೀನೇನು ಹೇಳಿದೆ? ಒಬ್ಬ ಋಷಿಯು ನಿನ್ನ ಬಳಿಗೆ ಬಂದಿದ್ದನೆಂದು ಹೇಳಿದೆಯಲ್ಲವೆ? ನೀನು ನನಗೆ ನಿಜಸ್ಥಿತಿಯನ್ನು ಮರೆಸಿಟ್ಟು ಸುಳ್ಳಾಡಿದೆ. ಮೊದಲೇ ನಿನ್ನಲ್ಲಿ ದೋಷವುಂಟೆಂದು ಸಂದೇಹಿಸಿ ನಾನು ನಿನ್ನನ್ನು ಕೇಳಿದರೂ, ನನ್ನ ದಾಸಿಯಾದ ನೀನು ನನಗೆ ಇಂತಹ ಅಪ್ರಿಯವಾದ ಕಾರ್ಯವನ್ನು ಮಾಡಿದೆಯಲ್ಲಾ! ಇನ್ನೂ ನಿನಗೆ ಹಿಂದಿನ ರಾಕ್ಷಸಸ್ವಭಾವವು ಬಿಡಲಿಲ್ಲ. ಅದರಿಂದಲೇ ನೀನು ನನಗೂ ಭಯಪಡದೆ ಹೀಗೆಲ್ಲ ಮಾಡುತ್ತಿರುವೆ" ಎಂದಳು.

ಆದಕ್ಕೆ ಶರ್ಮಿಷ್ಠೆಯು "ಅಮ್ಮಾ! ಋಷಿಯೆಂದಲ್ಲವೇ ನಾನು ನಿನಗೆ ಹೇಳಿದುದು? ಈಗಲೂ ಅದು ಸುಳ್ಳಲ್ಲ. ವಾಸ್ತವವೇ! ನಾನು ನ್ಯಾಯಕ್ಕೂ, ಧರ್ಮಕ್ಕೂ ಅನುಸಾರವಾಗಿ ನಡೆದುಕೊಳ್ಳತಕ್ಕವಳೇ. ಹೀಗಿರುವಾಗ ನಾನು ನಿನಗೆ ಭಯಪಡಬೇಕಾದುದೇನಿದೆ? ನ್ಯಾಯವು ನನ್ನ ಕಡೆಯಲ್ಲಿರುವಾಗ ಭಯವೇತಕ್ಕೆ? ನೀನು ಪತಿಯನ್ನು ವರಿಸಿದಾಗಲೇ ನಾನೂ ವರಿಸಿದಂತಾಯಿತು. ಕಲ್ಯಾಣೀ! ಧರ್ಮಕ್ಕನುಸಾರವಾಗಿ ತನ್ನ ಸಖಿಯ ಪತಿಯೇ ತನಗೂ ಭರ್ತನಾಗಬಹುದು. ನೀನು ನನಗೆ ಪೂಜಾರ್ಹಳು. ಗೌರವಾರ್ಹಳು. ಏಕೆಂದರೆ, ವಯಸ್ಸಿನಲ್ಲಿ ನನಗಿಂತಲೂ ನೀನು ದೊಡ್ಡವಳು. ಅಲ್ಲದೆ, ನೀನು ಬ್ರಾಹ್ಮಣಕನ್ಯೆ. ನಿನಗಿಂತಲೂ ಆ ರಾಜರ್ಷಿಯು ನನಗೆ ಅಧಿಕ ಪೂಜ್ಯನು. ಇದೆಲ್ಲ ನಿನಗೆ ತಿಳಿಯದೇ? ನನಗೆ ಗುರುವಾದ ನಿನ್ನ ತಂದೆಯು ನಮ್ಮಿಬ್ಬರನ್ನೂ ಆತನಿಗೆ ಕೊಟ್ಟನು. ಆದುದರಿಂದ ಭರ್ತನಾಗಿಯೂ, ಪೂಜ್ಯನಾಗಿಯೂ ಇರುವ ಆತನು ಪೋಷಣಾರ್ಹಳಾದ ನನ್ನನ್ನು ಪೋಷಿಸುತ್ತಿರುವನು" ಎಂದಳು. ಆಕೆಯ

ಮಾತುಗಳನ್ನು ಕೇಳಿ ದೇವಯಾನಿಯು ರಾಜನನ್ನು ನೋಡಿ "ರಾಜಾ! ನಿನ್ನ ಪ್ರಿಯಭಾರ್ಯೆಯಾದ ಶರ್ಮಿಷ್ಠೆಯೊಡನೆಯೇ ನೀನು ನಿನ್ನ ಇಷ್ಟಾನುಸಾರವಾಗಿ ರಮಿಸುತ್ತಿರು. ನೀನು ನನಗೆ ಅಪ್ರಿಯವಾದ ಕಾರ್ಯವನ್ನು ಮಾಡಿದೆ. ಇನ್ನು ನಾನು ಇಲ್ಲಿರುವುದಿಲ್ಲ" ಎಂದಳು.

ದೇವಯಾನಿಯು ಹೀಗೆಂದು ಹೇಳಿ, ಮಿತಿಮೀರಿದ ಕೋಪದಿಂದ ಕುದಿಯುತ್ತ, ದೂರದಲ್ಲಿ ನಾಚಿಕೆಯಿಂದ ತಲೆಬಗ್ಗಿಸಿ ನಿಂತಿದ್ದ ಶರ್ಮಿಷ್ಠೆಯನ್ನು ತನ್ನ ಕ್ರೂರದೃಷ್ಟಿಯಿಂದ ಸುಡುವಂತೆ ದುರದುರನೆ ನೋಡಿ, ಅಲ್ಲಿಯೇ ತನ್ನ ಸಮಸ್ತಭೂಷಣಗಳನ್ನೂ ಕಳಚಿ ಬಿಸುಟು, ಧಾರೆಧಾರೆಯಾಗಿ ಕಣ್ಣೀರುಬಿಡುತ್ತ, ತಟ್ಟನೆ ತಂದೆಯ ಸಮೀಪಕ್ಕೆ ಹೋಗಲುದ್ಯುಕ್ತಳಾದಳು. ಹಾಗೆ ಹೋಗುತ್ತಿರುವ ದೇವಯಾನಿಯನ್ನು ನೋಡಿ ರಾಜನು ಬಹಳ ವ್ಯಸನಾಕ್ರಾಂತನಾಗಿ ಅವಳನ್ನು ತಡೆದು ನಿಲ್ಲಿಸುವುದಕ್ಕಾಗಿ ಅವಳ ಹಿಂದೆಯೇ ಹೋದನು. ಆದರೇನು? ಅವಳು ಕೋಪದಿಂದ ಕೆಂಪೇರಿದ ಕಣ್ಣುಗಳೊಡನೆ ಹಿಂತಿರುಗಿ ಅವನನ್ನು ಕಣ್ಣೆತ್ತಿಯೂ ನೋಡದೆ ಹೊರಟಳು. ಕಣ್ಣೀರುಬಿಟ್ಟು ಬಾರಿಬಾರಿಗೂ ಕರೆಯುತಿದ್ದರೂ ಆ ರಾಜನ ಕೂಗುಗಳೊಂದಕ್ಕೂ ಅವಳು ಲಕ್ಷ್ಯಮಾಡದೆ, ತಂದೆಯಾದ ಶುಕ್ರಾಚಾರ್ಯನಿದ್ದಲ್ಲಿಗೆ ವೇಗದಿಂದ ಬಂದು, ಆತನಿಗೆ ಅಭಿವಾದನವನ್ನು ಮಾಡಿ ಆತನ ಮುಂದೆ ನಿಂತಳು. ಅವಳ ಹಿಂದೆಯೇ ಬಂದ ಯಯಾತಿಯೂ ಅಭಿವಾದನವನ್ನು ಮಾಡಿ ನಿಂತಿದ್ದನು. ಆಗ ದೇವಯಾನಿಯು ತನ್ನ ತಂದೆಯೊಡನೆ "ಅಪ್ಪಾ! ಅಧರ್ಮದಿಂದ ಧರ್ಮವು ಜಯಿಸಲ್ಪಟ್ಟಿತು. ಅಧರ್ಮವು ಮೇಲೇರಿತು! ಧರ್ಮವು ಕೆಳಗೆ ಬಿದ್ದಿತು. ಎಲ್ಲವೂ ತಲೆಕೆಳಗಾಯಿತು. ವೃಷಪರ್ವನ ಮಗಳಾದ ಶರ್ಮಿಷ್ಠೆಯೇ ನನ್ನನ್ನು ಮೆಟ್ಟಿ ಆಳುವಂತಾಯಿತು. ಯಯಾತಿಯು ಆಕೆಯಲ್ಲಿ ಮೂರು ಮಕ್ಕಳನ್ನು ಪಡೆದಿರುವನು. ನಿರ್ಭಾಗ್ಯೆಯಾದ ನನಗೋ ಇಬ್ಬರೇ ಮಕ್ಕಳು. ಅಪ್ಪಾ! ಈ ರಾಜನು ಧರ್ಮವನ್ನು ತಿಳಿದವನೆಂದು ನೀನು ಹೇಳಿದೆಯಲ್ಲವೆ? ಅವನು ಹೇಗೆ ಧರ್ಮವನ್ನು ಮೀರಿಹೋದನೋ ನೋಡು! ಇದನ್ನು ನಿನಗೆ ತಿಳಿಸುತ್ತಿರುವೆನು" ಎಂದಳು. ಇದನ್ನು ಕೇಳಿದೊಡನೆ

ಶುಕ್ರನು ಕ್ರೋಧವ್ಯಸನಗಳಿಂದ ಆ ಯಯಾತಿಯನ್ನು ಕುರಿತು " ರಾಜಾ! ನೀನು ಧರ್ಮವನ್ನು ತಿಳಿದವನಾಗಿದ್ದರೂ ಅಧರ್ಮಕ್ಕೆ ದಾರಿಕೊಟ್ಟು, ಧರ್ಮವನ್ನು ಬಿಟ್ಟು ನಡೆದೆ. ಇದರಿಂದ ಈಗಲೇ ಜರೆಯು ಬಂದು ನಿನ್ನ ರೂಪವನ್ನು ಕೆಡಿಸಲಿ! " ಎಂದು ಶಪಿಸಿದನು.

ಆಗ ಯಯಾತಿಯು " ಮಹಾತ್ಮಾ! ಅಸುರರಾಜಕುಮಾರಿಯಾದ ಶರ್ಮಿಷ್ಠೆಯು ತನ್ನ ಋತುಕಾಲವನ್ನು ಸಫಲಗೊಳಿಸಬೇಕೆಂದು ನನ್ನನ್ನು ಬೇಡಿಕೊಂಡಳು. ಆಕೆಯು ಬೇಡಿದಂತೆ ಆಚರಿಸುವುದು ಧರ್ಮವೆಂದು ತಿಳಿದು ನಾನು ಆಕೆಯ ಇಷ್ಟಾರ್ಥವನ್ನು ಸಲಿಸಿದೆನು. ಬ್ರಾಹ್ಮಣೋತ್ತಮಾ! ಒಬ್ಬ ಸ್ತ್ರೀಯು ಋತುಫಲವನ್ನು ಯಾಚಿಸಿದಾಗ, ಆಕೆಯನ್ನು ಅನುಗ್ರಹಿಸದ ಪುರುಷನು ಗರ್ಭಹತ್ಯೆ ಮಾಡಿದವನೆಂದು ಲೋಕದಲ್ಲಿ ಬ್ರಹ್ಮವಾದಿಗಳು ಹೇಳುವರು. ಅಲ್ಲದೆ, ವಿವಾಹಯೋಗ್ಯಳಾದ ಕನ್ಯೆಯೊಬ್ಬಳು ಕಾಮದಿಂದ ರಹಸ್ಯವಾಗಿ ಯಾಚಿಸಿದಾಗ, ಆಕೆಯನ್ನು ವರಿಸದವನು ಭ್ರೂಣಹತ್ಯಾಪಾಪಕ್ಕೆ ಗುರಿಯಾಗುವನೆಂದೂ ಪ್ರಾಜ್ಞರು ಹೇಳುವರು. ಮತ್ತು ನನ್ನನ್ನು ಯಾರು ಏನು ಹೇಳಿದರೂ ಅದನ್ನು ನೆರವೇರಿಸಿಕೊಡಬೇಕೆಂಬುದೂ ನನ್ನ ವ್ರತವು. ಅಲ್ಲದೆ, ನೀನೇ ಆಕೆಯನ್ನು ನನ್ನಲ್ಲಿ ಒಪ್ಪಿಸಿದೆ! ಹೀಗಿರುವಾಗ ಅವಳು ಈ ಲೋಕದಲ್ಲಿ ಮತ್ತೊಬ್ಬ ಪತಿಯನ್ನು ವರಿಸಲಾರಳು. ಭೃಗುಕುಲೋತ್ತಮಾ! ಈ ಕಾರಣಗಳನ್ನೆಲ್ಲ ವಿಮರ್ಶೆಮಾಡಿಯೇ ನಾನು ಅಧರ್ಮಕ್ಕೆ ಗುರಿಯಾಗಬಾರದೆಂದು ಶರ್ಮಿಷ್ಠೆಯನ್ನು ಸಂಗಮಿಸಿದೆನು. ಬ್ರಾಹ್ಮಣೋತ್ತಮಾ! ನಾನು ಮಾಡಿದುದು ಧರ್ಮವೆಂದೇ ತಿಳಿ. ನನ್ನಲ್ಲಿ ಕ್ಷಮೆಯನ್ನು ತೋರಿಸು " ಎಂದನು.

ಅದಕ್ಕೆ ಶುಕ್ರನು " ರಾಜಾ! ನೀನು ಅದಕ್ಕೂ ನನ್ನ ಆಜ್ಞೆಯನ್ನು ನಿರೀಕ್ಷಿಸಬೇಕಾಗಿದ್ದಿತು. ನೀನು ನನಗೆ ಅಧೀನನಾದವನು. ಧರ್ಮಗಳನ್ನು ಸುಳ್ಳಾಗಿಸುವವನು ಚೋರನಿಗೆ ಸಮಾನನು " ಎಂದನು. ಹೀಗೆ ಶುಕ್ರನು ಕೋಪಿಸಿಕೊಂಡು ಶಪಿಸಲು, ಒಡನೆಯೇ ಯಯಾತಿಯು ತನ್ನ ಪ್ರಾಯವನ್ನು ಕಳೆದುಕೊಂಡು ಮುದಿತನವನ್ನು ಹೊಂದಿದನು. ಆಗ ಯಯಾತಿಯು ಶುಕ್ರನನ್ನು ನೋಡಿ " ಭೃಗುಶ್ರೇಷ್ಠಾ! ನಾನು ಇನ್ನೂ

ದೇವಯಾನಿಯಲ್ಲಿ ನನ್ನ ಯೌವನವನ್ನು ಪೂರ್ಣವಾಗಿ ಅನುಭವಿಸಿ ತಪ್ತಿ ಹೊಂದಿಲ್ಲ. ಬ್ರಾಹ್ಮಣೋತ್ತಮಾ! ಮುಪ್ಪು ನನಗೆ ಬಾರದಂತೆ ನನ್ನನ್ನು ಅನುಗ್ರಹಿಸು" ಎಂದು ಯಾಚಿಸಿದನು. ಅದಕ್ಕೆ ಶುಕ್ರನು "ರಾಜಾ! ನನ್ನ ಮಾತು ಸುಳ್ಳಾಗದು. ನಿನಗೇನೋ ಮುದಿತನವು ಬಂದುಬಿಟ್ಟಿತು. ಹಾಗೆ ನಿನಗೆ ಅಪೇಕ್ಷೆಯಿದ್ದಲ್ಲಿ ಈ ಮುಪ್ಪನ್ನು ಬೇರೊಬ್ಬನಿಗೆ ಕೊಟ್ಟು ಬಿಡಲು ನಿನಗೆ ಶಕ್ತಿಯುಂಟಾಗಲಿ" ಎಂದನು. ಆಗ ಯಯಾತಿಯು ಬ್ರಾಹ್ಮಣಶ್ರೇಷ್ಠಾ! ನನ್ನ ಮಕ್ಕಳಲ್ಲಿ ಯಾರು ನನಗೆ ತನ್ನ ಪ್ರಾಯವನ್ನು ಕೊಡುವನೋ, ಆತನೇ ನನ್ನ ರಾಜ್ಯವನ್ನು ಹೊಂದಲಿ! ಮತ್ತು ಆತನು ಪುಣ್ಯವನ್ನೂ, ಕೀರ್ತಿಯನ್ನೂ ಹೊಂದುವನಾಗಲಿ! ಇದಕ್ಕೆ ನೀನು ಅನುಮತಿಸುವೆಯಲ್ಲವೆ?" ಎಂದನು. ಅದಕ್ಕೆ ಶುಕ್ರನು "ಯಯಾತೀ! ಮನಸ್ಸಿನಲ್ಲಿ ನನ್ನನ್ನು ಧ್ಯಾನಿಸಿ ನಿನ್ನ ಮುಪ್ಪನ್ನು ನಿನ್ನ ಇಷ್ಟಾನುಸಾರ ವಾಗಿ ಮತ್ತೊಬ್ಬನಿಗೆ ಕೊಡಬಹುದು. ಹಿರಿಯ ಮಗನಿಗೆ ಪಟ್ಟವನ್ನು ಕಟ್ಟದಿದ್ದರೂ ನೀನು ಪಾಪಕ್ಕೆ ಗುರಿಯಾಗುವುದಿಲ್ಲ. ಏಕೆಂದರೆ, ಯಾವ ಮಗನು ನಿನಗೆ ತನ್ನ ಯೌವನವನ್ನು ಕೊಡುವನೋ, ಆತನು ರಾಜನೂ, ದೀರ್ಘಾಯುಷ್ಮಂತನೂ, ಕೀರ್ತಿವಂತನೂ, ಬಹು ಸಂತಾನಿಯೂ ಆಗು ವನು" ಎಂದನು.

ಇದು ಎಪ್ಪತ್ತೇಳನೆಯ ಅಧ್ಯಾಯವು.

ಯಯಾತಿಯು ತನ್ನ ಮುಪ್ಪನ್ನು ತೆಗೆದುಕೊಳ್ಳಲು ಇಷ್ಟಪಡದ ಯದು ಮುಂತಾದವರನ್ನು ಶಪಿಸಿ, ತನ್ನ ಮುಪ್ಪನ್ನು ತೆಗೆದುಕೊಂಡ ಪೂರುವಿಗೆ ವರವನ್ನು ಕೊಟ್ಟುದು.

ಯಯಾತಿಯು ಮುಪ್ಪನ್ನು ಹೊಂದಿದಮೇಲೆ ತನ್ನ ಪಟ್ಟಣವನ್ನು ಸೇರಿ, ತನಗೆ ಜ್ಯೇಷ್ಠಪುತ್ರನೂ, ತರುಣನೂ ಆದ ಯದುವೆಂಬ ಪುತ್ರನನ್ನು ಕರೆದು "ಕುಮಾರಾ! ಶುಕ್ರನ ಶಾಪದಿಂದ ನಾನು ಮುದುಕನಾದೆನು. ಚರ್ಮದಲ್ಲಿ ಸುಕ್ಕೂ, ನೆರೆತ ಕೂದಲುಗಳೂ ದೇಹವೆಲ್ಲವನ್ನೂ ಆಕ್ರಮಿಸಿ

ರುವುವು. ನನಗೆ ಇನ್ನೂ ಯೌವನವನ್ನನುಭವಿಸಿ ತೃಪ್ತಿಯಿಲ್ಲದಿದೆ. ಯದೂ! ನೀನು ನನ್ನ ಮುಪ್ಪನ್ನೂ, ನನ್ನ ಪಾಪದ ಫಲವನ್ನೂ ತೆಗೆದುಕೊಳ್ಳುವವನಾಗು. ನಿನ್ನ ಯೌವನದಿಂದ ನಾನು ವಿಷಯಭೋಗಗಳನ್ನು ಅನುಭವಿಸುತಿದ್ದು, ಸಾವಿರ ವರ್ಷಗಳು ತುಂಬಿದೊಡನೆ ನಾನು ನಿನಗೆ ನಿನ್ನ ಪ್ರಾಯವನ್ನು ಕೊಟ್ಟು, ನನ್ನ ಮುಪ್ಪನ್ನೂ, ಪಾಪವನ್ನೂ ಹಿಂತಿರುಗಿ ತೆಗೆದುಕೊಳ್ಳುವೆನು" ಎಂದನು. ಅದಕ್ಕೆ ಯದುವು "ಜನಕಾ! ನಾನೊಲ್ಲೆನು. ಆ ಮುಪ್ಪು ನನಗೆ ಎಂದಿಗೂ ಬೇಡ. ಮುದಿತನದಲ್ಲಿ ಪಾನ ಭೋಜನಾದಿಗಳೂ ಕಷ್ಟವನ್ನುಂಟುಮಾಡುವುವು. ನನಗೆ ಸ್ವಲ್ಪವೂ ಸಮ್ಮತವಿಲ್ಲ. ಮನುಷ್ಯನಿಗೆ ಮುಪ್ಪು ಬಂದೊಡನೆ ಗಡ್ಡವಿಾಸೆಗಳೆಲ್ಲ ನರೆತು ಬೆಳ್ಳಗಾಗುವುವು. ಅವಯವಗಳೆಲ್ಲೆಲ್ಲ ಬಿಗಿತಪ್ಪಿ ಸಡಿಲವಾಗುವುದು. ಮೈಯಲ್ಲಿ ಸುಕ್ಕು ಬೀಳುವುದು. ರೂಪವು ನೋಡುವುದಕ್ಕೆ ವಿಕಾರವಾಗುವುದು. ಮೈಯಲ್ಲಿ ಸ್ವಲ್ಪಮಾತ್ರವೂ ಬಲವಿರುವುದಿಲ್ಲ. ಅಂತವನು ಬಹಳ ಕೃಶನಾಗಿ, ಯಾವ ಕೆಲಸವನ್ನೂ ಮಾಡುವುದಕ್ಕೆ ಶಕ್ತಿಯಿಲ್ಲದೆ, ಯುವತಿಯರ ಹಾಸ್ಯಕ್ಕೂ ಅವಮಾನಕ್ಕೂ ಗುರಿಯಾಗುವನು. ತನ್ನ ಸಹವಾಸಿಗಳೆಲ್ಲರೂ ನಿರಾಕರಿಸಿ ನಗುವರು. ಇಂತಹ ಮುಪ್ಪು ನನಗೆ ಎಂದಿಗೂ ಬೇಡ. ರಾಜಾ! ನಿನ್ನಲ್ಲಿ ನನಗಿಂತಲೂ ಹೆಚ್ಚು ವಿಶ್ವಾಸವುಳ್ಳ ಪುತ್ರರು ಇನ್ನೂ ಬೇರೆ ಕೆಲವರಿರುವರಲ್ಲವೆ? ನಿನ್ನ ಮುಪ್ಪನ್ನು ತೆಗೆದುಕೊಳ್ಳಲು ಮತ್ತೊಬ್ಬನನ್ನು ಕೇಳು. ನಿನಗೆ ತಿಳಿಯದ ಧರ್ಮವೇನಿರುವುದು?" ಎಂದನು. ಹೀಗೆ ಯದುವು ನಿರಾಕರಿಸಲು, ಯಯಾತಿಯು "ಪುತ್ರಾ! ನನ್ನ ಹೃದಯದಿಂದ ಹುಟ್ಟಿದ ನೀನು, ನಿನ್ನ ವಯಸ್ಸನ್ನು ಕೊಡಲು ಸಮ್ಮತಿಸದೆ ಹೋದುದರಿಂದ, ಮುಂದೆ ನಿನ್ನ ಸಂತತಿಯವರಿಗೆ ರಾಜ್ಯವಿಲ್ಲದೆ ಹೋಗಲಿ!" ಎಂದು ಹೇಳಿ, ತುರ್ವಸುವನ್ನು ಕರೆದು "ತುರ್ವಸೂ! ನೀನಾದರೂ ನನ್ನ ಮುಪ್ಪನ್ನು ತೆಗೆದುಕೊಂಡು ನಿನ್ನ ಯೌವನವನ್ನು ಕೊಡುವೆಯಾ? ನಾನು ಇನ್ನೂ ಕೆಲವು ಕಾಲದವರೆಗೆ ವಿಷಯಸುಖವನ್ನನುಭವಿಸುವೆನು. ಒಂದು ಸಾವಿರ ವರ್ಷಗಳು ತುಂಬಿದೊಡನೆಯೇ ನಿನ್ನ ಪ್ರಾಯವನ್ನು ತಿರುಗಿ ನಿನಗೇ ಕೊಟ್ಟು, ನನ್ನ ಮುಪ್ಪನ್ನೂ, ಪಾಪವನ್ನೂ ತೆಗೆದುಕೊಳ್ಳುವೆನು" ಎಂ

ದನು. ಆ ಮಾತುಗಳನ್ನು ಕೇಳಿ ತುರ್ವಸುವು "ಅಪ್ಪಾ! ಮುಪ್ಪಿನಿಂದ ಇಷ್ಟಭೋಗಗಳೆಲ್ಲವೂ ವಿಫಲವಾಗುವುವು. ಬಲವೂ, ರೂಪವೂ ಕೆಡುವುವು. ಬುದ್ಧಿಯೂ, ಪ್ರಾಣವೂ ಕೊನೆಗಾಣುವುವು. ಇಂತಹ ಮುಪ್ಪು ನನಗೆ ಬೇಡಲೇಬೇಡ!" ಎಂದನು. ಅದನ್ನು ಕೇಳಿ ಯಯಾತಿಯು "ನೀನು ನನ್ನ ಹೃದಯದಲ್ಲಿ ಹುಟ್ಟಿದವನಾಗಿದ್ದು, ನಿನ್ನ ಪ್ರಾಯವನ್ನು ನನಗೆ ಕೊಡದೆ ಹೋದೆಯಲ್ಲವೆ? ಆದುದರಿಂದ ನಿನಗೂ ಸಂತಾನವು ವಿಚ್ಛಿನ್ನವಾಗಲಿ! ಆಚಾರಕ್ಕೂ, ಧರ್ಮಕ್ಕೂ ಬದ್ಧರಾಗದೆ, ಪ್ರತಿಯೊಂದು ವಿಷಯದಲ್ಲಿಯೂ ವಿಪರೀತವಾಗಿಯೇ ನಡೆಯುಕೊಳ್ಳುತ್ತ, ಮಾಂಸಭೋಜಿಗಳಾಗಿ, ಎಲ್ಲಾ ವರ್ಣಕ್ಕಿಂತಲೂ ಹೀನಜಾತಿಯವರಾಗಿ, ಪಶುಧರ್ಮವನ್ನು ಹಿಡಿದು, ಮೃಗಾದಿಗಳಂತೆ ಬಹಿರಂಗವಾಗಿ ಸ್ತ್ರೀಸಂಭೋಗಾದಿಗಳನ್ನು ಮಾಡುವವರೂ, ಪಾಪಾತ್ಮರೂ ಆದ ಮ್ಲೇಚ್ಛರಿಗೆ ನೀನು ರಾಜನಾಗು" ಎಂದು ಆ ತುರ್ವಸುವನ್ನು ಹೀಗೆ ಶಪಿಸಿದಮೇಲೆ ಶರ್ಮಿಷ್ಠೆಯ ಮಗನಾದ ದ್ರುಹ್ಯುವನ್ನು ಕರೆದು "ಕುಮಾರಾ! ನನ್ನ ರೂಪವನ್ನೂ, ಕಳೆಯನ್ನೂ ಕೆಡಿಸಿದ ಮುಪ್ಪನ್ನು ನೀನು ಒಂದು ಸಾವಿರವರ್ಷದವರೆಗೆ ಸ್ವೀಕರಿಸು. ಅದುವರೆಗೂ ನಿನ್ನ ಯೌವನವನ್ನು ನನಗೆ ಕೊಡು. ಆ ಕಾಲಾವಧಿಯು ಕಳೆದೊಡನೆಯೇ ನಿನ್ನ ಪ್ರಾಯವನ್ನು ನಿನಗೆ ಕೊಟ್ಟು, ನಿನ್ನ ಮುಪ್ಪನ್ನೂ, ಪಾಪವನ್ನೂ ಹಿಂತಿರುಗಿ ತೆಗೆದುಕೊಳ್ಳುವೆನು" ಎಂದನು. ಆಗ ದ್ರುಹ್ಯುವು "ನನಗೇನೂ ಬೇಡ! ಮುದುಕನು, ರಥ, ಗಜ, ತುರಗಾದಿ ಸೌಖ್ಯಗಳನ್ನಾಗಲಿ, ಸ್ತ್ರೀಯರನ್ನಾಗಲಿ ಅನುಭವಿಸಲಾರನು. ಮುಪ್ಪಿನಲ್ಲಿ ಮಾತುಕೂಡ ತೊದಲಾಗುವುದು. ಅಂತಹ ಮುಪ್ಪು ನನಗೇಕೆ?" ಎಂದನು. ಇದನ್ನು ಕೇಳಿ ಯಯಾತಿಯು "ನನ್ನ ಹೃದಯದಲ್ಲಿ ಹುಟ್ಟಿದವನಾದ್ದು ನೀನು ನನಗೆ, ನಿನ್ನ ವಯಸ್ಸನ್ನು ಕೊಡಲಾರೆಯಷ್ಟೆ? ನಿನ್ನ ಈ ಭೋಗಾಪೇಕ್ಷೆಗಳಾವುವೂ ಎಲ್ಲಿಯೂ ನೆರವೇರದಿರಲಿ! ಉತ್ತಮಾಶ್ವಗಳಿಂದ ಕೂಡಿದ ರಥಗಳು, ಕುದುರೆಗಳು, ಆನೆಗಳು, ಮನುಷ್ಯರಿಂದ ಎಳೆಯಲ್ಪಡುವ ಬಂಡಿಗಳು, (ರಾಜಯೋಗ್ಯವಾದ ವಾಹನಗಳು) ಕತ್ತೆಗಳು, ಒಂಟೆಗಳು, ಪಶುಗಳು, ಪಲ್ಲಕ್ಕಿಗಳು, ಇವುಗಳ ಸಂಚಾರಕ್ಕೂ ಸಾಧ್ಯವಿಲ್ಲದೆ, ತೆಪ್ಪ, ದೋಣಿ ಮುಂ

ತಾದುವುಗಳಿಂದಲೂ ದಾಟಲು ಸಾಧ್ಯವಿಲ್ಲದ ಸ್ಥಳದಲ್ಲಿ, ನೀನು ನಿನ್ನ ಸಂತತಿಯೊಡನೆ ಸೇರಿ ಭೋಜನೆಂಬ ಹೆಸರನ್ನು ಹೊಂದಿ, ರಾಜ್ಯವಿಲ್ಲದೆ ಜೀವಿಸುವೆ '' ಎಂದನು. ಆಮೇಲೆ ಯಯಾತಿಯು ಅನುವೆಂಬ ಮಗನನ್ನು ನೋಡಿ " ಅನೂ! ನೀನಾದರೂ ಸಾವಿರವರ್ಷದವರೆಗೆ ನನ್ನ ಮುಪ್ಪನ್ನೂ ಪಾಪವನ್ನೂ ಕೈಕೊಳ್ಳುವೆಯಾ! ನಿನ್ನ ಯೌವನದಿಂದ ನಾನು ವಿಷಯಸುಖವನ್ನನುಭವಿಸುವೆನು '' ಎಂದನು. ಅದನ್ನು ಕೇಳಿ ಅನುವು " ಮುದುಕನಿಗೆ ಸ್ನಾನಶೌಚಗಳಿಲ್ಲ! ಮಕ್ಕಳಂತೆ ಹಸಿದಾಗ ಅನ್ನವನ್ನು ತಿನ್ನುವನು. ಕಾಲಕ್ಕನುಗುಣವಾಗಿ ಅಗ್ನಿಹೋತ್ರವನ್ನು ಮಾಡಲಾರನು. ಅಂತಹ ಮುದಿತನವು ನನಗೆ ಬೇಡ'' ಎಂದನು. ಆಗ ಯಯಾತಿಯು "ನೀನು ನನ್ನ ಹೃದಯದಲ್ಲಿ ಹುಟ್ಟಿದವನಾದರೂ, ನಿನ್ನ ವಯಸ್ಸನ್ನು ನನಗೆ ಕೊಡಲಾರದೆ, ಮುದಿತನಕ್ಕಿರುವ ದೋಷಗಳನ್ನೆಲ್ಲ ವಿಷದಪಡಿಸಿದೆ. ನೀನೇ ಅದರ ದೋಷಗಳಿಗೆಲ್ಲ ಗುರಿಯಾಗು. ಅನೂ! ನಿನ್ನ ಸಂತತಿಯವರು ಯೌವನವು ಪ್ರಾಪ್ತವಾದೊಡನೆ ಸಾಯಲಿ! ಅಗ್ನಿಕಾರ್ಯಗಳೂ ನಿನಗೆ ಬಿಟ್ಟುಹೋಗಲಿ '' ಎಂದನು.

ಹೀಗೆ ತನ್ನನ್ನು ನಿರಾಕರಿಸಿದ ಯದು ಮೊದಲಾದ ನಾಲ್ಕುಮಂದಿ ಪುತ್ರರನ್ನೂ ಶಪಿಸಿ, ಯಯಾತಿಯು ಕನಿಷ್ಠಪುತ್ರನುಮಾತ್ರ ತನ್ನ ಮಾತನ್ನು ಮೀರುವುದಿಲ್ಲವೆಂದು ನಂಬಿ, ಆತನಬಳಿಗೆ ಹೋಗಿ, " ಪುರೂ! ನೀನು ನನಗೆ ಅತ್ಯಂತ ಪ್ರಿಯಪುತ್ರನು. ಮತ್ತು ಇತರ ಪುತ್ರರಿಗಿಂತಲೂ ಮೇಲೆನಿಸಿಕೊಂಡವನು. ವತ್ಸಾ! ನನ್ನ ಮೈಯಲ್ಲಿ ಮುಪ್ಪು, ಸುಕ್ಕುಗಳೂ, ಕೂದಲಿನ ನರೆಯೂ ಶುಕ್ರಶಾಪದಿಂದ ಇದ್ದಕ್ಕಿದ್ದ ಹಾಗೆ ತಲೆದೋರಿತು. ನನಗಾದರೋ ಇನ್ನೂ ಯೌವನವನ್ನನುಭವಿಸಿ ತೃಪ್ತಿಯಾಗಿಲ್ಲ. ನೀನು ನನ್ನ ಮುಪ್ಪನ್ನೂ, ಪಾಪವನ್ನೂ ಸ್ವೀಕರಿಸು. ನಿನ್ನ ವಯಸ್ಸಿನಿಂದ ನಾನು ಸ್ವಲ್ಪಕಾಲಕ್ಕೆ ವಿಷಯಭೋಗವನ್ನನುಭವಿಸುವೆನು. ಒಂದು ಸಾವಿರ ವರ್ಷಗಳು ತುಂಬಿದೊಡನೆ ನಿನ್ನ ಯೌವನವನ್ನು ಹಿಂತಿರುಗಿ ನಿನಗೇ ಕೊಟ್ಟು, ನನ್ನ ಮುಪ್ಪನ್ನೂ, ಪಾಪವನ್ನೂ ತೆಗೆದುಕೊಳ್ಳುವೆನು '' ಎಂದನು.

ಅದನ್ನು ಕೇಳಿ ಪೂರುವು ಮನಸ್ಸಿನಲ್ಲಿ ಸ್ವಲ್ಪವೂ ಕಳಂಕವಿಲ್ಲದೆ ಅತ ನನ್ನು ಕುರಿತು "ಜನಕಾ! ನೀನು ಹೇಳಿದಂತೆ ಅವಶ್ಯವಾಗಿ ನಡೆಸು ವೆನು. ಗುರುವಾಕ್ಯವು ಮನುಷ್ಯರಿಗೆ ಪುಣ್ಯವನ್ನು ತರುವುದು. ಸ್ವರ್ಗ ವನ್ನೂ ತೋರಿಸುವುದು. ಆಯುಸ್ಸನ್ನೂ ಹೆಚ್ಚಿಸುವುದು. ಗುರುವಿನ ಅನುಗ್ರಹದಿಂದಲ್ಲವೇ ಇಂದ್ರನು ತ್ರಿಲೋಕಾಧಿಪತಿಯಾದನು. ಗುರುವಿಗೆ ಅಭಿಮತವಾದರೆ ಸಮಸ್ತ ಕಾಂಕ್ಷೆಗಳನ್ನೂ ಪಡೆಯಬಹುದು. ಸಾವಿರ ವರ್ಷವೇಕೆ? ನಿನಗೆ ಎಷ್ಟು ಕಾಲವು ಬೇಕೋ ಅಷ್ಟು ಕಾಲದವರೆಗೆ ನಿನ್ನ ಮುಪ್ಪನ್ನು ನಾನು ಧರಿಸಿರುವೆನು. ರಾಜಾ! ನಿನ್ನ ಮುಪ್ಪನ್ನೂ, ಪಾಪವನ್ನೂ ಸ್ವೀಕರಿಸುವೆನು. ನನ್ನ ಯೌವನವನ್ನು ತೆಗೆದುಕೊಂಡು ನಿನ್ನ ಮನಸ್ಸಿಗೆ ಬೇಕಾದಂತೆ ಕೋರಿದ ಸುಖವನ್ನು ನೀನು ಅನುಭವಿಸು. ನಾನು ನಿನ್ನ ಮುದಿಪ್ರಾಯವನ್ನೂ, ನಿನ್ನ ಈ ರೂಪವನ್ನೂ ಹೊಂದಿ, ನೀನು ಹೇಳಿದಂತೆ ನಡೆದುಕೊಳ್ಳುವೆನು" ಎಂದನು. ಅದಕ್ಕೆ ಯಯಾ ತಿಯು "ಪುರೂ! ನಿನ್ನಲ್ಲಿ ನಾನು ಪ್ರೀತನಾದೆನು. ನಿನಗೆ ಮನಃ ಪ್ರೀತಿಯಿಂದ ವರವನ್ನು ಕೊಡುವೆನು. ನಿನ್ನ ಸಂತತಿಯವರೇ ಸಮ ಸ್ತ ಕಾಮಿತಾರ್ಥಗಳನ್ನೂ ಪಡೆದು, ರಾಜ್ಯದಲ್ಲಿ ನೆಲೆಗೊಂಡಿರುವರು" ಎಂದನು. ಮಹಾ ತಪಸ್ಸಂಪನ್ನನಾದ ಯಯಾತಿಯು ಹೀಗೆ ಹೇಳಿ, ಮನಸ್ಸಿನಲ್ಲಿ ಶುಕ್ರನನ್ನು ಧ್ಯಾನಿಸಿ, ಪೂರುವಿಗೆ ತನ್ನ ಮುಪ್ಪನ್ನು ಕೊಟ್ಟನು.

ಇದು ಎಪ್ಪತ್ತೆಂಟನೆಯ ಅಧ್ಯಾಯವು.

---

ಯಯಾತಿಯು ವೈರಾಗ್ಯವನ್ನು ಹೊಂದಿ, ಪೂರುವಿಗೆ ತಿರುಗಿ ಯೌವನವನ್ನು ಕೊಟ್ಟು ಅವನಿಗೆ ಪಟ್ಟವನ್ನು ಕಟ್ಟಿ, ವ ನಕ್ಕೆ ಹೋದುದು. ಯದು ಮೊದಲಾದವರ ವಂಶಕ್ರಮವು.

ಆಗ ರಾಜಶ್ರೇಷ್ಠನಾದ ಯಯಾತಿಯು, ಪುರುವಿನ ಯೌವನವನ್ನು ಪಡೆದು, ರೂಪ ಯೌವನಗಳಿಂದ ಕೂಡಿದ ವಯಸ್ಸುಳ್ಳವನಾಗಿ ಸಂತೋಷ ದಿಂದ ತನ್ನ ಆಶೆಗೂ, ಉತ್ಸಾಹಕ್ಕೂ, ಕಾಲಕ್ಕೂ, ದೇಹಸುಖಕ್ಕೂ

ತಕ್ಕಂತೆಯೂ, ಧರ್ಮಕ್ಕೆ ವಿರೋಧವಿಲ್ಲದಂತೆಯೂ ಬೇಕಾದ ಸುಖಗಳನ್ನ ನುಭವಿಸಿದನು. ಆಗ ಆತನು ಯಜ್ಞದಿಂದ ದೇವತೆಗಳನ್ನೂ, ಶ್ರಾದ್ಧಾದಿಗಳಿಂದ ಪಿತೃದೇವತೆಗಳನ್ನೂ ತೃಪ್ತಿಹೊಂದಿಸಿದನು. ಅತಿಥಿಗಳಿಗೆ ಅಪೇಕ್ಷಿತವಾದವುಗಳನ್ನೆಲ್ಲಾ ಕೊಟ್ಟು ಸಂತೋಷಗೊಳಿಸಿದನು. ದಾನಗಳಿಂದ ಬ್ರಾಹ್ಮಣರನ್ನೂ, ಅನ್ನಪಾನಗಳಿಂದ ಅತಿಥಿಗಳನ್ನೂ, ಧನಧಾನ್ಯಾದಿ ರಕ್ಷಣೆಗಳಿಂದ ವೈಶ್ಯರನ್ನೂ, ಕಾಠಿನ್ಯವನ್ನು ತೋರಿಸದೆ ಕಾರುಣ್ಯದಿಂದ ಶೂದ್ರರನ್ನೂ, ನ್ಯಾಯದಂಡನದಿಂದ ಚೋರರನ್ನೂ, ಧರ್ಮದಿಂದ ಸಮಸ್ತ ಪ್ರಜೆಗಳನ್ನೂ ಸಂತೋಷಪಡಿಸುತ್ತಾ ದೇವೇಂದ್ರನಂತೆ ಸ್ವತಂತ್ರನಾಗಿ ರಾಜ್ಯಭಾರ ಮಾಡುತಿದ್ದನು. ಯುವಕಸಿಂಹನಾದ ಆ ರಾಜನು ಧರ್ಮಕ್ಕೆ ವಿರೋಧವು ಬಾರದಂತೆ ಎಲ್ಲಾ ಸುಖಗಳನ್ನೂ ಅನುಭವಿಸಿದನು. ಆ ರಾಜನು ಹೀಗೆ ಕಾಮಸುಖದಲ್ಲಿ ಮುಳುಗಿ ತೇಲುತ್ತ, ಒಂದುಸಾವಿರ ವರ್ಷವು ಮುಗಿಯುತ್ತ ಬರಲು, ಖಿನ್ನನಾಗಿ ತನ್ನ ವಾಗ್ದಾನವನ್ನು ಮನಸ್ಸಿನಲ್ಲಿ ನೆನೆಸಿದನು. ಆತನು ಆ ಒಂದುಸಾವಿರ ವರ್ಷಗಳನ್ನು ನಿಮಿಷ, ಕ್ಷಣ ಮುಂತಾದುವುಗಳನ್ನು ಕೂಡ ತಪ್ಪದೆ ಸರಿಯಾಗಿ ಲೆಕ್ಕಿಸುತಿದ್ದನು. ವಿಶ್ವಾಚಿಯೆಂಬ ಅಪ್ಸರಸ್ತ್ರೀಯೊಡಗೂಡಿ ನಂದನವನದಲ್ಲಿಯೂ, ಅಲಕಾಪುರಿಯಲ್ಲಿಯೂ, ಉತ್ತರಮೇರು ಶೃಂಗದಲ್ಲಿಯೂ ರಮಿಸುತ್ತಾ ಸುಖವಾಗಿದ್ದನು. ಆಮೇಲೆ ನಿಯಮಿತಕಾಲವು ಮುಗಿದುದೆಂದು ತಿಳಿದು, ತನ್ನ ಮಗನಾದ ಪೂರುವನ್ನು ನೋಡಿ "ಕುಮಾರಾ! ನಾನು ನಿನ್ನ ಯೌವನವನ್ನು ಪಡೆದು, ತೋರಿದ ರೀತಿಯಲ್ಲಿ ಉತ್ಸಾಹದಿಂದ ನಿಯತ ಕಾಲದವರೆಗೆ ವಿಷಯಸುಖವನ್ನನುಭವಿಸಿದೆನು. ಕಾಮವೆಂಬುದು ಸುಖವನ್ನನುಭವಿಸುವುದರಿಂದ ಯಾವಾಗಲೂ ಶಾಂತವಾಗುವುದಿಲ್ಲ. ತುಪ್ಪವನ್ನು ಸುರಿದಷ್ಟೂ ಅಗ್ನಿಯು ಅಧಿಕವಾಗಿ ಜ್ವಲಿಸುವಂತೆ, ಅನುಭವಿಸಿದಷ್ಟೂ ಅದು ವೃದ್ಧಿಹೊಂದುವುದು. ಈ ಭೂಮಿಯಲ್ಲಿರುವ ಭತ್ತ, ಗೋಧಿ ಮುಂತಾದ ಎಲ್ಲಾ ಧಾನ್ಯಗಳು, ಹಸುಗಳು, ಸ್ತ್ರೀಯರು ಇವನ್ನೆಲ್ಲ ಸೇರಿಸಿ ಕೊಟ್ಟರೂ ಒಬ್ಬನ ತೃಪ್ತಿಗೆ ಸಾಲದು. ಆದುದರಿಂದ ಈ ದಾಹವನ್ನು ಬಿಟ್ಟುಬಿಡಬೇಕು. ಬುದ್ಧಿಗೆಟ್ಟವರಿಗೆ ಈ ದಾಹವು ಅಡಗುವ ಸಂಭವವಿಲ್ಲ. ದೇಹವು ಜೀರ್ಣವಾದರೂ ಅದು ಜೀರ್ಣವಾಗುವುದಿಲ್ಲ

ಪ್ರಾಣವಿರುವವರೆಗೂ ಈ ರೋಗವು ಬಿಡುವುದಿಲ್ಲ. ಅಂತಹ ತೃಷ್ಣೆಯು ನ್ನು ಬಿಟ್ಟುಬಿಡುವವನಿಗೇ ಸುಖವು. ವಿಷಯಸುಖದಲ್ಲಿ ನನ್ನ ಮನಸ್ಸು ಮಗ್ನವಾಗಿ, ಒಂದೆರಡಲ್ಲ, ಸಾವಿರ ವರ್ಷಗಳು ತುಂಬಿದುವು. ಆದರೂ ನನ್ನ ತೃಷ್ಣೆಯು ವಿಷಯಸುಖದಲ್ಲಿ ಈಗಲೂ ದಿನೇದಿನೇ ಹೆಚ್ಚುತ್ತ ಲೇ ಇರುವುದು. ಆದುದರಿಂದ ಇನ್ನಾದರೂ ನಾನು ತೃಷೆಯನ್ನು ಬಿಟ್ಟು, ಬ್ರಹ್ಮನಲ್ಲಿ ಮನಸ್ಸನ್ನು ನಿಲ್ಲಿಸಿ, ಶೀತೋಷ್ಣಗಳನ್ನು ತೊರೆದು, ನನ್ನದೆಂಬ ಮಮಕಾರವನ್ನು ಬಿಟ್ಟು, ಮೃಗಗಳೊಡನೆ ಅರಣ್ಯದಲ್ಲಿ ಸಂಚರಿಸುತ್ತಿರು ವೆನು. ಪುರೂ! ನಿನ್ನಲ್ಲಿ ನಾನು ಸಂತುಷ್ಟನಾದೆನು. ನಿನಗೆ ಶುಭವಾ ಗಲಿ. ನಿನ್ನ ಯೌವನವನ್ನು ನೀನೇ ತೆಗೆದುಕೋ. ರಾಜ್ಯವನ್ನು ಕೈ ಕೊಳ್ಳುವವನಾಗು. ನೀನು ಎಷ್ಟು ಕಾಲದವರೆಗೆ ಯೌವನವು ಬೇಕೆಂದು ಕೋರುವೆಯೋ, ಅದುವರೆಗೂ ದೀರ್ಘಾಯುಷ್ಯದಿಂದ ಕೂಡಿ, ಅದನ್ನು ಅನುಭವಿಸು. ನೀನಲ್ಲವೇ ನನಗೆ ಪ್ರಿಯವನ್ನುಂಟುಮಾಡಿದ ಮಗನು" ಎಂದನು.

ಒಡನೆ ಯಯಾತಿಗೆ ಮುಪ್ಪು ಬಂದಿತು. ಪೂರುವು ತನ್ನ ಯೌವನ ವನ್ನು ಹೊಂದಿದನು. ರಾಜನು ಆ ಪೂರುವಿಗೆ ಪಟ್ಟಾಭಿಷೇಕ ಮಾಡ ಬೇಕೆಂದು ಕೋರಲು, ಬ್ರಾಹ್ಮಣಾದಿ ವರ್ಣದವರು ಆತನನ್ನು ನೋಡಿ "ಪ್ರಭೂ! ಶುಕ್ರನ ಮೊಮ್ಮಗನೂ, ದೇವಯಾನಿಯ ಮಗನೂ, ಹಿರಿಯವ ನೂ ಆದ ಯದುವನ್ನು ಬಿಟ್ಟು, ಪೂರುವಿಗೆ ಹೇಗೆ ರಾಜ್ಯವನ್ನು ಕೊಡುವೆ? ಯದುವು ನಿನ್ನ ಜ್ಯೇಷ್ಠಪುತ್ರನು. ಅವನಿಂದಾಚೆಗೆ ಹುಟ್ಟಿದವನು ತುರ್ವಸು. ಅವನಿಂದಾಚೆಗೆ ಶರ್ಮಿಷ್ಠೆಯ ಪುತ್ರನಾದ ದ್ರುಹ್ಯುವೂ, ಅವನಿಂದಾಚೆಗೆ ಪೂರುವೂ ಹುಟ್ಟಿರುವರು. ಹಿರಿಯರನ್ನು ಬಿಟ್ಟು ಕನಿಷ್ಠ ಪುತ್ರನು ರಾಜ್ಯಕ್ಕೆ ಹೇಗೆ ಅರ್ಹನಾಗುವನು? ಈ ವಿಷಯವನ್ನು ನಿನಗೆ ತಿಳಿಸುತ್ತಿರುವೆವು. ನೀನು ಧರ್ಮವನ್ನು ಪಾಲಿಸು" ಎಂದರು. ಅದಕ್ಕೆ ಯಯಾತಿಯು "ಬ್ರಾಹ್ಮಣಾದಿ ಸಮಸ್ತ ವರ್ಣದವರೂ ನನ್ನ ಮಾತನ್ನು ಲಾಲಿಸಿರಿ. ಜ್ಯೇಷ್ಠನಿಗೆ ನಾನು ರಾಜ್ಯವನ್ನು ಕೊಡದಿರುವ ಕಾರಣವನ್ನು ತಿಳಿಸುವೆನು. ಹಿರಿಯನಾದ ಯದುವು ನನ್ನ ಆಜ್ಞೆಯನ್ನು ಪಾಲಿಸಲಿಲ್ಲ.

ತಂದೆಗೆ ವಿರುದ್ಧವಾಗಿ ನಡೆಯತಕ್ಕವನು ಮಗನಲ್ಲವೆಂದೇ ಸಜ್ಜನರು ಹೇಳುವರು. ತಂದೆತಾಯಿಗಳ ಮಾತನ್ನು ನಡೆಸತಕ್ಕವನೂ, ಅವರಿಗೆ ಹಿತನಾದವನೂ ಪುತ್ರನೆನಿಸುವನು. ತಾಯಿತಂದೆಗಳಲ್ಲಿ ಮಗನು ಹೇಗಿರಬೇಕೋ ಹಾಗೆ ನಡೆಯತಕ್ಕವನು ಪುತ್ರನೇಹೊರತು ಜನನಮಾತ್ರಕ್ಕೆ ಪುತ್ರನೆನಿಸಲಾರನು. " ಪುತ್ " ಎಂಬುದೊಂದು ನರಕವು. ನರಕವೆಂಬುದೇನು ? ಕೇವಲದುಃಖವೇ ! ತಾಯಿತಂದೆಗಳ ದುಃಖವನ್ನು ತಪ್ಪಿಸಿ ಕಾಪಾಡತಕ್ಕವನೇ (ಇಹಪರಗಳಲ್ಲಿಯೂ, ನರಕ ದುಃಖಗಳನ್ನು ತಪ್ಪಿಸಿ ಕಾಪಾಡುವವನೇ) ಪುತ್ರನು ದೇವತೆಗಳನ್ನೂ, ಋಷಿಗಳನ್ನೂ ಪೂಜಿಸುವುದರಲ್ಲಿ ತಂದೆಗೆ ಸಾಟಿಯಾಗಿ, ಎಲ್ಲರಿಗೂ ಮೇಲನ್ನು ಕೋರತಕ್ಕವನು ಯಾವನೋ ಆ ಪುತ್ರನೇ ಜ್ಯೈಷ್ಠಪುತ್ರನೆನಿಸುವನು. ಮೂಗನು, ಕುರುಡನು, ಕುಂಟನು, ಕಿವುಡನು, ಬಿಳಿಯ ಕುಷ್ಠವುಳ್ಳವನು, ಸ್ವಧರ್ಮಗಳನ್ನು ಅನುಷ್ಠಿಸದವನು, ಚೋರನು, ಪಾಪಶೀಲನು ಇಂತವರು ಮೊದಲು ಹುಟ್ಟಿದ ಮಾತ್ರಕ್ಕೆ ಜ್ಯೈಷ್ಠಪುತ್ರರೆನಿಸಲಾರರು. ಇಹಪರಗಳೆರಡರಲ್ಲಿಯೂ ತಂದೆಗೆ ಕ್ಷೇಮವನ್ನುಂಟುಮಾಡತಕ್ಕವನೂ, ಗುಣವಂತನೂ ಆದ ಮಗನೇ ಮಕ್ಕಳಲ್ಲಿ ಜ್ಯೇಷ್ಠನ ಭಾಗವನ್ನು ಪಡೆಯುವುದಕ್ಕೆ ಅರ್ಹನು. ಅವನೇ ಪುತ್ರನಲ್ಲದೆ ಇತರರಾರೂ ಪುತ್ರರಲ್ಲ. ಅಂತವರನ್ನು ತೊರೆದುಬಿಡಬೇಕಾದುದೇ ! ಪಿತೃಗಳಿಗೆ ಪುತ್ರನಿಂದಲೇ ಪುಣ್ಯಪ್ರಾಪ್ತಿಯೆಂದು ಧರ್ಮಜ್ಞರು ಹೇಳುವರು. ಪುತ್ರನು ತಂದೆಯ ಹೃದಯದಿಂದಲೇ ಹುಟ್ಟಿದುದಾಗಿ ಪುತ್ರಜನನವನ್ನು ಕುರಿತು ಹೇಳುವ ವೇದಗಳಲ್ಲಿ ಪ್ರತಿಪಾದಿಸಲ್ಪಡುವುದು. ತಂದೆಗೆ ಸಂಬಂಧಪಟ್ಟ ಅನೇಕ ಸಂಗತಿಗಳು ಪುತ್ರನಲ್ಲಿ ಕಾಣಿಸುತ್ತಿವೆ. ಆದುದರಿಂದಲೇ ಶ್ರುತಿಯು " ಆತ್ಮಾ ವೈ ಪುತ್ರನಾಮಾಸಿ " (ಎಂದರೆ, ತಾನೇ ಪುತ್ರನಾಗುವನು) ಎಂದು ಉದ್ಘೋಷಿಸುತ್ತಿದೆ. ನನ್ನ ಮಗನೆನಿಸಿಕೊಂಡ ಯದುವೂ ನನ್ನನ್ನು ಅವಮಾನಿಸಿದನು. ಹಾಗೆಯೇ ತುರ್ವಸುವೂ, ದ್ರುಹ್ಯುವೂ, ಅನುವೂ ನನ್ನನ್ನು ಬಹಳವಾಗಿ ತಿರಸ್ಕರಿಸಿ ಅವಮಾನಿಸಿದರು. ಪೂರುವೊಬ್ಬನೇ ನನ್ನ ಮಾತಿನಂತೆ ನಡೆದವನು. ಅವನೇ ನನ್ನನ್ನು ಅತ್ಯಂತವಾಗಿ ಗೌರವಿಸಿದನು. ನನ್ನ ಮುಪ್ಪನ್ನು ತೆಗೆದುಕೊಂಡ ಆ ಕನಿಷ್ಠನೇ ನನ್ನ ರಾಜ್ಯವನ್ನು ಪಡೆಯುವುದಕ್ಕೂ ಅರ್ಹ

ನು. ಆ ಪೂರುವೇ ನನಗೆ ಹಿತನಾಗಿ ನನ್ನ ಕೋರಿಕೆಯನ್ನು ನಡೆಸಿದನು. ಅಲ್ಲದೆ ಶುಕ್ರಾಚಾರ್ಯನು ಕೂಡ, "ನಿನ್ನನ್ನು ಅನುವರ್ತಿಸಿ ನಡೆಯತಕ್ಕ ಪುತ್ರನಾವನೋ ಅವನೇ ರಾಜನಾಗತಕ್ಕವನೆಂಬು" ವರವನ್ನು ಕೊಟ್ಟಿರುವನು. ತಂದೆಯನ್ನನುವರ್ತಿಸಿ ನಡೆಯತಕ್ಕ ಪುತ್ರನೇ ಆ ತಂದೆಯ ದಾಯಭಾಗವನ್ನು ಪಡೆಯತಕ್ಕವನು. ಆದುದರಿಂದ ನಾನು ನಿಮ್ಮಲ್ಲಿ ಪ್ರಾರ್ಥಿಸಿ ಕೇಳಿಕೊಳ್ಳುವೆನು. ಪೂರುವಿಗೇ ಪಟ್ಟಾಭಿಷೇಕವು ನಡೆಯಲಿ" ಎಂದನು.

ಆಗ ಪ್ರಜೆಗಳೆಲ್ಲರೂ ಆ ಮಾತನ್ನು ಅನುಮೋದಿಸಿ, "ರಾಜಾ! ಯಾವ ಪುತ್ರನು ತಂದೆಯ ಮನೋನುವರ್ತಿಯಾಗಿ, ಗುಣಸಂಪನ್ನನಾಗಿ, ತಾಯ್ತಂದೆಗಳಿಗೆ ಹಿತಕರನಾಗಿರುವನೋ ಅವನೇ ಎಲ್ಲಾ ಭಾಗ್ಯಕ್ಕೂ ಅರ್ಹನು. ಕನಿಷ್ಠನಾಗಿದ್ದರೂ ಅವನೇ ಜ್ಯೇಷ್ಠನೆಂದೆಣಿಸಲ್ಪಡುವನು. ಇದು ವೇದಗಳಲ್ಲಿಯೂ, ಧರ್ಮಾರ್ಥಶಾಸ್ತ್ರಗಳಲ್ಲಿಯೂ, ಪೂರ್ವಕಾಲದ ಋಷಿಗಳು ನಿರ್ಣಯಿಸಿದ ಸ್ಮೃತಿಗಳಲ್ಲಿಯೂ ಹೇಳಲ್ಪಟ್ಟಿದೆ. ನಿನಗೆ ಪ್ರಿಯವನ್ನುಂಟುಮಾಡಿದ ನಿನ್ನ ಪುತ್ರನಾದ ಪೂರುವೇ ನಿನ್ನ ರಾಜ್ಯಕ್ಕೆ ಅರ್ಹನು. ಶುಕ್ರನೂ ಅದಕ್ಕನುಸಾರವಾಗಿಯೇ ವರವನ್ನು ಕೊಟ್ಟಿರುವನು. ಆದುದರಿಂದ ಅದಕ್ಕೆ ಪ್ರತಿಯಾಗಿ ನಡೆಯಲು ಸಾಧ್ಯವಿಲ್ಲ" ಎಂದರು.

ಹೀಗೆ ಪುರಜನರೂ, ದೇಶಜನರೂ ಸಮ್ಮತಿಸಿದಮೇಲೆ, ಯಯಾತಿಯು ತನ್ನ ರಾಜ್ಯದಲ್ಲಿ ಪೂರುವಿಗೆ ಪಟ್ಟಾಭಿಷೇಕವನ್ನು ನಡೆಸಿ, ಅವನ ಅಣ್ಣಂದಿರಾದ ಯದು, ತುರ್ವಸು, ದ್ರುಹ್ಯು, ಅನುವೆಂಬೀ ನಾಲ್ವರನ್ನೂ ದೇಶದ ಕೊನೆಯ ಎಲ್ಲೆಗಳಲ್ಲಿರಿಸಿ, ತಾನು ವಾನಪ್ರಸ್ಥದೀಕ್ಷೆಯನ್ನು ವಹಿಸಿ, ತಪಸ್ವಿಗಳಾದ ಅನೇಕ ಬ್ರಾಹ್ಮಣರೊಡನೆಯೂ, ದೇವಯಾನೀ ಶರ್ಮಿಷ್ಠೆಯರೊಡನೆಯೂ ಸೇರಿ ತಪೋವನಕ್ಕೆ ಹೋಗಿ, ಅಲ್ಲಿ ಉತ್ತಮ ತಪಸ್ಸನ್ನು ಹಿಡಿದನು. ಆಮೇಲೆ ಇತ್ತಲಾಗಿ ಯದುವಿನಿಂದ ಯಾದವರೂ, ತುರ್ವಸುವಿನಿಂದ ಯವನರೂ, ದ್ರುಹ್ಯುವಿನಿಂದ ಭೋಜರೂ, ಅನುವಿನಿಂದ ಮ್ಲೇಚ್ಛಜಾತಿಯವರೂ ಹುಟ್ಟಿದರು. ಪೂರುವಿನಿಂದ ಪೌರವವಂಶವು ಬೆಳೆಯಿತು. ಓ ಜನಮೇಜಯರಾಜಾ! ನೀನು ಆ ಪೂರುವಂಶದಲ್ಲಿ

ಹುಟ್ಟಿದವನೇ! ನೀನು ಜಿತೇಂದ್ರಿಯನಾಗಿದ್ದು ಸಾವಿರಾರು ವರ್ಷಗಳ ವರೆಗೆ ಈ ರಾಜ್ಯವನ್ನು ಪಾಲಿಸುವುದಕ್ಕಾಗಿಯೇ ಹುಟ್ಟಿರುವೆ" ಎಂದನು.

ಇದು ಎಪ್ಪತ್ತೊಂಭತ್ತನೆಯ ಅಧ್ಯಾಯವು.



## (ಉತ್ತರ ಯಾಯಾತಾರಂಭವು.)

ಯಯಾತಿಯು ಸ್ವರ್ಗಕ್ಕೆ ಹೋದುದು.

ಓ ಜನಮೇಜಯರಾಜಾ! ನಹುಷಪುತ್ರನಾದ ಯಯಾತಿಯು, ಹೀಗೆ ತನಗೆ ಇಷ್ಟನಾದ ಪುತ್ರನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕಮಾಡಿ, ಮನಶ್ಶಾಂತಿಯಿಂದ ವಾನಪ್ರಸ್ಥಾಶ್ರಮವನ್ನು ಹಿಡಿದು ಕಾಡಿಗೆ ಹೊರಟನು. ಅಲ್ಲಿ ಅನೇಕಬ್ರಾಹ್ಮಣರೊಡನೆ ಕಲೆತು. ದೃಢವಾದ ವ್ರತವನ್ನು ಹಿಡಿದು, ಇಂದ್ರಿಯಗಳನ್ನಡಗಿಸಿ ಹಣ್ಣುಗಡ್ಡೆಗಳನ್ನೇ ಭುಜಿಸುತಿದ್ದು, ಸುಖಸಂತೋಷಗಳಿಂದ ಇರುತ್ತಿರಲು, ಸ್ವಲ್ಪ ಕಾಲದಲ್ಲಿಯೇ ತಿರುಗಿ ಇಂದ್ರಶಾಪದಿಂದ ಮನುಷ್ಯಲೋಕಕ್ಕೆ ಬೀಳಬೇಕಾಯಿತು. ಆದರೇನು? ತಿರುಗಿ ಸಾಧುಗಳ ಸಹವಾಸದ ಫಲದಿಂದ ಅವನು ಸ್ವರ್ಗಕ್ಕೆ ಸೇರಿದನು" ಎಂದನು.

ಆಗ ಜನಮೇಜಯನು "ಓ ಮುನೀಂದ್ರಾ! ಸ್ವರ್ಗದಲ್ಲಿದ್ದ ಯಯಾತಿಯನ್ನು ದೇವೇಂದ್ರನು ಸ್ವಲ್ಪ ಕಾಲದೊಳಗಾಗಿಯೇ ಭೂಲೋಕಕ್ಕೆ ನೂಕಿಬಿಟ್ಟ ಕಾರಣವೇನು? ಅವನು ಸ್ವರ್ಗದಿಂದ ನೂಕಲ್ಪಟ್ಟರೂ, ಭೂಮಿಗೆ ಬೀಳದೆ, ಅಂತರಿಕ್ಷದಲ್ಲಿಯೇ ನಿಂತಿದ್ದು, ಅಲ್ಲಿಂದಲೇ ತಿರುಗಿ ಸ್ವರ್ಗಕ್ಕೆ ಹೋದುದಾಗಿಯೂ ನಾನು ಕೇಳಿರುವೆನು. ಅವನು ವಸುಮಂತ, ಅಷ್ಟಕ, ಪ್ರತರ್ದನ, ಶಿಬಿಯೆಂಬವರೊಡನೆ ಸಂಧಿಸಿ, ಅಂತರಿಕ್ಷದಿಂದ ಹಾಗೆಯೇ ಮೇಲೆ ಹೋದನೆಂದೂ ಕೇಳುವೆನು. ಅವನು ಯಾವ ಸತ್ಕರ್ಮದಿಂದ ತಿರುಗಿ ಸ್ವರ್ಗವನ್ನು ಹೊಂದಿದನು? ಈ ಬ್ರಾಹ್ಮಣಸಭೆಯಲ್ಲಿ ನಿನ್ನಿಂದ ಆ ಚರಿತ್ರವನ್ನೆಲ್ಲ ಕೇಳಬೇಕೆಂದು ನನಗೆ ಬಹಳ ಕುತೂಹಲವಿರುವುದು. ರಾಜನಾದ ಆ ಯಯಾತಿಯಾದರೋ ದೇವೇಂದ್ರನಿಗೆ ಸಮ

ನಾಗಿದ್ದವನು. ಕುರುವಂಶವನ್ನು ವೃದ್ಧಿಗೊಳಿಸತಕ್ಕವನಾಗಿ, ಸೂರ್ಯ ನಂತೆ ತೇಜಸ್ವಿಯಾಗಿದ್ದವನು. ವಿಶಾಲಕೀರ್ತಿಯುಳ್ಳವನೂ, ಮಹಾತ್ಮ ನೂ ಆದ ಆ ಯಯಾತಿಯ ಚರಿತ್ರವನ್ನೆಲ್ಲ ನೀನು ತಿಳಿಸಬೇಕು. ಸ್ವರ್ಗ ದಲ್ಲಿಯೂ, ಭೂಮಿಯಲ್ಲಿಯೂ ಅವನು ನಡೆಸಿದ ಕಾರ್ಯಗಳನ್ನೆಲ್ಲ ವಿವ ರಿಸು" ಎಂದನು ಆಗ ವೈಶಂಪಾಯನನು "ರಾಜೇಂದ್ರಾ! ಕೇಳು. ಆ ಯಯಾತಿಯ ಉತ್ತರಚರಿತ್ರವನ್ನೂ, ಈ ಲೋಕದಲ್ಲಿಯೂ, ಸ್ವರ್ಗದಲ್ಲಿ ಯೂ ಅವನು ನಡೆಸಿದ ಕಾರ್ಯಗಳನ್ನೂ ತಿಳಿಸುವೆನು. ಇದು ಪುಣ್ಯ ಕಾರಣವಾಗಿ, ಸಮಸ್ತ ಪಾಪಗಳನ್ನೂ ನೀಗಿಸತಕ್ಕುದು. ಆ ಯಯಾತಿ ಯು ತನ್ನ ಕಿರಿಯ ಮಗನಾದ ಪೂರುವನ್ನು ರಾಜ್ಯದಲ್ಲಿ ಅಭಿಷೇಕಿಸಿ, ತಾನು ತಪೋವನಕ್ಕೆ ಹೊರಟನು. ಯದು ಮೊದಲಾದ ಬೇರೆ ಮಕ್ಕಳಿ ಗೆಲ್ಲ ರಾಜ್ಯದ ಎಲ್ಲೆಗಳಲ್ಲಿ ಸ್ವಲ್ಪಭಾಗವನ್ನು ಮಾತ್ರ ಕೊಟ್ಟು ಅವರನ್ನು ಅಲ್ಲಿ ಇರಿಸಿದನು. ಇವನು ವನದಲ್ಲಿ ಹಣ್ಣುಗಡ್ಡೆಗಳನ್ನು ತಿನ್ನುತ್ತ, ಜಿತೇಂದ್ರಿಯನಾಗಿ, ಕಾಮಕ್ರೋಧಗಳನ್ನಡಗಿಸಿ, ಬಹುಕಾಲದವರೆಗೆ ವನ ದಲ್ಲಿಯೇ ವಾಸಮಾಡುತಿದ್ದನು. ವಾನಪ್ರಸ್ಥಾಶ್ರಮಕ್ಕೆ ತಕ್ಕ ವಿಧಿಗಳಾದ ಪಿತೃತರ್ಪಣಗಳನ್ನೂ, ಅಗ್ನಿಹೋತ್ರಗಳನ್ನೂ ಕ್ರಮವಾಗಿ ನಡೆಸುತಿದ್ದನು. ಕಾಡಿನಲ್ಲಿ ಲಭಿಸಬಹುದಾದ ವಸ್ತುಗಳಿಂದಲೇ ಅತಿಥಿಗಳನ್ನೂ ಆದರಿಸುತಿ ದ್ದನು. ಆ ರಾಜನು, ಆ ಕಾಲವೆಲ್ಲ ಶಿಲೋಂಛವೃತ್ತಿಯನ್ನು ಹಿಡಿದು, (ಎಂದರೆ, ಅಲ್ಲಲ್ಲಿ ತೆನೆಯಿಂದ ಉದಿರಿದ ಕಾಳುಗಳನ್ನಾಯ್ದು ಅದರಿಂದಲೇ ದೇಹಧಾರಣವನ್ನು ಮಾಡುವುದು) ಅತಿಥಿಗಳನ್ನು ಸತ್ಕರಿಸಿ ಮಿಕ್ಕ ಅನ್ನ ವನ್ನು ತಾನು ಭುಜಿಸುತಿದ್ದನು. ಪೂರ್ಣವಾಗಿ ಒಂದು ಸಹಸ್ರವರ್ಷಗಳ ವರೆಗೆ ಈ ತರದ ಜೀವನವಲ್ಲಿದ್ದು, ಆಮೇಲೆ ಮೂವತ್ತು ವರ್ಷಗಳವರೆಗೆ ಕೇವಲ ಜಲಪಾನದಿಂದಲೇ ಜೀವಿಸುತ್ತಿದ್ದನು. ಆ ಕಾಲದಲ್ಲಿ ತನ್ನ ಮನೋ ವಾಕ್ಕುಗಳೆರಡನ್ನೂ ಅಡಗಿಸಿಟ್ಟನು. ಒಂದು ವರ್ಷದವರೆಗೆ ಕೇವಲ ವಾ ಯುಭಕ್ಷಕನಾಗಿದ್ದನು. ಆಮೇಲೆ ಒಂದು ವರ್ಷಕಾಲದವರೆಗೆ *ಪಂಚಾಗ್ನಿ

* ತನ್ನ ನಾಲ್ಕು ಪಕ್ಕಗಳಲ್ಲಿ ನಾಲ್ಕಗ್ನಿಗಳೂ ಮತ್ತು ಅಂತರಿಕ್ಷದಲ್ಲಿ ಸೂರ್ಯ ನೂ ಪಂಚಾಗ್ನಿಗಳು.

ಮಧ್ಯದಲ್ಲಿ ತಪಸ್ಸುಮಾಡುತಿದ್ದನು. ಆಮೇಲೆ ಆರು ತಿಂಗಳ ಕಾಲದ ವರೆಗೆ ವಾಯುಭಕ್ಷಕನಾಗಿ, ಒಂದೇ ಕಾಲಿನಲ್ಲಿ ನಿಂತು ತಪಸ್ಸನ್ನು ನಡೆಸಿದನು. ಪುಣ್ಯಕೀರ್ತಿಯುಳ್ಳ ಆ ರಾಜನು ಹೀಗೆ ತನ್ನ ಕೀರ್ತಿಯನ್ನು ಭೂವ್ಯಾಕಾಶಗಳಿಗೆಲ್ಲ ಹರಡಿ, ಕೊನೆಗೆ ಸ್ವರ್ಗವನ್ನು ಸೇರಿದನು.

ಇದು ಎಂಭತ್ತನೆಯ ಅಧ್ಯಾಯವು.



 ಸ್ವರ್ಗದಲ್ಲಿ ಇಂದ್ರ ಯಯಾತಿ ಸಂವಾದವು. 

ಓ ರಾಜಾ! ಹೀಗೆ ಯಯಾತಿಯು ಸ್ವರ್ಗಕ್ಕೆ ಹೋದಮೇಲೆ, ಅಲ್ಲಿ ದೇವತೆಗಳು, ಸಾಧ್ಯರು, ಮರುತ್ತುಗಳು, ವಸುಗಳು ಮೊದಲಾದ ಎಲ್ಲಾ ದೇವತೆಗಳಿಂದಲೂ ಪೂಜಿಸಲ್ಪಡುತ್ತ ದೇವಗೃಹಗಳಲ್ಲಿ ವಾಸಮಾಡುತಿದ್ದನು. ಅನೇಕ ಪುಣ್ಯಕಾರ್ಯಗಳನ್ನು ನಡೆಸಿದವನೂ, ಜಿತೇಂದ್ರಿಯನೂ ಆದ ಆ ರಾಜನು ದೇವಲೋಕದಿಂದ ಬ್ರಹ್ಮಲೋಕಕ್ಕೂ, ಬ್ರಹ್ಮಲೋಕದಿಂದ ದೇವಲೋಕಕ್ಕೂ ಸಂಚರಿಸುತಿದ್ದನೆಂದೂ ಹೇಳುವರು. ಹೀಗಿರುವಾಗ, ಒಮ್ಮೆ ಯಯಾತಿಯು ದೇವೇಂದ್ರನ ಸಾನ್ನಿಧ್ಯಕ್ಕೆ ಬಂದು, ಅವನೊಡನೆ ಸಂಭಾಷಣೆಗಳನ್ನು ನಡೆಸುತಿದ್ದಾಗ, ಅವರ ಮಾತುಗಳು ಮುಗಿದಮೇಲೆ, ದೇವೇಂದ್ರನು ಹೀಗೆಂದು ಪ್ರಶ್ನೆಮಾಡುವನು. "ನಿನ್ನ ಮಗನಾದ ಪೂರುವು ನಿನ್ನ ವಾರ್ಧಕವನ್ನೂ, ರೂಪವನ್ನೂ ತೆಗೆದುಕೊಂಡನಲ್ಲವೆ? ನೀನು ಅವನಿಗೆ ರಾಜ್ಯವನ್ನು ಕೊಟ್ಟಾಗ ಅವನೊಡನೆ ಹೇಳಿದ ಮಾತುಗಳೇನು? ಅದನ್ನು ಸತ್ಯವಾಗಿ ಹೇಳು" ಎಂದು ಕೇಳಿದನು. ಅದಕ್ಕಾ ಯಯಾತಿಯು "ಓ ದೇವೇಂದ್ರಾ! ನಾನು ಪೂರುವಿಗೆ ಹೀಗೆಂದು ಹೇಳಿದೆನು. "ಗಂಗಾಯಮುನಾ ನದಿಗಳ ನಡುವೆ ಇರುವ ದೇಶವೆಲ್ಲವೂ ನಿನ್ನದು! ಮಧ್ಯಭೂಮಿಗೆಲ್ಲ ನೀನೇ ರಾಜನು. ಅದರ ಹೊರಗೆ ಎಲ್ಲೆಕಟ್ಟಿನಲ್ಲಿರುವ ಭಾಗಗಳಿಗೆ ಮಾತ್ರ ನಿನ್ನ ಸಹೋದರರು ಅಧಿಕಾರಿಗಳು. ಮನುಷ್ಯನು ಯಾವಾಗಲೂ ದೈನ್ಯ, ಹಟವಾದ, ಕೋಪ, ಕುಟಿಲತೆ, ಮಾತ್ಸರ್ಯವೆಂಬ ಈ ದುರ್ಗುಣಗಳನ್ನು ಯಾರಲ್ಲಿಯೂ

ತೋರಿಸಬಾರದು. ತಾಯಿ, ತಂದೆ, ಹಿರಿಯರು, ವಿದ್ವಾಂಸರು, ತಪಸ್ವಿಗಳು, ತಾಳ್ಮೆಯುಳ್ಳವರು, ಇಂಥವರನ್ನು ವಿವೇಕಿಯಾದವನು ಅವಮಾನಗೊಳಿಸ ಬಾರದು. ಯಾವಾಗಲೂ ಶಕ್ತಿಯುಳ್ಳವನೇ ಕೋಪವನ್ನು ತಡೆದು ಸೈರಿಸಿ ಕೊಳ್ಳುವನು. ಕೈಲಾಗದವನೇ ಕೋಪಿಸುವನು. ದುರ್ಜನನು ಸಜ್ಜನನನ್ನೂ, ದುರ್ಬಲನು ಬಲಾಢ್ಯನನ್ನೂ, ಕುರೂಪಿಯು ರೂಪವಂತನನ್ನೂ, ಕರ್ಮ ಭ್ರಷ್ಟನು ಕರ್ಮಶೀಲನನ್ನೂ, ಅಧಾರ್ಮಿಕನು ಧಾರ್ಮಿಕನನ್ನೂ, ಗುಣ ಹೀನನು ಗುಣವಂತನನ್ನೂ ದ್ವೇಷಿಸುವುದೇ ಸ್ವಭಾವವು. ಓ ಕುಮಾರಾ! ಕಲಿಯುಗದ ಲಕ್ಷಣವೇ ಇದು. ಇದಕ್ಕೆ ವಿರುದ್ಧವಾದುದು ಕೃತಯುಗದ ಲಕ್ಷಣವು. ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ, ವೈಶ್ಯನಾಗಲಿ, ಶೂದ್ರ ನಾಗಿರಲಿ, ಯಾವನೇ ಆಗಿದ್ದರೂ ಒಳ್ಳೆಯ ವಿಷಯದಲ್ಲಿ ಆಸಕ್ತಿಯುಳ್ಳವನು ಲೋಕಪ್ರಶಂಸೆಗೆ ಪಾತ್ರನಾಗಿ ಯಶಸ್ಸನ್ನು ಹೊಂದುವನು. ಆದುದರಿಂದ ಸದ್ವಿಷಯದಲ್ಲಿಯೇ ಮನುಷ್ಯನು ಮನಸ್ಸನ್ನಿಡಬೇಕು. ಪುತ್ರಾ! ನಿನ್ನ ಸಹೋದರರು ಲೋಕಗತಿಯನ್ನು ತಿಳಿದವರಲ್ಲ. ಬುದ್ಧಿಹೀನರು. ತಂದೆ ಯ ಶಾಪದಿಂದ ಅವರು ತಮ್ಮ ಪದವಿಯನ್ನು ಕಳೆದುಕೊಂಡು ದೇಶದ ಕೊನೆಯ ಭಾಗಕ್ಕೆ ಹೋದರು" ಎಂದು ಹೇಳಿದನು. ಅದಕ್ಕಾ ದೇವೇಂ ದ್ರನು "ಓ ರಾಜಾ! ನೀನು ಧರ್ಮಗಳನ್ನು ಬಲ್ಲವನು. ಉತ್ತಮ ಧರ್ಮ ಗಳನ್ನು ಹೇಳಬಲ್ಲವನು. ಇನ್ನೂ ಭೂಲೋಕದಲ್ಲಿ ನಡೆದ ಉತ್ತಮ ವೃತ್ತಾಂತಗಳನ್ನು ಕುರಿತು ನನಗೆ ತಿಳಿಸಬೇಕು" ಎಂದನು. ಆಗ ಯ ಯಾತಿಯು "ಕೋಪಿಸುವನಿಗಿಂತಲೂ ಕೋಪಿಸದವನು ಮೇಲು. ತಾಳ್ಮೆ ಯಿಲ್ಲದವನಿಗಿಂತ ತಾಳ್ಮೆಯುಳ್ಳವನು ಮೇಲು. ಮನುಷ್ಯೇತರ ಪ್ರಾಣಿಗಿಂತ ಲೂ ಮನುಷ್ಯನು ಮೇಲು. ಅವಿದ್ವಾಂಸನಿಗಿಂತಲೂ ವಿದ್ವಾಂಸನು ಮೇ ಲು. ಬೇರೊಬ್ಬರು ತನ್ನನ್ನು ನಿಂದಿಸಿ ರೇಗಿಸಿದರೂ ಕೋಪಗೊಳಬಾರದು! ಅಂತವನ ಸಹನಗುಣವೇ ಶತ್ರುವನ್ನು ಜಯಿಸಿಬಿಡುವುದೆಂದು ತಿಳಿ. ಅಲ್ಲ ದೆ ತನ್ನನ್ನು ನಿಂದಿಸಿ ರೇಗಿಸಿದವನ ಪುಣ್ಯವೂ ಇವನಿಗೇ ಸೇರುವುದು. ವಿವೇಕಿಯಾದವನು ಯಾರಿಗೂ ಮರ್ಮವನ್ನು ಚುಚ್ಚತಕ್ಕ ಮಾತುಗಳ ನ್ನಾಡಬಾರದು. ಯಾರಿಗೂ ಹಾನಿಯನ್ನು ಮಾಡಿಯಬಾರದು. ಕೀಳು ಮನುಷ್ಯರಿಂದ ಅಧಿಕವಾದುದನ್ನು ನಿರೀಕ್ಷಿಸಲೂ ಬಾರದು. ತನ್ನ ಮಾತು

ಮತ್ತೊಬ್ಬರಿಗೆ ವ್ಯಸನಕರವಾಗಿದ್ದರೆ, ಅಂತಹ ಅಮಂಗಳವೂ, ಪಾಪಗತಿಗೆ ಯೋಗ್ಯವೂ ಆದ ಮಾತನ್ನು ಬಾಯಿಂದುಚ್ಚರಿಸಲೇ ಬಾರದು. ಮರ್ಮಭೇದಕವಾಗಿ ಕ್ರೂರವಾಗಿರುವ ಮಾತುಗಳನ್ನಾಡಿ, ಇತರರನ್ನು ನೋಯಿಸತಕ್ಕವನು ಲೋಕದಲ್ಲಿ ಕೇವಲ ಅಮಂಗಳಸ್ವರೂಪನೆಂದೂ, ಅವನ ಬಾಯಲ್ಲಿ ನಿರುತಿಯೆಂಬ ದುಷ್ಟದೇವತೆಯು ನೆಲಸಿರುವಳೆಂದೂ ತಿಳಿಯಬೇಕು. ಯೋಗ್ಯವಾದ ನಡತೆಯುಳ್ಳವನು ಯೋಗ್ಯರನ್ನೇ ಅನುಸರಿಸಿ ನಡೆಯಬೇಕು. ಮುಂದೆ ಸತ್ಪುರುಷರ ಗೌರವಕ್ಕೂ, ಹಿಂದೆ ಅವರ ರಕ್ಷಣೆಗೂ ಪಾತ್ರನೆನಿಸಿಕೊಳ್ಳಬೇಕು. ಅಯೋಗ್ಯರ ಅತಿವಾದಗಳನ್ನು ಯಾವಾಗಲೂ ತಾನು ಸಹಿಸಿಕೊಳ್ಳಬೇಕು. ತಾನು ತನ್ನ ವಿವೇಕದಿಂದ ಒಳ್ಳೆಯ ನಡತೆಯಲ್ಲಿದ್ದು, ಇತರ ಸತ್ಪುರುಷರ ಒಳ್ಳೆಯ ನಡತೆಗಳನ್ನೂ ಅನುಸರಿಸಿ ನಡೆದುಕೊಳ್ಳಬೇಕು. ಓ ಕುಮಾರಾ! ಮನುಷ್ಯನ ಬಾಯಿಂದ ವಾಕ್ಕುಗಳೆಂಬ ಕ್ರೂರಬಾಣಗಳು ಹೊರಡುತ್ತಲೇ ಇರುವುವು. ಆ ಬಾಣಗಳಿಂದ ನಾಟಲ್ಪಟ್ಟವನು ಹಗಲುರಾತ್ರಿಯೂ ಸಂಕಟದಿಂದ ತಪಿಸುವನು. ಆದುದರಿಂದ ವಿವೇಕಿಯಾದವನು ಇತರರ ಮರ್ಮಸ್ಥಾನಗಳನ್ನು ನೋಯಿಸತಕ್ಕ ಅಂತಹ ಮಾತುಗಳನ್ನು ಎಂದಿಗೂ ಆಡಲಾರನು. ದಯೆ, ಮೈತ್ರಿ, ದಾನ, ಇಂಪಾದ ಮಾತು, ಇವುಗಳಿಗಿಂತಲೂ ಪ್ರಾಣಿಗಳನ್ನು ವಶೀಕರಿಸುವ ಉಪಾಯವು ಬೇರೊಂದಿಲ್ಲ. ಆದುದರಿಂದ ಎಲ್ಲರಲ್ಲಿಯೂ ಯಾವಾಗಲೂ ಪ್ರಿಯವನ್ನೇ ನುಡಿಯಬೇಕು. ಪರುಷವನ್ನಾಡಬಾರದು. ಪೂಜ್ಯರನ್ನು ಪೂಜಿಸಬೇಕು. ಕೇಳಿದವರಿಗೆ ಕೊಡಬೇಕು. ಇತರರಲ್ಲಿ ಕೈನೀಡಿ ಯಾಚಿಸಬಾರದು'' ಎಂದನು.

ಇದು ಎಂಭತ್ತೊಂದನೆಯ ಅಧ್ಯಾಯವು.



## { ಯಯಾತಿಯು ಸ್ವರ್ಗದಿಂದ ಪತಿತನಾದುದು. ಅಷ್ಟಕನ ಪ್ರಶ್ನೆಗಳು. }

ತಿರುಗಿ ಇಂದ್ರನು "ಓ ರಾಜಾ! ಯಯಾತೀ! ನೀನು ಸಮಸ್ತ ಕೃತ್ಯಗಳನ್ನೂ ಪೂರಯಿಸಿಕೊಂಡು, ಮನೆಯನ್ನು ಬಿಟ್ಟು ತಪೋವನಕ್ಕೆ

ಬಂದವನಲ್ಲವೆ? ಈಗ ನೀನು ತಪೋನಿರತನಾಗಿರುವೆಯಷ್ಟೆ? ತಪಸ್ಸಿನಲ್ಲಿ ನಿನ್ನನ್ನು ಯಾರಿಗೆ ಹೋಲಿಸಬಹುದು?" ಎಂದನು. ಅದಕ್ಕಾ ಯಯಾತಿಯು "ದೇವೇಂದ್ರಾ! ತಪಸ್ಸಿನಲ್ಲಿ ನನಗೆ ಸಮಾನರಾರೂ ಇಲ್ಲವೆಂದೇ ನನ್ನ ಭಾವನೆ! ದೇವತೆಗಳಲ್ಲಿ, ಮನುಷ್ಯರಲ್ಲಿ, ಗಂಧರ್ವರಲ್ಲಿ, ಕೊನೆಗೆ ಮಹರ್ಷಿಗಳಲ್ಲಿಯಾಗಲಿ ತಪಸ್ಸಿನಲ್ಲಿ ನನಗೆ ಸಮಾನರಾದವರನ್ನು ನಾನು ಕಾಣಲಿಲ್ಲ" ಎಂದನು. ಈ ಹೆಮ್ಮೆಯ ಮಾತುಗಳನ್ನು ಕೇಳಿ ದೇವೇಂದ್ರನು "ಯಯಾತೀ! ನೀನು ಇತರರಲ್ಲಿರುವ ಮಹಿಮೆಯೇನೆಂಬುವನ್ನು ತಿಳಿಯದೆ, ಮೊತ್ತಕ್ಕೆ ಎಲ್ಲರನ್ನೂ ತಿರಸ್ಕರಿಸಿ ಮಾತನಾಡುತ್ತಿರುವೆ. ನಿನಗಿಂತಲೂ ಮೇಲಾದವರನ್ನೂ, ನಿನಗೆ ಸಮಾನರನ್ನೂ, ಕೊನೆಗೆ ನಿನಗಿಂತಲೂ ಕೀಳಾದವರನ್ನೂ ನೀನು ಹೀಗೆ ತಿರಸ್ಕರಿಸಿ ಮಾತನಾಡಿದೆಯಾದುದರಿಂದ, ನಿನ್ನ ಪುಣ್ಯಫಲಗಳೆಲ್ಲವೂ ಇದರಿಂದಲೇ ನಷ್ಟವಾದುವು. ನಿನಗೆ ಈ ಲೋಕವು ಸಲ್ಲದು. ಆದುದರಿಂದ ನೀನು ಇಲ್ಲಿಂದ ಅಧೋಗತಿಗೆ ಬೀಳುವವನಾಗು" ಎಂದನು.

ಆಗ ಯಯಾತಿಯು ದೈನ್ಯದಿಂದ ಇಂದ್ರನನ್ನು ಕುರಿತು "ದೇವರಾಜಾ! ನಾನು ದೇವ ಗಂಧರ್ವ ಮಾನವ ಮಹರ್ಷಿಗಳನ್ನೆಲ್ಲ ಅವಮಾನಿಸಿ ಮಾತನಾಡಿದುದಕ್ಕಾಗಿಯೇ ನನಗೆ ಪುಣ್ಯಲೋಕಗಳು ತಪ್ಪಿಹೋಗಿ, ಅಧೋಗತಿ ಬರುವುದು ನಿಜವಾದರೆ, ಈ ಸ್ವರ್ಗದಿಂದ ಕೆಳಕ್ಕೆ ಬೀಳುವಾಗ ಸತ್ಪುರುಷರ ಸಮೂಹದಲ್ಲಿಯಾದರೂ ಬೀಳುವಂತೆ ನೀನು ಅನುಗ್ರಹಿಸಬೇಕು" ಎಂದನು. ಅದಕ್ಕಾ ಇಂದ್ರನು "ರಾಜಾ! ನಿನ್ನ ಇಷ್ಟದಂತೆಯೇ ಆಗಲಿ! ನೀನು ಇಲ್ಲಿಂದ ಭೂಮಿಗೆ ಬಿದ್ದರೂ, ಸಜ್ಜನರ ಮಧ್ಯದಲ್ಲಿ ಬಿದ್ದು, ಅವರ ಸಹವಾಸಫಲದಿಂದ ತಿರುಗಿ ನಿನಗೆ ಇದೇ ಸದ್ಗತಿಯುಂಟಾಗಲಿ! ಇನ್ನುಮೇಲಾದರೂ ನೀನು ಎಚ್ಚರದಿಂದಿರು! ಹೀಗೆ ಇತರರನ್ನು ಅವಮಾನಿಸಿ ಮಾತನಾಡಬೇಡ. ನಿನಗೆ ಮೇಲಾದವರನ್ನಾಗಲಿ, ಸಮಾನರನ್ನಾಗಲಿ, ಕೊನೆಗೆ ನಿನಗಿಂತಲೂ ಹೀನರನ್ನಾಗಲಿ ತಿರಸ್ಕರಿಸಿ ಮಾತನಾಡಬಾರದು" ಎಂದನು.

ಓ ಜನಮೇಜಯರಾಜಾ! ಒಡನೆಯೇ ಯಯಾತಿಯು ತನ್ನ ಪುಣ್ಯಫಲಗಳನ್ನು ಕಳೆದುಕೊಂಡು ಸ್ವರ್ಗದಿಂದ ಜಾರಿಬೀಳುತ್ತಿರುವಾಗ, ರಾಜಶ್ರೇಷ್ಠನೂ, ಧರ್ಮರಕ್ಷಕನೂ ಆದ ಅಷ್ಟಕನೆಂಬ ರಾಜನು ಅವನನ್ನು ಕಂಡು ಕನಿಕರದಿಂದ "ಎಲೈ ತರುಣನೇ! ನೀನು ಯಾರು? ನಿನ್ನ ರೂಪವು ಇಂದ್ರನ ದಿವ್ಯರೂಪಕ್ಕೆ ಸಮಾನವಾಗಿರುವುದು. ಅಗ್ನಿಯಂತೆ ತೇಜಸ್ಸಿನಿಂದ ಬೆಳಗುತ್ತಿರುವೆ. ದೇವತೆಗಳೊಳಗೆಲ್ಲ (ಗ್ರಹಗಳೊಳಗೆಲ್ಲ) ಮೇಲೆನಿಸಿಕೊಂಡ ಸೂರ್ಯನು ಮೇಘಗಳ ಮರೆಯಿಂದ ಕತ್ತಲೆಗವಿದು ಕೆಳಗೆ ಬೀಳುವಂತೆ, ಸ್ವರ್ಗದಿಂದ ಕೆಳಕ್ಕೆ ಬೀಳುವುದೇಕೆ? ಸೂರ್ಯಾಗ್ನಿಗಳಿಗೆ ಸಮಾನವಾದ ವರ್ಚಸ್ಸುಳ್ಳ ನೀನು ಆಕಾಶಮಾರ್ಗದಿಂದ ಕೆಳಗೆ ಬೀಳುತ್ತಿರುವುದನ್ನು ನೋಡಿ 'ಇದೇ'ನೆಂದು ನಮಗೆಲ್ಲ ಆಶ್ಚರ್ಯವುಂಟಾಗಿದೆ. ಇಂದ್ರನಿಗೂ, ಸೂರ್ಯನಿಗೂ, ಸಾಕ್ಷಾದ್ವಿಷ್ಣುವಿಗೂ ಸಮಾನವಾದ ಮಹಿಮೆಯುಳ್ಳವನಂತೆ ತೋರುತ್ತಿರುವ ನೀನು ಆಕಾಶಮಾರ್ಗದಿಂದ ಬೀಳುತ್ತಿರುವುದನ್ನು ನೋಡಿ, ನಮ್ಮೆಲ್ಲರಿಗೂ ನಿನ್ನ ಅಧಃಪತನಕ್ಕೆ ಕಾರಣವೇನೆಂದು ತಿಳಿಯಲು ತುಂಬ ಕುತೂಹಲವುಂಟಾಗಿದೆ. ನಿಜಾಂಶವನ್ನು ನಮಗೆ ತಿಳಿಸು. ಓ ಮಹಾತ್ಮಾ! ನಾವೇ ಮುಂದಾಗಿ ನಿನ್ನ ವಿಚಾರವನ್ನು ಪ್ರಶ್ನೆಮಾಡುವುದಕ್ಕೂ ನಮಗೆ ಧೈರ್ಯವಿಲ್ಲದಂತಿದೆ. ನೀನಾದರೂ ನಮ್ಮನ್ನು ಲಕ್ಷ್ಯಮಾಡದೆ ಸುಮ್ಮನಿರುವೆ. ಆದುದರಿಂದ ವಿಧಿಯಿಲ್ಲದೆ ನಾವೇ ಮುಂದಾಗಿ ನಿನ್ನನ್ನು ಕೇಳಬೇಕಾಯಿತು. ನಿನ್ನ ರೂಪವಾದರೋ ಆಸೆಪಟ್ಟು ನೋಡತಕ್ಕುದಾಗಿರುವುದು. ನೀನು ಯಾರು? ಯಾರ ಕಡೆಯವನು? ನೀನು ಹೀಗೆ ಮೇಲಿಂದ ಭೂಮಿಗೆ ಬೀಳುವುದೇಕೆ? ಹೆದರಬೇಡ! ನಿನ್ನ ಮನೋವ್ಯಥೆಯನ್ನೂ, ಮೋಹವನ್ನೂ ಬಿಟ್ಟು ಮಾತನಾಡು! ಈಗ ನೀನು ಆಕಸ್ಮಿಕವಾಗಿ ಒಳ್ಳೇ ಸಜ್ಜನರ ಗೋಷ್ಠಿಯಲ್ಲಿ ಬಂದು ಸೇರುತ್ತಿರುವೆ. ಈ ಸ್ಥಿತಿಯಲ್ಲಿ ಬಲವೈರಿಯಾದ ಇಂದ್ರನಾದರೂ ನಿನಗೆ ಕೇಡನ್ನು ಮಾಡಲಾರನೆಂದು ತಿಳಿ! ಸುಖವನ್ನು ಕಳೆದುಕೊಂಡು ಕಷ್ಟದಲ್ಲಿ ಸಿಕ್ಕಿಬಿದ್ದ ಸಜ್ಜನರಿಗೆ ಯಾವಾಗಲೂ ಸತ್ಪುರುಷರೇ ರಕ್ಷಕರು. ಚರಾಚರಗಳೊಳಗೆಲ್ಲ ತಮ್ಮ ಸಾಮರ್ಥ್ಯವನ್ನು ಸಲ್ಲಿಸಬಲ್ಲ ಸತ್ಪುರುಷರೇ ಇಲ್ಲಿ ನೆರೆದಿರುವರು. ಅವರಿಗೆ ಸಮಾನಗುಣವುಳ್ಳ ನೀನೂ

ಶವರಲ್ಲಿಯೇ ಬಂದು ಸೇರಿದೆ. ಇಲ್ಲಿ ನೀನು ಸುಖವಾಗಿರಬಹುದು. ಅಗ್ನಿ ಯೊಂದೇ ತಪಿಸಬಲ್ಲುದು. ಭೂಮಿಯೊಂದೇ ಬೀಜಗಳನ್ನು ಮೊಳೆಯಿಸ ಬಲ್ಲುದು! ಸೂರ್ಯನೊಬ್ಬನೇ ಲೋಕವನ್ನು ಬೆಳಗಿಸಬಲ್ಲನು! ಅಭ್ಯಾಗತ (ಅತಿಥಿ) ನೊಬ್ಬನೇ ಸಜ್ಜನರನ್ನು ಸಂತೋಷಗೊಳಿಸಬಲ್ಲನು. ಆದುದರಿಂದ ನಿನಗೆ ನಮ್ಮಲ್ಲಿ ಸುಖಾಗಮನವಿರಲಿ" ಎಂದನು.

ಇದು ಎಂಭತ್ತೆರಡನೆಯ ಅಧ್ಯಾಯವು



ಯಯಾತಿಯು ತನ್ನ ವೃತ್ತಾಂತವನ್ನು ಅಷ್ಟಕನಿಗೆ ತಿಳಿಸಿದುದು.

ಆಗ ಯಯಾತಿಯು ಅಷ್ಟಕನನ್ನು ಕುರಿತು "ಓ ಸಾಧೂ! ನಾನು ಯಯಾತಿಯೆಂಬವನು. ನಹುಷನ ಮಗನು. ನಾನು ಪೂರುವಿನ ತಂದೆ. ಇತರರೆಲ್ಲರನ್ನೂ ಅವಮಾನಿಸಿ ಮಾತನಾಡಿದುದರಿಂದ, ದೇವತೆಗಳ ಮತ್ತು ತಪಸ್ಸಿದ್ಧರಾದ ಋಷಿಗಳ ಲೋಕಗಳನ್ನೆಲ್ಲ ಕಳೆದುಕೊಂಡು, ಪುಣ್ಯಹೀನನಾಗಿ ಕೆಳಗೆ ಬೀಳುತ್ತಿರುವೆನು. ಎಲೈ ಮಹಾತ್ಮರೇ! ನಾನಾದರೋ ನಿಮಗಿಂತಲೂ ವಯಸ್ಸಿನಲ್ಲಿ ದೊಡ್ಡವನು. ಆದುದರಿಂದ ನಾನು ನಿಮಗೆ ಮೊದಲು ನಮಸ್ಕರಮಾಡಲಿಲ್ಲ. ವಿದ್ಯೆಯಿಂದಾಗಲಿ, ತಪಸ್ಸಿನಿಂದಾಗಲಿ, ವಯಸ್ಸಿನಿಂದಾಗಲಿ ದೊಡ್ಡವನೇ ದ್ವಿಜರಲ್ಲಿ ಪೂಜ್ಯತೆಗೆ ಅರ್ಹನು" ಎಂದನು. ಆಗ ಅಷ್ಟಕನು "ಎಲೈ ರಾಜನೆ! ವಯಸ್ಸಿನಲ್ಲಿ ದೊಡ್ಡವರಾದವರನ್ನು ಪೂಜಿಸಬೇಕೆಂದು ನೀನು ಹೇಳುತ್ತಿರುವೆ. ವಿದ್ಯೆಯಿಂದಲೂ, ತಪಸ್ಸಿನಿಂದಲೂ ಮೇಲಾದವರನ್ನು ಮಾತ್ರ ಪೂಜಿಸಬೇಕಾದುದು ಧರ್ಮವೆಂದು ಹೇಳುವರಲ್ಲವೆ?" ಎಂದನು. ಆಗ ಯಯಾತಿಯು 'ಭದ್ರನೇ! ಅದು ಹಾಗಲ್ಲ. ಪಾಪವೆಂಬುದು ಮಾಡಿದ ಧರ್ಮಗಳನ್ನೆಲ್ಲ ಕೆಡಿಸುವುದು. ಹೆಮ್ಮೆಯುಳ್ಳವರಲ್ಲಿ ಪುಣ್ಯಕರ್ಮಗಳನ್ನೆಲ್ಲ ನಾಶಗೊಳಿಸತಕ್ಕ ಅಂತಹ ಪಾಪವು ನೆಲೆಗೊಂಡಿರುವುದು. ಈ ಅಸತ್ತುಗಳ ಮಾರ್ಗವನ್ನು ಸತ್ಪುರುಷರು ಆದರಿಸಲಾರರು. ಅವರು ಸತ್ಕರ್ಮಗಳಿಗೆ ಅನುಕೂಲವಾಗಿಯೇ ನಡೆಯುವರು. ನನ್ನ ಸ್ಥಿತಿಯಾದರೋ ಅದಕ್ಕೆ ಕೇವಲ

ವಿಪರೀತವಾಗಿದೆ. ನಾನು ಸಂಪಾದಿಸಿಟ್ಟಿದ್ದ ಪುಣ್ಯವೆಂಬ ನಿಧಿಯು ಅಪಾರವಾಗಿದ್ದಿತು. ಅದೆಲ್ಲ ಈಗ ನಷ್ಟವಾಗಿ ಹೋಯಿತು. ಈಗ ನಾನು ಎಷ್ಟೆಷ್ಟು ಹೆಣಗಾಡಿದರೂ, ಅವನ್ನು ತಿರುಗಿ ಗಳಿಸುವುದು ಸಾಧ್ಯವಿಲ್ಲವೆಂದು ತೋರಿದೆ. ಈ ನನ್ನ ಸ್ಥಿತಿಯನ್ನು ನೋಡಿಯಾದರೂ, ಇನ್ನುಮೇಲೆ ಆತ್ಮ ಕ್ಷೇಮವನ್ನು ಬಯಸುವವನು ತನ್ನ ಹೆಮ್ಮೆಯನ್ನು ಬಿಟ್ಟರೆ ಅವನೇ ಒಳ್ಳೇ ಜ್ಞಾನವಂತನೆನಿಸುವನು. ದೊಡ್ಡ ಭಾಗ್ಯವನ್ನು ಪಡೆದು, ಅನೇಕ ಮಹಾಯಜ್ಞಗಳನ್ನು ಮಾಡಿದವನಾದರೂ, ಸಮಸ್ತ ವಿದ್ಯೆಗಳನ್ನು ಓದಿ ಪರಿಣತವಾದ ಬುದ್ಧಿಯುಳ್ಳವನಾದರೂ, ವೇದಗಳನ್ನೆಲ್ಲ ಕಲಿತು ತಪಸ್ಸಿನಿಂದ ದೇಹವನ್ನು ಕಂದಿಸಿದವನಾದರೂ, ಅಹಂಕಾರ ಮಮಕಾರಗಳೆಂಬ ಮೋಹವನ್ನು ಬಿಟ್ಟಾಗಲೇ ಅವನು ಸ್ವರ್ಗವನ್ನು ಪಡೆಯುವನು. ತನ್ನಲ್ಲಿರುವ ಮಹತ್ತಾದ ಧನಕ್ಕಾಗಿ ಹಿಗ್ಗಬಾರದು ವೇದಗಳನ್ನೋದಿಯೂ ಅಹಂಕಾರವಿಲ್ಲದಿರಬೇಕು. ಆದರೆ, 'ನೀನೇ ಅವಕ್ಕೆ ವಿರುದ್ಧವಾಗಿ ನಡೆದೆಯಲ್ಲವೆ?' ಎಂದು ನೀವು ಕೇಳಬಹುದು. ಅದೇನೋ ವಾಸ್ತವವೇ! ಲೋಕದಲ್ಲಿ ಪ್ರಾಣಿಗಳ ಬುದ್ಧಿಯು ನಾನಾವಿಧವಾಗಿ ಪ್ರವರ್ತಿಸುವುದು ಸಹಜವು. ಏಕೆಂದರೆ, ಎಲ್ಲಾ ಪ್ರಾಣಿಗಳೂ ದೈವೇಚ್ಛೆಗನುಸಾರವಾಗಿ ನಡೆಯುವುವು. ಆ ದೈವಪ್ರೇರಣೆಯ ಮುಂದೆ ಯಾವ ಪ್ರಾಣಿಗಳ ಪ್ರಯತ್ನವಾಗಲಿ, ಸಾಮರ್ಥ್ಯವಾಗಲಿ ಏನೂ ಸಾಗಲಾರವು. ಆದುದರಿಂದ ಧೀರನಾದವನು ದೈವವೇ ಬಲವತ್ತರವೆಂಬ ಈ ತತ್ವವನ್ನು ತಿಳಿದುಕೊಂಡು, ಆಯಾಕಾಲಕ್ಕೆ ತನಗೆ ಬಂದುದು ಕಷ್ಟವಾಗಲಿ, ಸುಖವಾಗಲಿ ಅನುಭವಿಸುತ್ತ ಶಾಂತನಾಗಿರುವನು. ಸುಖವಾಗಲಿ, ದುಃಖವಾಗಲಿ, ಎಲ್ಲವೂ ದೈವಾಧೀನವೆಂಬೂ, ಅದರಲ್ಲಿ ತಮ್ಮ ಶಕ್ತಿಯೇನೂ ಕೆಲಸಕ್ಕೆ ಬಾರದೆಂದೂ, ದೈವವೇ ಪ್ರಬಲವೆಂದೂ ತಿಳಿದು, ಕಷ್ಟಕ್ಕಾಗಿ ಕೊರಗಲೂ ಬಾರದು. ಸುಖಕ್ಕಾಗಿ ಹಿಗ್ಗಲೂ ಬಾರದು. ಧೀರರಾದವರು ಹೀಗೆ ಸುಖದುಃಖಗಳಲ್ಲಿ ಹರ್ಷವಿಷಾದಗಳಿಗೆ ಅವಕಾಶಕೊಡದೆ, ಸದಾ ತೃಪ್ತರಾಗಿಯೇ ಇರುವರು. ದೈವವು ಪ್ರಬಲವೆಂಬುದನ್ನು ತಿಳಿದು, ಸುಖದುಃಖಗಳೆರಡರಲ್ಲಿಯೂ ಮನುಷ್ಯನು ಒಂದೇ ವಿಧವಾಗಿರುವನು. ಅಷ್ಟುಕಾ! ಭಯಕಾರಣವಿದ್ದಾಗಲೂ ನಾನು ಎದೆಗುಂದುವವನಲ್ಲ. ದುಃಖವು ಬಂದಾಗ

ಕೊರಗುವವನಲ್ಲ. ದೈವವು ನನ್ನನ್ನು ಯಾವ ದಾರಿಯಲ್ಲಿ ಬಿಡುವುದೋ ಆ ದಾರಿಯಲ್ಲಿ ಹೋಗದೆ ತೀರದೆಂದು ತಿಳಿದು ನಾನು ಒಂದೇ ಧೈರ್ಯ ದಿಂದಿರುವೆನು. ಲೋಕದಲ್ಲಿ ಸ್ವೇದಜಗಳು, ಅಂಡಜಗಳು, ಉದ್ಭಿಜ್ಜ ಗಳು, ಕ್ರಿಮಿಕೀಟಗಳು, ನೀರೊಳಗಿನ ಮತ್ಸ್ಯಗಳು, ಹುಲ್ಲು, ಕಡ್ಡಿ, ಕಲ್ಲು ಮುಂತಾಗಿ ಎಲ್ಲಾ ಚರಾಚರಗಳೂ ತಮ್ಮ ಕರ್ಮಕ್ಷಯವಾದಮೇಲೆಯೇ ನಿಜಪ್ರಕೃತಿಯಲ್ಲಿ ನಿಲ್ಲುವುವು. ಸುಖದುಃಖಗಳೆರಡೂ ಅನಿತ್ಯಗಳೆಂಬು ದನ್ನು ಚೆನ್ನಾಗಿ ತಿಳಿದ ನಾನು ಏತಕ್ಕಾಗಿ ಸಂಕಟಪಡಲಿ! ಈಗ ನಾನು ಮಾಡಬೇಕಾದುದೇನು? ಏನನ್ನು ಮಾಡಿದರೆ ಈ ಕಷ್ಟದಿಂದ ಮುಕ್ತ ನಾಗುವೆನೆಂಬುದನ್ನು ನಾನು ಕಾಣೆನಾದುದರಿಂದ, ಈ ವಿಷಯವಾಗಿ ನಾನು ಯೋಚನೆಯನ್ನೇ ಬಿಟ್ಟು ಶಾಂತನಾಗಿರುವೆನು" ಎಂದನು.

ಓ ಜನಮೇಜಯರಾಜಾ! ಯಯಾತಿಯಾದರೋ ಆ ಅಷ್ಟಕನಿಗೆ ತಾಯಿಯ ತಂದೆ. (ಮಾತಾಮಹನು). ಸಮಸ್ತ ಸುಗುಣಗಳಿಂದ ಕೂಡಿದ ವನು. ಸ್ವರ್ಗವಲ್ಲಿದ್ದಂತೆಯೇ ದಿವ್ಯತೇಜಸ್ವಿಯಾಗಿ ಅಂತರಿಕ್ಷದಲ್ಲಿ ತೂ ಗಾಡುತ್ತಿರುವ ಆ ಯಯಾತಿಯನ್ನು ಕುರಿತು ಅಷ್ಟಕನು ತಿರುಗಿ ಪ್ರಶ್ನೆ ಮಾಡುವನು. "ಓ ಮಹಾರಾಜಾ! ನೀನು ಒಳ್ಳೇ ಜ್ಞಾನಿಯಂತೆ ಸಮ ಸ್ತ ಧರ್ಮಸೂಕ್ಷ್ಮಗಳನ್ನೂ ತಿಳಿದು ಮಾತನಾಡುತ್ತಿರುವೆ. ಆದುದರಿಂದ ನೀನು ಇದುವರೆಗೆ ಯಾವಯಾವ ಪುಣ್ಯಲೋಕಗಳನ್ನು ಅನುಭವಿಸಿ ಬಂದಿರುವೆ? ನೀನು ಅಲ್ಲಿದ್ದ ಕಾಲಾವಧಿಯೆಷ್ಟು? ಇವನ್ನೆಲ್ಲ ಯಥಾವ ತ್ತಾಗಿ ನನಗೆ ವಿವರಿಸಿ ಹೇಳಬೇಕು" ಎಂದನು. ಅದಕ್ಕಾ ಯಯಾತಿಯು "ಅಯ್ಯಾ! ನಾನು ಮೊದಲು ಭೂಮಿಯಲ್ಲಿ ದೊಡ್ಡ ಚಕ್ರವರ್ತಿಯೆನಿಸಿ, ಸಮಸ್ತ ಭೂಮಿಯನ್ನೂ ಆಳುತಿದ್ದೆನು. ಆಮೇಲೆ ಆ ರಾಜ್ಯವನ್ನು ಬಿಟ್ಟು, ತಪಸ್ಸಿನಿಂದ ಉತ್ತಮಲೋಕಗಳನ್ನು ಸಾಧಿಸಿದೆನು. ಅಲ್ಲಿ ಒಂದು ಸಹಸ್ರ ವರ್ಷಗಳವರಗೆ ಇದ್ದು, ಅದಕ್ಕೂ ಮೇಲಾದ ಸ್ವರ್ಗಲೋಕವನ್ನು ಪಡೆ ದೆನು. ಅಲ್ಲಿ ಸಾಕ್ಷಾದ್ದೇವೇಂದ್ರನ ನಗರಿಯಲ್ಲಿ ವಾಸಮಾಡುತಿದ್ದೆನು. ಅತ್ಯಂತ ರಮ್ಯವಾಗಿಯೂ, ನೂರುಯೋಜನ ವಿಸ್ತಾರವುಳ್ಳುದಾಗಿಯೂ, ಸಾವಿರ ಬಾಗಿಲುಗಳುಳ್ಳುದಾಗಿಯೂ ಇರುವ ಇಂದ್ರನಗರಿಯಲ್ಲಿ ಒಂದು

ಸಾವಿರ ವರ್ಷಗಳ ವರೆಗಿದ್ದು, ಆಮೇಲೆ ಅದಕ್ಕೂ ಮೇಲಿನ ಲೋಕಕ್ಕೆ ಹೋದೆನು. ಆ ಲೋಕವಾದರೋ ಎಂತವರಿಗೂ ದುರ್ಲಭವಾದುದು. ದೇವಯೋಗ್ಯವಾದುದು. ಜರಾರಹಿತವೆನಿಸಿದುದು. ಅದು ಸೃಷ್ಟಿಕರ್ತನೂ, ಲೋಕಪ್ರಭುವೂ ಆದ ಬ್ರಹ್ಮನಲೋಕವು. ಅಲ್ಲಿಯೂ ನಾನು ಒಂದು ಸಾವಿರ ವರ್ಷಗಳಿದ್ದು, ಅದಕ್ಕಿಂತಲೂ ಮೇಲೆನಿಸಿದ ಮತ್ತೊಂದು ಲೋಕಕ್ಕೆ ಹೋದೆನು. ದೇವದೇವನಾದ ವಿಷ್ಣುವಿನ ಲೋಕದಲ್ಲಿಯೂ ನಾನು ಅನೇಕವರ್ಷಗಳ ವರೆಗೆ ಎಷ್ಟೋ ಆನಂದದಿಂದಿದ್ದೆನು. ಹೀಗೆ ನಾನು ಬೇರೆಬೇರೆ ಅನೇಕ ಪುಣ್ಯಲೋಕಗಳಲ್ಲಿ, ಅನೇಕಾನೇಕ ವರ್ಷಗಳ ವರೆಗೆ ಆಯಾ ಲೋಕವಾಸಿಗಳಿಗೆ ತಕ್ಕ ದಿವ್ಯರೂಪದಿಂದಲೇ ಶೋಭಿಸುತ್ತ, ಅಲ್ಲಲ್ಲಿನ ದೇವತೆಗಳಿಂದ ಸತ್ಕರಿಸಲ್ಪಡುತ್ತ, ಅವರಂತೆಯೇ ದಿವ್ಯಶಕ್ತಿಯುಳ್ಳವನಾಗಿರುತಿದ್ದೆನು. ನಾನು ಇಂದ್ರನ ನಂದನವನದಲ್ಲಿ ನೂರುಲಕ್ಷ ವರ್ಷಗಳು ವಾಸಿಸುತಿದ್ದೆನು. ಅಲ್ಲಿ ಅಪ್ಸರಸ್ತ್ರೀಯರೊಡನೆ ವಿಹರಿಸುತ್ತ, ಪುಣ್ಯಗಂಧವುಳ್ಳ ಅಲ್ಲಿನ ಹೂಗಿಡಗಳ ಸುವಾಸನೆಯನ್ನೂ ಅನುಭವಿಸಿದೆನು. ಅಲ್ಲಿನ ವಿಚಿತ್ರ ವೃಕ್ಷಗಳನ್ನೆಲ್ಲ ನೋಡಿ ಆನಂದಿಸುತಿದ್ದೆನು. ಇಷ್ಟಬಂದ ಕಡೆಗೆ ಇಷ್ಟಬಂದ ರೂಪದಿಂದ ಹೋಗಿಬರುವ ಶಕ್ತಿಯೂ ನನಗಿದ್ದಿತು. ಹೀಗೆ ಸುಖಾಸಕ್ತನಾಗಿದ್ದ ನನಗೆ ಅನೇಕಾನೇಕವರ್ಷಗಳು ಕಳೆದುಹೋದುವು. ಹೀಗಿರುತಿದ್ದಾಗ ಒಮ್ಮೆ ಅಕಸ್ಮಾತ್ತಾಗಿ ರೌದ್ರರೂಪದಿಂದ ದೇವದೂತನೊಬ್ಬನು ನನ್ನಲ್ಲಿಗೆ ಬಂದು, ಗಂಭೀರವಾದ ಉಚ್ಚಸ್ವರದಿಂದ ನನ್ನನ್ನು ಕುರಿತು "ನೀನು ಕೆಟ್ಟೆ! ನೀನು ಕೆಟ್ಟೆ!! ನೀನು ಕೆಟ್ಟೆ!!!" ಎಂದು ದೀರ್ಘವಾಗ ಎಳೆದೆಳೆದು ಮೂರುಸಾರಿ ಹೇಳಿ ಹೊರಟುಹೋದನು. ಇಷ್ಟುಮಾತ್ರವೇ ಆಗ ನನಗೆ ತಿಳಿದುದು. ಒಡನೆಯೇ ನಾನು ನನ್ನ ಪುಣ್ಯಫಲವನ್ನೆಲ್ಲ ಕಳೆದುಕೊಂಡು ನಂದನವನದಿಂದ ಕೆಳಮುಖವಾಗಿ ಬಿದ್ದುಬಿಟ್ಟೆನು. ಓ ದಯಾಳೂ! ಆಗ ನಾನು ಬೀಳುತ್ತಿರುವುದನ್ನು ನೋಡಿ ದೇವತೆಗಳೆಲ್ಲರೂ ಅಂತರಿಕ್ಷದಲ್ಲಿ ನೆರೆದು "ಅಯ್ಯೋ! ಕಷ್ಟವು! ಪುಣ್ಯಕರ್ಮನೂ, ಪುಣ್ಯಕೀರ್ತಿಯೂ ಆದ ಈ ಯಯಾತಿಯು ಪುಣ್ಯವನ್ನೆಲ್ಲ ಕಳೆದುಕೊಂಡು ಇದೋ ಕೆಳಗೆ ಬೀಳುತ್ತಿರುವನು" ಎಂದು ಆಡಿಕೊಳ್ಳುತಿದ್ದ ಮಾತುಗಳನ್ನು ಕೇಳಿದೆನು. ಆಗ ನಾನು ಕೆಳಮುಖವಾಗಿ

ಬೀಳುತ್ತಿರುವಾಗಲೇ ಅವರನ್ನು ಕುರಿತು "ಸತ್ಪುರುಷರ ಗೋಷ್ಠಿಯಲ್ಲಿ ನಾನು ಬೀಳುವಂತೆ ಮಾಡಬೇಕು" ಎಂದು ಬೇಡಿಕೊಂಡೆನು. ಅವರು ಈ ನಿಮ್ಮ ಯಜ್ಞಭೂಮಿಯನ್ನು ನನಗೆ ತೋರಿಸಿಕೊಟ್ಟರು. ನಿಮ್ಮ ಯಜ್ಞಶಾಲೆಯಿಂದ ಹೊರಟ ಹವಿಸ್ಸಿನ ಸುಗಂಧವುಳ್ಳ ಹೊಗೆಯ ಮಾರ್ಗವನ್ನೇ ಹಿಡಿದು ನಾನು ಇಲ್ಲಿಗೆ ಬಂದೆನು. ನಿಮ್ಮಂತಹ ಸಜ್ಜನರ ನಡುವೆ ಬಂದು ಬೀಳುವುದು ನನ್ನ ಹೃದಯವನ್ನು ಸಂತೋಷಗೊಳಿಸುತ್ತಿದೆ" ಎಂದನು.

ಇದು ಎಂಭತ್ತುಮೂರನೆಯ ಅಧ್ಯಾಯವು.



{ ಸತ್ತವರು ಸ್ವರ್ಗಾದಿ ಭೋಗಗಳನ್ನನುಭವಿಸಿದಮೇಲೆ ತಿರುಗಿ ಹುಟ್ಟುವ ಕ್ರಮವನ್ನು ಯಯಾತಿಯು ಅಷ್ಟಕನಿಗೆ ತಿಳಿಸಿದುದು. }

ಆಗ ಅಷ್ಟಕನು ಪ್ರಶ್ನೆಮಾಡುವನು. "ಓ ರಾಜಾ! ನೀನು ಕಾಮರೂಪಿಯಾಗಿ ನೂರಾರುಲಕ್ಷ ವರ್ಷಗಳವರೆಗೆ ಇಂದ್ರನ ನಂದನವನದಲ್ಲಿ ಸುಖಿಸುತಿದ್ದೆಯಲ್ಲವೆ? ಶುದ್ಧಾತ್ಮರಲ್ಲಿ ಮೇಲೆನಿಸಿಕೊಂಡ ನೀನು ಆ ಸ್ವರ್ಗಸುಖವನ್ನು ಬಿಟ್ಟು ಇಲ್ಲಿಗೆ ಬಂದಕಾರಣವೇನು?" ಎಂದನು.

ಅದಕ್ಕಾ ಯಯಾತಿಯು "ಲೋಕದಲ್ಲಿ ಮನುಷ್ಯನು ತನ್ನ ಹಣವನ್ನು ಕಳೆದುಕೊಂಡು ದರಿದ್ರನಾದೊಡನೆ ಅವನ ಜ್ಞಾತಿಗಳೂ, ಮಿತ್ರರೂ ಬಂಧುಗಳೂ ಹೇಗೆ ಅವನನ್ನು ತೊರೆದುಬಿಡುವರೋ, ಪುಣ್ಯವು ಕ್ಷೀಣಿಸಿದ ಮನುಷ್ಯನನ್ನು ದೇವತೆಗಳೂ, ಇಂದ್ರನೂ ಒಡನೆಯೇ ತಳ್ಳಿಬಿಡುವರು" ಎಂದನು.

ಆಗ ಅಷ್ಟಕನು "ಓ ರಾಜಾ! ಪರಲೋಕಕ್ಕೆ ಹೋದಮೇಲೆ ಪುಣ್ಯವು ಕ್ಷಯಿಸುವುದೆಂದರೇನು? ಯಾವಯಾವ ಕರ್ಮಗಳಿಂದ ಮನುಷ್ಯನು ಯಾವಯಾವ ಲೋಕಗಳನ್ನು ಪಡೆಯುವನು? ರಾಜೇಂದ್ರಾ! ನೀನು ಈ ವಿಚಾರಗಳನ್ನೆಲ್ಲ ಚೆನ್ನಾಗಿ ಬಲ್ಲವನಾದುದರಿಂದ, ನಿನ್ನಿಂದ

ಅದನ್ನು ಕೇಳಬೇಕೆಂದು ನನ್ನ ಮನಸ್ಸು ಆತುರಗೊಂಡಿರುವುದು" ಎಂದನು. ಅದಕ್ಕಾ ಯಯಾತಿಯು "ಓ ರಾಜಾ! ಪುಣ್ಯವನ್ನು ಕಳೆದುಕೊಂಡವರೆಲ್ಲರೂ ವ್ಯಸನದಿಂದ ಗೋಳಿಡುತ್ತ ಭೂಮಿಯೊಳಗಣ ನರಕಕ್ಕೆ (ನರಕಪ್ರಾಯವಾದ ಭೂಮಿಗೆ) ಬೀಳುವರು. ಇಲ್ಲಿ ಅವರು ಹದ್ದು, ಕಾಗೆ, ನರಿ ಮುಂತಾದುವುಗಳ ಆಹಾರಕ್ಕೆ ಉಪಯೋಗಪಡುವಂತಿರುವ ಹಲವು ಬಗೆಯ ಶರೀರಗಳಿಂದ ನಾನಾಜನ್ಮಗಳಲ್ಲಿ ತೊಳಲುವರು. ಆದುದರಿಂದ ಲೋಕಕ್ಕೆ ನಿಂದಾರ್ಹವೂ, ದೋಷಾಸ್ಪದವೂ ತಿರುಗಿ ಅಧೋಗತಿಗೆ ತರತಕ್ಕುದೂ ಆದ ಕರ್ಮದಲ್ಲಿ ಪ್ರವರ್ತಿಸಲೇಬಾರದು (ಜ್ಞಾನಮಾರ್ಗವೇ ಶಾಶ್ವತ ಫಲಪ್ರದವು) ಈ ಕರ್ಮವಿಚಾರವಾಯಿತು. ಇನ್ನೇನಾದರೂ ಕೇಳುವುದಿದ್ದರೆ ಕೇಳು" ಎಂದನು.

ಆಗ ಅಷ್ಟಕನು "ಮಹಾರಾಜಾ! ಈ ಭೂಮಿಯಲ್ಲಿ ಜನಿಸಿದ ಪ್ರಾಣಿದೇಹವನ್ನು ಹದ್ದು, ನವಿಲು ಮುಂತಾದ ಪಕ್ಷಿಗಳು ಕಡಿದುತಿನ್ನುವುವೆಂದು ಹೇಳಿದೆಯಲ್ಲವೆ? ಆ ಶರೀರಗಳು ತಿರುಗಿ ಉಂಟಾಗುವುದು ಹೇಗೆ? ಬೆಳೆಯುವುದು ಹೇಗೆ? ಭೂಮಿಯಲ್ಲಿ ನರಕವುಂಟೆಂದು ನಾನು ಕೇಳಿದುದಿಲ್ಲ. ಅದರ ಸಂಗತಿಯೇನು?" ಎಂದನು. ಅದಕ್ಕಾ ಯಯಾತಿಯು "ರಾಜಾ! ಕೇಳು! ದೇಹವು ಬಿದ್ದುಹೋದರೂ ಕರ್ಮವು ಬಿಟ್ಟುಹೋಗದೆ ಬೆಳೆಯುತ್ತಲೇ ಇರುವುದು ಆ ಕರ್ಮಫಲದಿಂದ ಜೀವನು ತಿರುಗಿ ಭೂಮಿಯಲ್ಲಿ ಶರೀರವನ್ನೆತ್ತಿ, ಈ ಭೂಮಿಯೊಳಗಣ ನರಕದಲ್ಲಿ ಬಂದು ಬೀಳುವನು. ಇಲ್ಲಿನ ಕರ್ಮಾನುಭವದಲ್ಲಿ ಅನೇಕಾನೇಕ ವರ್ಷಗಳು ಕಳೆದುಹೋಗುವುದನ್ನೂ ಅವರು ತಿಳಿಯಲಾರರು. ಇವರು ಸ್ವರ್ಗದಲ್ಲಿ ಅರುವತ್ತು ಅಥವಾ ಎಂಭತ್ತುಸಾವಿರ ವರ್ಷಗಳವರೆಗೆ ಸುಖಾನುಭವದಲ್ಲಿದ್ದ ಮೇಲೆಯೂ, ಅವರು ಪುಣ್ಯಕ್ಷಯದಿಂದ ಭೂಮಿಗೆ ಬಿದ್ದಮೇಲೆ ಇಲ್ಲಿ ಹೆಂಡಿರು, ಮಕ್ಕಳು (ಕಾಮ, ಕ್ರೋಧ, ಹಸಿವು, ಬಾಯಾರಿಕೆ) ಮೊದಲಾದ ಭಯಂಕರರಾಕ್ಷಸರ ಹಿಂಸೆಗೆ ಗುರಿಯಾಗಿ ಸಂಕಟಪಡುವರು" ಎಂದನು

ಆಗ ಅಷ್ಟಕನು "ರಾಜಾ! ಪಾಪಫಲದಿಂದ ಕೆಳಗೆಬಿದ್ದವರನ್ನು ಮೃತ್ಯುರೂಪರಾದ ರಾಕ್ಷಸರು ತಮ್ಮ ಕ್ರೂರವಾದ ಹಲ್ಲುಗಳಿಂದ

ಕಡಿದು ತಿಂದಮೇಲೆ, ಅವರು ತಿರುಗಿ ಪುರುಷರೂಪವನ್ನು (ಶರೀರವನ್ನು) ಹೊಂದುವುದು ಹೇಗೆ? ಅವರಿಗೆ ತಿರುಗಿ ಜ್ಞಾನೇಂದ್ರಿಯಾದಿಗಳೆಲ್ಲ ಉಂಟಾಗುವುದು ಹೇಗೆ? ಅವರು ಗರ್ಭರೂಪವಾಗಿ ಬೆಳೆಯುವುದು ಹೇಗೆ?" ಎನಲು, ಯಯಾತಿಯು "ಲೋಕದಲ್ಲಿ ಜನರು ಪುಷ್ಪಫಲಗಳನ್ನು ಭುಜಿಸುವುದರಿಂದ, ಅವರ ಮೈಯಲ್ಲಿ ಉಂಟಾಗುವ ರಕ್ತವೇ ಪುರುಷದೇಹದಲ್ಲಿ ವೀರ್ಯರೂಪವಾಗಿ ಬಿಡಲ್ಪಟ್ಟು, ಸ್ತ್ರೀಯರ ದೇಹದಲ್ಲಿಯೂ ಅದೇ ವಿಧವಾಗಿ ಉತ್ಪನ್ನವಾಗುವ ರಜಸ್ಸಿನೊಡನೆ ಕಲೆಯುವುದರಿಂದ ಗರ್ಭವುಂಟಾಗುವುದು. ಜೀವಗಳು, ಆಕಾಶ, ವಾಯು, ನೀರು, ಭೂಮಿ, ಮರಗಿಡಗಳು, ಓಷಧಿಗಳು, ಇವುಗಳೊಳಗೆಲ್ಲ ತೊಳಲಿ, ಕೊನೆಗೆ ದ್ವಿಪಾತ್ತುಗಳು, ಚತುಷ್ಪಾತ್ತುಗಳು ಮೊದಲಾದ ಪ್ರಾಣಿದೇಹಕ್ಕೆ ಸೇರಿ ಅಲ್ಲ ಗರ್ಭರೂಪದಿಂದ ಬೆಳೆಯುವುವು" ಎಂದನು.

ಆಗ ತಿರುಗಿ ಅಷ್ಟಕನು "ಈ ಲೋಕದಲ್ಲಿ ಮನುಷ್ಯಯೋನಿಗೆ ಬರತಕ್ಕ ಜೀವನು ಮೊದಲು ಬೇರೆ ಶರೀರವನ್ನು ಹಿಡಿದೇ ಗರ್ಭದಲ್ಲಿ ಪ್ರವೇಶಿಸುವನೆ? ಅಥವಾ ತನ್ನ ಆತ್ಮಸ್ವರೂಪದಿಂದಲೇ ಅಲ್ಲಿ ಪ್ರವೇಶಿಸುವನೆ? ಈ ನನ್ನ ಸಂದೇಹವನ್ನು ಪರಿಹರಿಸಬೇಕು. ಮನುಷ್ಯದೇಹಕ್ಕಿರುವ ಅಷ್ಟೊಂದು ಗಾತ್ರವನ್ನೂ, ಎತ್ತರವನ್ನೂ, ಕಣ್ಣು, ಕಿವಿ ಮುಂತಾದ ಇಂದ್ರಿಯಗಳನ್ನೂ, ಆ ವಿಧವಾದ ಬುದ್ಧಿಯನ್ನೂ ಅವನು ಗರ್ಭದಲ್ಲಿ ಹೊಂದುವ ಬಗೆ ಹೇಗೆ? ತತ್ವಜ್ಞನಾದ ನೀನು ಆ ವಿಚಾರಗಳನ್ನು ನನಗೆ ತಿಳಿಸಬೇಕು" ಎಂದು ಕೇಳಲು ಯಯಾತಿಯು "ರಾಜಾ! ಕೇಳು! ಪುಷ್ಪಫಲಗಳ ಸಾರದಿಂದ ಪುರುಷದೇಹದಲ್ಲಿ ಉಂಟಾಗುವ ವೀರ್ಯವನ್ನು ಸ್ತ್ರೀಯರ ಋತುಕಾಲದಲ್ಲಿ ಗರ್ಭವಾಯುವು ಗರ್ಭಾಶಯಕ್ಕೆ ಎಳೆದುತಂದು ಸೇರಿಸುವುದು. ಅಲ್ಲಿ ಆ ಗರ್ಭವಾಯುವು ಆ ವೀರ್ಯದ ಸೂಕ್ಷ್ಮಾವಯವಗಳಲ್ಲಿ ಪ್ರವೇಶಿಸಿ ಗರ್ಭವುಂಟಾಗುವಂತೆ ಮಾಡುವುದು. ಆ ಗರ್ಭವೇ ಕ್ರಮಕ್ರಮವಾಗಿ ಬೆಳೆಯುತ್ತಬರುವುದು. ಈ ಗರ್ಭದಶೆಯಲ್ಲಿಯೇ ಆತ್ಮನಿಗೆ ಅವಯವವಿಭಾಗಗಳಿಂದ ಇಂದ್ರಿಯಗಳೆಲ್ಲ ಏರ್ಪಟ್ಟು ಬುದ್ಧಿಯೂ ಉಂಟಾಗುವುದು. ಕ್ರಮಕ್ರಮವಾಗಿ ಅವನು ಕಿವಿಯಿಂದ ಕೇಳುವನು.

ಕಣ್ಣುಗಳಿಂದ ನೋಡುವನು. ಮೂಗಿನಿಂದ ವಾಸನೆಯನ್ನು ಗ್ರಹಿಸುವನು. ನಾಲಗೆಯಿಂದ ರುಚಿಯನ್ನು ತಿಳಿಯುವನು. ಚರ್ಮದಿಂದ ಸ್ಪರ್ಶವನ್ನು ತಿಳಿಯುವನು. ಮನಸ್ಸಿನಿಂದ ವಿಷಯಗಳನ್ನು ಗ್ರಹಿಸುವನು. ಅಷ್ಟಕಾ! ಮನುಷ್ಯದೇಹದಲ್ಲಿ ಜೀವನ ಬೆಳೆವಣಿಗೆಯು ಈರೀತಿಯಾದುದೆಂದು ತಿಳಿ'' ಎಂದನು.

ಆಮೇಲೆ ತಿರುಗಿ ಅಷ್ಟಕನು "ರಾಜಾ! ಸತ್ತ ಮನುಷ್ಯನನ್ನು ಬೆಂಕಿಯಲ್ಲಿ ಸುಟ್ಟುಬಿಡುವರು. ಅಥವಾ ನೆಲದಲ್ಲಿ ಹೂಳಿಬಿಡುವರು. ಇಲ್ಲವೇ ಆ ಶರೀರವನ್ನು ಪ್ರವಾಹಕ್ಕೆಳೆದು ಕೊಚ್ಚಿಸಿಬಿಡುವರಲ್ಲವೆ? ಹೀಗೆ ನಿಶ್ಶೇಷವಾಗಿ ನಾಶಹೊಂದಿದವನು ತಿರುಗಿ ಚೈತನ್ಯವನ್ನು ಹೊಂದುವುದು ಹೇಗೆ?'' ಎನಲು, ಯಯಾತಿಯು "ರಾಜಾ! ಪ್ರಾಣವು ಹೋದಮೇಲೆ, ಜೀವನು ನಿದ್ರಿಸುವಂತೆ ಕರ್ಮಜ್ಞಾನದಿಂದ ಕನವರಿಸುತ್ತ ತಾನು ಮಾಡಿದ ಪುಣ್ಯವನ್ನೋ, ಪಾಪವನ್ನೋ ಮುಂದಿಟ್ಟುಕೊಂಡು, ಆತಿವಾಹಿಕವೆಂಬ ವಾಯುವಿನ ಮಾರ್ಗವನ್ನನುಸರಿಸಿ ಹೋಗಿ, (ಪೂರ್ವದೇಹವನ್ನು ಬಿಟ್ಟು) ಬೇರೆ ರೂಪದಿಂದ ಪ್ರಾಣಿಯೊಂದನ್ನು ಸೇರುವನು. ಇಂತಹ ಜೀವಗಳಲ್ಲಿ ಪುಣ್ಯಮಾಡಿದವರು ಪವಿತ್ರವಾದ ಯೋನಿಯನ್ನು ಸೇರುವರು. ಪಾಪಮಾಡಿದವರು ಪಾಪಯೋನಿಯನ್ನು ಸೇರುವರು. ಪಾಪಿಗಳು, ಹುಳುಹುಪ್ಪಟೆಗಳು, ಪಕ್ಷಿಗಳು ಮುಂತಾದ ಯೋನಿಗಳಲ್ಲಿ ಸೇರುವರು. ಈ ವಿಚಾರವಾಗಿ ಇಲ್ಲಿ ನಾನು ಹೇಳಬೇಕಾದುದಿಷ್ಟೇ! ಈ ಜೀವಗಳೇ ಪ್ರಾಣಿಗರ್ಭದಲ್ಲಿ ಸೇರಿ, ದ್ವಿಪಾದಗಳೆಂದೂ, ಚತುಷ್ಪಾದಗಳೆಂದೂ, ಷಟ್ಪದಗಳೆಂದೂ ನಾನಾರೂಪದಿಂದ ಬೆಳೆಯುವುದನ್ನು ನಾನು ನಿನಗೆ ಹೇಳಿದೆನು. ಇನ್ನೇನಾದರೂ ಕೇಳುವುದಿದ್ದರೆ ಕೇಳು'' ಎಂದನು.

ತಿರುಗಿ ಅಷ್ಟಕನು "ರಾಜೇಂದ್ರಾ! ಮನುಷ್ಯನಿಗೆ ಯಾವ ಕಾರ್ಯವನ್ನು ಮಾಡಿದರೆ ಪುಣ್ಯಲೋಕಗಳು ಲಭಿಸುವುವು? ತಪಸ್ಸಿನಿಂದಲೂ, ಜ್ಞಾನದಿಂದಲೂ ಲಭಿಸುವ ಲೋಕಗಳಾವುವು? ಕ್ರಮಕ್ರಮವಾಗಿ ಮೇಲೆಮೇಲಿರುವ ಪುಣ್ಯಲೋಕಗಳನ್ನೆಲ್ಲ ನನಗೆ ವರಿಸೆಯಾಗಿ ತಿಳಿಸಬೇಕು'' ಎಂದು ಕೇಳಲು, ಯಯಾತಿಯು "ರಾಜಾ! ಕೇಳು! ತಪಸ್ಸು, ದಾನ,

ಶಮೆ, ಲಜ್ಜೆ, ಋಜುತ್ವ, ಭೂತದಯೆ, ಇವೇಳುಮಾತ್ರವೇ ಸ್ವರ್ಗಕ್ಕೆ ಏಳು ಹೆಬ್ಬಾಗಿಲುಗಳೆಂದು ಮಹಾತ್ಮರು ಹೇಳುವರು. ಮನುಷ್ಯರು ತಮೋಗುಣಕ್ಕೆ ವಶರಾಗಿ ಗರ್ವಪಡುವುದರಿಂದ ಹಾನಿಗೊಳಗಾಗುವರೆಂದೂ ಹಿರಿಯರು ಹೇಳುವರು. ವೇದಗಳನ್ನೆಲ್ಲ ಓದಿ ತನ್ನನ್ನೇ ಮಹಾಪಂಡಿತನನ್ನಾಗಿ ತಿಳಿದುಕೊಂಡು, ಬೇರೆಯವರನ್ನೆಲ್ಲ ಹೀನಭಾವದಿಂದ ತಿರಸ್ಕರಿಸುವವನಿಗೆ ಉತ್ತಮಲೋಕಗಳು ಸ್ಥಿರವಲ್ಲವೆಂದು ಕೇಳಿರುವೆನು. ಬ್ರಹ್ಮವೆನಿಸಿದ ವೇದವೂ ಅವರಿಗೆ ಫಲವನ್ನೇನೂ ಕೊಡಲಾರದು. ಅಗ್ನಿಹೋತ್ರಗಳು, ಮೌನ, ವೇದಾಧ್ಯಯನ, ಯಾಗವೆಂಬೀ ನಾಲ್ಕು ಕರ್ಮಗಳೂ ಕೇವಲ ಗರ್ವಾಭಿಮಾನದಿಂದ ಕೂಡಿದುದಾಗಿದ್ದರೆ, ಅವು ಹಾನಿಯನ್ನು ತರತಕ್ಕವುಗಳೇಹೊರತು ಶುಭಕಾರಿಗಳಾಗವು. ಮನುಷ್ಯನು ತನಗುಂಟಾದ ಸನ್ಮಾನಕ್ಕೆ ಹಿಗ್ಗಬಾರದು. ಅವಮಾನಕ್ಕಾಗಿ ಕೊರಗಬಾರದು ಲೋಕದಲ್ಲಿ ಸಜ್ಜನರು ಸಜ್ಜನರನ್ನು ಪೂಜಿಸುವರು. ಅಸಜ್ಜನರಿಗೆ ಸದ್ಬುದ್ಧಿಯೇ ಹುಟ್ಟಲಾರದು. "ನಾನು ಇದಕ್ಕಾಗಿಯೇ ಹೀಗೆ ಯಾಗಮಾಡುವೆನು. ಇದಕ್ಕಾಗಿಯೇ ಇಷ್ಟನ್ನು ಕೊಡುವೆನು. ನಾನು ಹೀಗೆ ಅಧ್ಯಯನಮಾಡುವೆನು. ನಾನು ಇಂತಹ ವ್ರತವನ್ನು ಇದಕ್ಕಾಗಿಯೇ ಮಾಡುವೆನು" ಎಂಬೀ ಭಾವಗಳೆಲ್ಲ ಭಯಕಾರಣಗಳೆಂದು ಹೇಳುವರು ಅಂತಹ ಪ್ರವರ್ತನೆಗಳನ್ನು ಬಿಟ್ಟುಬಿಡಬೇಕು. ಯಾರು ಮನಸ್ಸನ್ನು ನಿಗ್ರಹಿಸಿಟ್ಟು, ಧ್ಯಾನಗಮ್ಯವೂ ಅನಾದಿಯೂ, ಲೋಕಕ್ಕೆಲ್ಲ ಆಧಾರಭೂತವೂ ಆದ ಆ ಪರಬ್ರಹ್ಮವನ್ನು ತಿಳಿಯುವರೋ, ಅವರು ಈ ಲೋಕದಲ್ಲಿ ಉತ್ತಮವಾದ ಶಾಂತಿಯನ್ನು ಹೊಂದಿ, ಶರೀರಾವಸಾನದಲ್ಲಿ ಬ್ರಹ್ಮಸಾಯುಜ್ಯವನ್ನು ಪಡೆದು, ನಿರ್ವಾಣಸುಖವನ್ನೂ ಹೊಂದುವರು.

ಇದು ಎಂಭತ್ತುನಾಲ್ಕನೆಯ ಅಧ್ಯಾಯವು.



( ಬ್ರಹ್ಮಚರ್ಯೆ ಮೊದಲಾದ ನಾಲ್ಕು ಆಶ್ರಮಗಳನ್ನು ಕುರಿತು )
( ಅಷ್ಟಕನು ಕೇಳಿದ ಪ್ರಶ್ನೆಗೆ ಯಯಾತಿಯ ಉತ್ತರವು. )

ಆಮೇಲೆ ಅಷ್ಟಕನು ಯಯಾತಿಯನ್ನು ಕುರಿತು “ರಾಜೇಂದ್ರಾ! ಗುರುಶುಶ್ರೂಷೆಮಾಡತಕ್ಕ ಬ್ರಹ್ಮಚಾರಿಯೂ, ಗೃಹಸ್ಥನೂ, ವಾನಪ್ರಸ್ಥನೂ, ಸನ್ಯಾಸಿಯೂ ಸ್ವಧರ್ಮಗಳನ್ನು ಸರಿಯಾಗಿ ಅನುಷ್ಠಿಸುವುದು ಹೇಗೆ? ವೈದಿಕರು ಈ ಆಶ್ರಮಗಳಿಗೆ ಬೇರೆಬೇರೆ ಧರ್ಮಗಳನ್ನು ಹೇಳಿರುವರಲ್ಲವೆ?” ಎಂದನು. ಅದಕ್ಕಾ ಯಯಾತಿಯು “ರಾಜಾ! ಕೇಳು! ಗುರುವು ಕರೆದಾಗಲೇ ಅಧ್ಯಯನಕ್ಕೆ ಕುಳ್ಳಿರಬೇಕು. ಗುರುವಿನಿಂದ ಹೇಳಿಸಿಕೊಳ್ಳದೆ ತಾನಾಗಿ ಅವನ ಕಾರ್ಯಗಳನ್ನು ನಡೆಸುತ್ತಿರಬೇಕು. ಗುರುವು ಮಲಗಿದಮೇಲೆ ತಾನು ಮಲಗಿ, ಗುರುವು ಏಳುವುದಕ್ಕೆ ಮೊದಲು ತಾನು ಎಚ್ಚರಗೊಂಡಿರಬೇಕು. ಮೃದುಸ್ವಭಾವ, ಇಂದ್ರಿಯನಿಗ್ರಹ, ಧೈರ್ಯ, ಅಜಾಗ್ರತೆಯಿಲ್ಲದಿರುವುದು (ಎಚ್ಚರಿಕೆ), ಅಧ್ಯಯನಾಸಕ್ತಿ, ಇವೆಲ್ಲ ಯಾವನಲ್ಲಿವೆಯೋ ಆ ಬ್ರಹ್ಮಚಾರಿಯು ಸಿದ್ಧಿಯನ್ನು ಹೊಂದುವನು.

ಗೃಹಸ್ಥನಾದವನು ಧರ್ಮದಿಂದ ಧನವನ್ನು ಸಂಪಾದಿಸಿ, ಆ ಧನದಿಂದ ಯಜ್ಞಗಳನ್ನೂ, ದಾನಗಳನ್ನೂ ಮಾಡಬೇಕು. ಅತಿಥಿಗಳಿಗೆ ಊಟಬಡಿಸಬೇಕು. ಮತ್ತೊಬ್ಬರು ಇಷ್ಟಪಟ್ಟು ಕೊಡದ ವಸ್ತುಗಳನ್ನು ಗ್ರಹಿಸಬಾರದು. ಇವಿಷ್ಟೂ ಬಹು ಪುರಾತನಕಾಲದಿಂದ ಗೃಹಸ್ಥನಿಗೆ ಏರ್ಪಟ್ಟ ಶಾಸ್ತ್ರವಿಹಿತ ಧರ್ಮಗಳು.

ಸ್ವಪ್ರಯತ್ನದಿಂದಲೇ ಜೀವಿಸುವುದು, ಪಾಪಕಾರ್ಯಗಳನ್ನು ಬಿಡುವುದು, ಪರರಿಗೆ ದಾನಮಾಡುವುದು, ಪರರನ್ನು ಯಾವ ವಿಧದಿಂದಲೂ ನೋಯಿಸದಿರುವುದು, ಆಹಾರವ್ಯವಹಾರಗಳಲ್ಲಿ ನಿಯಮವನ್ನು ಹಿಡಿದಿರುವುದು ಈ ನಡತೆಗಳಿಂದ ವನದಲ್ಲಿ ತಪೋನಿರತನಾದವನು ವಾನಪ್ರಸ್ಥನೆನಿಸುವನು. ಇವನು ಉತ್ತಮಸಿದ್ಧಿಯನ್ನು ಪಡೆಯುವನು.

ಶಿಲ್ಪಗಳಿಂದ ಜೀವಿಸದವನೂ, ಗುಣವಂತನೂ, ಜಿತೇಂದ್ರಿಯನೂ, ಸರ್ವಸಂಗಗಳನ್ನು ತೊರೆದವನೂ, ಮಲಗುವುದಕ್ಕೆ ನಿಯತವಾದ ಸ್ಥಳವಿ

ಲ್ಲದೆ (ಮನೆಯಿಲ್ಲದೆ) ಸಿಕ್ಕಿದ ಕಡೆಯಲ್ಲಿ ಮಲಗುವವನೂ, ಕೈಯಲ್ಲಿ ತನ್ನ ದಾಗಿ ಯಾವುದನ್ನೂ ಸಂಗ್ರಹಿಸಿಡದವನೂ, ಹೆಚ್ಚು ವ್ಯವಹಾರಗಳನ್ನೇನೂ ಇಟ್ಟುಕೊಳ್ಳದವನೂ, ಏಕಾಕಿಯಾಗಿ ದೇಶಸಂಚಾರವಾಡತಕ್ಕವನೂ ಸನ್ಯಾಸಿಯೆನಿಸುವನು.

ಕೇವಲ ಕಾಮದಿಂದ ಸಾಧಿಸಲ್ಪಡತಕ್ಕ ಮತ್ತು ಸುಖಪ್ರದಗಳಾದ ಭೋಗಲೋಕಗಳಲ್ಲಿ, ವಿರಕ್ತಿ ಹುಟ್ಟಿ ಯಾವ ರಾತ್ರಿ ತ್ಯಜಿಸಲ್ಪಡುವುವೋ ಆ ರಾತ್ರಿಯೇ ವಿದ್ವಾಂಸನು ಮನಸ್ಸನ್ನು ನಿಗ್ರಹಿಸಿ ಅರಣ್ಯವಾಸಕ್ಕೆ ಯತ್ನಿಸಬೇಕು. ಹಾಗೆ ಅರಣ್ಯವಾಸಿಯಾಗಿದ್ದು, ತನ್ನ ದೇಹದೊಳಗಿನ ರಕ್ತ, ಮಾಂಸ, ಮೊದಲಾದ ಧಾತುಗಳನ್ನು ಅರಣ್ಯದಲ್ಲಿಯೇ ಕೊನೆಗಾಣಿಸತಕ್ಕವನು ತನಗೆ ಹಿಂದಿನ ಹತ್ತು ತಲೆಮೊರೆಯುವರನ್ನೂ, ಮುಂದಿನ ಹತ್ತು ತಲೆಮೊರೆಯುವರನ್ನೂ, ಇಪ್ಪತ್ತೊಂದನೆಯುವನಾದ ತನ್ನನ್ನೂ ಪುಣ್ಯಲೋಕದಲ್ಲಿಡುವನು " ಎಂದನು.

ಆಮೇಲೆ ತಿರುಗಿ ಅಷ್ಟಕನು " ಮುನಿಗಳಲ್ಲಿ (ಸನ್ಯಾಸಿಗಳಲ್ಲಿ) ಎಷ್ಟು ವಿಧವುಂಟು? (ಮೌನ) ವ್ರತದಲ್ಲಿರುವ ಭೇದಗಳೆಷ್ಟು? ಇವನ್ನು ತಿಳಿಸಬೇಕು." ಎನಲು ಯಯಾತಿಯು " ಯಾವನು ಅರಣ್ಯದಲ್ಲಿದ್ದರೂ ಗ್ರಾಮವನ್ನೂ, ಗ್ರಾಮದಲ್ಲಿದ್ದರೂ ಅರಣ್ಯವನ್ನೂ ತನ್ನ ಹಿಂದೆ ಇಟ್ಟುಕೊಂಡಿರುವನೋ ಅವನು ಮುನಿಯೆನಿಸುವನು" ಎಂದನು. ಆಗ ಅಷ್ಟಕನು "ರಾಜೇಂದ್ರಾ! ಅರಣ್ಯವನ್ನೂ, ಗ್ರಾಮವನ್ನೂ ಹಿಂದಿಟ್ಟಿರುವುದೆಂದರೇನು?" ಎಂದು ಕೇಳಲು, ಯಯಾತಿಯು " ಅರಣ್ಯವಾಸಿಯಾದ ಮುನಿಯು ಗ್ರಾಮಗಳಲ್ಲಿರುವುದೊಂದನ್ನೂ ಉಪಭೋಗಿಸಬಾರದು. ಆದರೂ ಅವನಿಗೆ ಅವನ ಶಕ್ತಿಯಿಂದ ಗ್ರಾಮವನ್ನು ಹಿಂದಿಟ್ಟುಕೊಂಡಿರುವಂತಾಗುವುದು. ಮುನಿಯಾದವನಿಗೆ ಅಗ್ನಿಹೋತ್ರಗಳಿಲ್ಲ! ಮನೆಮಠಗಳಿಲ್ಲ! ಹುಟ್ಟಿದ ಕುಲ, ಗೋತ್ರ, ವಿದ್ಯೆಗಳೊಂದೂ ಇಲ್ಲ. ಅವನಿಗೆ ಮೈಮೇಲೆ ಮರೆಸಿಡಬೇಕಾದ ಸ್ಥಳವನ್ನು ಮರೆಸಿಕೊಳ್ಳುವಷ್ಟಕ್ಕೆಮಾತ್ರ ಸಾಕಾದಷ್ಟೇ ಚಿಂದಿಯ ಬಟ್ಟೆ, ಪ್ರಾಣಧಾರಣೆಗೆ ಬೇಕಾದಷ್ಟೇ ಅನ್ನಪಾನಗಳು, ಈ ನಿ

ಯಮಗಳಿಂದ ಸನ್ಯಾಸಿಯು ಗ್ರಾಮದಲ್ಲಿದ್ದರೂ, *ಅವನಿಗೆ ಆರಣ್ಯವು ಹಿಂದಿದ್ದಂತೆಯೇ ಆಗುವುದು. ಯಾವನು ಕಾಮಗಳನ್ನೂ, ಕರ್ಮಗಳನ್ನೂ ಬಿಟ್ಟು, ಇಂದ್ರಿಯಗಳನ್ನಡಗಿಸಿ ಮೌನವನ್ನು ಹಿಡಿದಿರುವನೋ ಅವನು ಈ ಲೋಕದಲ್ಲಿ ಸಿದ್ಧಿಯನ್ನು ಪಡೆಯುವನು. ಆಹಾರಶುದ್ಧಿಗಾಗಿ ಹಲ್ಲನ್ನು ತೊಳೆಯುವುದು, ಪರಹಿಂಸೆಯನ್ನು ತಪ್ಪಿಸುವುದಕ್ಕಾಗಿ ನಖಗಳನ್ನು ಕತ್ತರಿಸುವುದು, ಮನಶ್ಶುದ್ಧಿಗಾಗಿ ಇಂದ್ರಿಯನಿಗ್ರಹ, ಶರೀರಶುದ್ಧಿಗಾಗಿ ಸ್ನಾನ, ಇವುಗಳನ್ನು ಕ್ರಮವಾಗಿ ನಡೆಸುತ್ತ, ಶಾಂತ್ಯಾದಿ ಗುಣಗಳಿಂದ ಅಲಂಕೃತನಾಗಿ, ಸಂಗರಹಿತನಾಗಿ, ಶುದ್ಧಕರ್ಮವುಳ್ಳವನನ್ನು ಎಂತವರೂ ಪೂಜಿಸಿ ಗೌರವಿಸುವರು. ಅವನು ತಪಸ್ಸಿನಿಂದ ಕೃಶನಾಗಿ, ರಕ್ತಮಾಂಸಗಳೆಲ್ಲವೂ ಕ್ಷಯಿಸಿ, ಅಸ್ಥಿಮಾತ್ರಾವಶೇಷಿತನಾಗಿದ್ದರೂ ಅವನು ಇಹಪರಗಳೆರಡನ್ನೂ ಜಯಿಸಬಲ್ಲ ಬಲಿಷ್ಠನೆನಿಸುವನು. ಮುನಿಯಾದವನು ಮೌನವನ್ನೇ ಹಿಡಿದು ಸುಖದುಃಖಾದಿ ದ್ವಂದ್ವಗಳನ್ನು ತೊರೆದಾಗಲೇ ಅವನಿಗೆ ಇಹಪರಗಳೆರಡೂ ವಶವಾಗುವುವು. ಮುನಿಯಾದವನು ಕೈಯಿಂದ ಕೆಲಸಮಾಡಿ ಸಂಪಾದಿಸುವ ಆಸೆಯಿಲ್ಲದೆ ಪಶುಗಳಂತೆ ಆಯಾಕಾಲಕ್ಕೆ ಬಾಯಿಗೆ ಬಂದಷ್ಟು ಆಹಾರವನ್ನು ಮಾತ್ರವೇ ಸಂಪಾದಿಸಬೇಕು. ಅಂತವನಿಗೆ ಈ ಲೋಕವೆಲ್ಲ ಸ್ವಂತವೇ! ಮತ್ತು ಅವನು ಮುಕ್ತಿಗೆ ಪಾತ್ರನಾಗುವನು. ಕ್ರೋಧ, ಲೋಭ, ದ್ರೋಹಾಸೂಯೆಗಳೆಂಬಿವು ಸರ್ವಸಾಮಾನ್ಯವಾದ ಸ್ವಭಾವಗಳು. ಮಾತ್ಸರ್ಯ, ಕಾಪಟ್ಯ, ದ್ವೇಷ, ಗರ್ವ, ದಂಭ, ಕ್ರೋಧ, ಲೋಭ, ಕಿರುಕುಳತನ, ಇವುಗಳೆಲ್ಲವನ್ನೂ ಬಿಟ್ಟು, ಅಹಂಕಾರ ಮಮಕಾರಗಳಿಲ್ಲದವನೇ ಧರ್ಮಜ್ಞನು" ಎಂದನು.

ಆಗ ತಿರುಗಿ ಅಷ್ಟಕನು "ರಾಜಾ! ಬ್ರಹ್ಮಚಾರಿ, ಗೃಹಸ್ಥ ಸನ್ಯಾಸಿಗಳೆಂಬಿವರು ನಿತ್ಯವೂ ಭುಜಿಸಿದರೂ, ಭೋಜನದಿಂದ ಪ್ರಾಪ್ತವಾಗುವ ದೋಷವನ್ನು ಹೊಂದದಿರುವುದು ಹೇಗೆ?" ಎನಲು, ಯಯಾತಿಯು "ಸನ್ಯಾಸಿಗೆ ಎಂಟು ಕಬಳಗಳು, ವಾನಪ್ರಸ್ಥನಿಗೆ ಹದಿನಾರು ಕಬಳಗಳು, ಗೃಹ

* ಗ್ರಾಮದಲ್ಲಿದ್ದಾಗಲೂ, ಗ್ರಾಮ್ಯವಸ್ತುಗಳ ಸುಖಾಪೇಕ್ಷೆಯನ್ನೆಲ್ಲ ಬಿಟ್ಟು ವಿರಕ್ತನಾಗಿ, ವನದಲ್ಲಿದ್ದಹಾಗೆಯೇ ಇದ್ದರೆ ಅಂತವನು ವನಕ್ಕೆ ಹೋಗುವುದರಿಂದ ವಿಶೇಷವೇನೂ ಇಲ್ಲವೆಂದು ಇಲ್ಲಿನ ಭಾವವು.

ಸ್ಥನಿಗೆ ಮೂವತ್ತೆರಡು ಕಬಳಗಳು ವಿಧಿಸಲ್ಪಟ್ಟಿವೆ. ಬ್ರಹ್ಮಚಾರಿಗೆ ನಿಯಮವಿಲ್ಲ. ಭೋಜನ ವಿಷಯದಲ್ಲಿ ಸದನತ್ಯಾಗಿಗಳ ಭೇದವನ್ನು ಈ ನಿಯಮಗಳಿಂದ ತಿಳಿಯಬೇಕು" ಎಂದನು.

ಇದು ಎಂಭತ್ತೈದನೆಯ ಅಧ್ಯಾಯವು.

ಯಯಾತಿಯು ತಾನು ಸ್ವರ್ಗಭ್ರಷ್ಟನಾಗಿ ಅಷ್ಟಕನ ಯಜ್ಞಭೂಮಿಯ ಕಡೆಗೆ ಬಂದ ಕಾರಣವನ್ನು ತಿಳಿಸಿದುದು. ಯಯಾತಿಯೊಡನೆ ಅಷ್ಟಕಾದಿಗಳ ಸಂವಾದವು.

ಆಗ ತಿರುಗಿ ಅಷ್ಟಕನು ಯಯಾತಿಯನ್ನು ಕುರಿತು "ರಾಜೇಂದ್ರಾ! ಸೂರ್ಯಚಂದ್ರರಂತೆ ಎಡೆಬಿಡದೆ (ತಪೋಮಾರ್ಗದಲ್ಲಿ) ಓಡುತ್ತಿರುವ (ಕುಟೀಚಕ ಬಹೂದಕರೆಂಬ) ಎರಡು ಬಗೆಯ ಯೋಗಿಗಳಲ್ಲಿ (ಗ್ರಾಮವಾಸಿಗಳು ವನವಾಸಿಗಳೆಂಬಿಬ್ಬರಲ್ಲಿ) ಮೊದಲು ಯಾವನು ದೇವತೆಗಳೊಡನೆ ಸಾರೂಪ್ಯವನ್ನು ಹೊಂದಬಲ್ಲನು? ಈ ವಿಚಾರವನ್ನು ನನಗೆ ತಿಳಿಸಬೇಕು" ಎಂದು ಕೇಳಲು, ಯಯಾತಿಯು "ರಾಜಾ! ಕೇಳು! ಗ್ರಾಮದಲ್ಲಿಯೇ ವಾಸಮಾಡುತಿದ್ದರೂ, ಕಾಮವ್ಯಾಪಾರವುಳ್ಳ ಇಂದ್ರಿಯಗಳ ಪ್ರವೃತ್ತಿಗೆ ಅವಕಾಶಕೊಡದೆ, ಮನಸ್ಸನ್ನು ಅಡಗಿಸಿಡುವವನಾವನೋ ಅವನೇ ಮೊದಲು ದೇವತ್ವವನ್ನು ಹೊಂದಬಲ್ಲನು. ಮತ್ತು ಒಬ್ಬನಿಗೆ ತಪಸ್ಸಿದ್ಧಿಗೆ ಸಾಕಾದಷ್ಟು ಆಯುಃಪರಿಮಿತಿಯಿಲ್ಲದಿದ್ದಾಗ, ಆ ಅಲ್ಪಕಾಲ ಜೀವಿತದಲ್ಲಿ ಮನೋವಿಕಾರದಿಂದ ಕದಲಿ ದಾರಿತಪ್ಪಿಹೋದರೂ, ಆಮೇಲೆ ತನ್ನ ತಪ್ಪಿತಕ್ಕಾಗಿ ಪಶ್ಚಾತ್ತಾಪಗೊಂಡು, ಬೇರೆ ತಪೋಮಾರ್ಗವನ್ನು ಹಿಡಿಯಬಹುದು. ಆ ತಪಸ್ಸಿದ್ಧಿಗೆ ತಕ್ಕಷ್ಟು ಆಯುಃಕಾಲವಿಲ್ಲದಿದ್ದರೂ, ಮುಂದಿನ ಜನ್ಮದಲ್ಲಿಯಾದರೂ ಸಿದ್ಧಿಯನ್ನು ಪಡೆಯುವುದಕ್ಕೆ ಆ ಹಿಂದಿನ ತಪಶ್ಶೇಷವು ಅನುಕೂಲಿಸಿಬರುವುದು. ಮತ್ತು ತನ್ನ ಶರೀರಸುಖದಲ್ಲಿ ಆಶೆಗೊಂಡವನಾಗಿದ್ದರೂ ಯಾವಾಗಲೂ *ಪಾಪಕಾರ್ಯಕ್ಕೆ ಯಾವನು ಹೆದ

* ಮೇಲಿನ ವಾಕ್ಯಗಳಿಂದ, ತಾನು ಹಿಂದೆ ಮಾಡಿದ ಪಾಪಕಾರ್ಯಕ್ಕಾಗಿ ಪಶ್ಚಾತ್ತಾಪಪಡುವುದೂ, ಮುಂದೆ ತನ್ನಿಂದ ನಡೆಯಬಹುದಾದ ಪಾಪಗಳನ್ನು ಕುರಿತು ಭಯಪಡುವುದೂ ಮುಕ್ತಿಸಾಧಕವೆಂದು ಭಾವವು.

ರುತ್ತಿರುವನೋ, ಅವನು ಆತ್ಯಂತಿಕವಾದ ಸುಖಕ್ಕೆ ಪಾತ್ರನಾಗುವನು. ರಾಜಾ! ಹಿಂಸೆಗೆ ಕಾರಣವಾದುದನ್ನೇ ಅಸತ್ಯವೆಂದು ದೊಡ್ಡವರು ಹೇಳು ವರು. ಮತ್ತು ಸ್ವಪ್ರಯೋಜನಬುದ್ಧಿಯಿಲ್ಲದೆ 'ಇದು ತನ್ನದು! ಇದಕ್ಕೆ ತಾನೇ ಅಧಿಕಾರಿ!' ಯೆಂಬ ಅಹಂಭಾವವಿಲ್ಲದೆ, ಧರ್ಮವನ್ನು ನಡೆಸುವುದೇ ಆರ್ಜವವೆನಿಸುವುದು. ಅದೇ ಯೋಗನಿಷ್ಠೆ. ಮತ್ತು ಅದೇ ಯೋಗ್ಯ ವಾದ ಸತ್ಕರ್ಮವೆನಿಸುವುದು" ಎಂದನು.

ಆಮೇಲೆ ತಿರುಗಿ ಅಷ್ಟಕನು "ಓ ರಾಜೇಂದ್ರಾ! ನೀನು ಇನ್ನೂ ಯುವಕನಂತೆ ಕಾಣುವೆ! ಒಳ್ಳೇ ಪುಷ್ಪಮಾಲಿಕೆಯಿಂದಲಂಕೃತನೂ, ತೇಜಸ್ವಿಯೂ ಆಗಿ, ನೋಡುವವರಿಗೆ ಆಸೆಹುಟ್ಟಿಸತಕ್ಕ ರೂಪಸಂಪತ್ತಿ ಯಿಂದ ಶೋಭಿಸುತ್ತಿರುವೆ. ಇಲ್ಲಿಗೆ ನಿನ್ನನ್ನು ಕರೆದವನಾರು? ಅಥವಾ ನಿನ್ನನ್ನು ಇಲ್ಲಿಗೆ ಕಳುಹಿಸಿದವನಾವನು? ಯಾವ ಕಡೆಯಿಂದ ಯಾವನೊ ಡನೆ ನೀನು ಇಲ್ಲಿಗೆ ಬಂದೆ? ಯಾವ ಕಡೆಗೆ ಹೋಗುತ್ತಿರುವೆ? ನಿನಗೆ ಭೂಮಿಯಲ್ಲಿ ನಿರ್ಣೀತವಾದ ಬೇರೆ ಸ್ಥಾನವೇನಾದರೂ ಉಂಟೇನು?" ಎಂದನು. ಅದಕ್ಕಾ ಯಯಾತಿಯು "ರಾಜಾ! ನಾನೂ ಅನೇಕವಿಷಯ ಗಳನ್ನು ತಿಳಿದು ವಿವೇಕಿಯೆನಿಸಿಕೊಂಡೇ ಇದ್ದವನು. ಆದರೇನು? ಪುಣ್ಯಕ್ಷಯದಿಂದ ಈಗ ನಾನು ಸ್ವರ್ಗದಿಂದ ತಳ್ಳಲ್ಪಟ್ಟು ಭೂಮಿಯೆಂಬ ನರಕಕ್ಕೆ ಬೀಳುತ್ತಿರುವೆನು. ನನಗೆ ಉತ್ತಮಲೋಕಪ್ರಾಪ್ತಿಗೆ ಯೋಗ್ಯಗ ಳಾದ ಕರ್ಮಗಳೆಲ್ಲವೂ ನಷ್ಟವಾದುವು. ನಿಮ್ಮ ಪ್ರಶ್ನೆಗಳಿಗೆಲ್ಲ ಉತ್ತರ ವನ್ನು ಹೇಳಿ ಮುಗಿಸಿದಮೇಲೆ ನಾನು ಭೂಮಿಯಲ್ಲಿ ಬೀಳತಕ್ಕವನು. ಅದೋ! ಬ್ರಹ್ಮನಿಂದ ಪ್ರೇರಿತರಾದ ಲೋಕಪಾಲಕರು ನನ್ನನ್ನು ಆಗಲೇ ತ್ವರೆಗೊಳಿಸುತ್ತಿರುವರು. ಆದರೆ, ನಾನು ಸತ್ಪುರುಷರ ನಡುವೆ ನನ್ನನ್ನು ತಳ್ಳಬೇಕೆಂದು ಅವರಲ್ಲಿ ಪ್ರಾರ್ಥಿಸಿ ಕೇಳಿಕೊಂಡುದರಮೇಲೆ, ಗುಣವಂತ ರಾದ ನೀವೆಲ್ಲರೂ ಕೂಡಿರುವ ಈ ಆಶ್ರಮದ ಕಡೆಗೆ ನಾನು ಬರುವಂತಾ ಯಿತು. ನಾನು ಸ್ವರ್ಗದಿಂದ ಬೀಳುವಾಗ ದೇವೇಂದ್ರನಿಂದಲೇ ಈ ವರ ವನ್ನು ಪಡೆದೆನು" ಎಂದನು.

ಆಗ ಅಷ್ಟಕನು "ರಾಜೇಂದ್ರಾ! ಹಾಗಿದ್ದರೆ ನಿನ್ನಲ್ಲಿ ನನ್ನದೊಂದು ಪ್ರಾರ್ಥನೆ! ಈಗಲೇ ನೀನು ಭೂಮಿಗೆ ಬೀಳಬಾರದು. ನಾನೊಂದು ವಿಷಯವನ್ನು ನಿನ್ನಲ್ಲಿ ಕೇಳಿ ತಿಳಿಯಬೇಕಾಗಿದೆ. ನಾನು ಇದುವರೆಗೆ ಮಾಡಿದ ಧರ್ಮದಿಂದ ನನಗೆ ಅಂತರಿಕ್ಷದಲ್ಲಿಯಾಗಲಿ, ಸ್ವರ್ಗದಲ್ಲಿಯಾಗಲಿ ಲೋಕಗಳೇನಾದರೂ ಲಭಿಸತಕ್ಕವುಗಳುಂಟೆ? ಈ ಧರ್ಮತತ್ವವನ್ನು ನೀನು ತಿಳಿದಿರುವೆಯೆಂದು ನನಗೆ ನಂಬಿಕೆ. ಅದನ್ನು ನನಗೆ ತಿಳಿಸಬೇಕು" ಎಂದು ಕೇಳಲು, ಯಯಾತಿಯು, "ಓ ರಾಜಸಿಹ್ಮಾ! ಅದಕ್ಕೆ ತಡೆಯೇನು? ಈ ಭೂಮಿಯಲ್ಲಿ ಗೋಜಾತಿಗಳು, ಅಶ್ವಜಾತಿಗಳು, ಮತ್ತು ಪರ್ವತಾರಣ್ಯಗಳಲ್ಲಿರುವ ಮೃಗಜಾತಿಗಳು ಎಷ್ಟುಂಟೋ ಅಷ್ಟೊಂದು ಪುಣ್ಯಲೋಕಗಳೂ ನಿನಗೆ ಲಭಿಸತಕ್ಕವುಗಳಾಗಿವೆಯೆಂದು ತಿಳಿ. (ಈ ಮೃಗಸೃಷ್ಟಿಯು ಲೋಕದಲ್ಲಿ ಎಲ್ಲಿಯವರೆಗುಂಟೋ ಅಲ್ಲಿಯವರೆಗೆ ನಿನಗೆ ಆ ಪುಣ್ಯಲೋಕಗಳು ಶಾಶ್ವತಗಳೆಂದು ತಿಳಿ)" ಎಂದನು. ಆಗ ಅಷ್ಟಕನು "ರಾಜೇಂದ್ರಾ! ಹಾಗಿದ್ದರೆ ನೀನು ಭೂಮಿಗೆ ಬೀಳಬೇಡ! ಅಂತರಿಕ್ಷದಲ್ಲಿಯಾಗಲಿ, ಸ್ವರ್ಗದಲ್ಲಿಯಾಗಲಿ ನನಗೆ ಲಭಿಸತಕ್ಕ ಪುಣ್ಯಲೋಕಗಳೆಷ್ಟಿದ್ದರೂ, ಅವನ್ನೆಲ್ಲ ನಿನಗೇ ನಾನು ದಾನರೂಪವಾಗಿ ಕೊಡುವೆನು. ನೀನೇ ಅವುಗಳನ್ನು ಅನುಭವಿಸುತ್ತಿರು" ಎಂದನು. ಅದಕ್ಕಾ ಯಯಾತಿಯು "ಓ ದಯಾಳೂ! ನಾನಾದರೋ ಅಬ್ರಾಹ್ಮಣನು. ವೇದವಿಧಿಗಳನ್ನೆಲ್ಲ ತಿಳಿದವನು. ಹೀಗಿರುವಾಗ ಬ್ರಾಹ್ಮಣರಿಗೆಮಾತ್ರ ವಿಹಿತವಾದ ದಾನಕ್ಕೆ ನನ್ನಂತವನು ಕೈ ನೀಡಬಹುದೆ? ನಾನು ನಿನ್ನಿಂದ ಈ ದಾನವನ್ನು ಪಡೆಯಲಾರೆನು. ನಾನು ಬ್ರಾಹ್ಮಣರಿಗೆ ಕೊಡತಕ್ಕವನೇ ಹೊರತು ತೆಗೆಯುವುದು ನನ್ನ ವೃತ್ತಿಯಲ್ಲ. ಅದರಂತೆಯೇ ಪೂರ್ವದಲ್ಲಿ ನಾನು ಬ್ರಾಹ್ಮಣರಿಗೆ ಕೊಡಬಹುದಾದುದನ್ನೆಲ್ಲ ಅಪರಿಮಿತವಾಗಿ ಕೊಟ್ಟು ಇರುವೆನು. ನನ್ನಂತೆ ಅಬ್ರಾಹ್ಮಣನಿಗಾಗಲಿ, ಬ್ರಾಹ್ಮಣಕನ್ಯೆಯಲ್ಲದ ನನ್ನಂತಹ ವೀರನ ಪತ್ನಿಗಾಗಲಿ, ಹೀಗೆ ಕಾರ್ಪಣ್ಯದಿಂದ ಯಾಚಿಸಿ ಜೀವಿಸುವುದು ಎಂದಿಗೂ ಯೋಗ್ಯವಲ್ಲ. ಹಿಂದೆ ಯಾವಾಗಲೂ ಮಾಡಿಲ್ಲದ ಈ ಕಾರ್ಯವನ್ನು ನಾನು ಎಂದಿಗೂ ಮಾಡಲಾರೆನು. ಹಾಗೆ ಮಾಡಿದರೆ ನಾನು ಎಂದಿಗೂ ಯೋಗ್ಯನೆನಿಸಿಕೊಳ್ಳಲಾರೆನು" ಎಂದನು.

ಆಮೇಲೆ ಪ್ರತರ್ದನನೆಂಬವನು ಯಯಾತಿಯನ್ನು ನೋಡಿ "ಓ ರಾಜೇಂದ್ರಾ! ನಾನೊಂದನ್ನು ಕೇಳುವೆನು. ನಾನು ಪ್ರತರ್ದನನೆಂಬವನು. ಅಂತರಿಕ್ಷದಲ್ಲಿಯಾಗಲಿ, ಸ್ವರ್ಗದಲ್ಲಿಯಾಗಲಿ ನನಗೇನಾದರೂ ಲಭಿಸತಕ್ಕ ಪುಣ್ಯಲೋಕಗಳು ಉಂಟೆ?" ಎನಲು, ಯಯಾತಿಯು "ಅಯ್ಯಾ! ನಿನಗೂ ಅನೇಕ ಲೋಕಗಳುಂಟು. ಅವೆಲ್ಲವೂ ತುಪ್ಪ, ಜೇನು, ಮುಂತಾದ ರಸವಸ್ತುಗಳಿಂದ ಸಮೃದ್ಧವಾಗಿ, ದುಃಖಪ್ರಸಕ್ತಿಯೇ ಇಲ್ಲದಂತಿರುವುವು. ನೀನು ಆ ಒಂದೊಂದು ಲೋಕದಲ್ಲಿ ಏಳೇಳು ದಿನಗಳವರೆಗೆ ಮಾತ್ರವಿದ್ದರೂ ಅವು ನಿನಗೆ ಕೊನೆಮುಟ್ಟುವಹಾಗಿಲ್ಲ. ಅವು ಈಗ ನಿನ್ನನ್ನು ಇದಿರುನೋಡುತ್ತಿವೆ" ಎಂದನು. ಆಗ ಪ್ರತರ್ದನನು "ರಾಜಾ! ಹಾಗಿದ್ದರೆ ನೀನು ಭೂಮಿಯಲ್ಲಿ ಬೀಳಬೇಡ! ನನ್ನ ಲೋಕಗಳನ್ನೆಲ್ಲ ನಾನೂ ನಿನಗೇ ಕೊಡುವೆನು. ಅಂತರಿಕ್ಷದಲ್ಲಿ ಅಥವಾ ಸ್ವರ್ಗದಲ್ಲಿ ನನಗೆ ಲಭಿಸತಕ್ಕ ಆ ಲೋಕಗಳನ್ನೆಲ್ಲ ನೀನೇ ಅನುಭವಿಸುತ್ತಿರು" ಎಂದನು. ಅದಕ್ಕಾ ಯಯಾತಿಯು "ರಾಜೇಂದ್ರಾ! ನಾನೂ ಕ್ಷತ್ರಿಯನು. ನೀನೂ ಕ್ಷತ್ರಿಯನು. ಹೀಗೆ ಸಮಾನತೇಜಸ್ಸೂ, ಸಮಾನಶಕ್ತಿಯೂ ಉಳ್ಳವನು, ತನ್ನ ಲಾಭವನ್ನೂ, ಸುಖವನ್ನೂ ಉದ್ದೇಶಿಸಿ, ಮತ್ತೊಬ್ಬನ ಸ್ವತ್ತಿಗೆ ಕೈನೀಡುವನೆ? ಎಂದಿಗೂ ಇಲ್ಲ. ವಿವೇಕಿಯಾದ ರಾಜನು ದೈವಾಜ್ಞೆಯಿಂದ ಮಹಾವಿಪತ್ತಿಗೆ ಗುರಿಯಾಗಿದ್ದರೂ, ನಿಂದ್ಯವಾದ (ಸ್ವಧರ್ಮಕ್ಕೆ ವಿರುದ್ಧವಾದ) ಕಾರ್ಯದಲ್ಲಿ ಪ್ರವರ್ತಿಸಬಾರದು. ರಾಜನಾದವನು, ಧರ್ಮವನ್ನೂ, ಕೀರ್ತಿಯನ್ನೂ ತರತಕ್ಕ ಮಾರ್ಗವನ್ನೇ ಹಿಡಿಯಬೇಕು ಧರ್ಮವನ್ನು ತಿಳಿದು, ಅದರಲ್ಲಿಯೇ ಪ್ರವರ್ತಿಸತಕ್ಕ ನನ್ನಂತವನು ಈ ಕಾರ್ಪಣ್ಯವನ್ನು ತೋರಿಸಬಹುದೆ? ಹಿಂದೆ ಯಾವ ಕ್ಷತ್ರಿಯನೂ ಮಾಡದ ಈ ಕಾರ್ಯವನ್ನು ನಾನು ಮಾಡಬಾರದು ಹಾಗೆ ಮಾಡುವವನು ಯೋಗ್ಯನೆನಿಸುವುದಿಲ್ಲ. ಧರ್ಮಾಧರ್ಮಗಳನ್ನು ಚೆನ್ನಾಗಿ ನಿಶ್ಚಯಿಸಿಕೊಂಡು, ಕಾರ್ಯಾಕಾರ್ಯಗಳಲ್ಲಿ ಎಚ್ಚರಗೊಂಡಿರುವವನೇ ಧೀಮಂತನು. ಅವನೇ ಸತ್ಯಸಂಧನು. ಅವನೇ ಜಿತಾತ್ಮನು. ಅಂತಹ ರಾಜನು ತನ್ನ ಮಹಿಮೆಯಿಂದ ಲೋಕಪಾಲರನ್ನೂ ಮೀರಿಸುವನು. ಧರ್ಮಫಲದಲ್ಲಿ ಸಂದೇಹವಿದ್ದಾಗಲೂ, ಅರ್ಥಕಾಮಗಳು ಪೂರ್ಣವಾಗಿ ಕೈಗೂಡುವ ನಂಬಿಕೆಯಿದ್ದಾಗಲೂ

ಕೂಡ, ಮೊದಲು ಧರ್ಮವನ್ನೇ ಹಿಡಿಯಬೇಕು. ಇತರರ ಅರ್ಥಕಾಮಗಳಿಗೆ ವಿರೋಧವಿಲ್ಲದಂತೆ ನಡೆಯುವುದೇ ಧರ್ಮವು" ಎಂದನು.

ಇದು ಎಂಭತ್ತಾರನೆಯ ಅಧ್ಯಾಯವು.



ವಸುಮಂತ, ಶಿಬಿ, ಅಷ್ಟಕ ಮೊದಲಾದವರೊಡನೆ ಯಯಾತಿಯ ಸಂವಾದಗಳು. ಈ ಸಮಯದಲ್ಲಿ ಅವರ ತಾಯಿಯಾದ ಮಾಧವಿಯು ಬಂದು ಯಯಾತಿಯು ತನ್ನ ತಂದೆಯೆಂದು ತಿಳಿಸಿದುದು. ಅವಳ ಮಾತಿನಮೇಲೆ ಯಯಾತಿಯು ತನ್ನ ಮೊಮ್ಮಕ್ಕಳಿಂದ ಪುಣ್ಯಲೋಕಗಳನ್ನು ಸ್ವೀಕರಿಸಿ, ತನ್ನ ವೃತ್ತಾಂತವನ್ನು ತಿಳಿಸಿ, ಸ್ವರ್ಗಕ್ಕೆ ಹೋದುದು.

ಆಮೇಲೆ ವಸುಮಂತನು ಯಯಾತಿಯನ್ನು ಕುರಿತು "ರಾಜೋತ್ತಮಾ! ನಾನೂ ಒಂದನ್ನು ಕೇಳುವೆನು. ನಾನು ಉಷದಶ್ವನ ಮಗನಾದ ವಸುಮಂತನು. ನನಗೇನಾದರೂ ಪುಣ್ಯಲೋಕಗಳುಂಟೇ? ಎಂಬುದನ್ನು ತತ್ವಜ್ಞನಾದ ನೀನು ತಿಳಿಸಬೇಕು" ಎನಲು, ಯಯಾತಿಯು ಅಯ್ಯಾ! ನಿನಗೂ ಅನೇಕಪುಣ್ಯಲೋಕಗಳುಂಟು. ಸೂರ್ಯನು ತನ್ನ ಕಿರಣಗಳಿಂದ ಪ್ರಕಾಶಗೊಳಿಸುವ ಭೂಮಿ, ಆಕಾಶ, ದಿಕ್ಕುಗಳು, ಇವೆಲ್ಲ ಎಷ್ಟು ವಿಶಾಲವಾಗಿರುವುವೋ ಅಷ್ಟು ವಿಶಾಲವಾದ ಪುಣ್ಯಲೋಕಗಳು ನಿನಗಾಗಿ ನಿರೀಕ್ಷಿಸುತ್ತಿವೆ. ಅವು ಅನಂತವಾದುವು" ಎಂದನು. ಆಗ ವಸುಮಂತನು "ಹಾಗಿದ್ದರೆ ನಾನು ಅವುಗಳನ್ನು ನಿನಗೇ ಕೊಡುವೆನು. ನೆಲಕ್ಕೆ ಬೀಳದೆ ನೀನು ನನ್ನ ಲೋಕಗಳನ್ನು ಅನುಭವಿಸುತ್ತಿರು. ಒಂದುವೇಳೆ ನೀನು ಈ ವಿಧವಾದ ಪ್ರತಿಗ್ರಹಕ್ಕೆ (ದಾನ ತೆಗೆಯುವುದಕ್ಕೆ) ಇಷ್ಟಪಡದಿದ್ದ ಪಕ್ಷದಲ್ಲಿ, ಅದಕ್ಕೆ ಬೆಲೆಯರೂಪವಾಗಿ ಒಂದು ಸಣ್ಣಹುಲ್ಲುಕಡ್ಡಿಯನ್ನಾದರೂ ನನಗೆ ಕೊಟ್ಟು, ಅವನ್ನು ತೆಗೆದುಕೊಳ್ಳಬಹುದು" ಎಂದನು. ಅದಕ್ಕಾ ಯಯಾತಿಯು "ರಾಜಾ! ಅಪ್ರಾಮಾಣಿಕವಾದ ಈ ವ್ಯವಹಾರವೇ ನನಗೆ ಬೇಕಾಗಿಲ್ಲ. ನಾನು ಅಧರ್ಮಕ್ಕೆ ಅಂಜತಕ್ಕವನು. ಎಳಪ್ರಾಯ

ವು ಮೊದಲುಗೊಂಡು, ನಾನು ಈ ತರದ ಸುಳ್ಳುವ್ಯವಹಾರಗಳಲ್ಲಿ ತಲೆಯಿಕ್ಕಿದುದು ನನ್ನ ನೆನಪಿಗೆ ಬರಲಿಲ್ಲ. ಹಿಂದೆ ಯಾರೂ ಮಾಡದ ಕಾರ್ಯವನ್ನು ನಾನು. ಮಾಡಲಾರೆನು. ಅದನ್ನು ಮಾಡುವುದು ಯೋಗ್ಯವೂ ಅಲ್ಲ" ಎಂದನು. ಆಗ ವಸುಮಂತನು "ರಾಜಾ! ನಿನಗೆ ಆ ವಿಧವಾದ ಕ್ರಯವೂ ಸಮ್ಮತವಿಲ್ಲದಪಕ್ಷದಲ್ಲಿ, ನಾನಾಗಿ ಕೊಡುವ ಆ ಲೋಕಗಳನ್ನು ಪ್ರತಿಗ್ರಹಿಸಬಹುದಲ್ಲವೆ? ನಾನು ಆ ಲೋಕಗಳಿಗೆ ಹೋಗುವುದಿಲ್ಲ. ನಿನಗೇ ಬಿಟ್ಟುಬಿಡುವೆನು" ಎಂದನು.

ಆಮೇಲೆ ಶಿಬಿಯೆಂಬವನು ಯಯಾತಿಯನ್ನು ನೋಡಿ "ಅಯ್ಯಾ! ನಾನು ಉಶೀನರಪುತ್ರನಾದ ಶಿಬಿ. ನನಗೇನಾದರೂ ಆಕಾಶದಲ್ಲಿಯಾಗಲಿ, ಸ್ವರ್ಗದಲ್ಲಿಯಾಗಲಿ ಪುಣ್ಯಲೋಕಗಳುಂಟೇನು? ಧರ್ಮಜ್ಞನಾದ ನೀನು ಹೇಳಬೇಕು" ಎಂದನು. ಆಗ ಯಯಾತಿಯು "ನಿನಗೂ ಲೋಕಗಳುಂಟು. ನಿನ್ನಲ್ಲಿ ಯಾಚನೆಗಾಗಿ ಬಂದ ಸಾಧುಗಳ ವಿಷಯದಲ್ಲಿ ನೀನು ಬೇಸರಗೊಂಡು ವಾಕ್ಕಿನಿಂದಾಗಲಿ, ಹೃದಯದಿಂದಾಗಲಿ ಅವರನ್ನು ನಿರಾಕರಿಸಿದವನಲ್ಲ. ಆದುದರಿಂದ, ಸ್ವರ್ಗದಲ್ಲಿ ಮಿಂಚಿನಂತೆ ಪ್ರಕಾಶಿಸುತ್ತ, ಸದಾ ಗಾನಧ್ವನಿಯುಳ್ಳ ಅನಂತ ಪುಣ್ಯಲೋಗಳೆಷ್ಟೋ ನಿನಗಾಗಿ ತೆರೆಯಲ್ಪಟ್ಟಿರುವುವು" ಎಂದನು. ಅದಕ್ಕಾ ಶಿಬಿಯು "ರಾಜೋತ್ತಮಾ! ಹಾಗಿದ್ದರೆ ನಾನು ಆ ಲೋಕಗಳನ್ನೆಲ್ಲ ನಿನಗೇ ಕೊಡುವೆನು. ಸ್ವೀಕರಿಸು. ಕ್ರಯವಾಗಿಯೋ, ದಾನವಾಗಿಯೋ ಪ್ರತಿಗ್ರಹಿಸು. ನಾನು ಅವನ್ನೆಲ್ಲ ನಿನಗೇ ಕೊಟ್ಟುಬಿಡುವೆನೇ ಹೊರತು ನಾನು ಆಶೆಪಡುವುದಿಲ್ಲ. ದುಃಖಶೂನ್ಯಗಳಾದ ಆ ಲೋಕಗಳಲ್ಲಿ ನೀನು ಆನಂದದಿಂದಿರಬಹುದು" ಎಂದನು. ಅದಕ್ಕಾ ಯಯಾತಿಯು "ಓ ಶಿಬೀ! ನೀನು ಇಂದ್ರನಿಗೆಣೆಯಾದ ಮಹಿಮೆಯುಳ್ಳವನು. ಆ ಅನಂತಲೋಕಗಳೆಲ್ಲ ನಿನಗಾಗಿಯೇ ತೆರೆದಿವೆ. ನಾನಾದರೂ ಇತರರು ಕೊಟ್ಟ ಲೋಕಗಳನ್ನು ಅನುಭವಿಸಲು ಇಷ್ಟಪಡುವವನಲ್ಲ" ಎಂದನು.

ಆಗ ಅಷ್ಟಕನು ಯಯಾತಿಯನ್ನು ನೋಡಿ "ರಾಜೇಂದ್ರಾ! ನಾವೇನೋ ನಮ್ಮ ಪುಣ್ಯಲೋಕಗಳನ್ನು ನಮ್ಮ ಬಾಯಿಂದ ನಿನಗೆ ಬೇರೆಬೇರೆ

ಯಾಗಿ ಕೊಟ್ಟುಬಿಟ್ಟೆವು. ಬಾಯಿಮಾತಿನಿಂದ ಕೊಟ್ಟರೂ, ತಿರುಗಿ ನಾವೇ ಅದನ್ನು ಅನುಭವಿಸುವುದಾದರೆ ಆಗ ನಮಗೆ ದತ್ತಾಪಹಾರದೋಷವು ಬಂದು ನಾವೆಲ್ಲರೂ ನರಕಕ್ಕೆ ಹೋಗಬೇಕಾದುದಲ್ಲವೆ?" ಎಂದನು. ಅದಕ್ಕೆ ಯಯಾತಿಯು "ಎಲೈ ಸತ್ಯಸಂಧರೇ! ನಾನು ಮಾಡುವು ದಕ್ಕೆ ಯೋಗ್ಯವಾದ ಕಾರ್ಯವೇನೋ ಅದನ್ನು ನನ್ನಿಂದ ಮಾಡಿಸು ವುದಕ್ಕೆ ಯತ್ನಿಸಿದಿರಿ. ಹಿಂದೆ ಮಾಡದ ಕಾರ್ಯವನ್ನು ನಾನು ಎಂದಿ ಗೂ ಮಾಡಲು ಸಮ್ಮತಿಸುವವನಲ್ಲ" ಎಂದನು. ಆಗ ತಿರುಗಿ ಅಷ್ಟ ಕನು "ಮಹಾರಾಜಾ! ಅದೋ! ಶಾಶ್ವತಲೋಕಗಳಿಗೆ ಹೊಂದಿಸತಕ್ಕ ಐದು ಸುವರ್ಣರಥಗಳು ಆಗಲೇ ಅಲ್ಲಿ ಕಾಣಿಸುತ್ತಿವೆ? ಅವು ಯಾರ ವು?" ಎಂದು ಕೇಳಲು, ಯಯಾತಿಯು "ಎಲೈ ಪುಣ್ಯಶಾಲಿಗಳೇ! ಅವು ನಿಮ್ಮನ್ನು ಕರೆದುಕೊಂಡು ಹೋಗುವುದಕ್ಕಾಗಿಯೇ ಬಂದಿರುವುವು. ಆ ಐದು ಸುವರ್ಣರಥಗಳೂ ಮಹೋನ್ನತಗಳಾಗಿ, ಅಗ್ನಿಜ್ವಾಲೆಗಳಂತೆ ಹೇಗೆ ಪ್ರಕಾಶಿಸುವುವೋ ನೋಡಿರಿ!" ಎಂದನು.

ಓ ಜನಮೇಜಯರಾಜಾ! ಆಗ ಅಷ್ಟಕಾದಿಗಳು ಬ್ರಹ್ಮದೇವನಿಂದ ವಿಧಿಸಲ್ಪಟ್ಟ ಅಶ್ವಮೇಧವೆಂಬ ಮಹಾಯಾಗವನ್ನು ನಡೆಸುತಿದ್ದರು. ಹೋತೃ, ಅಧ್ವರ್ಯು, ಉದ್ಗಾತೃ, ಬ್ರಹ್ಮರೆಂಬೀ ನಾಲ್ವರು ಪ್ರಧಾನಋತ್ವಿ ಕ್ಕುಗಳೂ, ಹದಿನಾರು ಮಂದಿ ಇತರಋತ್ವಿಕ್ಕುಗಳೂ ಯಾಗಾಶ್ವದ ಯಾವಯಾವ ಅವಯವಗಳನ್ನು ಛೇದಿಸಿ ಶಾಸ್ತ್ರಸಮ್ಮತವಾಗಿ ಅಗ್ನಿಯಲ್ಲಿ ಹೋಮಮಾಡಿದರೋ, ಆ ಹೋಮದ್ರವ್ಯದ ಹೊಗೆಯ ವಾಸನೆಯನ್ನಾ ಘ್ರಾಣಿಸಿದ ಮಾತ್ರದಿಂದಲೇ ಭೂಮಿಯಲ್ಲಿ ಮಹಾಪಾಪಮಾಡಿದ ಮನು ಷ್ಯರುಕೂಡ ಪಾಪರಹಿತರಾಗಿ ಶುದ್ಧಿಯನ್ನು ಹೊಂದಿದರು. ಈ ಸಮ ಯದಲ್ಲಿಯೇ ಅವರ ತಾಯಿಯಾದ ಮಾಧವಿಯೆಂಬವಳು, ತಪಸ್ವಿನಿಯಾಗಿ, ಮೃಗಚರ್ಮವನ್ನುಟ್ಟು, ಮೃಗದ ಚರ್ಮವನ್ನೇ ಹೊದೆದು, ಆಹಾರದಲ್ಲಿ ಯೂ, ಕಾರ್ಯಗಳಲ್ಲಿಯೂ ಮೃಗಗಳನ್ನೇ ಹೋಲುತ್ತಾ, ಮೃಗಸಮೂಹ ಗಳೊಡಗೂಡಿ, ಆ ಆಶ್ರಮದ ಸಮೀಪಕ್ಕೆ ಬಂದು, ತನ್ನ ಮಕ್ಕಳು ನಡೆ ಸುವ ಯಜ್ಞಸಂಭ್ರಮಗಳನ್ನು ನೋಡಿ ಆನಂದಿಸುತಿದ್ದಳು. ಮೃಗಗಳೊ

ಡನೆ ಆ ಯಜ್ಞವಾಟದ ಸುತ್ತಲೂ ಸುತ್ತುತ್ತ, ಆ ಯಜ್ಞದ ಹೋಮಗಂಧವನ್ನು ಆಘ್ರಾಣಿಸುತಿದ್ದಳು. ಹೀಗೆ ಸಂಚರಿಸುತ್ತಿರುವಾಗಲೇ, ತನ್ನ ತಂದೆಯೂ, ನಹುಷಪುತ್ರನೂ ಆದ ಯಯಾತಿಯು ಸ್ವರ್ಗದಿಂದ ಜಾರಿಬೀಳುತ್ತ ಭೂಮಿಯನ್ನು ಸ್ಪರ್ಶಿಸದೆ ಅಂತರಾಳದಲ್ಲಿ ನಿಂತಿರುವುದನ್ನು ಕಂಡು, ತಂದೆಯಾದ ಅವನಿಗೆ ಭಕ್ತಿಯಿಂದ ನಮಸ್ಕರಿಸಿದಳು. ಇದನ್ನು ನೋಡುತಿದ್ದ ವಸುಮಂತನು ತಪಸ್ವಿನಿಯಾದ ತನ್ನ ತಾಯಿಯನ್ನು ಕುರಿತು "ಅಮ್ಮಾ! ಏನಿದು? ಇವನ ಕಾಲುಗಳನ್ನು ಹಿಡಿದು ನಮಸ್ಕರಿಸುತ್ತಿರುವೆ? ಇವನು ಯಾರು? ದೇವತೆಯಂತೆ ರೂಪವುಳ್ಳ ಈ ಮಹಾತ್ಮನಾವನು? ಅದನ್ನು ನನಗೆ ತಿಳಿಸಬೇಕು" ಎಂದನು. ಅದಕ್ಕಾ ಮಾಧವಿಯು "ಎಲೈ ಮಕ್ಕಳಿರಾ! ನೀವೆಲ್ಲರೂ ಸಾವಧಾನವಾಗಿ ಕೇಳಿರಿ. ಇವನು ನನ್ನ ತಂದೆ. ನಹುಷನ ಮಗನಾದ ಯಯಾತಿಯು. ಇವನು ನಿಮ್ಮೆಲ್ಲರಿಗೂ ಮಾತಾಮಹನೇಹೊರತು ಇವನು ಬೇರೆಯಲ್ಲವೆಂದು ತಿಳಿಯಿರಿ. ಇವನು ನನ್ನ ಸಹೋದರನಾದ ಪೂರುವನ್ನು ರಾಜ್ಯದಲ್ಲಿರಿಸಿ, ಸ್ವರ್ಗಕ್ಕೆ ಹೊರಟುಹೋದನು. ಮಹಾಯಶಸ್ವಿಯಾದ ಈತನು ಇಲ್ಲಿಗೆ ಬಂದ ಕಾರಣವಾವುದೋ ತಿಳಿಯದು. ನಿಮಗೇನಾದರೂ ತಿಳಿದಿದ್ದರೆ ಹೇಳಿರಿ" ಎಂದು ಕೇಳಿದಳು. ಆಗ ವಸುಮಂತನು "ಅಮ್ಮಾ! ಇವನು ಸ್ವರ್ಗದಿಂದ ಭ್ರಷ್ಟನಾಗಿ ಇಲ್ಲಿಗೆ ಬಂದನು" ಎಂದನು. ಆ ಮಾತನ್ನು ಕೇಳಿದೊಡನೆಯೇ ಮಾಧವಿಯು ಬೆಜ್ಜರಬಿದ್ದು, ತನ್ನ ಮುಮ್ಮಕ್ಕಳಿಂದ ಪರಿವೃತನಾಗಿದ್ದ ಆ ಯಯಾತಿಯನ್ನು ಕುರಿತು "ಜನಕಾ! ನನಗೆ ನನ್ನ ತಪಃಫಲದಿಂದ ಲಭಿಸಬಹುದಾದ ಲೋಕಗಳಾವುವುಂಟೋ ಅವನ್ನೆಲ್ಲ ನೀನು ಪ್ರತಿಗ್ರಹಿಸು. ಧರ್ಮಪ್ರಾಪ್ತವಾದ ಪುತ್ರರ ಧನವು ಹೇಗೋ ಹಾಗೆಯೇ, ಪೌತ್ರರ ಧನವೂ ಕೂಡ ತನ್ನ ಸ್ವಂತಧನವೇ ಎಂದು ಧರ್ಮಜ್ಞರಾದ ಮಹರ್ಷಿಗಳು ಹೇಳಿರುವರು. ಆದುದರಿಂದ ನಮ್ಮೆಲ್ಲರ ದಾನ, ತಪಸ್ಸು, ಮುಂತಾದುವುಗಳ ಫಲದಿಂದ ನೀನು ತಿರುಗಿ ಸ್ವರ್ಗವನ್ನು ಹೊಂದುವನಾಗು" ಎಂದಳು.

ಆಗ ಯಯಾತಿಯು "ಅಮ್ಮಾ! ನಿನ್ನ ತಪಃಫಲವು ನನಗೆ ಸದ್ಗತಿಸಾಧನವಾಗುವ ಪಕ್ಷದಲ್ಲಿ, ನಾನು ನಿನ್ನಂತಹ ಮಗಳನ್ನೂ, ನಿನ್ನ ಮಕ್ಕ

ಳಂತಹ ದೌಹಿತ್ರರನ್ನೂ ಪಡೆದುದು ಸಾರ್ಥಕವಾಗಲಿ!' ನಿಮ್ಮಿಂದ ನಾನು ಉದ್ಧೃತನಾಗುವೆನು. ಇದು ಮೊದಲು ಪಿತೃಕರ್ಮಗಳಲ್ಲಿ ಪುತ್ರರಿಗೆ ಹೇಗೋ ಹಾಗೆಯೇ ದೌಹಿತ್ರರ ಸಂತತಿಗೂ ಬಾಧ್ಯತೆಯುಂಟಾಗಿ, ಅವರು ಮಾಡಿದ ಕರ್ಮಗಳೂ ಪವಿತ್ರವೆನಿಸಿಕೊಳ್ಳಲಿ! ದೌಹಿತ್ರನು, ಕುತಪ ಕಾಲ, ಎಳ್ಳು, ಇವು ಮೂರಕ್ಕೂ ಶ್ರಾದ್ಧದಲ್ಲಿ ಸಮಾನವಾದ ಪವಿತ್ರತೆಯುಂಟಾಗಲಿ! ಮತ್ತು ಶ್ರಾದ್ಧಕಾಲಗಳಲ್ಲಿ ಶುಚಿತ್ವ, ಕೋಪವಿಲ್ಲದಿರುವಿಕೆ, ಆತುರವಿಲ್ಲದಿರುವಿಕೆ, ಇವು ಮೂರನ್ನೂ ದೊಡ್ಡವರು ಪ್ರಶಂಸ್ಸಿಸಿರುವರು. ಶ್ರಾದ್ಧದಲ್ಲಿ ಭೋಜನಮಾಡತಕ್ಕವರು, ಬಡಿಸತಕ್ಕವರು, ಮಂತ್ರಪಾಠಕರು ಈ ಮೂವರೂ ಪವಿತ್ರರು. ಹಗಲಿನ ಎಂಟನೆಯ ಭಾಗದಲ್ಲಿ, ಬಿಸಿಲು ತಂಪುತ್ತ ಬರುವ ಕಾಲವೇ ಕುತಪಕಾಲವೆನಿಸುವುದು. ಆ ಕಾಲದಲ್ಲಿ, ಪಿತೃಗಳಿಗಾಗಿ ಅರ್ಪಿಸಲ್ಪಟ್ಟುದು ಅಕ್ಷಯವೆನಿಸುವುದು. ಶ್ರಾದ್ಧಕಾಲದಲ್ಲಿ ಎಳ್ಳು ಪಿಶಾಚಗಳಿಂದಲೂ, ದರ್ಭೆಯು ರಾಕ್ಷಸರಿಂದಲೂ ರಕ್ಷಿಸುವುದು. ಶ್ರೋತ್ರಿಯರಾದ ಬ್ರಾಹ್ಮಣರಿಂದ ಭೋಜನಪಂಕ್ತಿಯು ರಕ್ಷಿಸಲ್ಪಡುವುದು. ಶ್ರಾದ್ಧದಲ್ಲಿ ಯತಿಗಳಿಂದ ಭುಕ್ತವಾದುದು ಅಕ್ಷಯವೆನಿಸುವುದು. ಜ್ಞಾನಿಯೂ, ವೇದಾಧ್ಯಯನಪರನೂ, ಶುದ್ಧನೂ, ನಿಯಮನಿಷ್ಠನೂ ಆದ ಸತ್ಪಾತ್ರವು ಯಾವಾಗ ದೊರೆತರೆ, ಅದೇ ಶ್ರಾದ್ಧಕ್ಕೆ ಸಕಾಲವು. ಅಂತವರಿಗೆ ಕೊಟ್ಟುದೇ ನ್ಯಾಯವಾದ ದತ್ತವೆನಿಸುವುದು. ಇದನ್ನು ಬಿಟ್ಟು ಬೇರೆಯಾದುದು ಪ್ರಶಸ್ತಕಾಲವೆಂದು ಅಂಗೀಕರಿಸಲ್ಪಟ್ಟಿಲ್ಲ" ಎಂದು ಹೇಳಿ ಯಯಾತಿಯು, ತಿರುಗಿ ಅಷ್ಟಕಾದಿಗಳನ್ನು ಕುರಿತು "ಎಲೈ! ನೀವೆಲ್ಲರೂ ಯಜ್ಞಸಮಾಪ್ತಿಸ್ನಾನವನ್ನು ಮುಗಿಸಿದವರು. ಈಗಿನ ಕಾರ್ಯವು ಬಹಳ ಮುಖ್ಯವಾದುದರಿಂದ ಬೇಗನೆ ಹೊರಡಿರಿ" ಎಂದನು. ಆಗ ಅಷ್ಟಕನು "ರಾಜೇಂದ್ರಾ! ಈಗ ನಿನಗಾಗಿ ಸಿದ್ಧಪಡಿಸಿರುವ ಸ್ವಂತರಥವನ್ನೇರಿ ನೀನು ಸ್ವರ್ಗಕ್ಕೆ ಹೊರಡು. ಕಾಲವು ಬಂದಾಗ, ನಾವೂ ನಿನ್ನನ್ನು ಹಿಂಬಾಲಿಸಿ ಬರುವೆವು" ಎಂದನು. ಅದಕ್ಕಾ ಯಯಾತಿಯು "ಹಾಗಲ್ಲ! ಈಗಲೇ ನಾವೆಲ್ಲರೂ ಒಂದಾಗಿ ಹೊರಡುವೆವು. ಈಗ ನಾವೆಲ್ಲರೂ ಸ್ವರ್ಗವನ್ನು ಜಯಿಸಿದವರೇ! ಅದೋ! ಈ

ಏಕೆಂದರೆ, ನೀನು ನಡೆಸಿದಂತಹ ಕಾರ್ಯವನ್ನು ನಡೆಸುವವನು ಈ ಲೋಕದಲ್ಲಿ ಕ್ಷತ್ರಿಯರಲ್ಲಿಯಾಗಲಿ, ಬ್ರಾಹ್ಮಣರಲ್ಲಿಯಾಗಲಿ ಬೇರೊಬ್ಬನಿಲ್ಲ" ಎಂಧು ಬಾರಿಬಾರಿಗೂ ನಿರ್ಬಂಧಿಸಿ ಕೇಳಿದಮೇಲೆ ಯಯಾತಿಯು "ಅಪ್ಪಾ! ನಾನು ಯಯಾತಿ! ನಹುಷನ ಮಗನು. ಪೂರುವಿನ ತಂದೆ. ನಾನು ಈ ಭೂಮಿಯಲ್ಲಿ ದೊಡ್ಡ ಚಕ್ರವರ್ತಿಯಾಗಿ ಪ್ರಜೆಗಳನ್ನು ಪಾಲಿಸುತಿದ್ದೆನು. ನೀವು ನಮ್ಮವರಾದುದರಿಂದ, ಇನ್ನೂ ರಹಸ್ಯಗಳನ್ನೆಲ್ಲ ತಿಳಿಸುವೆನು ಕೇಳಿರಿ. ನಿಮಗೆ ನಾನು ಮಾತಾಮಹನು. ನಾನು ಈ ಸಮಸ್ತ ಭೂಮಿಯನ್ನೂ ಜಯಿಸಿ ವಶಮಾಡಿಕೊಂಡೆನು. ಆ ಎಲ್ಲಾ ಭೂಮಿಯನ್ನೂ, ಉತ್ತಮಲಕ್ಷಣಗಳುಳ್ಳ ಮತ್ತು ಅಂದವಾದ ನೂರೊಂದು ಕುದುರೆಗಳನ್ನೂ ಬ್ರಾಹ್ಮಣರಿಗೆ ದಾನಮಾಡಿದೆನು. ಹೀಗೆ ದಾನಮಾಡಿ ವಾನಪ್ರಸ್ಥಾಶ್ರಮಗಳನ್ನು ಕೈಕೊಳ್ಳತಕ್ಕವರು ಆ ತಮ್ಮ ಪುಣ್ಯಫಲದಿಂದ ದೇವತೆಗಳ ಸಾರೂಪ್ಯವನ್ನು ಹೊಂದುವರು. ನಾನು ಕುದುರೆಗಳನ್ನೂ, ಪಶುಗಳನ್ನೂ, ಧನಕನಕಾದಿ ಸಮಸ್ತವಸ್ತುಪೂರ್ಣವಾದ ಈ ಭೂಮಿಯೆಲ್ಲವನ್ನೂ ಬ್ರಾಹ್ಮಣರಿಗೆ ದಾನಮಾಡಿದೆನು. ಸಹಸ್ರಕೋಟಿ ಪಶುಗಳನ್ನು ದಾನಮಾಡಿರುವೆನು. ನನ್ನ ಸತ್ಯದಿಂದ ಭೂಮ್ಯಾಕಾಶಗಳೆಲ್ಲವೂ ವ್ಯಾಪ್ತವಾಗಿದ್ದುವು. ಸಾಮಾನ್ಯ ಮನುಷ್ಯರಲ್ಲಿಯೂ ಅಗ್ನಿಯು (ತೇಜಸ್ಸು) ಜ್ವಲಿಸುತಿತ್ತು. ನನ್ನ ಬಾಯಿಂದ ಹೊರಟ ಮಾತು ಯಾವುದೂ ತಪ್ಪಿದುದಿಲ್ಲ. ಕುಮಾರಾ! ಅಂತಹ ಸತ್ಯವನ್ನೇ ಸತ್ಪುರುಷರು ಗೌರವಿಸುವರು. ಅಷ್ಟಕಾ! ನಿನಗೂ ಈ ಪ್ರತರ್ದನನಿಗೂ ನಾನು ಸತ್ಯವಾಗಿ ಹೇಳುವೆನು. ಎಲ್ಲಾ ಜನರೂ, ಎಲ್ಲಾ ಋಷಿಗಳೂ, ಎಲ್ಲಾ ದೇವತೆಗಳೂ ಸತ್ಯದಿಂದಲೇ ಪೂಜಿಸಲ್ಪಡಬೇಕೆಂಬುದು ನನ್ನ ಮನಃಪೂರ್ವಕವಾದ ಭಾವವು. ಯಾವನು ಸ್ವರ್ಗವನ್ನು ಜಯಿಸಿದ ನಮ್ಮೆಲ್ಲರ ವಿಚಾರವನ್ನೂ ಅಸೂಯೆಯಿಲ್ಲದೆ ಬ್ರಾಹ್ಮಣರಮುಂದೆ ಪಠಿಸುವನೋ ಅವನೂ ನಮ್ಮ ಸಾಲೋಕ್ಯವನ್ನು ಹೊಂದುವನು" ಎಂದನು.

ಓ ಜನಮೇಜಯರಾಜಾ! ಹೀಗೆ ಮಹಾತ್ಮನಾದ ಆ ಯಯಾತಿಯು ತನ್ನ ಎಲ್ಲಾ ದೌಹಿತ್ರರಿಂದ ಉದ್ಧರಿಸಲ್ಪಟ್ಟವನಾಗಿ, ತನ್ನ ಔದಾರ್ಯ

ದಿಂದಲೂ, ಪುಣ್ಯಕರ್ಮಗಳಿಂದಲೂ ಭೂಮಿಯಲ್ಲಿ ತನ್ನ ಯಶಸ್ಸನ್ನು ತುಂಬಿ, ಈ ಭೂಮಿಯನ್ನು ಬಿಟ್ಟಮೇಲೆ ಸದ್ಗತಿಯನ್ನು ಹೊಂದಿದನು" ಎಂದನು.

ಇದು ಎಂಭತ್ತೇಳನೆಯ ಅಧ್ಯಾಯವು.

ಪೂರುವಂಶ ವಿಸ್ತಾರವು.

ಜನಮೇಜಯರಾಜನು ವೈಶಂಪಾಯನನ್ನು ಕುರಿತು "ಓ ಮುನೀಂದ್ರಾ! ಧರ್ಮಜ್ಞರಲ್ಲಿ ಮೇಲೆನಿಸಿದ ಯಯಾತಿಯ ಪುತ್ರನಾದ ಪೂರುವಿನಿಂದಾಚೆಗೆ ವಂಶವರ್ಧಕರಾದ ಯಾವಯಾವ ರಾಜರುಂಟೋ, ಅವರನ್ನೆಲ್ಲ ಪರಂಪರಾಕ್ರಮವಾಗಿ ನನಗೆ ತಿಳಿಸಬೇಕು. ದುಷ್ಯಂತನ ಜ್ಯೇಷ್ಠಪುತ್ರನಾದಜನಮೇಜಯನಿದ್ದಾಗ, ಭರತನು ರಾಜ್ಯಕ್ಕೆ ಬಂದುದು ಹೇಗೆ? ಆ ಭರತನು ಹುಟ್ಟಿದ ಕಥೆಯೇನು? ಅವನ್ನೆಲ್ಲಾ ನನಗೆ ವಿವರಿಸಿ ತಿಳಿಸಬೇಕು" ಎಂದನು. ಅದಕ್ಕಾ ವೈಶಂಪಾಯನನು "ರಾಜೇಂದ್ರಾ! ರಾಜಶ್ರೇಷ್ಠನಾದ ಪೂರುವು ತನ್ನ ತಂದೆಯಾದ ಯಯಾತಿಯು ಹಾಗೆಯೇ ಯಾವಾಗಲೂ ಧರ್ಮನಿರತನಾಗಿ, ಇಂದ್ರನಿಗೆಣೆಯಾದ ಪರಾಕ್ರಮವುಳ್ಳವನಾಗಿ ರಾಜ್ಯವನ್ನು ನಡೆಸುತ್ತಿದ್ದನು. ಆ ಪೂರುವಿಗೆ ಪೌಷ್ಟಿಯೆಂಬ ಪತ್ನಿಯಲ್ಲಿ ಪ್ರವೀರನೆಂದೂ, ಈಶ್ವರನೆಂದೂ, ರೌದ್ರಾಶ್ವನೆಂದೂ ಮೂರು ಮಂದಿ ಪುತ್ರರಾದರು. ಆ ಮೂವರೂ ಮಹಾರಥರೇ! ಅವರಲ್ಲಿ ಜ್ಯೇಷ್ಠನಾದ ಪ್ರವೀರನೆಂಬವನು ಸಂತಾನವನ್ನು ಪಡೆದು ವಂಶವರ್ಧಕನಾದನು. ಆ ಪ್ರವೀರನಿಗೆ ಶೂರಸೇನಿಯೆಂಬವಳಲ್ಲಿ, ಮನಸ್ಯು ಎಂಬ ಪುತ್ರನಾದನು. ಮನಸ್ಯುವು ಚತುಸ್ಸಮುದ್ರಾಂತವಾದ ಸಮಸ್ತಭೂಮಿಗೂ ರಕ್ಷಕನಾಗಿದ್ದನು. ಇವನು ಬಹು ಸುಂದರನು. ಕಮಲದಳದಂತೆ ಕಣ್ಣುಳ್ಳವನು. ಈ ಮನಸ್ಯುವಿಗೆ ಸೌವೀರಿಯೆಂಬವಳಲ್ಲಿ ಶಕ್ತನೆಂದೂ, ಸಿಂಹನನನೆಂದೂ, ವಾಗ್ಮಿಯೆಂದೂ ಮೂವರು ಪುತ್ರರಾದರು. ಈ ಮೂವರೂ ಮಹಾರಥರು. ಎಲ್ಲರೂ ಶೂರರು. ಆ ಪೂರುವಿನ ಮೂರನೆಯ ಮಗನಾದ ರೌದ್ರಾಶ್ವನಿಗೆ ಮಿಶ್ರಕೇಶಿಯೆಂಬ ಅಪ್ಸರಸ್ತ್ರೀಯಲ್ಲಿ ಅನ್ವಗ್ಭಾನು ಮೊದಲಾದ ಹತ್ತು

ಮಂದಿ ಪುತ್ರರಾದರು. ಇವರೆಲ್ಲರೂ ಉದಾರಮನಸ್ಸುಳ್ಳವರು. ಮಹಾಧನುರ್ಧಾರಿಗಳು. ಇವರೆಲ್ಲರೂ ಯಾಗಶೀಲರಾಗಿಯೂ, ಉತ್ತಮ ಸಂತಾನವುಳ್ಳವರಾಗಿಯೂ, ಅನೇಕ ಶಾಸ್ತ್ರಗಳನ್ನು ತಿಳಿದವರಾಗಿಯೂ ಇದ್ದರು. ಈ ಹತ್ತುಮಂದಿಗೂ ಕ್ರಮವಾಗಿ ಋಚೇಯು, ಕಕ್ಷೇಯು, ಕೃಕಣೇಯು, ಸ್ಥಂಡಿಲೇಯು, ವನೇಯು, ಜಲೇಯು, ತೇಜೇಯು, ಸತ್ಯೇಯು, ಧರ್ಮೇಯು, ಸನ್ನತೇಯು ಎಂದು ಹೆಸರು. ಅವರಲ್ಲಿ ಅನಾಧೃಷ್ಟಿಯೆಂಬ ನಾಮಾಂತರವುಳ್ಳ ಋಚೇಯುವೆಂಬವನು ದೇವತೆಗಳಲ್ಲಿ ಇಂದ್ರನಂತೆ ಭೂಮಿಗೆಲ್ಲಾ ಒಬ್ಬನೇ ಚಕ್ರವರ್ತಿಯಾಗಿಯೂ, ವಿದ್ಯಾವಂತನಾಗಿಯೂ, ಪರಾಕ್ರಮಿಯಾಗಿಯೂ ಇದ್ದನು. ಈ ಅನಾಧೃಷ್ಟಿಯ ಮಗನು ಮತಿನಾರನೆಂಬವನು. ಇವನು ಅನೇಕರಾಜಸೂಯಗಳನ್ನೂ, ಅಶ್ವಮೇಧಗಳನ್ನೂ ಮಾಡಿ, ಪರಮಧಾರ್ಮಿಕನೆಂದು ಹೆಸರುಗೊಂಡನು. ಆ ಮತಿನಾರನಿಗೆ ತಂಸು, ಮಹಾನ್, ಅತಿರಥ, ದ್ರುಹ್ಯು ಎಂಬ ನಾಲ್ಕುಮಂದಿ ಮಕ್ಕಳಾದರು. ಇವರೆಲ್ಲರೂ ಎಣೆಯಿಲ್ಲದ ಮಹಾಪರಾಕ್ರಮವುಳ್ಳವರು. ಈ ನಾಲ್ವರಲ್ಲಿ ತಂಸುವೆಂಬವನು ಪೂರುವಂಶದ ಉದ್ಧಾರಕನೆನಿಸಿದನು. ಇವನು ಅಮರಕೀರ್ತಿಯನ್ನು ಹೊಂದಿ, ಭೂಮಿಯನ್ನೆಲ್ಲ ಜಯಿಸಿ, ವಶಮಾಡಿಕೊಂಡನು. ಈ ತಂಸುವಿಗೆ ಈಲೀನನು (ಇಲಿಲನು) ಪುತ್ರನಾದನು. ಅವನೂ ಅನೇಕದೇಶಗಳನ್ನು ಜಯಿಸಿ, ಜಯಶಾಲಿಗಳಲ್ಲಿ ಮೇಲೆನಿಸಿಕೊಂಡನು. ಈ ಈಲೀನನಿಗೆ ರಥಂತರ್ಯೆಯೆಂಬವಳಲ್ಲಿ ಪಂಚಭೂತಗಳಂತಿರುವ ದುಷ್ಯಂತನೇ ಮೊದಲಾದ ಐದುಮಂದಿ ಪುತ್ರರಾದರು. ಆ ಐದುಮಂದಿಗೂ ಕ್ರಮವಾಗಿ ದುಷ್ಯಂತ, ಶೂರ, ಭೀಮ, ಪ್ರವಸು, ವಸುವೆಂದು ಹೆಸರು. ಈ ಐದುಮಂದಿಯಲ್ಲಿ ದುಷ್ಯಂತನೇ ರಾಜ್ಯಾಧಿಪತಿಯೆನಿಸಿಕೊಂಡು, ಯುದ್ಧದಲ್ಲಿ ಎಂಥವರಿಗೂ ದುರ್ಜಯನಾದನು. ಆ ದುಷ್ಯಂತನಿಗೆ ಲಕ್ಷಣೆಯೆಂಬ ಪತ್ನಿಯಲ್ಲಿ ಜನಮೇಜಯನೆಂಬ ಪುತ್ರನೊಬ್ಬನು ಜನಿಸಿದನು. ಆಮೇಲೆ ಆ ದುಷ್ಯಂತನ ಎರಡನೆಯ ಪತ್ನಿಯಾದ ಶಕುಂತಲೆಯಲ್ಲಿ ಭರತನೆಂಬ ಬೇರೊಬ್ಬ ಪುತ್ರನಾದನು. ಈ ಭರತನಿಂದಲೇ ಭರತವಂಶಕ್ಕೆ ಆ ಹೆಸರು ಲೋಕದಲ್ಲಿ ಪ್ರಖ್ಯಾತವಾಯಿತು.

ಇದು ಎಂಭತ್ತೆಂಟನೆಯ ಅಧ್ಯಾಯವು.

## ಶಕುಂತಲೋಪಾಖ್ಯಾನವು.

ಆಗ ಜನಮೇಜಯನು ವೈಶಂಪಾಯನನ್ನು ಕುರಿತು "ಮುನೀಂದ್ರಾ! ಆ ದುಷ್ಯಂತಪುತ್ರನಾದ ಭರತನ ಉತ್ಪತ್ತಿವೃತ್ತಾಂತವನ್ನೂ, ಅವನ ಕಾರ್ಯಗಳನ್ನೂ ಸವಿಸ್ತರವಾಗಿ ಕೇಳಬೇಕೆಂದು ನನಗೆ ಆಸೆಯಿರುವುದರಿಂದ ಅದನ್ನು ತಿಳಿಸಬೇಕು" ಎಂದನು. ಅದಕ್ಕಾ ವೈಶಂಪಾಯನನು "ರಾಜಾ! ಕೇಳು! ಪೌರವವಂಶದಲ್ಲಿ ಪ್ರಸಿದ್ಧನಾದ ದುಷ್ಯಂತನು ಮಹಾವೀರ್ಯಶಾಲಿಯಾಗಿ ಚತುಸ್ಸಮುಂದ್ರಾಂತವಾದ ಸಮಸ್ತಭೂಮಿಯನ್ನೂ ಪಾಲಿಸುತಿದ್ದನು. ಅವನು ಯಾವ ಯುದ್ಧದಲ್ಲಿಯೂ ಜಯಿಸದೆ ಹಿಂತಿರುಗಿದವನಲ್ಲ. ಎಲ್ಲಾ ಶತ್ರುಗಳನ್ನೂ ಜಯಿಸಿ, ಸಮುದ್ರಾವೃತವಾದ ಎಲ್ಲಾ ಭೂಭಾಗವನ್ನೂ, ಎಲ್ಲಿಕಟ್ಟಿನಲ್ಲಿರುವ ಮ್ಲೇಚ್ಛದೇಶಗಳೊಡನೆಯೂ, ರತ್ನರಾಶಿಗಳುಳ್ಳ ಸಮುದ್ರದೊಡನೆಯೂ ಸೇರಿಸಿ ತಾನೊಬ್ಬನೇ ರಕ್ಷಿಸುತಿದ್ದನು. ಚತುರ್ವರ್ಣದ ಪ್ರಜೆಗಳಿಂದ ತುಂಬಿದುದಾಗಿದ್ದ ಭೂಮಿಯ ನಾಲ್ಕು ದಿಗ್ವಿಭಾಗಗಳನ್ನೂ ತನ್ನ ವಶದಲ್ಲಿರಿಸಿದ್ದನು. ಅವನ ಆಳ್ವಿಕೆಯಲ್ಲಿ ವರ್ಣಸಂಕರವೆಂಬ ಪ್ರಸಕ್ತಿಯೇ ಇಲ್ಲ. ಜನಗಳಿಗೆ ಭೂಮಿಯನ್ನು ಹೆಚ್ಚು ಕಷ್ಟಪಟ್ಟು ಕೃಷಿಮಾಡಬೇಕಾದ ಅವಶ್ಯಕತೆಯಿಲ್ಲದೆ ಸಮೃದ್ಧವಾಗಿ ಬೆಳೆಯಾಗುತಿದ್ದಿತು. ಆಗ ಪಾಪಕಾರ್ಯಕ್ಕೆ ಕೈಯಿಕ್ಕುವವನೊಬ್ಬನಾದರೂ ಇಲ್ಲ. ಅವನ ಆಳ್ವಿಕೆಯಲ್ಲಿ ಎಲ್ಲಾ ಜನರೂ ಧರ್ಮದಲ್ಲಿಯೇ ನಿರತರಾಗಿ, ಧರ್ಮಗಳನ್ನು ಸಾಧಿಸುತಿದ್ದರು. ಆಗ ಜನರಿಗೆ ಚೋರಭಯವಿಲ್ಲ. ದುರ್ಭಿಕ್ಷದ ಭಯವಿಲ್ಲ. ರೋಗಭಯವಿಲ್ಲ. ಪ್ರತಿ ವರ್ಣದವರೂ ತಮ್ಮ ಸ್ವಧರ್ಮಗಳಲ್ಲಿಯೇ ನೆಲೆಗೊಂಡು ಅದರಿಂದ ತೃಪ್ತರಾಗಿದ್ದರು. ಪ್ರಜೆಗಳೆಲ್ಲರೂ ಆ ರಾಜನನ್ನೇ ಪರದೈವದಂತೆ ನಂಬಿ, ತಮ್ಮ ಕ್ಷೇಮಾರ್ಥವಾದ ದೇವತಾಕರ್ಮಗಳಲ್ಲಿ ನಿರಾಶರಾಗಿ ನಿರ್ಭಯರಾಗಿದ್ದರು. ಮೇಘವು ಸಕಾಲಕ್ಕೆ ಮಳೆಯನ್ನು ಸುರಿಸುತಿದ್ದಿತು. ಬೆಳೆಗಳೆಲ್ಲವೂ ರಸವತ್ತಾಗಿದ್ದುವು. ಭೂಮಿಯು ಸರ್ವರತ್ನಗಳಿಂದಲೂ, ಗೋವುಗಳಿಂದಲೂ ಸಮೃದ್ಧವಾಗಿದ್ದಿತು. ಬ್ರಾಹ್ಮಣರು ತಮ್ಮತಮ್ಮ ಕರ್ಮಗಳಲ್ಲಿಯೇ ನಿರತರಾಗಿದ್ದರು. ಅವರಲ್ಲಿ ಸುಳ್ಳೆಂಬ ಪ್ರಸಕ್ತಿಯೇ ಇರಲಿಲ್ಲ. ಆ ರಾಜ

ನು, ಅದ್ಭುತವೀರ್ಯವುಳ್ಳವನೂ, ಅದ್ಭುತ ಕರ್ಮಗಳುಳ್ಳವನೂ ಆಗಿ, ವಜ್ರದಂತೆ ದೃಢಶರೀರಿಯಾಗಿದ್ದನು. ಅರಣ್ಯಸಹಿತವಾದ ಮಂದರಪರ್ವತವನ್ನೇ ಅವನು ತೋಳುಗಳಿಂದ ಎತ್ತಿ ಹಿಡಿಯಬಲ್ಲವನಂತಿದ್ದನು. ನಾಲ್ಕು ಬಗೆಯ ಗದಾಯುದ್ಧಗಳಲ್ಲಿಯೂ, ಎಲ್ಲಾ ತರದ ಶಸ್ತ್ರಯುದ್ಧಗಳಲ್ಲಿಯೂ, ಆನೆಕುದುರೆಗಳನ್ನೇರುವುದರಲ್ಲಿಯೂ ನಿಪುಣನೆನಿಸಿದ್ದನು. ಬಲದಲ್ಲಿ ಮಹಾವಿಷ್ಣುವಿಗೂ, ತೇಜಸ್ಸಿನಲ್ಲಿ ಸೂರ್ಯನಿಗೂ, ಗಾಂಭೀರ್ಯದಲ್ಲಿ ಸಮುದ್ರಕ್ಕೂ, ತಾಳ್ಮೆಯಲ್ಲಿ ಭೂಮಿಗೂ ಸಮಾನನಾಗಿದ್ದನು. ಮತ್ತು ಅವನು ಎಲ್ಲರಿಗೂ ಪ್ರಿಯನಾಗಿ, ಪುರಗ್ರಾಮಗಳನ್ನೆಲ್ಲ ಉಲ್ಲಾಸಗೊಳಿಸುತಿದ್ದನು. ಮೇಲೆಮೇಲೆ ಧರ್ಮವನ್ನೇ ಅಭಿವೃದ್ಧಿಗೊಳಿಸುತ್ತಿರುವ ತನ್ನ ಕಾರ್ಯಗಳಿಂದ ಅವನು ಲೋಕವನ್ನೆಲ್ಲ ಸಂತೋಷಗೊಳಿಸುತಿದ್ದನು" ಎಂದನು.

ಇದು ಎಂಭತ್ತೊಂಭತ್ತನೆಯ ಅಧ್ಯಾಯವು.



## ದುಷ್ಯಂತನು ಬೇಟೆಗಾಗಿ ಕಾಡಿಗೆ ಹೋದುದು.

ಆಗ ಜನಮೇಜಯನು "ಓ ವೈಶಂಪಾಯನ ಮುನೀಂದ್ರಾ! ದುಷ್ಯಂತನಿಗೆ ಶಕುಂತಳೆಯೊಡನೆ ವಿವಾಹವಾದುದು ಹೇಗೆ?" ಎಂದನು. ಆಗ ವೈಶಂಪಾಯನನು "ರಾಜಾ! ಕೇಳು. ಮಹಾಬಾಹುವಾದ ದುಷ್ಯಂತನು ಬೇಟೆಗಾಗಿ ದೊಡ್ಡ ಸೈನ್ಯವನ್ನೂ, ವಾಹನಗಳನ್ನೂ ತನ್ನೊಡನೆ ಕರೆದುಕೊಂಡು, ಒಂದು ದೊಡ್ಡ ಅರಣ್ಯಕ್ಕೆ ಹೋದನು. ನೂರಾರು ಆನೆಗಳೂ, ಕುದುರೆಗಳೂ ಅವನನ್ನು ಹಿಂಬಾಲಿಸಿದುವು. ಖಡ್ಗಗಳು, ಕತ್ತಿಗಳು, ಗದೆ, ಮುಸಲ, ಪ್ರಾಸ, ತೋಮರ ಮುಂತಾದ ವಿವಿಧಾಯುಧಗಳನ್ನು ಹಿಡಿದ ನೂರಾರುಮಂದಿ ಭಟರು ಅವನನ್ನು ಹಿಂಬಾಲಿಸಿದರು. ಭಟರ ಸಿಂಹನಾದಗಳೂ, ಶಂಖ ದುಂದುಭಿ ಧ್ವನಿಗಳೂ, ರಥನೇಮಿ ಶಬ್ದಗಳೂ, ಆನೆಗಳ ಗರ್ಜನೆಗಳೂ, ದಿಕ್ಕುಗಳನ್ನೆಲ್ಲ ಆವರಿಸಿದುವು. ಬಗೆಬಗೆಯ ಆಯುಧಗಳನ್ನು ಧರಿಸಿ, ಬಗೆಬಗೆಯ ವೇಷಗಳಿಂದ ಕೂಡಿದ

ಸೈನಿಕರನೇಕರು ಆ ದುಷ್ಯಂತನನ್ನು ಸುತ್ತಿಮುತ್ತಿ ಹೊರಟರು. ಒಂದು ಕಡೆಯಲ್ಲಿ ಕುದುರೆಗಳ ಕೂಗು! ಇನ್ನೊಂದು ಕಡೆಯಲ್ಲಿ ಭಟರ ಸಿಂಹ ನಾದಗಳು! ಇನ್ನೊಂದು ಕಡೆಯಲ್ಲಿ ವೀರಭಟರು ಭುಜಗಳನ್ನು ತಟ್ಟುವ ಧ್ವನಿ! ಇವೆಲ್ಲಾ ಒಂದಾಗಿ ಸೇರಿ ದೊಡ್ಡ ಕೋಲಾಹಲ ಘೋಷವುಂಟಾ ಯಿತು. ಹೀಗೆ ರಾಜನು ದೊಡ್ಡ ಚತುರಂಗಸೈನ್ಯದೊಡನೆ ಅಟ್ಟಹಾಸ ದಿಂದ ಪ್ರಯಾಣಹೊರಟಾಗ, ಈ ಉತ್ಸವಸಂಭ್ರಮವನ್ನು ನೋಡುವುದ ಕ್ಕಾಗಿ ದಾರಿಯುದ್ದಕ್ಕೂ ಅನೇಕಪುರಸ್ತ್ರೀಯರು, ತಮ್ಮ ಮನೆಗಳ ಉಪ್ಪ ರಿಗೆಯನ್ನೇರಿ ನಿಂತು ನೋಡುತಿದ್ದರು. ಮಹಾಶೂರನೂ, ಪ್ರಜೆಗಳಿಗೆಲ್ಲ ಕೀರ್ತಿಯನ್ನು ತರತಕ್ಕವನೂ, ಶತ್ರುನಿವಾರಕನೂ ಆದ ಆ ರಾಜನ ದಿವ್ಯ ತೇಜಸ್ಸನ್ನು ನೋಡಿ, ಆ ಸ್ತ್ರೀಯರು ವಜ್ರಪಾಣಿಯಾದ ದೇವೇಂದ್ರನೇ ಅವನೆಂದು ಭಾವಿಸಿ, ಆಶ್ಚರ್ಯಪಡುತ್ತ, ತಮ್ಮಲ್ಲಿ ಒಬ್ಬರಿಗೊಬ್ಬರು ಆ ದು ಷ್ಯಂತರಾಜನ ವೈಭವವನ್ನು ವರ್ಣಿಸತೊಡಗಿ, “ಆಹಾ! ನಮ್ಮ ಪ್ರಭು ವಾದ ಪುರುಷವ್ಯಾಘ್ರನು ಯುದ್ಧದಲ್ಲಿ ವಸುಗಳಂತೆ ಪರಾಕ್ರಮಶಾಲಿಯವನು. ಇವನ ತೋಳ್ಬಲಗಳನ್ನು ನಂಬಿದವರಿಗೆ ಲೋಕದಲ್ಲಿ ಶತ್ರುಗಳೇ ಇರುವು ದಿಲ್ಲ” ಎಂದು ಹೇಳುತ್ತ, ಆ ರಾಜನಲ್ಲಿ ತಮಗಿರುವ ಅಸಾಧಾರಣ ಭಕ್ತಿ ಯಿಂದ ಜಯಜಯ ಧ್ವನಿಗಳೊಡನೆ ಸ್ತುತಿಸುತಿದ್ದರು ಅನೇಕರು ಅವ ನ ತಲೆಯಮೇಲೆ ಪುಷ್ಪವರ್ಷಗಳನ್ನು ಚಲ್ಲಿದರು. ದಾರಿಯಲ್ಲಿ ನಡು ನಡುವೆ ಅನೇಕಬ್ರಾಹ್ಮಣರು ಜಯಘೋಷಗಳಿಂದ ಆಶೀರ್ವದಿಸಿದರು ಐರಾವತವನ್ನೇರಿ ಹೊರಟ ದೇವೇಂದ್ರನಂತೆ ಆ ರಾಜನು ಒಂದು ಮದ ದಾನೆಯನ್ನೇರಿ ಮಹೋತ್ಸವದಿಂದ ಬೇಟೆಗೆ ಹೊರಟನು. ಆಗ ಆ ಪುರ ವಾಸಿಗಳಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣ ದವರೂ ಆ ರಾಜನನ್ನು ಆಶೀರ್ವದಿಸುತ್ತಲೂ, ಜಯಶಬ್ದಗಳಿಂದ ಹೊಗಳು ತ್ತಲೂ ಬಹುದೂರದವರೆಗೆ ಅವನನ್ನು ಹಿಂಬಾಲಿಸಿ ಹೋದರು. ಆಮೇಲೆ ಆ ಪುರವಾಸಿಗಳೂ, ದೇಶವಾಸಿಗಳೂ ಆ ರಾಜನ ಅನುಮತಿಯನ್ನು ಪಡೆ ದು ಅಲ್ಲಿಂದ ಹಿಂತಿರುಗಿಬಿಟ್ಟರು. ಆಮೇಲೆ ಆ ದುಷ್ಯಂತಮಹಾರಾಜನು ಗರುಡವೇಗವುಳ್ಳ ತನ್ನ ರಥವನ್ನು ಮುಂದೆ ಬಿಟ್ಟುಕೊಂಡು, ರಥಘೋಷ ಗಳಿಂದಲೂ, ಸೈನ್ಯಘೋಷಗಳಿಂದಲೂ, ಭೂಮ್ಯಾಕಾಶಗಳೆರಡನ್ನೂ ತುಂ

ಬುತ್ತ ಮುಂದೆ ನಂದನವನದಂತಿದ್ದ ಮಹಾರಣ್ಯವೊಂದನ್ನು ಪ್ರವೇಶಿಸಿದನು. ಅಲ್ಲಿ ಬಿಲ್ವ, ಎಕ್ಕ, ಖದಿರ, ಬೇಲ, ಮುಂತಾದ ಅನೇಕವೃಕ್ಷಗಳು ದಟ್ಟವಾಗಿ ತುಂಬಿ ಬೆಳೆದಿರುವವು. ಸಮೀಪದಲ್ಲಿರುವ ಬೆಟ್ಟಗಳಿಂದ ಉರುಳಿಬಿದ್ದ ಕಲ್ಲುಬಂಡೆಗಳಿಂದ ಮಾರ್ಗವೆಲ್ಲವೂ ಸಂಚಾರಯೋಗ್ಯವಲ್ಲದೆ ಬಹಳ ಕಡಿದಾಗಿರುವುದು. ಅನೇಕಯೋಜನಗಳ ವಿಸ್ತಾರವುಳ್ಳದಾಗಿ, ಜಲಶೂನ್ಯವಾಗಿ, ನಿರ್ಜನವಾಗಿದ್ದ ಆ ಕಾಡಿನಲ್ಲಿ, ಎಲ್ಲಿ ನೋಡಿದರೂ ಭಯಂಕರಗಳಾದ ಹುಲಿ, ಸಿಂಹ ಮುಂತಾದ ಹಲವು ಬಗೆಯ ಕಾಡುಮೃಗಗಳು ಕಾಣಿಸುತ್ತಿರುವುವು. ಇಂತಹ ಅರಣ್ಯವನ್ನು ನೋಡಿ ದುಷ್ಯಂತನು ಅಲ್ಲಿದ್ದ ದುಷ್ಟಮೃಗಗಳನ್ನು ಚದರಿಸುವುದಕ್ಕಾಗಿ, ತನ್ನ ಕಡೆಯ ಸೈನಿಕರಿಂದ ದೊಡ್ಡ ಕೋಲಾಹಲವನ್ನೆಬ್ಬಿಸಿದನು. ತಾನು ಧನುರ್ಬಾಣಗಳನ್ನು ಹಿಡಿದು ನಿಂತು, ಕಣ್ಣಿಗೆ ಬಿದ್ದ ಮೃಗಗಳನ್ನೂ, ಹುಲಿಗಳನ್ನೂ, ಕೊಲ್ಲುತ್ತ ಬಂದನು. ಸಮೀಪಕ್ಕೆ ಬಂದವುಗಳನ್ನು ಕತ್ತಿಯಿಂದ ಕಡಿಯುವನು. ದೂರದಲ್ಲಿ ಕಂಡವುಗಳನ್ನು ಬಾಣಗಳಿಂದ ಕೊಲ್ಲುವನು. ಮಹಾಪರಾಕ್ರಮಿಯೂ, ಎಲ್ಲಾ ಬಗೆಯ ಆಯುಧಗಳ ಪ್ರಯೋಗಗಳನ್ನು ಬಲ್ಲವನೂ ಆದ ಆ ದುಷ್ಯಂತನು, ಶಕ್ತಿ, ಗದೆ, ಕತ್ತಿ, ತೋಮರ, ಮುಸಲ, ಮುಂತಾದ ವಿವಿಧಾಯುಧಗಳ ಪ್ರಯೋಗಗಳಿಂದ ಅಲ್ಲಲ್ಲಿ ಎಷ್ಟೋ ಮೃಗಗಳನ್ನು ಸಂಹರಿಸಿದನು. ಯುದ್ಧೋತ್ಸಾಹಿಗಳಾದ ಇವನ ಭಟರೂ, ಆ ವನವನ್ನೆಲ್ಲ ಸುತ್ತಿ ಮೃಗಪಕ್ಷಿಗಳನ್ನು ಕೊಲ್ಲುತ್ತ ಬಂದರು. ಅನೇಕಮೃಗಗಳೂ, ಪಕ್ಷಿಗಳೂ ಭಯದಿಂದ ಆ ಅರಣ್ಯವನ್ನು ಬಿಟ್ಟು ನಾನಾದಿಕ್ಕುಗಳಿಗೆ ಚದರಿ ಓಡಲಾರಂಭಿಸಿದುವು. ಹಿಂಡುಗಳನ್ನಗಲಿಯೂ, ಸಲಗನನ್ನು ಕಳೆದುಕೊಂಡೂ, ಅನೇಕ ಮೃಗಗಳು ದೈನ್ಯದಿಂದ ಅರಚುತ್ತ ಅಲ್ಲಲ್ಲಿ ಅಡಗಿದುವು. ಅನೇಕಮೃಗಗಳು ದಾಹದಿಂದ ಬಳಲಿ, ಅಲ್ಲಲ್ಲಿ ಜಲಾಶಯವನ್ನು ಹುಡುಕುತ್ತಾ, ಒಣಗಿದ ನದಿಗಳನ್ನು ನೋಡಿ ನಿರಾಶೆಯಿಂದ ಎದೆಯೊಡೆದು ಅಲ್ಲಿಯೇ ಮೂರ್ಛಿತಗಳಾಗಿ ನತ್ತುಬಿದ್ದುವು. ಅನೇಕ ಮೃಗಗಳು ಹಸಿವು ಬಾಯಾರಿಕೆಗಳಿಂದ ಬಳಲಿ, ಮುಂದೆ ನಡೆಯಲಾರದೆ ಅಲ್ಲಿಯೇ ಬಿದ್ದು ಪ್ರಾಣವನ್ನು ಬಿಟ್ಟುವು. ಸೈನಿಕರಲ್ಲಿ ಹಸಿವಿನಿಂದ ಪೀಡಿತರಾದ ಕೆಲವರು ಆ ಮೃಗಗಳನ್ನು ಹಾಗೆಯೇ ಭಕ್ಷಿಸುತಿದ್ದರು. ಕೆಲವರು

ಅವುಗಳ ಮಾಂಸವನ್ನು ಕತ್ತರಿಸಿ ಬೆಂಕಿಯನ್ನುರಿಸಿ ಅದನ್ನು ಕ್ರಮವಾಗಿ ಸಂಸ್ಕರಿಸಿ ಭುಜಿಸುತಿದ್ದರು. ಅಲ್ಲಿ ಮಹಾಬಲವುಳ್ಳ ಕೆಲವು ಕಾಡಾನೆಗಳು ರಾಜನ ಬಾಣದಿಂದ ನೊಂದು, ಭಯದಿಂದ ದಿಕ್ಕುಗೆಟ್ಟು ಪಲಾಯನವಾಡುತಿದ್ದುವು. ಕೆಲವು ಭಯದಿಂದ ಮಲಮೂತ್ರಗಳನ್ನು ಸುರಿಸುತ್ತ ಓಡಿದುವು. ಕೆಲವಕ್ಕೆ ಮೈಯಿಂದ ರಕ್ತವು ಪ್ರವಾಹವಾಗಿ ಸುರಿಯುತಿತ್ತು. ಕೆಲವು ಆನೆಗಳು ಕೋಪಾವೇಶದಿಂದ ಮುಂದೆ ಸಿಕ್ಕಿದವರನೇಕರನ್ನು ಸೀಳಿ ಕೊಂದುಹಾಕಿದುವು. ಆಗ ಆ ಮಹಾರಣ್ಯವೆಲ್ಲವೂ ಸೈನ್ಯವೆಂಬ ಮೇಘದಿಂದಲೂ, ಬಾಣಗಳೆಂಬ ಮಳೆಯಿಂದಲೂ ಕೂಡಿ, ವರ್ಷಾಕಾಲದಂತೆ ಕಾಣುತಿತ್ತು. ಸತ್ತ ಮೃಗಗಳೂ, ಸಿಂಹಗಳೂ ಅಲ್ಲಲ್ಲಿ ಅನೇಕವಾಗಿ ಬಿದ್ದಿದ್ದುವು.

ಇದು ತೊಂಭತ್ತನೆಯ ಅಧ್ಯಾಯವು.

---

ಬೇಟೆಯಾಡುತ್ತ ಹೋದ ದುಷ್ಯಂತನಿಗೆ ಮುಂದೆ ಕಣ್ವಾ ಶ್ರಮವು ಗೋಚರಿಸಿದುದು

ಓ ಜನಮೇಜಯರಾಜಾ! ಕೇಳು! ಹೀಗೆ ದುಷ್ಯಂತನು ತನ್ನ ಸೈನ್ಯ ವಾಹನಗಳೊಡನೆ ಆ ಕಾಡಿನಲ್ಲಿ ಸಾವಿರಾರು ಮೃಗಗಳನ್ನು ಕೊಲ್ಲುತ್ತ ಹೋಗುತ್ತಿರಲು, ಮುಂದೆ ರಮಣೀಯವಾದ ಬೇರೆ ವನವು ಕಾಣಿಸಿತು. ತನ್ನ ನಗರದಿಂದ ಎರಡು ಯೋಜನಗಳ ದೂರಕ್ಕಿದ್ದ ಆ ವನವು ಮೇಘಚ್ಛಾಯೆಯುಳ್ಳದಾಗಿ, ಸಿದ್ಧಚಾರಣರಿಗೆ ವಾಸಸ್ಥಾನವಾಗಿದ್ದಿತು. ಆ ವನದಲ್ಲಿಯೂ ದುಷ್ಯಂತನು ತನ್ನ ಕಣ್ಣಿಗೆ ಬಿದ್ದ ಸಾವಿರಾರು ಮೃಗಗಳನ್ನು ಬೆನ್ನಟ್ಟಿ ಹಿಡಿಯುವುದಕ್ಕಾಗಿ, ತನ್ನ ರಥಾಶ್ವಗಳನ್ನು ವೇಗದಿಂದ ಬಿಡುತ್ತ ಮುಂದೆ ಹೋದನು. ಅಲ್ಲಿ ಇವನಿಗೆ ಒಂದು ಜಿಂಕೆಯಮೇಲೆ ದೃಷ್ಟಿಯು ಬಿದ್ದಿತು. ಆ ಮೃಗವನ್ನು ಹಿಂಬಾಲಿಸುತ್ತ ತಾನೊಬ್ಬನೇ ಸಮೀಪದಲ್ಲಿದ್ದ ಬೇರೊಂದು ವನವನ್ನು ಪ್ರವೇಶಿಸಿದನು. ಇವನನ್ನು ಹಿಂಬಾಲಿಸಿದ ಸೈನ್ಯಗಳೆಲ್ಲವೂ ಹಿಂದಾಯಿತು. ಇವನು ಬಹುದೂರದವರೆಗೆ ಆ ಜಿಂಕೆಯನ್ನು ಹಿಂಬಾಲಿಸುತ್ತಿದ್ದುದರಿಂದ, ಅವನಿಗೆ ಹಸಿವೂ, ಬಾಯಾರಿಕೆಯೂ, ಶ್ರಮ

ವೂ ತೋರುತ್ತ ಬಂದಿತು. ಆ ಕಾಡಿನ ಕೊನೆಯುವರೆಗೆ ಆ ಜಿಂಕೆಯನ್ನೇ ಹಿಂಬಾಲಿಸಿಹೋಗಲು ದೊಡ್ಡದಾದ ಶೂನ್ಯಪ್ರದೇಶವೊಂದು ಕಾಣಿಸಿತು. ಅದನ್ನೂ ದಾಟಿ ಮುಂದೆ ಹೋಗಲು ಅಲ್ಲಿ ಉತ್ತಮವಾದ ಆಶ್ರಮಪ್ರದೇಶ ವೊಂದು ಗೋಚರಿಸಿತು. ಮನಸ್ಸಿಗೂ, ಕಣ್ಣುಗಳಿಗೂ ಆನಂದಕರವಾದ ಆ ಆಶ್ರಮವನ್ನು ಸಮೀಪಿಸುವಾಗಲೇ, ತಂಪಾದ ಗಾಳಿಯು ಮೈಮೇಲೆ ಸುಖಸ್ಪರ್ಶವಾಗಿ ಬೀಸಿತು. ಅಲ್ಲಿ ಮುಂದೆ ವಿಶಾಲವಾದ ಒಂದು ವನ ವನ್ನು ಸೇರಿದನು. ಅಲ್ಲಿ ಯಾವ ಕಡೆ ನೋಡಿದರೂ ಪುಷ್ಪಿತಗಳಾದ ಗಿಡಗಳು ತುಂಬಿರುವುವು. ನೆಲವೆಲ್ಲ ಎಳಗರಿಕೆಯ ಹುಲ್ಲುಗಳಿಂದ ಹೊದಿ ಸಿದಂತೆ ನಡೆಯುವುದಕ್ಕೆ ಸುಖವಾಗಿರುವುದು. ಕೋಗಿಲೆ ಮುಂತಾದ ಪಕ್ಷಿ ಗಳು ಕಿವಿಗಿಂಪಾಗಿ ಹಾಡುತ್ತಿರುವುವು. ಜೀರುಂಡೆಗಳು ಶಬ್ದಿಸುತ್ತಿರು ವುವು. ಶಾಖೋಪಶಾಖೆಗಳಿಂದ ಬೆಳೆದು ಸುಖವಾದ ನೆರಳನ್ನು ಕೊಡ ತಕ್ಕ ದೊಡ್ಡ ವೃಕ್ಷಗಳು ದಟ್ಟವಾಗಿ ಬೆಳೆದಿರುವುವು. ಅಲ್ಲಿನ ನೆಲವನ್ನೆಲ್ಲ ಹೊದಿಸಿದಂತೆ ಭ್ರಮರಗಳು ಝುಂಕರಿಸುತ್ತಿರುವುವು. ಅಪೂರ್ವಶೋಭೆ ಯುಳ್ಳ ಆ ಪ್ರದೇಶದಲ್ಲಿ ಹಣ್ಣು ಮತ್ತು ಹೂಗಳಿಲ್ಲದ ವೃಕ್ಷವೊಂದಾದರೂ ಇಲ್ಲ. ಮುಳ್ಳುಗಿಡಗಳಾಗಲಿ, ದುಂಬಿಗಳಿಗೆ ಪ್ರಿಯವಲ್ಲದ ವೃಕ್ಷಗಳಾಗಲಿ ಅಲ್ಲಿರಲಿಲ್ಲ. ಎಲ್ಲಿ ನೋಡಿದರೂ ವಿಧವಿಧವಾದ ಪುಷ್ಪಗಳ ಗೊಂಚಲು ಗಳೂ, ಎಲ್ಲಾ ಋತುಗಳಲ್ಲಿ ಬಿಡುವ ಫಲಪುಷ್ಪಗಳೂ ಅಲ್ಲಿ ಯಾವಾಗಲೂ ತುಂಬಿರುವುವು. ಎಲ್ಲಾ ಮರಗಳೂ ಸುಖಚ್ಛಾಯೆಯುಳ್ಳವುವಾಗಿ, ಅತ್ಯಂ ತ ಮನೋಹರವಾಗಿರುವುವು. ದುಷ್ಯಂತನು ಆ ಆಶ್ರಮಪ್ರದೇಶವನ್ನು ಪ್ರವೇಶಿಸುವಾಗಲೇ, ಅವನಮೇಲೆ ಪುಷ್ಪವರ್ಷವನ್ನು ಕರೆಯುವಂತೆ ಗಾಳಿ ಯಿಂದ ಕದಲಿದ ಹೂಗಿಡಗಳು ಹೂಗಳನ್ನು ಸುರಿಸಿದುವು. ಅಲ್ಲಿನ ಒಂ ದೊಂದು ಮರವೂ ಆಕಾಶವನ್ನು ಮುಟ್ಟುವಂತೆ ಉನ್ನತವಾಗಿರುವುದು. ಒಂದೊಂದು ಮರದಲ್ಲಿಯೂ ಪಕ್ಷಿಗಳು ಸುಸ್ವರದಿಂದ ಹಾಡುವುವು. ಅಲ್ಲಿ ನ ಮರಗಳೆಲ್ಲ ವಿಚಿತ್ರಪುಷ್ಪಗಳಿಂದ ಹೊದ್ದಿಸಿ ಅಲಂಕರಿಸಲ್ಪಟ್ಟಂತಿರು ವುವು. ಮಕರಂದವನ್ನು ತೊಟ್ಟಿಕ್ಕುತ್ತಿದ್ದ ಅಲ್ಲಿನ ಗಿಡಗಳ ಹೂಗಳಲ್ಲಿ ಯೂ, ಚಿಗುರುಗಳಲ್ಲಿಯೂ ದುಂಬಿಗಳು ಮಹೋತ್ಸಾಹದಿಂದ ಹಾಡುತ್ತಿ ರುವುವು. ಪುಷ್ಪಾಲಂಕೃತಗಳಾದ ಬಳ್ಳಿವನೆಗಳು ಮನಸ್ಸಿಗೆ ಅತ್ಯಾನಂದ

ವನ್ನುಂಟುಮಾಡುತ್ತಿರುವುವು. ಮಹಾತೇಜಸ್ವಿಯಾದ ದುಷ್ಯಂತನಿಗೆ ಆ ಪ್ರದೇಶವನ್ನು ಕಂಡೊಡನೆ ಮನಸ್ಸು ಆನಂದಪರವಶವಾಯಿತು. ಮಹೇಂದ್ರಧ್ವಜದಂತೆ ಉನ್ನತಗಳಾಗಿ, ಶಾಖೋಪಶಾಖೆಗಳಿಂದ ಒಂದಕ್ಕೊಂದು ಹೆಣೆದಂತೆ ಕಾಣುತ್ತ, ಪುಷ್ಪಗಳಿಂದ ತುಂಬಿದ ಮರಗಳು ಆ ವನಕ್ಕೆಲ್ಲ ಒಂದು ಅಪೂರ್ವಶೋಭೆಯನ್ನು ಬೀರುತ್ತಿದ್ದುವು. ಸಿದ್ಧರು, ಚಾರಣರು, ಗಂಧರ್ವರು, ಅಪ್ಸರಸ್ಸುಗಳು, ಕಿನ್ನರರು, ವಾನರರು ಮೊದಲಾದ ದೇವಜಾತಿಗಳೆಲ್ಲರೂ ಗುಂಪುಗುಂಪಾಗಿ ಬಂದು ಆ ಸ್ಥಳವನ್ನು ಸೇವಿಸಿ ಹೋಗುತ್ತಿರುವರು. ಶೈತ್ಯ, ಸೌರಭ್ಯ, ಮಾಂದ್ಯಗಳೆಂಬ ಮೂರು ಗುಣಗಳಿಂದ ಕೂಡಿದ ಗಾಳಿಯು ಮಕರಂದಬಿಂದುಗಳೊಡನೆ ಅಲ್ಲಿ ಸದಾ ಬೀಸುತ್ತಿರುವುದು. ಆ ಗಾಳಿಯು ಅಲ್ಲಿನ ಮರಗಳನ್ನು ಲೀಲೆಯಿಂದ ಆಡಿಸುವಂತಿರುವುದು. ಮನೋಹರವಾಗಿಯೂ, ಎತ್ತಿ ಕಟ್ಟಿದ ಧ್ವಜದಂತೆ ಉನ್ನತವಾಗಿಯೂ, ಜಲಪ್ರಾಯವಾದ ನದೀತೀರಪ್ರದೇಶದಲ್ಲಿ ಬೆಳೆದುದಾಗಿಯೂ ಇರುವ ಅಲ್ಲಿನ ಮರದ ಸಾಲುಗಳು ಅಪೂರ್ವಶೋಭೆಯನ್ನು ಬೀರುತ್ತಿರುವುವು. ಅಲ್ಲಲ್ಲಿ ಹೋಮಾಗ್ನಿಗಳು ಜ್ವಲಿಸುತ್ತಿರುವುವು. ಹೀಗೆ ಎಣೆಯಿಲ್ಲದ ಮಹಾಮಹಿಮೆಯಿಂದ ಕೂಡಿದ ಆ ಪ್ರದೇಶವನ್ನು ನೋಡಿದೊಡನೆ, ಇವನಿಗೆ ಅದರಲ್ಲಿ ಒಂದು ಬಗೆಯ ಪೂಜ್ಯಬುದ್ಧಿಯುಂಟಾಯಿತು. ಹೀಗೆ ದುಷ್ಯಂತನು ರಮ್ಯವಾಗಿಯೂ, ಪಕ್ಷಿಧ್ವನಿಗಳಿಂದ ಕಿವಿಗಿಂಪಾಗಿಯೂ ಇರುವ ವನವನ್ನು ನೋಡುತ್ತಿರುವಾಗ ಅಲ್ಲಿ ಅನೇಕ ಅಗ್ನಿಹೋತ್ರಗಳಿಂದ ಪ್ರಕಾಶಿಸುವ ಒಂದು ಪುಣ್ಯಾಶ್ರಮವು ಕಾಣಿಸಿತು. ಅಲ್ಲಿ ಅನೇಕಯತಿಗಳೂ, ಹುಟ್ಟಿದುದು ಮೊದಲು ಬ್ರಹ್ಮಚರ್ಯದಲ್ಲಿಯೇ ಇರುವ ವಾಲಖಿಲ್ಯರೂ, ಇನ್ನೂ ಅನೇಕ ಋಷಿಶ್ರೇಷ್ಠರೂ ನೆರೆದಿರುವರು. ಎಲ್ಲೆಲ್ಲಿಯೂ ಅಗ್ನಿಹೋತ್ರಶಾಲೆಗಳು, ಎಲ್ಲೆಲ್ಲಿಯೂ ಪುಷ್ಪಾಸ್ತರಣಗಳು! ಅಲ್ಲಲ್ಲಿ ದೊಡ್ಡದೊಡ್ಡ ವೇದಿಕೆಗಳು! ಇವುಗಳಿಂದ ಶೋಭಿಸುತ್ತಿದ್ದ ಆ ಪ್ರದೇಶವನ್ನು ದುಷ್ಯಂತನು ಪೂಜ್ಯಭಾವದಿಂದ ನೋಡಿದನು. ಆ ಆಶ್ರಮದ ಪಕ್ಕದಲ್ಲಿಯೇ ಆ ಸ್ಥಳಕ್ಕೆ ಮತ್ತಷ್ಟು ಶೋಭೆಯನ್ನುಂಟುಮಾಡುವಂತೆ ಪವಿತ್ರವಾಗಿಯೂ, ಸ್ವಚ್ಛಜಲವುಳ್ಳುದಾಗಿಯೂ, ಆರೋಗ್ಯಕರವಾಗಿಯೂ ಇರುವ ಮಾಲಿನಿಯೆಂಬ ಪುಣ್ಯನದಿಯು ಪ್ರವಹಿಸುತ್ತಿರುವುದು. ಆ ನದಿಯ ತೀರದಲ್ಲಿ ಅನೇಕ

ವೃಕ್ಷಗಳಿಂದ ತುಂಬಿದ ಸಾಲುಮರಗಳು ಶೋಭಿಸುತ್ತಿರುವುವು. ಮನೋಹರಗಳಾದ ಜಲಪಕ್ಷಿಗಳು ಅಲ್ಲಲ್ಲಿ ವಿಹರಿಸುತ್ತಿರುವುವು. ಆ ಆಶ್ರಮಪ್ರದೇಶದಲ್ಲಿ ದುಷ್ಟಮೃಗಗಳೂ ಕೂಡ ಬಹಳ ಶಾಂತವಾಗಿರುವುದನ್ನು ನೋಡಿ ದುಷ್ಯಂತನಿಗೆ ಆಶ್ಚರ್ಯವಾಯಿತು. ಎಲ್ಲಿ ನೋಡಿದರೂ ರಮಣೀಯವಾಗಿ, ದೇವಲೋಕಕ್ಕೆ ಸಮಾನವಾದ ಆ ಆಶ್ರಮದೊಳಗೆ ಪ್ರವೇಶಿಸಿದನು. ಆ ಆಶ್ರಮ ಸಮೀಪದಲ್ಲಿ ಪ್ರವಹಿಸುತ್ತಿದ್ದ ಪುಣ್ಯತೀರ್ಥವುಳ್ಳ ನದಿಯನ್ನೂ ನೋಡಿದನು. ಆ ನದಿಯು ಅಲ್ಲಿನ ಸಮಸ್ತ ಪ್ರಾಣಿಗಳಿಗೂ ಹೆತ್ತ ತಾಯಿಯಂತೆ ಜೀವನಾಧಾರವೆನಿಸಿರುವುದು. ಚಕ್ರವಾಕಗಳು ಜತೆಜತೆಯಾಗಿ ಸುಳಿದಾಡುತ್ತಿರುವುವು. ಪುಳಿನಮಯವಾದ ತೀರಪ್ರದೇಶಗಳು ಶೋಭಿಸುತ್ತಿರುವುವು. ನೊರೆಗಳಂತೆ ಪುಷ್ಪರಾಶಿಗಳು ಆ ನೀರಿನ ಮೇಲೆ ಕಾಣುತ್ತಿರುವುವು. ಕಿನ್ನರ ಗಣಗಳಿಗೆ ನಿವಾಸಭೂತವಾಗಿರುವ ಆ ಸ್ಥಳದಲ್ಲಿ ಋಕ್ಷವಾನರಾದಿ ಮೃಗಗಳು ಅಲ್ಲಲ್ಲಿ ವಿನೋದದಿಂದ ಆಡುತ್ತಿರುವುವು. ಅದರ ತೀರದಲ್ಲಿ ಪವಿತ್ರವಾದ ವೇದಘೋಷಗಳು ಯಾವಾಗಲೂ ಕೇಳಿಸುತ್ತಿರುವುದು. ಮದದಾನೆಗಳು, ಹುಲಿ, ಹಾವು, ಮುಂತಾದ ದುಷ್ಟಜಂತುಗಳೂ ಕೂಡ ಶಾಂತವಾಗಿ ಅಲ್ಲಿ ವಾಸಮಾಡುತ್ತಿರುವುವು. ಆ ನದೀತೀರದಲ್ಲಿ ಕಶ್ಯಪಗೋತ್ರಪದವನೂ, ಮಹಾತ್ಮನೂ ಆದ ಕಣ್ವಮುನಿಯ ಆಶ್ರಮವುಂಟು. ಆ ಆಶ್ರಮವು ಅತಿರಮ್ಯವಾಗಿ ಅನೇಕ ಮಹರ್ಷಿಗಳಿಂದ ಸೇವಿಸಲ್ಪಡುತ್ತಿರುವುದು. ಆ ಪುಣ್ಯಾಶ್ರಮವನ್ನೂ, ಆ ಆಶ್ರಮಕ್ಕೆ ಸೇರಿದಂತೆ ಪ್ರವಹಿಸುತ್ತಿರುವ ಪುಣ್ಯನದಿಯನ್ನೂ ನೋಡಿದಮೇಲೆ, ದುಷ್ಯಂತನಿಗೆ ಅದರಲ್ಲಿ ಪ್ರವೇಶಿಸಬೇಕೆಂಬ ಆಸೆ ಹುಟ್ಟಿತು. ನರನಾರಾಯಣರಿಗೆ ಆಶ್ರಯವಾದ ಪುಣ್ಯಸ್ಥಳವು ಗಂಗೆಯಿಂದ ಹೇಗೋ ಹಾಗೆ, ಮಾಲಿನೀನದಿಯಿಂದ ಆ ಕಣ್ವಾಶ್ರಮವು ಮತ್ತಷ್ಟು ಶೋಭಾತಿಶಯವನ್ನು ಹೊಂದಿರುವುದು. ಅಲ್ಲಲ್ಲಿ ಮದಿಸಿದ ನವಿಲುಗಳ ಕೇಕಾಧ್ವನಿಯಿಂದ ಕೂಡಿ, ಕುಬೇರನ ಚೈತ್ರರಥವೆಂಬ ಉದ್ಯಾನದಂತೆ ರಮ್ಯವಾದ ಆ ಪುಣ್ಯಾಶ್ರಮದೊಳಕ್ಕೆ ಹೋದನು. ಅಲ್ಲಿ ಸರ್ವಗುಣಸಂಪನ್ನನಾಗಿ, ಅಪ್ರಮೇಯತೇಜಸ್ಸಿನಿಂದ ಬೆಳಗುವ ಕಣ್ವಮಹರ್ಷಿಯನ್ನು ದರ್ಶನಮಾಡಿಬರಬೇಕೆಂದು ಅವನಿಗೆ ತೋರಿತು. ಅದಕ್ಕಾಗಿ ಅವನು ತನ್ನನ್ನು ಹಿಂಬಾಲಿಸಿಬರುತ್ತಿದ್ದ ಚತು

ರಂಗಸೈನ್ಯವನ್ನೂ ಆ ಆಶ್ರಮದ್ವಾರದಲ್ಲಿಯೇ ತಡೆದು ನಿಲ್ಲಿಸಿ, ತನ್ನ ಸೇನಾಪತಿಯನ್ನು ನೋಡಿ “ ಇದೋ! ನಾನು ಇಲ್ಲಿರುವ ಕಣ್ವಮಹರ್ಷಿಯನ್ನು ನೋಡಿಬರಬೇಕೆಂದು ಉದ್ದೇಶಿಸಿರುವೆನು. ಅವನು ಪರಮ ಶುದ್ಧಾತ್ಮನು. ಮಹಾ ತಪಸ್ವಿ ! ನಾನು ಅವನನ್ನು ಕಂಡುಬರುವವರೆಗೆ ಈ ಸೈನ್ಯಗಳೆಲ್ಲ ಇಲ್ಲಿಯೇ ಇರಲಿ” ಎಂದು ಹೇಳಿ ಹೊರಟನು. ನಂದನವನಕ್ಕೆ ಸಮಾನವಾದ ಆ ತಪೋವನವನ್ನು ನೋಡಿದಮಾತ್ರಕ್ಕೆ ಇವನಿಗೆ ಮೊದಲಿದ್ದ ವನಸಂಚಾರಶ್ರಮವೂ, ಹಸಿವು, ಬಾಯಾರಿಕೆಗಳೆಲ್ಲವೂ ಹೋಗಿ, ಮನಸ್ಸಿಗೆ ಅಪೂರ್ವವಾದ ಒಂದು ಸಂತೋಷವುಂಟಾಯಿತು. ಅವನು ಕಣ್ವಮುನಿಯನ್ನು ಕಾಣುವುದಕ್ಕೆ ಹೋಗುವ ಉದ್ದೇಶದಿಂದ ತನ್ನ ರಾಜಚಿಹ್ನೆಗಳೆಲ್ಲವನ್ನೂ ತೆಗೆದು, ಮಂತ್ರಿಯನ್ನೂ, ಪುರೋಹಿತನನ್ನೂ ಮಾತ್ರ ತನ್ನೊಡನೆ ಕರೆದುಕೊಂಡು ಮುಂದೆ ಹೋದನು. ಬ್ರಹ್ಮಲೋಕಕ್ಕೆಣೆಯಾದ ಆ ಪುಣ್ಯಾಶ್ರಮದ ವೈಭವವನ್ನು ಕೇಳಬೇಕೆ? ಎಲ್ಲಿ ನೋಡಿದರೂ ಭ್ರಮರಝಂಕಾರಗಳಿಂದಲೂ, ನಾನಾಬಗೆಯ ಪಕ್ಷಿಧ್ವನಿಗಳಿಂದಲೂ ಕೂಡಿದ ಆ ಪ್ರದೇಶವನ್ನು, ಅರಳಿದ ಕಣ್ಣುಗಳಿಂದ ಆ ರಾಜನು ಆಶ್ಚರ್ಯಪರವಶನಾಗಿ ನೋಡುತ್ತಿದ್ದನು. ಆ ಆಶ್ರಮದ ನಾನಾಭಾಗಗಳಲ್ಲಿ ಯಜ್ಞಕಾರ್ಯಗಳು ನಡೆಯುತ್ತಿರುವುವು. ಅದರಲ್ಲಿ ಒಂದುಕಡೆ ಋಗ್ವೇದಪಠನಮಾಡತಕ್ಕವರು, ಪದಕ್ರಮಜಟಾದಿ ರೀತಿಗಳಿಂದ ಉಚ್ಚರಿಸುವ ಮಂತ್ರಘೋಷಗಳು ಕಿವಿಗಿಂಪಾಗಿ ಕೇಳಿಸುತ್ತಿರುವುವು. ಯಜ್ಞವಿದ್ಯೆಯ ಅಂಗಗಳಾದ ಕಲ್ಪಸೂತ್ರಗಳನ್ನೂ, ಯಜುಶ್ಶಾಖೆಗಳನ್ನೂ, ಸಾಮವೇದಗಳನ್ನೂ ಬಲ್ಲ ಮಹರ್ಷಿಗಳು ಅಲ್ಲಲ್ಲಿ ಮಧುರಸ್ವರದಿಂದ ಮಂತ್ರಗಳನ್ನು ಜಪಿಸುತ್ತಿರುವರು. ಸಾಮವೇದಗಳಲ್ಲಿ ಒಂದಾದ “ ಭಾರುಂಡ ”ವೆಂಬ ಸಾಮಗಾನದಲ್ಲಿಯೂ, ಅಥರ್ವಶಿರಸ್ಸೆಂಬ ಅಥರ್ವಣವೇದೋಪನಿಷತ್ತುಗಳಲ್ಲಿಯೂ ನೈಪುಣ್ಯವುಳ್ಳವರೂ, ತಪೋಧನರೂ, ಜಿತೇಂದ್ರಿಯರೂ ಆದ ಶ್ರೋತ್ರಿಯರು, ಅಲ್ಲಲ್ಲಿ ಆಯಾ ವೇದಗಳನ್ನು ಪಠಿಸುತ್ತಿರುವರು. ಅಥರ್ವವೇದಜ್ಞರೂ, ಪೂತಯಜ್ಞೀಯವೆಂಬ ಸಾಮಶಾಖೆಯನ್ನು ಬಲ್ಲವರೂ, ಪದಕ್ರಮಗಳೊಡನೆ ಸಂಹಿತೆಯೆಂಬ ವೇದಭಾಗಗಳನ್ನು ಅಲ್ಲಲ್ಲಿ ಪಠಿಸುತ್ತಿರುವರು. ಶಬ್ದಗಳನ್ನು ಸ್ವರವರ್ಣಸಂಸ್ಕಾರಗಳೊಡನೆ ಪಠಿಸುತ್ತಿರುವ ಇನ್ನೂ ಅನೇಕ

ಬ್ರಾಹ್ಮಣಶ್ರೇಷ್ಠರು ಅಲ್ಲಲ್ಲಿ ವೇದಗಳನ್ನೋದುತ್ತಿರುವರು. ಹೀಗೆ ಎಲ್ಲೆಲ್ಲಿಯೂ ವೇದಘೋಷಮಯವಾದ ಆ ಪುಣ್ಯಾಶ್ರಮವು, ಬೇರೊಂದು ಬ್ರಹ್ಮಲೋಕವೋ ಎಂಬಂತೆ ತೋರುತಿದ್ದಿತು. ಅಲ್ಲಿ ಯಜ್ಞವೇದಿಗಳಿಗಾಗಿ ದರ್ಭಾಸ್ತರಣಾದಿಗಳನ್ನು ಸಿದ್ಧಗೊಳಿಸುವುದರಲ್ಲಿ ನೈಪುಣ್ಯವುಳ್ಳವರು ಕೆಲವರು! ವೇದಪಠನಕ್ಕೆ ಸಂಬಂಧಪಟ್ಟ ಕ್ರಮ, ಶಿಕ್ಷೆ ಮೊದಲಾದ ಲಕ್ಷಣಗಳಲ್ಲಿ ನಿಪುಣರಾದವರು ಕೆಲವರು! ನ್ಯಾಯತತ್ವಗಳನ್ನೂ, ಆತ್ಮವಿಚಾರಗಳನ್ನೂ ತಿಳಿದ ಶಾಸ್ತ್ರಜ್ಞರು ಕೆಲವರು! ವೇದಪಾರಂಗತರು ಕೆಲವರು! ಮೀಮಾಂಸೆಯನ್ನು ಅಧಿಕರಿಸಿದವರು ಕೆಲವರು! ವಾಕ್ಯಲಕ್ಷಣಗಳನ್ನೂ, ಅನ್ವಯಲಕ್ಷಣಗಳನ್ನೂ ಚರ್ಚಿಸುವವರು ಕೆಲವರು! ಆಗಾಗ ನಡೆಸಬೇಕಾದ ವೈದಿಕಕರ್ಮಗಳನ್ನು ಕುರಿತು ಎಚ್ಚರಿಸುವವರು ಕೆಲವರು! ಕೇವಲ ಮೋಕ್ಷಧರ್ಮದಲ್ಲಿ ನಿರತರಾದವರು ಕೆಲವರು! ನ್ಯಾಯವೈಶೇಷಿಕಶಾಸ್ತ್ರಕ್ಕೆ ಸೇರಿದ ವಿಷಯಗಳಲ್ಲಿ ತಮ್ಮ ಮತವನ್ನು ಸ್ಥಾಪಿಸುವುದು, ಅದರ ಮೇಲಿನ ಆಕ್ಷೇಪಗಳನ್ನು ಕೇಳಿ ಪರಿಹರಿಸುವುದು, ಸಿದ್ಧಾಂತಗಳನ್ನು ಮಾಡುವುದು, ಇಂತಹ ವಾದಗಳಲ್ಲಿ ತಮ್ಮ ತೀರ್ಮಾನಗಳನ್ನು ಕೊನೆಗಾಣಿಸಬಲ್ಲ ಶಾಸ್ತ್ರಜ್ಞರು ಕೆಲವರು, ಮತ್ತು ವ್ಯಾಕರಣ, ಛಂದಸ್ಸು, ನಿರುಕ್ತ, ಕಾಲಜ್ಞಾನ, ದ್ರವ್ಯ ಕರ್ಮ ಗುಣವಿಚಾರಗಳು, ಕಾರ್ಯಕಾರಣವಿಮರ್ಶೆಗಳು, ಶಬ್ದ, ಇವುಗಳೊಳಗೆಲ್ಲ ನೈಪುಣ್ಯವನ್ನು ಪಡೆದವರು ಕೆಲವರು, ಪಕ್ಷಿಗಳ ಮತ್ತು ವಾನರಗಳ ಕೂಗುಗಳ ಅರ್ಥವನ್ನು ತಿಳಿದು ಹೇಳಬಲ್ಲವರು ಕೆಲವರು, ವಿಸ್ತಾರವಾದ ಗ್ರಂಥಗಳನ್ನೋದಿ, ಅವುಗಳ ಪ್ರಮಾಣಗಳನ್ನು ನಿರೂಪಿಸತಕ್ಕವರು ಕೆಲವರು, ನಾನಾಶಾಸ್ತ್ರಗಳಲ್ಲಿ ನಿಪುಣರು ಕೆಲವರು, ಲೋಕಾಯತಮತದವರು ಕೆಲವರು, ಇವರೆಲ್ಲರ ಭಾಷಣಗಳೂ ಅಲ್ಲಿ ಪ್ರತಿಧ್ವನಿಕೊಡುವಂತೆ ಕೇಳಿಸುತಿದ್ದುವು.

ಮತ್ತು ಆ ಆಶ್ರಮದಲ್ಲಿ ದೃಢನಿಯಮಗಳುಳ್ಳವರೂ, ವ್ರತನಿಷ್ಠರೂ, ಜಪಹೋಮಾದಿಗಳಲ್ಲಿ ನಿರತರೂ ಆದ ಬ್ರಾಹ್ಮಣರು, ಅಲ್ಲಲ್ಲಿ ತಮ್ಮತಮ್ಮ ಕರ್ಮಗಳಲ್ಲಿ ವ್ಯಾಪೃತರಾಗಿರುವುದನ್ನು ಆ ರಾಜನು ನೋಡಿದನು. ಅಲ್ಲಿ ಮಹರ್ಷಿಗಳಿಗಾಗಿ ಪ್ರಯತ್ನಪಟ್ಟು ರಚಿಸಿದ ಅಂದವಾದ ವಿಚಿತ್ರಾಸನಗಳ

ನ್ನು ನೋಡಿ ದುಷ್ಯಂತನಿಗೆ ಆಶ್ಚರ್ಯವಾಯಿತು. ಅಲ್ಲಲ್ಲಿ ದೇವತಾಯತನಗಳಲ್ಲಿ ಬ್ರಾಹ್ಮಣರು ನಡೆಸುತ್ತಿರುವ ಪೂಜಾವಿಧಾನಗಳನ್ನು ನೋಡಿ ದುಷ್ಯಂತನಿಗೆ ಆಗ ತಾನು ಸಾಕ್ಷಾದ್ಬ್ರಹ್ಮಲೋಕದಲ್ಲಿರುವಂತೆ ಮನಸ್ಸು ಪರವಶವಾಯಿತು. ಕಶ್ಯಪಪುತ್ರನಾದ ಕಣ್ವಮುನಿಯ ತಪೋಮಹಿಮೆಯಿಂದ ರಕ್ಷಿತವಾದ ಆ ಆಶ್ರಮಪ್ರದೇಶದ ಮಹಿಮೆಯನ್ನು ಎಷ್ಟೆಷ್ಟು ನೋಡಿದರೂ ಅವನಿಗೆ ತೃಪ್ತಿಯಿಲ್ಲದಂತಿದ್ದಿತು. ಮಹಾತಪಸ್ವಿಗಳೂ, ವ್ರತನಿಷ್ಠರೂ ಆದ ಮಹರ್ಷಿಗಳಿಂದ ತುಂಬಿ, ಶಾಂತವೂ, ಮನೋಹರವೂ, ಎಲ್ಲಾ ತಪೋವನಲಕ್ಷಣಗಳಿಂದ ಕೂಡಿದುದೂ ಆದ ಆ ಪುಣ್ಯಾಶ್ರಮವನ್ನು ದುಷ್ಯಂತನು ತನ್ನ ಮಂತ್ರಿ ಪುರೋಹಿತರೊಡನೆ ಪ್ರವೇಶಿಸಿದನು,

ಇದು ತೊಂಭತ್ತೊಂದನೆಯ ಅಧ್ಯಾಯವು.

---

( ಕಣ್ವಾಶ್ರಮದಲ್ಲಿ ದುಷ್ಯಂತನಿಗೂ, ಶಕುಂತಳೆಗೂ ನಡೆದ ಸಂವಾದಗಳು. ಶಕುಂತಳೆಯು ತನ್ನ ಜನನ ವೃತ್ತಾಂತವನ್ನು ತಿಳಿಸಿದುದು. )

ಜನಮೇಜಯರಾಜಾ! ಕೇಳು! ಆಮೇಲೆ ದುಷ್ಯಂತನು ತನ್ನ ಮಂತ್ರಿಪುರೋಹಿತರನ್ನೂ ಹೊರಗೇ ನಿಲ್ಲಿಸಿ, ತಾನೊಬ್ಬನೇ ಕಣ್ವಮುನಿಯನ್ನು ನೋಡುವುದಕ್ಕಾಗಿ ಅವರ ನಿವಾಸಕ್ಕೆ ಹೋದನು. ಅಲ್ಲಿ ನೋಡಿದಾಗ ಮಹರ್ಷಿಯು ಆಶ್ರಮದಲ್ಲಿರಲಿಲ್ಲ. ಹೀಗೆ ಆಶ್ರಮದಲ್ಲಿ ಆ ಮಹರ್ಷಿಯೂ, ಬೇರೆ ಯಾರೂ ಇಲ್ಲದೆ ನಿರ್ಜನಪ್ರದೇಶದಂತಿರುವುದನ್ನು ನೋಡಿ, ಆ ವನಪ್ರದೇಶವೆಲ್ಲ ಮೊಳಗುವಂತೆ ಗಟ್ಟಿಯಾಗಿ "ಯಾರಿಲ್ಲಿ ?" ಎಂದು ಕೂಗಿದನು. ಈ ಧೀರಧ್ವನಿಯನ್ನು ಕೇಳಿದೊಡನೆ, ಸಾಕ್ಷಾಲ್ಲಕ್ಷ್ಮೀದೇವಿಯಂತೆ ಅಸಾಧಾರಣರೂಪವುಳ್ಳ, ಮತ್ತು ತಾಪಸವೇಷದಿಂದಿದ್ದ ತರುಣಿಯೊಬ್ಬಳು ಆಶ್ರಮದೊಳಗಿನಿಂದ ಹೊರಗೆ ಬಂದು ನಿಂತಳು. ಆ ತರುಣಿಯು ಬಂದು ದುಷ್ಯಂತನನ್ನು ನೋಡಿದೊಡನೆ, ಅವನ ರೂಪಕ್ಕೆ ಬೆರಗಾಗಿ, ಪೂಜ್ಯನೂ, ಪ್ರಭುವೂ ಆದ ಅತಿಥಿಯೊಬ್ಬನು ತಮ್ಮಲ್ಲಿಗೆ ಬಂದನೆಂದು ಸಂತೋಷಗೊಂಡಳು. ರೂಪಯೌವನಗಳಿಂದ ಕೂಡಿದವಳೂ, ಆಚಾರವತಿಯೂ

ಶೀಲವತಿಯೂ, ಮಂಗಳಸ್ವರೂಪಿಣಿಯೂ ಆದ ಆ ತರುಣಿಯು, ಆ ಅತಿಥಿಯ ರೂಪವನ್ನೇ ನಟ್ಟಕಣ್ಣಿನಿಂದ ನೋಡುತ್ತಿದ್ದಳು. ಅವನಿಗೆ ಕಮಲದಳದಂತೆ ಕಣ್ಣುಗಳು! ಅಗಲವಾದ ಎದೆ! ದುಂಡಗೆ ಉದ್ದವಾದ ತೋಳುಗಳು! ಸಿಂಹದಂತೆ ಹೆಗಲು, ಮೈಯಲ್ಲಿ ಎಲ್ಲಾ ತರದ ಮಹಾಪುರುಷಲಕ್ಷಣಗಳು, ಇಂತಹ ರೂಪಾತಿಶಯವುಳ್ಳ ಅವನನ್ನು ನೋಡಿ ಆ ತರುಣಿಯು ಇಂಪಾದ ಮತ್ತು ಸ್ಪಷ್ಟವಾದ ಮಾತುಗಳಿಂದ "ನಿನಗೆ ಸ್ವಾಗತವು" ಎಂದು ಹೇಳಿ, ಬೇಗಬೇಗನೆ ಅವನಿಗೆ ಆಸನವನ್ನೂ, ಅರ್ಘ್ಯಪಾದ್ಯಗಳನ್ನೂ ತಂದೊಪ್ಪಿಸಿ ಸತ್ಕರಿಸಿದಳು. ಆಮೇಲೆ ಅವನ ಕ್ಷೇಮಲಾಭವನ್ನು ವಿಚಾರಿಸಿದಳು. ಆಮೇಲೆ ಅವನನ್ನು ಕುರಿತು ಮುಗುಳ್ನಗೆಯೊಡನೆ "ಆರ್ಯನೆ! ನನ್ನಿಂದಾಗಬೇಕಾದ ಕಾರ್ಯವೇನು? ನೀನು ಇಲ್ಲಿಗೆ ಯಾವ ಕಾರ್ಯವನ್ನುದ್ದೇಶಿಸಿ ಬಂದಿರುವೆ? ನೀನು ಯಾರು? ಈ ಮಹರ್ಷಿಯ ಆಶ್ರಮಕ್ಕೆ ನೀನು ಬಂದ ಕಾರಣವೇನು?" ಎಂದಳು. ಆಗ ದುಷ್ಯಂತನು ಮಧುರಸ್ವರದಿಂದ ಮಾತಾಡುತ್ತಿರುವ ಮತ್ತು ನಿರ್ದುಷ್ಟವಾದ ಸರ್ವಾವಯವ ಸೌಂದರ್ಯವುಳ್ಳ ಆಕೆಯನ್ನು ಕುರಿತು "ಎಲೆ ಭದ್ರೆ! ನಾನು ಮಹಾತ್ಮನಾದ ಇಲಿಲನೆಂಬ ರಾಜರ್ಷಿಯ ಮಗನು. ನನಗೆ ದುಷ್ಯಂತನೆಂದು ಹೆಸರು. ಮಹಾತ್ಮನಾದ ಕಣ್ವಮುನಿಯ ದರ್ಶನಕ್ಕಾಗಿ ನಾನು ಬಂದವನು. ಈಗ ಪೂಜ್ಯನಾದ ಆ ಮಹರ್ಷಿಯೆಲ್ಲಿ ಹೋಗಿರುವನು?" ಎಂದನು. ಅದಕ್ಕೆ ಶಕುಂತಳೆಯು "ರಾಜೇಂದ್ರಾ! ಆ ಕಣ್ವಮುನಿಯು ನನ್ನ ತಂದೆ. ಪೂಜ್ಯನಾದ ಆ ಮಹರ್ಷಿಯು ಫಲಗಳನ್ನು ತರುವುದಕ್ಕಾಗಿ ಹೋಗಿರುವನು. ಒಂದು ಮುಹೂರ್ತಕಾಲದವರೆಗೆ ಇಲ್ಲಿಯೇ ನಿಂತು ನಿರೀಕ್ಷಿಸುತ್ತಿರು. ನೀನು ಅವನನ್ನು ನೋಡಬಹುದು ಅವನು ಈಗಲೇ ಹಿಂತಿರುಗಿ ಬಂದುಬಿಡುವನು" ಎಂದಳು.

ಓ ಜನಮೇಜಯರಾಜಾ! ದುಷ್ಯಂತನಿಗೆ ಅದೊಂದು ಒಳ್ಳೆಯ ಅವಕಾಶವು ಸಿಕ್ಕಿತು. ಮಹರ್ಷಿಯು ಆಶ್ರಮದಲ್ಲಿ ಲ್ಲವೆಂದೂ ನಿರ್ಧರವಾಯಿತು. ಮುಂದೆ ನಿಂತಿರುವ ಆ ತರುಣಿಯಾದರೋ ಅಸಾಧಾರಣ ರೂಪಯೌವನಗಳಿಂದ ಶೋಭಿಸುತ್ತಿರುವಳು. ಅವಳ ದೇಹಲಾವಣ್ಯದ ಕಾಂತಿ! ಅವಳ

ಮುಗುಳ್ನಗೆಯ ಸೊಗಸು! ಅವಳ ವಿನಯಾದಿಗುಣಗಳು! ಅವಳ ಅಂದ ವಾದ ಮೈಕಟ್ಟು! ಅವಳ ತಪೋನಿಷ್ಠೆ! ಇವೆಲ್ಲ ಅವನ ಮನಸ್ಸನ್ನು ಮರುಳುಮಾಡಿತು. ಆಗ ಆ ರಾಜನು ಮೆಲ್ಲಗೆ ಅವಳನ್ನು ಹೀಗೆಂದು ಮಾತನಾಡಿಸತೊಡಗಿದನು. "ಎಲೆ ಸುಶ್ರೋಣಿ! ನೀನು ಯಾರು? ಯಾರ ಮಗಳು! ಅಸಾಧಾರಣ ರೂಪಗುಣವುಳ್ಳ ನೀನು ಈ ತಾಪಸಾಶ್ರ ಮಕ್ಕೆ ಬಂದು ಸೇರಿದುದು ಹೇಗೆ? ನೀನು ಎಲ್ಲಿಂದ ಬಂದವಳು? ಎಲೆ ಶೋಭನಾಂಗಿ! ದರ್ಶನಮಾತ್ರದಿಂದಲೇ ನೀನು ನನ್ನ ಮನಸ್ಸನ್ನು ಅಪ ಹರಿಸಿದೆ. ಆದುದರಿಂದ ನಿನ್ನ ಪೂರ್ವೋತ್ತರಗಳನ್ನೆಲ್ಲ ತಿಳಿಯಬೇಕೆಂದು ನನಗೆ ಬಹಳ ಕುತೂಹಲವಿದೆ. ಅದನ್ನು ತಿಳಿಸು. ಎಲೆ ಸುಭಗೆ! ನಿನ್ನೊಡನೆ ನಾನೊಂದು ಮಾತನ್ನು ಹೇಳಬೇಕೆಂದಿರುವೆನು. ಓ ಮತ್ತ ಕಾಶಿನಿ! ಲಾಲಿಸಿ ಕೇಳು! ನಾನು ಒಬ್ಬ ರಾಜರ್ಷಿಯ ವಂಶದಲ್ಲಿ ಹುಟ್ಟಿದವನು. ಅಷ್ಟೇಕೆ? ಮಹಾತ್ಮನಾದ ಪೂರುವಂಶದವನೇ ನಾನು! ನನ್ನನ್ನು ದುಷ್ಯಂತನೆಂದು ಕರೆಯುವರು. ಓ ವರವರ್ಣಿನೀ! ನಾನು ನಿನ್ನನ್ನು ವರಿಸಲೆಳಸುವೆನು. ಕ್ಷತ್ರಿಯಸ್ತ್ರೀಯಲ್ಲಿಹೊರತು ಬೇರೆ ವರ್ಣ ದ ಹೆಂಗಸರಲ್ಲಿ ನನ್ನ ಮನಸ್ಸು ಎಂದಿಗೂ ಪ್ರವರ್ತಿಸಲಾರದು. ನನಗಿಂತ ಲೂ ಮೇಲಾದ ಋಷಿಕನ್ಯಕೆಯಾಗಿದ್ದರೂ, ಕೀಳುವರ್ಣದ ಬೇರೆ ಸ್ತ್ರೀಯ ರಾಗಿದ್ದರೂ ನನ್ನ ಮನಸ್ಸು ಅವರಲ್ಲಿ ಮೋಹಗೊಳಲಾರದು. ಆದುದ ರಿಂದ ನಾನು ನನ್ನ ಮನಸ್ಸಾಕ್ಷ್ಯವನ್ನನುಸರಿಸಿಯೇ ನಿನ್ನನ್ನು ಕೇಳುವೆ ನೆಂದು ತಿಳಿ! ಓ ಕಲಭಾಷಿಣಿ! ನನ್ನ ಮನಸ್ಸು ನಿನ್ನಲ್ಲಿ ಪ್ರವರ್ತಿಸಿದುದ ರಿಂದ, ನೀನು ಕ್ಷತ್ರಿಯಕುಮಾರಿಯೇ ಆಗಿರಬೇಕು. ನೀನು ಯಾಗು ಹೇಳು! ನೀನು ಬ್ರಾಹ್ಮಣಿಯಾಗಿದ್ದರೆ ನನ್ನ ಮನಸ್ಸು ನಿನ್ನಲ್ಲಿ ಬೀಳುತ್ತಿರ ಲಿಲ್ಲ. ಎಲೆ ಭೀರು! ನೀನು ಹೆದರಬೇಡ. ಆಯತಾಕ್ಷೀ! ನಿನ್ನನ್ನು ಪ್ರೀತಿಯಿಂದ ಭಜಿಸುವ ಭಕ್ತನಾದ ನನ್ನನ್ನು ನೀನು ಆದರಿಸು. ಓ ವಿಶಾಲಾಕ್ಷೀ! ನನ್ನ ರಾಜ್ಯವೇ ನಿನ್ನದು. ನೀನೇ ಅದನ್ನನುಭವಿಸು. ಬೇರೆ ಯವರಲ್ಲಿ ನೀನು ಮನಸ್ಸನ್ನಿಡಬೇಡ" ಎಂದನು. ಈ ಮಾತನ್ನು ಕೇಳಿ ಆ ತರುಣಿಯು ನಗುತ್ತ ಅವನನ್ನು ಕುರಿತು "ದುಷ್ಯಂತ ಮಹಾರಾಜಾ! ನಾನು ಮಹಾತ್ಮನೂ, ಧರ್ಮಜ್ಞನೂ, ತಪಸ್ವಿಯೂ, ತೇಜಸ್ವಿಯೂ

ಆದ ಕಣ್ವಮುನಿಯ ಮಗಳು! ನನಗೆ ಗುರುವೂ, ತಂದೆಯೂ ಆ ಕಾಶ್ಯಪ ನಾದುದರಿಂದ, ನಾನು ಈ ವಿಚಾರದಲ್ಲಿ ಸ್ವತಂತ್ರಳಲ್ಲ. ರಾಜೇಂದ್ರಾ! ನೀನು ಈ ವಿಚಾರವನ್ನು ಅವನಲ್ಲಿಯೇ ಪ್ರಾರ್ಥಿಸು. ಸರಿಯಾದ ದಾರಿಯನ್ನು ಬಿಟ್ಟು ಅನುಚಿತಮಾರ್ಗವನ್ನು ಹಿಡಿಯಬಾರದು" ಎಂದಳು.

ಆಮೇಲೆ ದುಷ್ಯಂತನು ಶಕುಂತಳೆಯನ್ನು ಕುರಿತು "ಎಲೆ ಭದ್ರೆ! ಮಹಾತ್ಮನೂ, ಲೋಕಪೂಜಿತನೂ ಆದ ಆ ಕಣ್ವಮುನಿಯು ಊರ್ಧ್ವರೇತಸ್ಸುಳ್ಳವನು. (ಸ್ತ್ರೀಸಂಬಂಧವೇ ಇಲ್ಲದವನು). ಧರ್ಮದೇವತೆಯಾದರೂ ಒಂದುವೇಳೆ ತನ್ನ ನಡತೆಯಿಂದ ತಪ್ಪಿಹೋಗಬಹುದೇ ಹೊರತು ಅಂತಹ ಮಹರ್ಷಿಯು ದಾರಿತಪ್ಪಿಹೋಗುವವನಲ್ಲ. ಹೀಗಿರುವಾಗ ನೀನು ಆ ಕಣ್ವನಿಗೆ ಮಗಳೆಂಬುದು ಹೇಗೆ? ನನಗೆ ಈ ವಿಚಾರದಲ್ಲಿ ಬಹಳ ಸಂದೇಹವುಂಟಾಗಿದೆ. ಈ ನನ್ನ ಸಂಶಯವನ್ನು ನೀಗಿಸಬೇಕು" ಎಂದನು. ಅದಕ್ಕಾ ಶಕುಂತಳೆಯು "ಮಹಾರಾಜಾ! ನಾನು ಇಲ್ಲಿಗೆ ಬಂದುದು ಹೇಗೋ, ಮತ್ತು ನಮ್ಮಿಬ್ಬರಲ್ಲಿ ತಂದೆಮಕ್ಕಳ ಭಾವವು ಹೇಗೆ ಹುಟ್ಟಿತೋ ಅದನ್ನು ನಿನಗೆ ಯಥಾಸ್ಥಿತವಾಗಿ ಹೇಳುವೆನು ಕೇಳು. ಸತ್ಪುರುಷರಲ್ಲಿ ತನ್ನ ನಿಜಸ್ಥಿತಿಯನ್ನು ಮರೆಸಿಟ್ಟು, ತನ್ನನ್ನು ಬೇರೆ ವಿಧವಾಗಿ ತಿಳಿಸಿಕೊಳ್ಳುವ ಮೂರ್ಖರು ಮಹಾಪಾಪಕ್ಕೊಳಗಾಗುವರು. ಅವನು ಆತ್ಮಾಪಹಾರಕನೆನಿಸುವನು. ಆದುದರಿಂದ ನಾನು ನಿನ್ನಲ್ಲಿ ಇದ್ದುದಿದ್ದ ಹಾಗೆ ನನ್ನ ಸಂಗತಿಯನ್ನು ತಿಳಿಸುವೆನು. ಹಿಂದೆ ಮಹರ್ಷಿಯೊಬ್ಬನು ಇಲ್ಲಿಗೆ ಬಂದು ಕಣ್ವಮುನಿಯನ್ನು ಕುರಿತು ಇದೇ ಪ್ರಶ್ನೆಯನ್ನು ಮಾಡಿದನು. "ನೀನು ಸ್ತ್ರೀಸಂಬಂಧವೇ ಇಲ್ಲದ ಊರ್ಧ್ವರೇತಸ್ಸೆನಿಸಿಕೊಂಡಿರುವಾಗ ಈ ಶಕುಂತಳೆಯು ನಿನ್ನ ಮಗಳೆಂಬುದು ಹೇಗೆ?" ಎಂದು ಅವನು ಕೇಳಿದುದಕ್ಕೆ, ನನ್ನ ತಂದೆಯು ಹೇಳಿದ ಉತ್ತರವನ್ನೇ ನಾನೂ ನಿನಗೆ ತಿಳಿಸುವೆನು. ಮಹರ್ಷಿಯನ್ನು ಕುರಿತು ನನ್ನ ತಂದೆಯು "ಓ ಬ್ರಾಹ್ಮಣೋತ್ತಮಾ! ಕೇಳು! ಪೂರ್ವದಲ್ಲಿ ವಿಶ್ವಾಮಿತ್ರನು ಒಂದು ತೊಡ್ಡ ತಪಸ್ಸನ್ನು ಮಾಡುತಿದ್ದನು. ಆಗ ಅವನ ತಪೋಜ್ವಾಲೆಯಿಂದ ಇಂದ್ರಾದಿದೇವತೆಗಳೆಲ್ಲರೂ ತತ್ತಳಿಸಿ ಹೋದರು. ಆಗ ವಿಶ್ವಾಮಿತ್ರನು ತನ್ನ ತಪಸ್ಸಿನಿಂದ ತನ್ನನ್ನು

ಪದವಿಯಿಂದ ತಪ್ಪಿಸಿಬಿಡುವನೆಂದು ಇಂದ್ರನಿಗೆ ಭಯವುಂಟಾಯಿತು, ಆಗ ಅವನು ಮೇನಕೆಯೆಂಬ ಅಪ್ಸರಸ್ತ್ರೀಯನ್ನು ಕರೆದು “ ಎಲೆ ಮೇನಕೆ! ಅಪ್ಸರಸ್ತ್ರೀಯರಲ್ಲಿ ನೀನು ಗುಣದಲ್ಲಿಯೂ, ರೂಪದಲ್ಲಿಯೂ ಮೇಲೆನಿಸಿಕೊಂಡಿರುವೆ. ನನ್ನ ಶ್ರೇಯಸ್ಸಿಗಾಗಿ ಈಗ ನೀನು ನಾನು ಹೇಳುವ ಕಾರ್ಯವನ್ನು ನಡೆಸಿಕೊಡಬೇಕು. ಅದೋ! ಮಹಾತಪಸ್ವಿಯಾದ ವಿಶ್ವಾಮಿತ್ರನೆಂಬ ಮಹರ್ಷಿಯು ಘೋರವಾದ ತಪಸ್ಸನ್ನು ಹಿಡಿದು, ನನ್ನ ಮನಸ್ಸನ್ನು ನಡುಗಿಸುತ್ತಿರುವನು ಅವನು ತೇಜಸ್ಸಿನಲ್ಲಿ ಸೂರ್ಯನಿಗೆ ಸಮಾನನು ಆದುದರಿಂದ, ಆ ತಪಸ್ಸಿನಿಂದ ಅವನನ್ನು ತಪ್ಪಿಸುವ ಭಾರವು ನಿನ್ನದು. ಅವನಾದರೋ ಮನಸ್ಸನ್ನು ನಿಗ್ರಹಿಸಿದವನು! ಯಾರಿಂದಲೂ ಕದಲಿಸಲಾರದವನು! ಉಗ್ರತಪಸ್ಸಿನಲ್ಲಿರುವ ಆ ಮಹರ್ಷಿಯು ನನ್ನನ್ನು ನನ್ನ ಪದವಿಯಿಂದ ತಪ್ಪಿಸುವುದರಲ್ಲಿ ಸಂಶಯವಿಲ್ಲ ಆದುದರಿಂದ ಈಗಲೇ ನೀನು ಅವನಲ್ಲಿಗೆ ಹೋಗಿ, ನಿನ್ನ ರೂಪದಿಂದ ಅವನನ್ನು ಮರುಳುಗೊಳಿಸಿ, ಅವನ ತಪಸ್ಸಿಗೆ ವಿಘ್ನವನ್ನುಂಟುಮಾಡು. ನನ್ನ ಕ್ಷೇಮಕ್ಕಾಗಿ ನನಗೆ ಅತ್ಯಂತ ಪ್ರಿಯವಾದ ಈ ಕಾರ್ಯವನ್ನು ಮಾಡಿಯೇ ತೀರಬೇಕು ನಿನ್ನ ರೂಪಯೌವನಗಳು! ನಿನ್ನ ಸವಿಮಾತುಗಳು! ನಿನ್ನ ಮುಗುಳ್ನಗೆ! ನಿನ್ನ ಹಾವಭಾವವಿಲಾಸಗಳು! ಇವೆಲ್ಲವುಗಳಿಂದ ನೀನು ಅವನನ್ನು ಮೋಹಗೊಳಿಸಿ, ಅವನು ತನ್ನ ತಪಸ್ಸಿನಿಂದ ಹಿಂಜರಿಯುವಂತೆ ಮಾಡು” ಎಂದನು. ಅದಕ್ಕೆ ಮೇನಕೆಯು “ದೇವೇಂದ್ರಾ! ಈ ಕಾರ್ಯವು ನನ್ನಿಂದ ಹೇಗೆತಾನೇ ಸಾಧ್ಯವು? ಆ ಮಹರ್ಷಿಯಾದರೋ ಮಹಾತೇಜಸ್ವಿ! ಮಹಾತಪಸ್ವಿ! ಅಲ್ಲದೆ ಅವನು ಬಹಳ ಕೋಪಸ್ವಭಾವವುಳ್ಳವನೆಂಬುದನ್ನು ನೀನೂ ಚೆನ್ನಾಗಿ ಬಲ್ಲೆ. ಅವನ ತೇಜಸ್ಸಿಗೂ, ಅವನ ತಪಸ್ಸಿಗೂ, ಅವನ ಕೋಪಕ್ಕೂ ನೀನೇ ಹೀಗೆ ಭಯಪಡುತ್ತಿರುವಾಗ. ಕೇವಲ ಅಬಲೆಯಾದ ನಾನು ಹೇಗೆತಾನೇ ಭಯಪಡದಿರಲಿ? ಮಹಾತ್ಮನಾದ ಆ ವಿಶ್ವಾಮಿತ್ರನ ಶಕ್ತಿಯನ್ನು ಅಷ್ಟಿಷ್ಟೆಂದು ಹೇಳಿತೀರದು. ಹಿಂದೆ ಅವನು ಮಹಾತ್ಮನಾದ ವಸಿಷ್ಠನನ್ನು ಅವನ ಪ್ರಿಯಪುತ್ರರಿಂದ ಅಗಲಿಸಿದನು. ತಾನು ಮೊದಲು ಕ್ಷತ್ರಿಯಜಾತಿಯಲ್ಲಿ ಹುಟ್ಟಿ, ತನ್ನ ತಪಸ್ಸಿನಿಂದ ಆಮೇಲೆ ಬ್ರಾಹ್ಮಣನಾದನು. ಅಲ್ಲದೆ, ಅವನು ತನ್ನ ಸ್ನಾನಕ್ಕಾಗಿ

ಜಲಸಮೃದ್ಧಿಯಿಂದ ಕೂಡಿದ ದುರ್ಗಮವಾದ ಮತ್ತು ಪವಿತ್ರವಾದ ನದಿಯೊಂದನ್ನು ಸೃಷ್ಟಿಸಿದನು. ಅದನ್ನೇ ಈಗ ಜನರು ಕೌಶಿಕೀನದಿಯೆಂದು ಹೇಳುವರು. ದೊಡ್ಡ ಬರಗಾಲವು ಬಂದಾಗ ಅಲ್ಲಿಯೇ ಈ ಮಹಾತ್ಮನ ಭಾರ್ಯೆಯನ್ನು ಧರ್ಮಾತ್ಮನೂ, ರಾಜರ್ಷಿಯೂ ಆದ ಮತಂಗನೆಂಬವನು (ತ್ರಿಶಂಕು) ಪೋಷಿಸಿದನು. ಮತ್ತು ಮುಂದೆ ವ್ಯಾಧತ್ವವನ್ನು ಹೊಂದಿದವನೂ ಅವನೇ ! ಆ ಬರಗಾಲವು ಕಳೆದುಹೋದಮೇಲೆ ವಿಶ್ವಾಮಿತ್ರನು ತಿರುಗಿ ಆಶ್ರಮಕ್ಕೆ ಬಂದು, ಆ ನದಿಗೆ ಪಾರೆ (ತುಂಬಿದುದು) ಎಂಬ ಹೆಸರಿಟ್ಟನು. ಮತ್ತು ಆ ಮತಂಗನ ಸಹಾಯಕ್ಕೆ ಮೆಚ್ಚಿ ಅವನಿಂದ ತಾನೇ ಯಾಗವನ್ನು ಮಾಡಿಸಿದನು. ಓ ದೇವೇಂದ್ರಾ ! ಆ ಮಹರ್ಷಿಗೆ ಭಯಪಟ್ಟೆಲ್ಲವೇ ನೀನೂ ಆ ಚಂಡಾಲಯಾಗದಲ್ಲಿಯೂ ಸೋಮರಸವನ್ನು ಪಾನಮಾಡುವುದಕ್ಕಾಗಿ ಹೋದೆ? ಇದಲ್ಲದೆ, ಆತನು ಹಿಂದೆ ಕೋಪದಿಂದ ಹೊಸನಕ್ಷತ್ರಗಳೊಡಗೂಡಿದ ಬೇರೊಂದು ಹೊಸ ಲೋಕವನ್ನೇ ಸೃಷ್ಟಿಸಲಾರಂಭಿಸಿ, ಅದರಲ್ಲಿ ಪ್ರತಿಶ್ರವಣ ಮೊದಲಾದ ಪ್ರತಿನಕ್ಷತ್ರಗಳನ್ನೆಲ್ಲ ಸೃಷ್ಟಿಸಿಟ್ಟನು. ಆ ವಿಶ್ವಾಮಿತ್ರನು ಹಿಂದೆ ತ್ರಿಶಂಕುವು ತನ್ನ ಗುರುವಿನ ಶಾಪದಿಂದ ಚಂಡಾಲನಾದಾಗ, ಅವನಿಗೆ ತಾನೇ ಆಶ್ರಯವನ್ನು ಕೊಟ್ಟು ರಾಜರ್ಷಿಯಾದ ತಾನು ಬ್ರಹ್ಮರ್ಷಿಯಾದ ವಸಿಷ್ಠನ ಶಾಪವನ್ನೇ ತಪ್ಪಿಸಿದನೆಂದರೆ, ಅದರಿಂದ ಬ್ರಹ್ಮಕುಲಕ್ಕೇ ದೊಡ್ಡ ಅವಮಾನವೆಂದು ಹೆದರಿ, ದೇವತೆಗಳು ಬಂದು ಆ ತ್ರಿಶಂಕುವಿನ ಯಾಗಸಾಧನೆಗಳನ್ನೆಲ್ಲಾ ಕೆಡಿಸಿದರಲ್ಲವೆ? ಓ ಮಹೇಂದ್ರಾ! ಮಹಾತೇಜಸ್ವಿಯಾದ ವಿಶ್ವಾಮಿತ್ರನಾದರೋ ಬೇರೆ ಯಜ್ಞಸಾಮಗ್ರಿಗಳನ್ನು ಆಗಲೇ ಸೃಷ್ಟಿಸಿ, ತನ್ನಲ್ಲಿ ಮರೆಹೊಕ್ಕ ತ್ರಿಶಂಕುವನ್ನು ಆಗಲೇ ಸ್ವರ್ಗಕ್ಕೇರಿಸಿಬಿಟ್ಟನು. ಇಂತಹ ಅದ್ಭುತಕಾರ್ಯವುಳ್ಳ ಆ ವಿಶ್ವಾಮಿತ್ರನಿಗೆ ನಾನು ಹೇಗೆ ಹೆದರದಿರಲಿ? ನನಗೆ ಭಯವಾಗುವುದು. ಪ್ರಭೂ ! ಆ ವಿಶ್ವಾಮಿತ್ರನ ಕೋಪಾಗ್ನಿಯಿಂದ ನನ್ನನ್ನು ಸುಡಿಸುವುದಕ್ಕೆ ಯತ್ನಿಸಬೇಡ. ಬೇರೇನಾದರೂ ಕಾರ್ಯವಿದ್ದರೆ ಆಜ್ಞಾಪಿಸು. ಆ ವಿಶ್ವಾಮಿತ್ರನು ತನ್ನ ತೇಜಸ್ಸಿನಿಂದ ಲೋಕಗಳನ್ನೇ ದಹಿಸಬಲ್ಲನು. ಭೂಮಿಯನ್ನು ನಡುಗಿಸಬಲ್ಲನು. ಮಹಾಮೇರುಪರ್ವತವನ್ನೂ ಉಡುಗಿಸಬಲ್ಲನು. ದಿಕ್ಕುಗಳನ್ನೆಲ್ಲಾ ತಾರುಮಾ

ರಾಗಿ ಹೊರಳಿಸಬಲ್ಲನು. ಅಂತಹ ಮಹಾತಪಸ್ವಿಯೆನಿಸಿ, ಅಗ್ನಿಯಂತೆ ಜ್ವಲಿಸುತ್ತಿರುವ ಮತ್ತು ಜಿತೇಂದ್ರಿಯನಾದ ಅಂತಹ ಮಹರ್ಷಿಯನ್ನು ನನ್ನಂತೆ ಅಬಲೆಯಾದ ಹೆಂಗಸು ಮುಟ್ಟಿ ಬದುಕುವುದುಂಟೆ? ಬೆಂಕಿಯೇ ಮುಖವಾಗಿಯೂ, ಸೂರ್ಯಚಂದ್ರರೇ ಕಣ್ಣಿನ ಪಾಪೆಗಳಾಗಿಯೂ, ಕಾಲನೇ ನಾಲಗೆಯಾಗಿಯೂ ಉಳ್ಳ ಅಂತಹ ತೇಜಸ್ವಿಯನ್ನು ಸ್ತ್ರೀಯಾದ ನಾನು ಹೇಗೆತಾನೇ ಸ್ಪರ್ಶಿಸಬಲ್ಲೆನು? ಯಮನೂ, ಸೋಮನೂ, ಬೇರೆ ಎಲ್ಲಾ ಮಹರ್ಷಿಗಳೂ, ಸಾಧ್ಯರೂ, ವಿಶ್ವೇದೇವತೆಗಳೂ, ವಾಲಖಿಲ್ಯರೂ, ಇವರೆಲ್ಲರೂ ಯಾವನ ಪ್ರಭಾವಕ್ಕೆ ಭಯಪಟ್ಟು ನಡುಗುತ್ತಿರುವರೋ, ಅಂತವನ ವಿಷಯದಲ್ಲಿ ಹೆಂಗಸಾದ ನಾನು ಹೇಗೆತಾನೇ ಭಯಪಡದಿರಲಿ! ಆದರೆ, ಓ ಸುರೇಂದ್ರಾ! ನಿನ್ನ ಆಜ್ಞೆಯನ್ನು ನಾನು ಮೀರುವುದಕ್ಕೂ ಇಲ್ಲ. ಆ ಋಷಿಯ ಸಮೀಪಕ್ಕೆ ಹೋಗುವುದಕ್ಕೂ ಇಲ್ಲ. ಇದಕ್ಕೇನು ಮಾಡಲಿ? ಓ ದೇವರಾಜಾ! ನಾನು ಅವನಲ್ಲಿಗೆ ಹೋಗಲು ಅಡ್ಡಿಯಿಲ್ಲ. ಆದರೆ, ಅಲ್ಲಿ ನನ್ನ ರಕ್ಷಣೆಗೆ ಏನಾದರೂ ಉಪಾಯವನ್ನು ಚಿಂತಿಸು. ನಿನ್ನ ಕಾರ್ಯವು ಮುಗಿಯುವವರೆಗಾದರೂ ಅಲ್ಲಿ ನಾನು ಬದುಕಿರುವುದಕ್ಕೆ ಮಾರ್ಗವನ್ನು ಯೋಚಿಸು. ಓ ಮಹೇಂದ್ರಾ! ಇದಕ್ಕೆ ನಾನೇ ಒಂದು ಉಪಾಯವನ್ನು ತಿಳಿಸುವೆನು. ನಾನು ಆ ವಿಶ್ವಾಮಿತ್ರನ ಬಳಿಗೆ ಹೋಗಿ, ಅವನ ಮುಂದೆ ಸಂಚರಿಸುತ್ತಿರುವಾಗ, ವಾಯುದೇವನು ಬಂದು ನನ್ನ ಮೈಮೇಲಿನ ಬಟ್ಟೆಯನ್ನು ಹಾರಿಸಿಬಿಡಲಿ! ನನ್ನ ಶರೀರವೆಲ್ಲ ಅವನ ಕಣ್ಣಿಗೆ ಬೀಳುವಂತೆ ಮಾಡಲಿ. ಅದೇ ಸಮಯದಲ್ಲಿ ಮನ್ಮಥನೂ ವಿಶ್ವಾಮಿತ್ರನ ಮನಸ್ಸನ್ನು ಕದಲಿಸಿ, ನಿನ್ನ ಕಾರ್ಯಕ್ಕೆ ಸಹಾಯಕನಾಗಲಿ! ನಾನು ಆ ವಿಶ್ವಾಮಿತ್ರನ ಮನಸ್ಸನ್ನು ಮೋಹಗೊಳಿಸುವುದಕ್ಕಾಗಿ ಹೋದಾಗ, ಸಮೀಪದ ವನದಿಂದ ಒಳ್ಳೇ ಸುಗಂಧಮಾರುತವು ಅವನಮೇಲೆ ಬೀಸಲಿ! ಹೀಗೆ ನೀನು ಅವರವರಿಗೆ ಆಯಾ ಕಾರ್ಯಗಳನ್ನು ನಿಯಮಿಸಿ ಕಳುಹಿಸಬೇಕು" ಎಂದಳು. ದೇವೇಂದ್ರನು ಹಾಗೆಯೇ ಆಗಲೆಂದು ಸಮ್ಮತಿಸಲು, ಮೇನಕೆಯು ವಿಶ್ವಾಮಿತ್ರಾಶ್ರಮಕ್ಕೆ ಹೊರಟಳು.

ಇದು ತೊಂಭತ್ತೆರಡನೆಯ ಅಧ್ಯಾಯವು.



## ವಿಶ್ವಾಮಿತ್ರನಿಂದ ಮೇನಕೆಯಲ್ಲಿ ಶಕುಂತಳೆಯು ಹುಟ್ಟಿದ ವೃತ್ತಾಂತವು.

ಒಡನೆ ದೇವೇಂದ್ರನು ವಾಯುವಿಗೆ ಈ ವಿಚಾರವನ್ನು ತಿಳಿಸಲು, ವಾಯುವು ಆ ಮೇನಕೆಯನ್ನು ಹಿಂಬಾಲಿಸಿದನು ಮೇನಕೆಯು ಅತ್ಯಂತ ಭಯದೊಡನೆ ವಿಶ್ವಾಮಿತ್ರಾಶ್ರಮಕ್ಕೆ ಬಂದಳು. ಅಲ್ಲಿ ಘೋರತಪಸ್ಸಿನಿಂದ ಉರಿಯುವಂತಿರುವ ಆ ವಿಶ್ವಾಮಿತ್ರನನ್ನು ನೋಡಿದಳು. ಮುಂದೆ ಬಂದು ಅವನಿಗೆ ನಮಸ್ಕರಿಸಿ, ಅವನ ಮುಂಭಾಗದಲ್ಲಿಯೇ ಅತ್ತಿತ್ತ ಸುಳಿದಾಡುತಿದ್ದಳು. ಇಷ್ಟರಲ್ಲಿಯೇ ವೇಗವುಳ್ಳ ಒಂದು ಗಾಳಿಯು ಬೀಸಿತು. ಆ ಗಾಳಿಯಿಂದ ಇವಳು ಉಟ್ಟಿದ್ದ ಚಂದ್ರಸಮಾನವಾದ ದುಕೂಲವು ಹಾರಿಹೋಯಿತು. ಒಡನೆಯೇ ಆ ಮೇನಕೆಯು ನಾಚಿದವಳಂತೆ ಭೂಮಿಯಲ್ಲಿ ಕುಳಿತುಕೊಂಡು, ಆ ಸೀರೆಯನ್ನು ತೆಗೆದುಕೊಳ್ಳುವುದಕ್ಕೆ ಪ್ರಯತ್ನಿಸುವಂತೆ ನಟಿಸಿದಳು. ಬಹಳ ಲಜ್ಜೆಯಿಂದ ಗಾಳಿಯನ್ನು ನಿಂದಿಸುವಂತೆಯೂ ನಟಿಸಿದಳು. ಅಗ್ನಿಸಮಾನವಾದ ತೇಜಸ್ಸುಳ್ಳ ಆ ವಿಶ್ವಾಮಿತ್ರನ ಕಣ್ಣಿಗೆ ಬೀಳುವಂತೆ ಮೇನಕೆಯು ಈ ನಟನೆಗಳನ್ನೆಲ್ಲ ಮಾಡಲು, ಅವಳು ಕಷ್ಟಪಡುವ ರೀತಿಯನ್ನು ನೋಡಿ ವಿಶ್ವಾಮಿತ್ರನಿಗೆ ಅವಳಲ್ಲಿ ಕನಿಕರವು ಹುಟ್ಟಿತು. ತನ್ನ ಸೀರೆಗಾಗಿ ಆತುರಪಡುತ್ತ ಅತ್ತಿತ್ತ ನೋಡುತ್ತಿರುವ ಆಕೆಯ ಕಷ್ಟವನ್ನು ಆ ವಿಶ್ವಾಮಿತ್ರನು ಕಣ್ಣಿಟ್ಟು ನೋಡಿದನು. ಅವಳ ಮೈಮೇಲೆ ಬಟ್ಟೆಯಿಲ್ಲದಿರುವುದನ್ನೂ, ಅನನ್ಯಾದೃಶವಾದ ಅವಳ ರೂಪಯೌವನಗಳ ಸೊಗಸನ್ನೂ, ಅವಳ ದೇಹಲಾವಣ್ಯವನ್ನು ನೋಡಿದ ಮೇಲೆ ಅವನಿಗೆ ಮನಸ್ಸು ಕದಲಿತು. ಹೇಗಾದರೂ ಅವಳೊಡನೆ ಸಂಬಂಧವನ್ನು ಮಾಡಬೇಕೆಂಬ ಆಸೆ ಹುಟ್ಟಿತು ಮಹರ್ಷಿಯು ಕಾಮಕ್ಕೊಳಗಾದನು. ಒಡನೆಯೇ ತನ್ನ ಆಶೆಯನ್ನು ಅವಳಿಗೂ ತಿಳಿಸಿದನು. ಅದನ್ನೇ ನಿರೀಕ್ಷಿಸುತಿದ್ದ ಮೇನಕೆಯು ಆ ಕ್ಷಣವೇ ಸಮ್ಮತಿಸಿದಳು. ಇಬ್ಬರೂ ಕೆಲವು ಕಾಲದವರೆಗೆ ಸಂತೋಷದಿಂದ ವಿಹರಿಸುತಿದ್ದರು. ಹೀಗೆ ಸಾವಿರವರ್ಷಗಳು ಕಳೆದುಹೋದರೂ ಆ ಮಹಾನಂದದಲ್ಲಿ ವಿಶ್ವಾಮಿತ್ರನಿಗೆ ಅಷ್ಟು ದೀರ್ಘಕಾಲವು ಒಂದು ದಿವಸದಂತೆ ಕಳೆದುಹೋಯಿತು. ಆ ಮಹರ್ಷಿಯು ಜಿತೇಂದ್ರಿಯನಾಗಿದ್ದರೂ, ಕಾಮಕ್ರೋಧಗಳನ್ನು ಜಯಿಸ

ಲಾರದೆ, ಬಹುಕಾಲದಿಂದ ತಾನು ಸಂಪಾದಿಸಿದ ತಪೋಬಲವನ್ನೆಲ್ಲ ಕಳೆದುಕೊಂಡನು. ಅವನ ತಪಸ್ಸೆಲ್ಲವೂ ನಷ್ಟವಾದುದರಿಂದ, ಮೋಹ ವೆಂಬುದು ಆ ಮಹರ್ಷಿಯ ಮನಸ್ಸನ್ನು ಬಲವಾಗಿ ಆವರಿಸಿಕೊಂಡಿತು. ಮೊದಲೇ ಕೋಪಸ್ವಭಾವವುಳ್ಳ ಆ ಮಹರ್ಷಿಯು, ಸ್ತ್ರೀಮೋಹದಿಂದ ಮತ್ತಷ್ಟು ಬುದ್ಧಿಗೆಟ್ಟನು. ಆಮೇಲೆ ಅವನು ಆಹಾರಾರ್ಥವಾಗಿ ಫಲಮೂಲಗಳನ್ನು ತಿಂದು, ನೀರಿನ ಶಬ್ದವಾಗುವಹಾಗೆ ನದಿಯಲ್ಲಿ ಕಾಲನ್ನಿಟ್ಟು ಜಲ ಮಾರ್ಗವಾಗಿ ನಡೆದೇ ಆ ನದಿಯೊಳಗಿನ ತಿಟ್ಟಿನಮೇಲಿದ್ದ ತನ್ನ ಆಶ್ರಮವನ್ನು ಸೇರಿದನು.

ತಾನೂ ಅಲ್ಲಿಂದ ತಪ್ಪಿಸಿಹೋಗಬೇಕೆಂದಿದ್ದ ಆ ಮೇನಕೆಗೆ, ನೀರಿನಲ್ಲಿ ನಡೆದ ಶಬ್ದವು ಕೇಳಿಬಂದಿತು. ಆಗ ಅವಳು ತನ್ನಲ್ಲಿ ತಾನು “ತಪೋಮಹಿಮೆಯುಳ್ಳ ಈ ಮಹರ್ಷಿಯಾದರೋ ಆಕಾಶಮಾರ್ಗದಿಂದಲೇ ಆ ದ್ವೀಪಕ್ಕೆ ಹೋಗಿಬರುತಿದ್ದವನು. ಈಗ ಈ ಮಹರ್ಷಿಯ ತಪಶ್ಶಕ್ತಿಯು ತಗ್ಗಿ ಹೋಯಿತೆಂಬುದಕ್ಕೆ ಇದೇ ಗುರುತಾಗಿ ಕಾಣಿಸುತ್ತಿದೆ. ಇನ್ನು ಭಯವಿಲ್ಲ. ಈಗಲೇ ನಾನು ಈ ವನವನ್ನು ಬಿಟ್ಟುಹೋಗಬೇಕಾದ ಭಯವಿಲ್ಲ” ಎಂದು ಯೋಚಿಸುತ್ತ, ಆ ಮೇನಕೆಯು ಅಲ್ಲಿಯೇ ಇರುತಿದ್ದಳು. ಆ ಮೇಲೆ ಸ್ವಲ್ಪದಿವಸಗಳಲ್ಲಿ ಅವಳು ಋತುಸ್ನಾನಮಾಡಿಬಂದು, ಕಾಮದಿಂದ ಮನಸ್ಸು ಕದಲಿದ್ದ ಆ ಮಹರ್ಷಿಗೆ ತಿರುಗಿ ಕಾಣಿಸಿಕೊಂಡಳು. ವಿಶ್ವಾಮಿತ್ರನು ಅವಳಲ್ಲಿ ಮೋಹದಿಂದ ಆ ಹಿಮವತ್ಪರ್ವತದ ತಪ್ಪಲಲ್ಲಿ ಮಾಲಿನೀನದಿಯ ತೀರಪ್ರದೇಶಗಳಲ್ಲಿ ಅವಳೊಡನೆ ವಿಹರಿಸುತಿದ್ದನು. ಅವನಿಗೆ ಆ ಮೇನಕೆಯಲ್ಲಿ ಕನ್ಯೆಯೊಬ್ಬಳು ಹುಟ್ಟಿದಳು. ಆ ಸ್ತ್ರೀಶಿಶುವಿನ ಸೌಂದರ್ಯವನ್ನು ಕೇಳಬೇಕೆ? ದೇವಗರ್ಭದಿಂದ ಹುಟ್ಟಿದ ಆ ಶಿಶುವು ದಿವ್ಯರೂಪಲಾವಣ್ಯಗಳಿಂದ ಶೋಭಿಸುತ್ತಿರುವುದು. ಸಹಜವಾದ ಸುವರ್ಣಾಭರಣಗಳಿಂದಲೂ ಅಲಂಕೃತವಾಗಿರುವುದು. ಹೀಗಿರುವಾಗ ಆ ಮಗುವನ್ನು ಮೇನಕೆಯು ಅಲ್ಲಿಯೇ ಮೃದುವಾದ ಒಂದು ಹಾಸಿಗೆಯ ಮೇಲೆ ಮಲಗಿಸಿ, ಆ ಮಗುವನ್ನು ಕುರಿತು “ಉಗ್ರತಪಸ್ಸುಳ್ಳ ಮಹರ್ಷಿಯ ತೇಜಸ್ಸೇ ನೀನಾಗಿರುವೆ! ಎಲೆ ಕನ್ಯೆ! ಇನ್ನು ನಾನು ಸ್ವರ್ಗಕ್ಕೆ

ರಡುವೆನು. ನಾನು ಈ ಮಹರ್ಷಿಯುಬಳಿಗೆ ದೇವತೆಗಳ ಕಾರ್ಯಾ
ರಾಗಿ ಬಂದವಳು. ನನ್ನ ಕಾರ್ಯವು ನೆರವೇರಿತು. ಇನ್ನು ನಾನು
ಗುವೆನು '' ಎಂದು ಹೇಳಿ, ಆಗಲೇ ಹುಟ್ಟಿದ ಆ ಕನ್ಯೆಯನ್ನು ಮಾಲಿ
ನದಿಯ ಪಕ್ಕದಲ್ಲಿಯೇ ಬಿಟ್ಟು, ತಾನು ಇಂದ್ರನ ಆಸ್ಥಾನಕ್ಕೆ ಹೊರ
ಹೋದಳು. ಈ ಮಗುವಾದರೋ ಸಿಂಹಗಳಿಂದಲೂ, ಹುಲಿಗಳಿಂದ
ಭಯಂಕರವಾಗಿ ನಿರ್ಜನವಾಗಿದ್ದ ಆರಣ್ಯದಲ್ಲಿ ಒಂಟಿಯಾಗಿ ಮಲ
ತು. ಆಗ ಆ ವನದಲ್ಲಿದ್ದ ಪಕ್ಷಿಗಳೆಲ್ಲವೂ ಆ ಮಗುವನ್ನು ಸುತ್ತಿ
ತ್ತಿ ಕುಳಿತು, ಅದಕ್ಕೆ ಬೇಕಾದ ಉಪಚಾರಗಳನ್ನು ಮಾಡುತಿದ್ದುವು.
ಅರಣ್ಯದಲ್ಲಿರುವ ಮಾಂಸಭಕ್ಷಕಗಳಾದ ಕ್ರೂರಮೃಗಗಳಿಂದ ಆ ಮಗು
ಅಪಾಯವು ಬಾರದಂತೆ, ಆ ಮಗುವಿನ ಸುತ್ತಲೂ ಆ ಪಕ್ಷಿಗಳೇ
ಲಾಗಿದ್ದು, ಬಹಳ ಎಚ್ಚರಿಕೆಯಿಂದ ಆ ಮಗುವನ್ನು ಕಾಪಾಡುತಿ
ವು. ಓ ಮಹರ್ಷೀ! ಈ ಸಮಯಕ್ಕೆ ಸರಿಯಾಗಿ ನಾನು (ಕಣ್ವ)
ನಾರ್ಥವಾಗಿ ನದಿಗೆ ಹೋಗುತಿದ್ದೆನು. ನಡುವೆ ನಿರ್ಜನವಾದ ಕಾಡಿ
ಸಣ್ಣ ಮಗುವು ಮಲಗಿರುವುದನ್ನೂ, ಆದರ ಸುತ್ತಲೂ ಅನೇಕ
ಗಳು ಕಾವಲಾಗಿ ಕುಳಿತಿರುವುದನ್ನೂ ಕಂಡೆನು. ನಾನು ಹೋ
ಡನೆ, ಕೆಲವು ಹಕ್ಕಿಗಳು ಥಟ್ಟನೆ ಬಂದು, ನನ್ನ ಪಾದಗಳಮೇಲೆ
ದ್ದು ಇಂಪಾದ ಸ್ವರದಿಂದ ಕಿಲಕಿಲಧ್ವನಿಮಾಡುವ ನೆವದಿಂದ '' ಓ
ರಾತ್ಮಾ! ಈ ಮಗುವು ವಿಶ್ವಾಮಿತ್ರನಿಂದ ಹುಟ್ಟಿದ ಕನ್ಯೆ. ಇನ
ು ನೀನು ನಿನ್ನ ಆಶ್ರಮಕ್ಕೆ ಎತ್ತಿಕೊಂಡು ಹೋಗಿ ಪೋಷಿಸಬೇಕು.
ಮಗುವನ್ನು ನೀನು ನಿನ್ನಲ್ಲಿ ನ್ಯಾಸರೂಪವಾಗಿಟ್ಟುಕೊಂಡು ಬೆಳೆಸು.
ಬ್ರಾಹ್ಮಣೋತ್ತಮಾ! ನಿನ್ನ ಮಿತ್ರನಾದ ವಿಶ್ವಾಮಿತ್ರನು ತನ್ನ ಕಾಮ
ೀಧಗಳನ್ನು ಜಯಿಸಲಾರದೆ, ಈ ಕಾರ್ಯವನ್ನು ಮಾಡಿ ಕೌಶಿಕೀ
ಗೆ ಹೊರಟುಹೋದನು. ನೀನು ಪರಮ ದಯಾಳುವಾದುದರಿಂದ
ನ ಮಗಳನ್ನು ನಿನ್ನಲ್ಲಿಟ್ಟುಕೊಂಡು ಪೋಷಿಸಬೇಕು '' ಎಂದುವು.
ಬ್ರಾಹ್ಮಣೋತ್ತಮಾ! ನಾನು ಪಕ್ಷಿಗಳ ಭಾಷೆಗಳನ್ನೆಲ್ಲ ಚೆನ್ನಾಗಿ ತಿಳಿ
ಲ್ಲವನು. ಎಲ್ಲಾ ಭೂತಗಳಲ್ಲಿಯೂ ಕನಿಕರವುಳ್ಳವನು. ಆದು
ದ ಒಡನೆಯೇ ಆ ಮಗುವನ್ನು ಎತ್ತಿಕೊಂಡು ಬಂದು, ಮನೆ

ಯಲ್ಲಿಟ್ಟು ಮಗಳಂತೆ ಭಾವಿಸಿ ಪೋಷಿಸಿದೆನು. ತನ್ನ ಜನ್ಮವನ್ನು ಕೊಟ್ಟವನು, ತನ್ನ ಪ್ರಾಣವನ್ನು ಕಾಪಾಡಿದವನು, ತನಗೆ ಅನ್ನವನ್ನಿಕ್ಕಿ ಪೋಷಿಸಿದವನು, ಈ ಮೂವರೂ ತಂದೆಗಳೆಂದೇ ಧರ್ಮಶಾಸ್ತ್ರದ ನಿರ್ಣಯವು. ಆದುದರಿಂದ ನಾನು ಪುತ್ರಿಯಂತೆ ಭಾವಿಸಿ, ಅವಳನ್ನು ತಂದು ಪೋಷಿಸುತಿದ್ದೆನು. ನಿರ್ಜನವಾದ ಕಾಡಿನಲ್ಲಿ ಪಕ್ಷಿಗಳಿಂದ (ಶಕುಂತಗಳಿಂದ) ಪೋಷಿಸಲ್ಪಟ್ಟ ಆಕೆಗೆ ಶಕುಂತಳೆಯೆಂದೇ ಹೆಸರಿಟ್ಟು, ನಾಮಕರಣವನ್ನು ಮಾಡಿದೆನು. ಶಕುಂತಳೆಯು ನನ್ನ ಮಗಳೆನಿಸಿದುದಕ್ಕೆ ಇದೇ ಕಾರಣವು. ಈ ಶಕುಂತಳೆಯೂ ನನ್ನನ್ನು ತಂದೆಯೆಂದೇ ಭಾವಿಸಿರುವಳು" ಎಂದು * ನನ್ನ ತಂದೆಯಾದ ಕಣ್ವನು ನನ್ನಿದಿರಾಗಿಯೇ ಆ ಬ್ರಾಹ್ಮಣನಿಗೆ ಹೇಳಿದ ವೃತ್ತಾಂತವನ್ನು ನಾನು ಕೇಳಿದೆನು. ಓ ಮಹಾರಾಜಾ! ನಾನೇನೋ ನನ್ನ ಸ್ವಂತ ತಂದೆಯ ಮುಖವನ್ನು ನೋಡಿದವಳಲ್ಲ. ಈ ಕಣ್ವಮಹರ್ಷಿಯನ್ನೇ ನಾನು ತಂದೆಯನ್ನಾಗಿ ತಿಳಿದು, ಅವನ ಪೋಷಣೆಯಲ್ಲಿರುವೆನು" ಎಂದಳು.

ಇದು ತೊಂಭತ್ತುಮೂರನೆಯ ಅಧ್ಯಾಯವು.



ದುಷ್ಯಂತನು ಗಾಂಧರ್ವವಿವಾಹದಿಂದ ಶಕುಂತಳೆಯನ್ನು ವಿವಾಹವಾದುದು. ಕಣ್ವಮುನಿಯು ತಿರುಗಿ ಆಶ್ರಮಕ್ಕೆ ಬಂದಮೇಲೆ, ಶಕುಂತಳೆಗೂ, ಕಣ್ವನಿಗೂ ನಡೆದ ಸಂಭಾಷಣೆಗಳು, ಕಣ್ವನು ಶಕುಂತಳೆಗೆ ವರಗಳನ್ನು ಕೊಟ್ಟುದು.

ಆಮೇಲೆ ದುಷ್ಯಂತನು ಶಕುಂತಳೆಯನ್ನು ಕುರಿತು "ಎಲೆ ಭದ್ರೆ ಹಾಗಿದ್ದರೆ ನೀನು ರಾಜಪುತ್ರಿಯೆಂದು ಈಗ ನಿಶ್ಚಿತವಾಯಿತು. ಇನ್ನು

---

* ಇದುವರೆಗೆ ಹೇಳಿದ ಮಾತು ಶಕುಂತಳೆಯ ಮಾತೇ ಆಗಿದ್ದರೂ, ಅವಳು ತನ್ನ ತಂದೆಯು ಬೇರೊಬ್ಬ ಬ್ರಾಹ್ಮಣನಿಗೆ ಹೇಳಿದ ತನ್ನ ಕಥೆಯನ್ನು ಅವನು ಹೇಳಿದಂತೆಯೆ ಅನುವಾದಿಸಿದುದಾಗಿ ತಿಳಿಯಬೇಕು.

ನೀನು ಕ್ಷತ್ರಿಯನಾದ ನನ್ನ ಪತ್ನಿಯಾಗುವುದಕ್ಕೆ ತಡೆಯಿಲ್ಲ. ಎಲೆ ಮಂಗಳಾಂಗಿ! ನಿನಗೆ ನನ್ನಿಂದ ಆಗಬೇಕಾದುದೇನಿದ್ದರೂ ಹೇಳು. ಸುವರ್ಣಮಾಲಿಕೆಗಳು! ಉತ್ತಮ ವಸ್ತ್ರಗಳು! ಕಿವಿಯೋಲೆಗಳು! ಕೈಬಳೆಗಳು! ನಗರಗಳಲ್ಲಿ ನಿರ್ಮಿತಗಳಾದ ಮತ್ತು ಶುದ್ಧವಾದ ಮಣಿರತ್ನಗಳು! ಇವನ್ನೆಲ್ಲ ಕೊಡುವೆನು. ವರಹಗಳು, ಅಜಿನಗಳು, ಇವನ್ನೆಲ್ಲ ಕೊಡುವೆನು. ಎಲೆ ಶೋಭನೆ! ಅಷ್ಟೇಕೆ? ನೀನು ನನ್ನ ಪತ್ನಿಯಾದರೆ ನನ್ನ ಸಮಸ್ತ ರಾಜ್ಯವೂ ನಿನ್ನದೇ! ಈಗ ನೀನು ಗಾಂಧರ್ವವಿವಾಹದಿಂದ ನನ್ನನ್ನು ವರಿಸಬಹುದು. ವಿವಾಹಗಳೊಳಗೆಲ್ಲಾ ಗಾಂಧರ್ವವಿವಾಹವು ಶ್ರೇಷ್ಠವೆನ್ನುವರು" ಎಂದನು. ಅದಕ್ಕಾ ಶಕುಂತಳೆಯು "ರಾಜೇಂದ್ರಾ! ನನ್ನ ತಂದೆಯು ಫಲಗಳನ್ನು ತರುವುದಕ್ಕಾಗಿ ಆಶ್ರಮವನ್ನು ಬಿಟ್ಟು ಹೋಗಿರುವನು. ಒಂದು ಮುಹೂರ್ತಕಾಲದವರೆಗೆ ನಿರೀಕ್ಷಿಸು. ಅವನು ಬಂದ ಮೇಲೆ ಆತನೇ ಸಂತೋಷದಿಂದ ನಿನಗೆ ನನ್ನನ್ನು ವಿವಾಹಮಾಡಿ ಕೊಡುವನು. ಆತನೇ ನನಗೆ ಪ್ರಭುವು. ನಾನು ಅವನನ್ನೇ ಪರದೈವವೆಂದು ಭಾವಿಸಿರುವೆನು. ಆ ನನ್ನ ತಂದೆಯು ನನ್ನನ್ನು ಯಾವನಿಗೆ ಕೊಟ್ಟರೆ, ಅವನೇ ನನಗೆ ಪತಿ. ಹೆಣ್ಣುಮಕ್ಕಳನ್ನು ಕನ್ಯಾವಸ್ಥೆಯಲ್ಲಿ ತಂದೆಯೂ, ಯೌವನದಲ್ಲಿ ಪತಿಯೂ, ಮುಪ್ಪಿನಲ್ಲಿ ಮಕ್ಕಳೂ ರಕ್ಷಿಸುವರು. ಆಯಾ ಕಾಲದಲ್ಲಿ ಅವರವರ ರಕ್ಷಣೆಗೊಳಪಟ್ಟ ಸ್ತ್ರೀಯರು, ಅವರ ಇಷ್ಟಾನುಸಾರವಾಗಿ ನಡೆಯಬೇಕೇಹೊರತು, ಸ್ತ್ರೀಯರಿಗೆ ಯಾವಾಗಲೂ ಸ್ವಾತಂತ್ರ್ಯವಿಲ್ಲ. ಹೀಗಿರುವಾಗ ತಪಸ್ವಿಯಾದ ಆ ನನ್ನ ತಂದೆಯನ್ನು ಲಕ್ಷ್ಯಮಾಡದೆ ಅಧರ್ಮದಿಂದ ನಾನು ಹೇಗೆತಾನೇ ನಿನ್ನನ್ನು ವಿವಾಹವಾಗಲು ಸ್ವಾತಂತ್ರ್ಯವನ್ನು ವಹಿಸಲಿ?" ಎಂದಳು. ಆಗ ದುಷ್ಯಂತನು "ಎಲೆ ಕಲ್ಯಾಣಿ! ನೀನು ನಿನ್ನ ತಂದೆಯ ವಿಷಯದಲ್ಲಿ ಹಾಗೆಲ್ಲ ಭಾವಿಸಬಾರದು. ಅವನು ತಪಸ್ಸುಗಳಿಗೆಲ್ಲಾ ನಿಧಿಯೆನಿಸಿದ್ದರೂ, ಶಾಂತಿಯೇ ಸ್ವಭಾವವಾಗಿವುಳ್ಳವನು. ಅವನು ನಿನ್ನ ವಿಷಯದಲ್ಲಿ ಎಂದಿಗೂ ಕೋಪಿಸಲಾರನು" ಎನಲು, ಶಕುಂತಳೆಯು "ಮಹಾರಾಜಾ! ಹಾಗಲ್ಲ! ಬ್ರಾಹ್ಮಣರಿಗೆ ಕೋಪವೇ ಆಯುಧವು. ಅವರು ಶಸ್ತ್ರಗಳನ್ನು ಹಿಡಿಯಬೇಕಾದುದಿಲ್ಲ. ಇಂದ್ರನು ತನ್ನ ವಜ್ರಾಯುಧದಿಂದ ದೈತ್ಯರನ್ನು ಹೇಗೋಹಾಗೆ ಅವರು

ಕೋಪದಿಂದಲೇ ಶತ್ರುಗಳನ್ನು ಕೊಲ್ಲಬಲ್ಲರು. ಅಗ್ನಿಯು ತೇಜಸ್ಸಿನಿಂದ ದಹಿಸುವನು. ಸೂರ್ಯನು ಕಿರಣಗಳಿಂದ ದಹಿಸುವನು. ರಾಜನು ದಂಡ ನೀತಿಯಿಂದ ನಿಗ್ರಹಿಸುವನು. ಬ್ರಾಹ್ಮಣನು ತನ್ನ ಕೋಪದಿಂದಲೇ ದಹಿಸಿಬಿಡುವನು. ಆದುದರಿಂದ ಬ್ರಾಹ್ಮಣರ ಮನಸ್ಸಿಗೆ ಕೋಪವನ್ನುಂಟು ಮಾಡುವುದು ನಮ್ಮಿಬ್ಬರಿಗೂ ಅಪಾಯಕರವು " ಎಂದಳು.

ಆಮೇಲೆ ತಿರುಗಿ ದುಷ್ಯಂತನು " ಎಲೆ ಭದ್ರೆ! ಆ ಮಹರ್ಷಿಯ ವಿಚಾರವನ್ನು ನಾನು ಬಲ್ಲೆನು. ಅವನಿಗೆ ಎಂದಿಗೂ ಕೋಪವುಂಟಾಗದು. ಹೇಗಾದರೂ ನಿನ್ನನ್ನು ವಿವಾಹಮಾಡಿಕೊಳ್ಳಬೇಕೆಂದೇ ನನ್ನ ಆಸೆ. ನಿನಗಾಗಿಯೇ ನಾನು ಇಲ್ಲಿ ಕಾದಿರುವೆನು. ನನ್ನ ಮನಸ್ಸೆಲ್ಲವೂ ನಿನ್ನಲ್ಲಿಯೇ ಸೇರಿರುವುದು. ಮಂಗಳಾಂಗಿ! ಇದಕ್ಕಾಗಿ ನೀನು ಬೇರೆಯಾರನ್ನು ಕೇಳಬೇಕಾಗಿದೆ? ಪ್ರತಿಯೊಬ್ಬನೂ ತಾನೇ ತನಗೆ ಬಂಧು! ತಾನೇ ತನಗೆ ಗತಿ! ತನ್ನನ್ನು ಕೊಟ್ಟುಕೊಳ್ಳುವುದಕ್ಕೂ ತಾನೇ ಸ್ವತಂತ್ರನು. ಆದುದರಿಂದ ನೀನಾಗಿ ಇಷ್ಟಪಟ್ಟು ನನಗೆ ನಿನ್ನನ್ನು ಒಪ್ಪಿಸುವುದರಲ್ಲಿ ಧರ್ಮಹಾನಿಯೇನೂ ಇಲ್ಲ. ಇದು ಧರ್ಮಯುಕ್ತವೆಂದೇ ತಿಳಿ. ಲೋಕದಲ್ಲಿ ಧರ್ಮಶಾಸ್ತ್ರಕ್ಕನುಸಾರವಾಗಿ § ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಆಸುರ, ಗಾಂಧರ್ವ, ರಾಕ್ಷಸ, ಪೈಶಾಚಗಳೆಂಬ ಎಂಟು ಬಗೆಯ ವಿವಾಹಗಳುಂಟು. ಈ ಎಂಟು ಬಗೆಯ ವಿವಾಹಗಳಲ್ಲಿ ಸ್ವಾಯಂಭುವಮನುವು ಆನುಪೂರ್ವಿಯಿಂದ ಕೆಲಕೆಲವು ವಿವಾಹಗಳನ್ನು ಕೆಲಕೆಲವರಿಗೆ ಧರ್ಮ

---

§ ಅಲಂಕೃತ ಕನ್ಯಾದಾನವು ಬ್ರಾಹ್ಮವು. ಯಜ್ಞಸಮಾಪ್ತಿಯಲ್ಲಿ ಋತ್ವಿಕ್ಕುಗಳಿಗೆ ದಕ್ಷಿಣಾರೂಪವಾಗಿ ಕನ್ಯೆಯನ್ನು ಕೊಡುವುದು ದೈವವು. ದಂಪತಿಗಳಿಬ್ಬರೂ ಧರ್ಮವನ್ನು ನಡೆಸಲಿ ಎಂದು ಮನಸ್ಸಂಕಲ್ಪದಿಂದ ದಾನಮಾಡಿ ಬಿಟ್ಟುಬಿಡುವುದು ಪ್ರಾಜಾಪತ್ಯವು. ವರನಿಂದ ಕನ್ಯಾಶುಲ್ಕವಾಗಿ ಎರಡು ಗೋವುಗಳನ್ನು ತೆಗೆದುಕೊಂಡು ಕನ್ಯೆಯನ್ನು ಕೊಡುವುದು ಆರ್ಷವು. ಹೆಚ್ಚು ಹಣವನ್ನು ತೆಗೆದುಕೊಂಡು ಕನ್ಯೆಯನ್ನು ಕೊಡುವುದು ಆಸುರವು. ಕನ್ಯಾವರರಿಬ್ಬರೂ ಅನ್ಯೋನ್ಯ ಸಮ್ಮತಿಯಿಂದ ಸೇರುವುದು ಗಾಂಧರ್ವವು. ಕನ್ಯೆಯನ್ನು ಕದ್ದೊಯ್ಯುವುದು ಪೈಶಾಚವು. ಯುದ್ಧಮಾಡಿ ಕನ್ಯೆಯನ್ನು ಬಲಾತ್ಕಾರದಿಂದ ಎತ್ತಿಕೊಂಡುಹೋಗುವುದು ರಾಕ್ಷಸವು.

ಯುಕ್ತವೆಂದು ನಿರ್ಣಯಿಸಿರುವನು. ಮೊದಲನೆಯ ನಾಲ್ಕು ವಿವಾಹಗಳು ಬ್ರಾಹ್ಮಣನಿಗೆ ಪ್ರಶಸ್ತಗಳು. ಮೊದಲಿನ ಆರು ವಿವಾಹಗಳು ಕ್ಷತ್ರಿಯರಿಗೆ ಧರ್ಮಯುಕ್ತವಾಗಿವೆ. ರಾಜರಿಗೆ ಕೆಲವು ಸಮಯಗಳಲ್ಲಿ ರಾಕ್ಷಸ ವಿವಾಹಗಳೂ ಹೇಳಲ್ಪಟ್ಟಿದೆ. ವೈಶ್ಯಶೂದ್ರರಿಗೆ ಆಸುರ ವಿವಾಹವು ಅಂಗೀಕರಿಸಲ್ಪಟ್ಟಿದೆ. ಮೊದಲನೆಯ ಐದು ಬಗೆಯ ವಿವಾಹಗಳಲ್ಲಿ ಬ್ರಾಹ್ಮ, ದೈವ, ಪ್ರಾಜಾಪತ್ಯಗಳೆಂಬಿವು ಮೂರೂ ಧರ್ಮಯುಕ್ತಗಳೆಂದೂ, ಉಳಿದ ಆರ್ಷ ಮತ್ತು ಆಸುರಗಳೆಂಬೆರಡೂ ಧರ್ಮವಿರುದ್ಧಗಳೆಂದೂ ಹೇಳುವರು. ಏಕೆಂದರೆ, ಇವೆರಡರಲ್ಲಿಯೂ ಕನ್ಯಾಶುಲ್ಕವನ್ನು ತೆಗೆಯುವ ಪದ್ಧತಿಯುಂಟು. ಪೈಶಾಚ ಮತ್ತು ಆಸುರವೆಂಬೀ ಎರಡು ವಿವಾಹಗಳೂ ನಮಗೆ ನಿಷಿದ್ಧಗಳೇ! ಮೇಲೆ ಹೇಳಿದ ಕ್ರಮದಿಂದ ವಿವಾಹವನ್ನು ಮಾಡುವುದರಲ್ಲಿ ಧರ್ಮಕ್ಕೇನೂ ಲೋಪವಿಲ್ಲ. ಕ್ಷತ್ರಿಯರಿಗೆ ಗಾಂಧರ್ವ ರಾಕ್ಷಸಗಳೆರಡೂ ಧರ್ಮಯುಕ್ತವೇ ಆದುದರಿಂದ ನೀನು ಇದಕ್ಕಾಗಿ ಭಯಪಡಬೇಕಾದುದೇ ಇಲ್ಲ. ಈ ಎರಡು ಬಗೆಯ ವಿವಾಹಗಳನ್ನು ಪ್ರತ್ಯೇಕವಾಗಿಯೋ, ಇಲ್ಲವೇ ಎರಡೂ ಸೇರಿದ ಕ್ರಮದಲ್ಲಿಯೋ ನಡೆಸಬಹುದು. ಇದರಲ್ಲಿ ಸಂದೇಹವಿಲ್ಲ. ನಿನ್ನನ್ನು ನಾನೂ ಕಾಮಿಸಿರುವೆನು. ನೀನೂ ನನ್ನನ್ನು ಕಾಮಿಸಿರುವೆ. ಆದುದರಿಂದ ನಾವಿಬ್ಬರೂ ಗಾಂಧರ್ವ ವಿಧಿಯಿಂದ ವಿವಾಹಮಾಡಿಕೊಳ್ಳುವೆವು. ನೀನು ನನಗೆ ಪತ್ನಿಯಾಗು'' ಎಂದನು. ಆದಕ್ಕಾ ಶಕುಂತಳೆಯು '' ಓ ಮಹಾರಾಜಾ! ನೀನು ಹೇಳುವಂತೆ ನಮ್ಮಿಬ್ಬರ ವಿವಾಹವು ಧರ್ಮಯುಕ್ತವಾಗಿಯೇ ಇದ್ದಪಕ್ಷದಲ್ಲಿ, ಮತ್ತು ನನ್ನನ್ನು ನಿನಗೆ ಕೊಡುವುದರಲ್ಲಿ ನಾನೇ ಸ್ವತಂತ್ರಳೆಂಬುದೂ ನಿಜವಾದಪಕ್ಷದಲ್ಲಿ, ನಾನು ನನ್ನನ್ನು ನಿನಗೇ ಒಪ್ಪಿಸುವೆನು. ಆದರೆ, ಹಾಗೆ ನಿನ್ನನ್ನು ವರಿಸುವುದಕ್ಕೆ ಮೊದಲು, ನನ್ನದೊಂದು ನಿರ್ಣಯವುಂಟು. ಅದನ್ನು ನಡೆಸುವುದಾಗಿ ನೀನು ಪ್ರತಿಜ್ಞೆಮಾಡಿಕೊಟ್ಟರೆಮಾತ್ರ ನಾನು ನಿನ್ನನ್ನು ವರಿಸುವೆನು. ನಾನು ಸಲಿಗೆಯಿಂದ ಇದನ್ನು ನಿನ್ನಲ್ಲಿ ತಿಳಿಸುವೆನು. ನನ್ನ ಗರ್ಭದಲ್ಲಿ ಹುಟ್ಟಿದ ಮಗನೇ ನಿನ್ನ ರಾಜ್ಯಕ್ಕೆ ಮುಂದಿನ ಅಧಿಕಾರಿಯಾಗಬೇಕು. ನನ್ನ ಮಗನೇ ನಿನಗೆ ಯುವರಾಜನಾಗಿರಬೇಕು.

ಇದಕ್ಕೆ ತಪ್ಪಬಾರದು. ಹೀಗೆ ನಡೆಯುವ ಪಕ್ಷದಲ್ಲಿ ನೀನು ನನ್ನ ಮುಟ್ಟಬಹುದು" ಎಂದಳು.

[ಓ ಜನಮೇಜಯರಾಜಾ! ದುಷ್ಯಂತನು ಹಾಗೆಯೇ ಆಗಲಿ ಪ್ರತಿಜ್ಞೆಮಾಡಿಕೊಟ್ಟು, ತಿರುಗಿ ಅವಳನ್ನು ಕುರಿತು "ಎಲೆ ಭ ಇನ್ನೂ ನಿನ್ನ ಅಪೇಕ್ಷೆಯೇನಿದ್ದರೂ ಕೇಳು. ಅವನ್ನೆಲ್ಲ ನಡೆಸಿಕೊ ಸಿದ್ಧನಾಗಿರುವೆನು" ಎಂದನು. ಅದಕ್ಕಾ ಶಕುಂತಳೆಯು "ಮಹಾರಾ ವಿವಾಹವು ಶಾಸ್ತ್ರೀಯವೆಂದು ಲೋಕದಲ್ಲಿ ಜನರು ಹೇಳುವ ವಾಡಿಕೆ ಟು. ಅಂತಹ ಶಾಸ್ತ್ರೀಯವಾದ ವೈವಾಹಿಕ ಕ್ರಿಯೆಗಳನ್ನೇ ಮುಂದೆ ಸಂತತಿಗೆ ಕ್ಷೇಮಕರವೆಂದೂ ಹೇಳುವರು. ಆದುದರಿಂದ ನಮ್ಮಿಬ್ಬರ ಹವು ಲೋಕಾಪವಾದಕ್ಕೆ ಆಸ್ಪದವನ್ನು ಕೊಡಬಾರದು. ಶಾಸ್ತ್ರೀಯ ಯೇ ನಮ್ಮ ವಿವಾಹಕಾರ್ಯವು ನಡೆಯುವುದಕ್ಕೆ ನೀನು ಅನುವ ಬೇಕು. ಇದೋ! ಇಲ್ಲಿ ಯಜ್ಞಪಾತ್ರೆಗಳುಂಟು! ದರ್ಭೆಗಳುಂಟು! ಗಳುಂಟು! ಅಕ್ಷತೆಗಳೂ ಸಿದ್ಧವಾಗಿರುವುವು. ಈ ನಮ್ಮ ವಿವಾ ಎಷ್ಟುಮಟ್ಟಿಗೆ ಶಾಸ್ತ್ರೀಯವಾಗಿ ನಡೆಯುವುದೋ, ಅದಕ್ಕೆ ತಕ್ಕಂತೆ ಗೆ ಮುಂದೆ ಯೋಗ್ಯವಾದ ಸಂತತಿಯೇ ಉಂಟಾಗುವುದು. ಆದುದ ಇದೋ! ಹೋಮಕ್ಕಾಗಿ ತುಪ್ಪವೂ, ಲಾಜಗಳೂ, ಮರಳೂ ಸಿದ್ಧವಾ ಬ್ರಾಹ್ಮಣರೂ ಇಲ್ಲಿರುವರು. ವಿವಾಹಕ್ಕೆ ಬೇಕಾದ ಸಮಸ್ತಸಾಮಗ್ರಿ ಸಿದ್ಧವಾಗಿವೆ. ಓ ರಾಜೇಂದ್ರಾ! ಒಂದುವೇಳೆ ನಾನು ಈ ಮಾತುಗ ನಿನ್ನೊಡನೆ ಹೇಳುವುದು ಅತಿಕ್ರಮವಾಗಿದ್ದರೂ, ಧರ್ಮವನ್ನು ಹಿ ಹೇಳುವುದರಿಂದ ನೀನು ಕ್ಷಮಿಸಬೇಕು" ಎಂದಳು.]

ಓ ಜನಮೇಜಯರಾಜಾ! ಕಾಮಮೋಹಿತನಾದ ದುಷ್ಯಂ ಮನಸ್ಸಿನಲ್ಲಿ ಏನೊಂದೂ ವಿಚಾರವನ್ನು ಮಾಡದೆ, ಹಾಗೆಯೇ ಆಗ ಅನುಮತಿಸಿದನು. ಆಮೇಲೆ ಆ ಶಕುಂತಳೆಯನ್ನು ಕುರಿತು "ಎಲೆ ನಿನ್ನಲ್ಲಿ ನನಗಿರುವ ಪ್ರೀತಿಗೆ ತಕ್ಕಂತೆ, ನಾನು ನಿನ್ನನ್ನು ಎಷ್ಟು ಸ ಮದಿಂದ ನನ್ನ ಪಟ್ಟಣಕ್ಕೆ ಕರೆದುಕೊಂಡು ಹೋಗಬೇಕೋ ಅದನ್ನು ಲೇ ನಿನಗೆ ತಿಳಿಸುವೆನು. ನಿನ್ನ ಇಷ್ಟವು ಹೇಗೋ ಹೇಳು" ಎಂದು

ಒಡನೆಯೇ ತನ್ನೊಡನೆ ಬಂದಿದ್ದ ಪುರೋಹಿತರನ್ನು ಕರೆಸಿಕೊಂಡು "ಓ ಬ್ರಾಹ್ಮಣೋತ್ತಮಾ! ಈ ರಾಜಕುಮಾರಿಯು ತನ್ನೊಳಗೆ ಶಾಸ್ತ್ರೀಯವಾಗಿ ವಿವಾಹಕಾರ್ಯವು ನಡೆಯಬೇಕೆಂದು ಹೇಳುವಳು. ಆದುದರಿಂದ ಅವಳ ಮಾತನ್ನು ನಿರಾಕರಿಸದೆ ನೀನು ಆ ವಿವಾಹಕಾರ್ಯವನ್ನು ನಡೆಸಬೇಕು. ಆದುದರಿಂದ ವಿಳಂಬಮಾಡದೆ ಶಾಸ್ತ್ರೋಕ್ತವಾಗಿ ವಿವಾಹಕಾರ್ಯವನ್ನು ಮುಗಿಸು" ಎಂದನು. ಒಡನೆ ಆ ಪುರೋಹಿತನು "ಓ ಮಹಾರಾಜಾ! ನೀನು ಹೇಳಿದುದು ನ್ಯಾಯವೇ. ಅದರಂತೆಯೇ ನಡೆಸುವೆನು" ಎಂದು ಹೇಳಿ, ತಾನು ಶುದ್ಧನಾಗಿ ಬಂದು, ಕ್ರಮವಾದ ನಿಯಮಗಳನ್ನು ಹಿಡಿದು, ಶಾಸ್ತ್ರಕ್ರಮವಾಗಿ ವಿವಾಹಕಾರ್ಯವನ್ನು ನಡೆಸಿದನು. ಆ ಬ್ರಾಹ್ಮಣನ ನಿಯಮಕ್ಕನುಸಾರವಾಗಿ ರಾಜನೂಕೂಡ ಮಂಗಳಕಂಕಣವನ್ನು ಕೈಗೆ ಕಟ್ಟಿಕೊಂಡು, ಆ ಶಕುಂತಳೆಯ ಪಾಣಿಗ್ರಹಣವನ್ನು ಶಾಸ್ತ್ರೋಕ್ತವಾಗಿಯೇ ಮಾಡಿದನು. ಆಮೇಲೆ ಅವನು ಆ ಶಕುಂತಳೆಯೊಡನೆ ವಿನೋದಿಸುತಿದ್ದು, ಅವಳಿಗೆ ಅನೇಕವಿಧವಾದ ನಂಬಿಕೆಯುಳ್ಳ ಮಾತುಗಳನ್ನು ಹೇಳಿ, ಅಲ್ಲಿಂದ ಹಿಂತಿರುಗುವುದಕ್ಕೆ ಸಿದ್ಧನಾದನು. ಆಗ ಬಾರಿಬಾರಿಗೂ ಅವಳೊಡನೆ "ಎಲೆ ಪ್ರಿಯೆ! ಮೊದಲು ನಾನು ರಾಜಧಾನಿಗೆ ಹೋಗಿ, ಆಮೇಲೆ ಇಲ್ಲಿಂದ ನಿನ್ನನ್ನು ಬರಮಾಡಿಕೊಳ್ಳುವೆನು. ಅದಕ್ಕಾಗಿ ನನ್ನ ಚತುರಂಗಸೈನ್ಯವನ್ನೂ ಕಳುಹಿಸಿಕೊಡುವೆನು ಮತ್ತು ಮೂರು ವೇದಗಳನ್ನು ತಿಳಿದ ಬ್ರಾಹ್ಮಣಶ್ರೇಷ್ಠರನ್ನೂ, ಅನೇಕ ರಾಜಸೇವಕರನ್ನೂ ಕೂಡಿಸಿಕೊಂಡು ನನ್ನ ಬಂಧುಗಳು ಅನೇಕ ಸಹಸ್ರಪಲ್ಲಕ್ಕಿಗಳೊಡನೆ ನಿನ್ನಲ್ಲಿಗೆ ಬರುವರು. ಮೂಗರು, ಬೇಡರು, ಕುಳ್ಳರು, ಗುಜ್ಜಾರಿಗಳು, ಇವರೆಲ್ಲರೂ ಕಂಚುಕಿಗಳೊಡನೆ ನಿನ್ನಲ್ಲಿಗೆ ಬರುವರು. ಸೂತ ಮಾಗಧರೇ ಮೊದಲಾದ ಹೊಗಳುಭಟರನ್ನೂ ನಿನ್ನಲ್ಲಿಗೆ ಕಳುಹಿಸಿಕೊಡುವೆನು. ಶಂಖ, ದುಂದುಭಿ ಮೊದಲಾದ ವಾದ್ಯಗಳನ್ನೂ ಕಳುಹಿಸಿಕೊಡುವೆನು. ಅವರೆಲ್ಲರೊಡನೆ ನೀನು ಅತಿವೈಭವದಿಂದ ನನ್ನ ಪಟ್ಟಣಕ್ಕೆ ಬಂದು ಸೇರಬಹುದು. ಅಂತಹ ವೈಭವಗಳೊಂದೂ ಇಲ್ಲದೆ ಈಗಲೇ ನಿನ್ನನ್ನು ಈ ಸ್ಥಿತಿಯಲ್ಲಿ ಪುರಪ್ರವೇಶವನ್ನು ಮಾಡಿಸುವುದು ನನಗೆ ಸಮ್ಮತವಿಲ್ಲ. ಈ ವಿಧವಾದ ವಿಜೃಂಭಣೆಗಳೊಂದೂ ಇಲ್ಲದೆ, ನಿನಗೆ

ರಾಜಯೋಗ್ಯವಾದ ವಸ್ತ್ರಭೂಷಣಗಳಾವುವೂ ಇಲ್ಲದೆ ಕರೆದುಕೊಂ
ಹೋಗಲಾರೆನು. ಇದು ನಿಜವು. ಎಲೆ ಸುಭ್ರು! ನಾನು ಹೇಳಿ
ತೆ ಸತ್ಯವಾಗಿ ನಡೆಸುವೆನು" ಎಂದನು. ಓ ಜನಮೇಜಯರಾಜ
ದುಷ್ಯಂತನು ಸುಶೀಲೆಯಾದ ಆ ಶಕುಂತಳೆಯನ್ನು ಕುರಿತು ಹೀಗೆ
ಹೇಳಿ, ಅವಳನ್ನು ಅಪ್ಪಿಕೊಂಡು, ಮಂದಹಾಸದೊಡನೆ ಅವಳನ್ನು ನೋ
ದನು. ಆಮೇಲೆ ಆ ಶಕುಂತಳೆಯು ಪ್ರಯಾಣಸನ್ನದ್ಧನಾದ ತನ್ನ
ಯನ್ನು ಪ್ರದಕ್ಷಿಣೆಮಾಡಿ ಬಂದಳು. ತಿರುಗಿ ಆ ರಾಜನು ಅವಳ
ಮತ್ತೊಮ್ಮೆ ಅಪ್ಪಿಕೊಂಡನು. ಶಕುಂತಳೆಯು ಪತಿಯನ್ನು ಅಗ
ಲಾರದೆ ಅವನ ಪಾದಗಳಲ್ಲಿ ಬಿದ್ದಳು. ಆಗ ರಾಜನು ತಿರುಗಿ ಅವಳ
ಮೇಲೆಬ್ಬಿಸಿ "ಪ್ರಿಯೆ! ದುಃಖಿಸಬೇಡ. ಇದೋ! ನನ್ನ ಪುಣ
ಮೇಲೆ ಆಣೆಯಿಟ್ಟು ಶಪಥಮಾಡುವೆನು. ಶೀಘ್ರದಲ್ಲಿಯೇ ನಿನ್ನ
ಕರೆಸಿಕೊಳ್ಳುವೆನು" ಎಂದು ಬಾರಿಬಾರಿಗೂ ಅವಳಿಗೆ ಸಮಾಧಾನವ
ಹೇಳಿ ಪ್ರತಿಜ್ಞೆಮಾಡಿದನು. ಹೀಗೆ ದುಷ್ಯಂತನು ಶಕುಂತಳೆಗೆ ಶ
ಮಾಡಿಕೊಟ್ಟು, ಅಲ್ಲಿಂದ ಹಿಂತಿರುಗಿದಾಗ, ಶಕುಂತಳೆಯ ತಂದೆಯ
ಕಣ್ವಮುನಿಯ ವಿಷಯವಾಗಿ ಅವನ ಮನಸ್ಸಿಗೆ ಚಿಂತೆ ಹುಟ್ಟಿತು.
ಅವನು ತನ್ನಲ್ಲಿ ತಾನು "ಆಹಾ! ಕಣ್ವಮಹರ್ಷಿಯಾದರೋ ಮ
ತಪಸ್ವಿ! ನಮ್ಮ ವಿವಾಹವೃತ್ತಾಂತವನ್ನು ಕೇಳಿ ಏನು ಮಾಡುವನೆ
ತಿಳಿಯದು! ನಾನು ಅಲ್ಲಿಯೇ ಅವನಿಗಾಗಿ ನಿರೀಕ್ಷಿಸುತಿದ್ದು, ಅವ
ಬಂದಮೇಲೆ ಆತನಲ್ಲಿ ಅಪರಾಧಕ್ಷಾಪಣವನ್ನಾದರೂ ಮಾಡಿ ಬಾ
ಹೋದೆನಲ್ಲಾ" ಎಂದು ಮನಸ್ಸಿನಲ್ಲಿ ಕಳವಳಿಸುತ್ತಾ ತನ್ನ ಪಟ್ಟಣ
ಬಂದು ಸೇರಿಬಿಟ್ಟನು.

ಓ ಜನಮೇಜಯರಾಜಾ! ಇದು ಹೀಗಿರಲು, ಇತ್ತಲಾಗಿ ಒಂ
ಮುಹೂರ್ತಕಾಲವು ಕಳೆದೊಡನೆ ಕಣ್ವಮುನಿಯು ಆಶ್ರಮಕ್ಕೆ ಹಿಂತಿರ
ಬಂದನು. ಆದರೆ, ಎಂದಿನಂತೆ ಶಕುಂತಳೆಯು ಮನೆಗೆ ಬಂದ ತ
ಯನ್ನು ಇದಿರುಗೊಂಡು ಉಲ್ಲಾಸದಿಂದ ಮಾತಾಡಿಸುವುದಕ್ಕೆ ನಾಚ
ಪಟ್ಟು. ಒಡನೆಯೇ ಅವನ ಸಮೀಪಕೆ ಬಂದು ಕಾಣಿಸಿಕೊಳ್ಳಲಿ

ಸ್ವಲ್ಪಹೊತ್ತಿನಮೇಲೆ ಏನೋ ದೊಡ್ಡ ತಪ್ಪುಮಾಡಿ ಭಯಪಟ್ಟವಳಂತೆ ಮೆಲ್ಲಗೆ ತಂದೆಯ ಸಮೀಪಕ್ಕೆ ಬಂದಳು. ಅವನು ಹೊತ್ತುತಂದ ಭಾರ ವನ್ನು ತನ್ನ ಕೈಗೆ ತೆಗೆದುಕೊಂಡಳು. ಅವನಿಗೆ ಆಸನವನ್ನು ತಂದೊಪ್ಪಿ ಸಿದಳು. ಇಷ್ಟು ಕಾರ್ಯಗಳನ್ನು ಅವಳು ವಿಧಿಯಿಲ್ಲದೆ ತನ್ನ ಕರ್ತವ್ಯ ವೆಂಬುದಕ್ಕಾಗಿ ಮಾಡುತಿದ್ದರೂ, ಲಜ್ಜೆಯಿಂದ ತಾನು ತಲೆಯೆತ್ತಿ ತಂದೆ ಯ ಮುಖವನ್ನು ನೋಡಲಾರದೆ, ತಲೆಬಗ್ಗಿಸಿಕೊಂಡೇ ನಿಂತಿದ್ದಳು. ಎಂದಿನಂತೆ ಅವನನ್ನು ಮಾತಾಡಿಸುವುದಕ್ಕೂ ಅವಳಿಗೆ ಧೈರ್ಯವಿಲ್ಲದೆ ಹೋಯಿತು. ಇದುವರೆಗೆ ಬ್ರಹ್ಮಚರ್ಯೆಯಲ್ಲಿದ್ದು, ಈಗ ಆ ಧರ್ಮ ವನ್ನು ಬಿಟ್ಟು ಕದಲಿದುದರಿಂದ, ಅವಳು ತನ್ನಲ್ಲಿ ದೋಷಶಂಕೆಯಿಂದ ಭಯದಿಂದಲೂ, ಲಜ್ಜೆಯಿಂದಲೂ, ಕಳವಳಿಸುತಿದ್ದಳು. ಈಗ ಶಕುಂತ ಳೆಯು ಮೊದಲಿನಂತಿಲ್ಲದೆ ಏನೋ ಒಂದು ವಿಧವಾಗಿ ಲಜ್ಜೆಯಿಂದ ಸಂ ಕೋಚಪಡುತ್ತಿರುವುದನ್ನು ನೋಡಿ ಕಣ್ವಮಹರ್ಷಿಯು ಹೀಗೆಂದು ಪ್ರಶ್ನೆ ಮಾಡಿದನು. “ಎಲೆ ದೀರ್ಘಾಯುಷ್ಮಂತಳೆ! ಏನಿದು! ನಿನ್ನ ಸ್ಥಿತಿಯು ಎಂದಿನಂತಿಲ್ಲ! ಏನೋ ಲಜ್ಜೆಯಿಂದ ಸಂಕೋಚಪಡುವಂತಿದೆ. ನಡೆದ ಸಂಗತಿಯೇನು ಹೇಳು. ಹೆದರಬೇಡ” ಎಂದನು. ಆಗ ಶಕುಂತಳೆಯು ತನ್ನ ತಂದೆಯು ಮಾರ್ಗಾಯಾಸದಿಂದ ವಿಶ್ರಾಂತಿಹೊಂದಿ ಕುಳಿತಮೇಲೆ, ಅವನಿಗೆ ಕಾಲುಗಳನ್ನು ತೊಳೆದು ಆಹಾರಾರ್ಥವಾಗಿ ಹಣ್ಣುಗಡ್ಡೆಗಳನ್ನು ಮುಂದೆ ತಂದಿಟ್ಟು, ಅವನ ಕಾಲುಗಳನ್ನು ಮೆಲ್ಲಗೆ ಒತ್ತುತ್ತಾ ಬಹಳ ಕಷ್ಟ ದೊಡನೆ ಗದ್ಗದ ಸ್ವರದಿಂದ ಹೀಗೆಂದು ಹೇಳತೊಡಗಿದಳು. ಅವಳಿಗಾದ ರೋ ಮನಸ್ಸಿನಲ್ಲಿ ಲಜ್ಜೆಯು ಬಾಧಿಸುತ್ತಿರುವುದು. ಭಯಗ್ರಸ್ತಳಾದ ಆಕೆಯು ಮುಗುಳ್ನಗೆಯೊಡನೆ “ಜನಕಾ! ನಮ್ಮ ದೇಶದ ರಾಜನು ಈ ಆಶ್ರಮಕ್ಕೆ ಬಂದಿದ್ದನು. ಅವನು ಇಲಿಲನ ಮಗನಾದ ದುಷ್ಯಂತನಂತೆ! ದೈವಯೋಗದಿಂದ ಆಕಸ್ಮಾತ್ತಾಗಿ ನಮ್ಮ ಆಶ್ರಮಕ್ಕೆ ಬಂದ ಅವನನ್ನು ನಾ ನು ಪತಿಯನ್ನಾಗಿ ವರಿಸಿದೆನು. ತಾತಾ! ನೀನು ನನ್ನ ಮತ್ತು ಅವನ ವಿಷಯದಲ್ಲಿ ಪ್ರಸನ್ನನಾಗಬೇಕು. ಅವನು ಮಹಾಯಶಸ್ವಿ. ನನ್ನನ್ನು ಪತ್ನಿಯನ್ನಾಗಿ ವರಿಸಿದ ಅವನ ವಿಷಯದಲ್ಲಿ ನೀನು ಕೋಪಿಸಬಾರದು. ಮುಂದೆ ಇನ್ನೂ ಯಾವಯಾವ ಸಂಗತಿಗಳು ಇಲ್ಲಿ ನಡೆದುವೋ ಅವನ್ನೆಲ್ಲ

ನಿನ್ನ ದಿವ್ಯಜ್ಞಾನದಿಂದಲೇ ತಿಳಿಯಬಹುದು. ನಿನಗೆ ನಾನೇನೂ ಹೇಳಬೇಕಾಗಿಲ್ಲ. ಈ ಕಾರ್ಯಕ್ಕಾಗಿ ಕೋಪಿಸದೆ ಪ್ರಸನ್ನನಾಗಿ ಕ್ಷತ್ರಿಯವಂಶಕ್ಕೆ ಅಭಯವನ್ನು ಕೊಡಬೇಕು" ಎಂದಳು.

ಓ ಜನಮೇಜಯರಾಜಾ! ಕಣ್ವನು ಶಕುಂತಳೆಯ ಮಾತನ್ನು ಕೇಳಿದಮೇಲೆ ಸ್ವಲ್ಪಹೊತ್ತಿನವರೆಗೆ ತನ್ನಲ್ಲಿತಾನೇ ಆಲೋಚಿಸಿ, ಧ್ಯಾನದೃಷ್ಟಿಯಿಂದ ನಡೆದ ಸಂಗತಿಗಳನ್ನೆಲ್ಲ ತಿಳಿದುಕೊಂಡನು. ಆ ವಿವಾಹಕಾರ್ಯವು ಧರ್ಮಯುಕ್ತವೆಂದೇ ಅವನ ಮನಸ್ಸಿಗೆ ತೋರಿತು. ಅವನಿಗೆ ಅತ್ಯಂತ ಸಂತೋಷವುಂಟಾಯಿತು. ಆಗ ಅವನು ಮಂದಹಾಸಪೂರ್ವಕವಾಗಿ ಶಕುಂತಳೆಯನ್ನು ನೋಡಿ "ಎಲೆ ಕುಮಾರಿ! ಧ್ಯಾನದೃಷ್ಟಿಯಿಂದ ನಾನು ಎಲ್ಲವನ್ನೂ ತಿಳಿದುಕೊಂಡೆನು. ರಾಜಕುಲದಲ್ಲಿ ಹುಟ್ಟಿದ ನೀನು ರಾಜವಂಶದವನನ್ನೇ ಸೇರಿದೆ. ನನ್ನನ್ನು ಕೇಳದೆ ನೀನು ಈ ಕಾರ್ಯವನ್ನು ಮಾಡಿದ್ದರೂ, ನಿಮ್ಮಿಬ್ಬರ ಸಂಬಂಧವು ಅನುರೂಪವಾದುದೇ ಹೊರತು, ಧರ್ಮವಿರುದ್ಧವಲ್ಲ. ಆದರಿಂದ ಧರ್ಮಕ್ಕೇನೂ ಹಾನಿಯಿಲ್ಲ. ಎಲೆ ಭದ್ರೆ! ಇದಕ್ಕಾಗಿ ನೀನು ಚಿಂತಿಸಬೇಡ. ನೀನು ಭಯಪಡಬೇಕಾಗಿಲ್ಲ. ನೀನು ಮಾಡಿದ ಕೆಲಸವು ಉತ್ತಮಕಾರ್ಯವೇ! ಕ್ಷತ್ರಿಯರಿಗೆ ಇಂತಹ ಗಾಂಧರ್ವವಿವಾಹವೇ ಶ್ರೇಷ್ಠವಾದುದು. ಇದಲ್ಲದೆ ಆ ರಾಜನು ನಿನ್ನನ್ನು ಕಾಮಿಸಿದನು. ನೀನೂ ಅವನನ್ನು ಕಾಮಿಸಿದೆ. ಹೀಗೆ ಪರಸ್ಪರಾನುರಾಗವುಳ್ಳವರು ನಡೆಸಿಕೊಳ್ಳುವ ವಿವಾಹವು ಶ್ರೇಷ್ಠವಾದುದೇ! ಇದರಮೇಲೆ ನಿಮ್ಮಿಬ್ಬರ ವಿವಾಹವು ವಿಧ್ಯುಕ್ತವಾಗಿಯೇ ನಡೆದಂತೆಯೂ ತಿಳಿಯುತ್ತಿದೆ. ಇನ್ನು ನೀನು ಉತ್ತಮಸಂತಾನವನ್ನು ಪಡೆದು, ಸುಪುತ್ರವತಿಯಾಗುವುದಕ್ಕೆ ಸಂದೇಹವಿಲ್ಲ. ನಿನ್ನ ಪತಿಯಾದ ದುಷ್ಯಂತನಾದರೂ ಸಾಮಾನ್ಯನಲ್ಲ! ಧರ್ಮಾತ್ಮನು! ಮಹಾಮಹಿಮೆಯುಳ್ಳವನು! ಪುರುಷರಲ್ಲಿ ಶ್ರೇಷ್ಠನು! ಅಂತವನು ನಿನ್ನನ್ನು ಪ್ರೀತಿಯಿಂದ ವರಿಸಿರುವನು. ಅವನ ತೇಜಸ್ಸಿನಿಂದ ನಿನಗೆ ಮಹಾಮಹಿಮೆಯುಳ್ಳವನೂ, ಯಶಸ್ವಿಯೂ ಆದ ಪುತ್ರನು ಹುಟ್ಟುವನು. ಆ ನಿನ್ನ ಮಗನು ಮುಂದೆ ಸಮುದ್ರಾಂತವಾದ ಸಮಸ್ತಭೂಮಿಯನ್ನೂ ಅನುಭವಿಸುವನು. ಆ ನಿನ್ನ ಪುತ್ರನು ಚಕ್ರವರ್ತಿಯೆನಿ

ಸಿಕೊಂಡು ತನ್ನ ಸೈನ್ಯದೊಡನೆ ದಿಗ್ವಿಜಯಕ್ಕೆ ಹೊರಟಾಗ, ಅವನ ಸೈನ್ಯಕ್ಕೆ ಎಲ್ಲಿಯೂ ತಡೆಯುಂಟಾಗುವುದಿಲ್ಲ. ಎಲೆ ಕುಮಾರೀ! ನಿನ್ನನ್ನು ವರಿಸಿದುದಕ್ಕಾಗಿ ಆ ದುಷ್ಯಂತನ ವಿಷಯದಲ್ಲಿ ನಾನು ಸಂತೋಷಿಸುವೆನೇ ಹೊರತು, ಕೋಪಿಸುವುದಿಲ್ಲ. ಅಲ್ಲದೆ, ನಿನ್ನ ಎಷ್ಟೋ ಋತುಕಾಲಗಳು ಇದುವರೆಗೆ ಈ ಆಶ್ರಮದಲ್ಲಿ ವ್ಯರ್ಥವಾಗಿ ಕಳೆದುಹೋದುವು. ಈಗ ನಿನ್ನ ಋತುಕಾಲವು ಸಾರ್ಥಕವಾಯಿತು. ಇದರಿಂದ ನಿನ್ನ ಅಪರಾಧವೇನೂ ಇಲ್ಲ. ನಿನಗೆ ಪಾಪವೂ ಇಲ್ಲ. ಎಲೆ ಪುತ್ರಿ! ನಿನ್ನ ಕಾರ್ಯಕ್ಕಾಗಿ ನಾನು ಬಹಳ ಸಂತೋಷಿಸಿದೆನು. ಇನ್ನು ನೀನು ನನ್ನಿಂದ ಬೇಕಾದ ವರಗಳನ್ನು ಪಡೆಯಬಹುದು. ಬೇಕಾದುದನ್ನು ಕೇಳು!" ಎಂದನು. ಅದಕ್ಕೆ ಶಕುಂತಳೆಯು "ಜನಕಾ! ನನಗೆ ಬೇರೆ ವರಗಳೇನೂ ಬೇಕಾದುದಿಲ್ಲ ನನ್ನನ್ನು ಪ್ರೀತಿಯಿಂದ ವರಿಸಿದ ಪುರುಷಶ್ರೇಷ್ಠನಾದ ಆ ದುಷ್ಯಂತನನ್ನೂ, ನನ್ನನ್ನೂ ನೀನು ಮನ್ನಿಸಬೇಕು. ಸಮಸ್ತದೇವತೆಗಳ ಸಮಕ್ಷದಲ್ಲಿ ನಮ್ಮಿಬ್ಬರ ವಿವಾಹವು ಶಾಸ್ತ್ರೋಕ್ತವಾಗಿ ನಡೆದಿದೆ. ಆದುದರಿಂದ ಆ ರಾಜನ ಮತ್ತು ಅವನ ಮಂತ್ರಿಗಳ ವಿಷಯದಲ್ಲಿ ನೀನು ಅನುಗ್ರಹವನ್ನು ತೋರಿಸಬೇಕು" ಎಂದಳು.

ಓ ಜನಮೇಜಯರಾಜಾ! ಶಕುಂತಳೆಯು ತನ್ನ ತಂದೆಯಮುಂದೆ ಈ ಮಾತನ್ನು ಹೇಳಿದಮೇಲೆ ತನ್ನಲ್ಲಿತಾನೇ ಸ್ವಲ್ಪಹೊತ್ತಿನವರೆಗೆ ಆಲೋಚಿಸಿ, ತಿರುಗಿ ತನ್ನ ಪತಿಗೆ ಶ್ರೇಯಸ್ಸನ್ನು ಕೋರುತ್ತ ತಂದೆಯನ್ನು ಕುರಿತು "ಜನಕಾ! ನೀನು ನಮ್ಮನ್ನು ಅನುಗ್ರಹಿಸುವುದಾದರೆ, ನನ್ನ ಪತಿಯು ಎಂದೆಂದಿಗೂ ಧರ್ಮಿಷ್ಠನಾಗಿರುವಂತೆಯೂ, ಅವನಿಗೆ ರಾಜ್ಯಚ್ಯುತಿಯಿಲ್ಲದಂತೆಯೂ ವರವನ್ನು ಕೊಡಬೇಕು. ಪೂರುವಂಶದವರಿಗೂ, ನನ್ನ ಪತಿಗೂ ಶ್ರೇಯಸ್ಕರವಾದ ಈ ವರಗಳನ್ನು ಕೊಡು" ಎಂದಳು. ಆಗ ಕಣ್ವನು "ಕುಮಾರೀ! ನಿನ್ನ ಇಷ್ಟದಂತೆಯೇ ಆಗಲಿ" ಎಂದು ಹೇಳಿ, ತನ್ನ ಕೈಗಳನ್ನು ನೀಡಿ ಸಾಕ್ಷಾನ್ಮಹಾಲಕ್ಷ್ಮಿಯಂತೆ ರೂಪಸಂಪತ್ತಿಯುಳ್ಳ ಆ ಶಕುಂತಳೆಯ ಮೈಯನ್ನು ಸವರುತ್ತ, "ಎಲೆ ಪುತ್ರಿ! ಇನ್ನು ನೀನು

ದುಷ್ಯಂತನ ಪಟ್ಟಮಹಿಷಿ! ಲೋಕದಲ್ಲಿ ಪತಿವ್ರತೆಯರಿಗೆ ಅನುಗುಣವಾದ ಶೀಲವನ್ನು ಕಾಪಾಡುತ್ತಿರು!" ಎಂದನು.

ಓ ಜನಮೇಜಯರಾಜಾ! ಕಣ್ವಮುನಿಯು ಆ ಶಕುಂತಳೆಯನ್ನು ತನ್ನ ಹಸ್ತಸ್ಪರ್ಶದಿಂದ ಶುದ್ಧಿಗೊಳಿಸಿದನು. ತಂದೆಯ ಹಸ್ತಸ್ಪರ್ಶದಿಂದ ಶಕುಂತಳೆಗೆ ಅಪಾರವಾದ ಆನಂದವುಂಟಾಯಿತು.

ಇದು ತೊಂಭತ್ತುನಾಲ್ಕನೆಯ ಅಧ್ಯಾಯವು.



## ಶಕುಂತಳೆಗೆ ಪುತ್ರೋತ್ಪತ್ತಿ. ಅವನಿಗೆ ಸರ್ವದಮನನೆಂಬ ಹೆಸರು ಬಂದುದು.

ಜನಮೇಜಯರಾಜಾ! ಕೇಳು! ದುಷ್ಯಂತನು ಶಕುಂತಳೆಗೆ ಅಷ್ಟೊಂದು ನಂಬಿಕೆಯನ್ನು ಹೇಳಿ ಪ್ರತಿಜ್ಞೆಮಾಡಿಕೊಟ್ಟು ಹೋದನಷ್ಟೆ! ಇತ್ತಲಾಗಿ ಶಕುಂತಳೆಗೆ ಗರ್ಭವುಂಟಾಗಿ, ಅದು ದಿನದಿನಕ್ಕೆ ಬಲಿಯುತ್ತ ಬಂದಿತು. ಶಕುಂತಳೆಯು ಯಾವಾಗಲೂ ಮನಸ್ಸಿನಲ್ಲಿ ಆ ರಾಜನನ್ನೇ ಧ್ಯಾನಿಸುತ್ತಿದ್ದಳು. ಆತನಿಗೇನೋ ರಾಜಕಾರ್ಯಗೌರವವಿರಬಹುದೆಂದು ಮನಸ್ಸಿನಲ್ಲಿ ಸಮಾಧಾನಮಾಡಿಕೊಳ್ಳುವಳು. ಆದರೇನು? ಆ ಚಿಂತೆಯಿಂದ ಅವಳಿಗೆ ಹಗಲು ರಾತ್ರಿಯೂ ನಿದ್ರೆಯಿಲ್ಲ. ಕ್ರಮವಾದ ಸ್ನಾನ ಭೋಜನಗಳೂ ಇಲ್ಲ. ಅವಳು ಆಗಾಗ ತನ್ನ ಮನಸ್ಸಿನಲ್ಲಿ "ರಾಜನ ಕಡೆಯಿಂದ ಬ್ರಾಹ್ಮಣರೂ, ಚತುರಂಗಸೈನ್ಯಗಳೂ, ದೂತರೂ ಈಗಲೋ, ನಾಳೆಯೋ, ಕೊನೆಗೆ ನಾಡಿದ್ದೋ ಬಂದುಬಿಡುವರು" ಎಂದು ಆಶೋತ್ತರವನ್ನಿಟ್ಟು ಕೊಂಡೇ ದಿನಗಳನ್ನು ಕಳೆಯುತಿದ್ದಳು. ಎಷ್ಟೋ ದಿನಗಳಾದುವು! ಪಕ್ಷಗಳಾದುವು! ಮಾಸಗಳಾದುವು! ಋತುಗಳೂ, ಅಯನಗಳೂ ಕಳೆದುವು. ಕಡೆಗೆ ವರ್ಷಗಳ ಲೆಕ್ಕದಲ್ಲಿ ಮೂರು ವರ್ಷಗಳೂ ಕಳೆದುವು. ಪತಿಯು ಇನ್ನೂ ತನ್ನನ್ನು ಕರೆಸಿಕೊಳ್ಳದುದಕ್ಕಾಗಿ, ಆ ಶಕುಂತಳೆಗೆ ತನ್ನ ಗರ್ಭದಲ್ಲಿಯೇ ಬೇಸರವೂ, ಅನಾದರವೂ ಹುಟ್ಟಿತು. ಮೂರು ವರ್ಷಗಳಾದಮೇಲೆ ಋಷಿಪತ್ನಿಯರು ಕೆಲವರು, ಪ್ರಸವದಲ್ಲಿಯ ಬೇಸರಗೊಂಡು ಕೇವಲ ಚಿಂ

ತಾಕುಲೆಯಾಗಿ ಕುಳಿತಿದ್ದ ಶಕುಂತಳೆಯ ಬಳಿಗೆ ಬಂದು ಕಣ್ವಮುನಿಯು ಹೇಳಿದ್ದ ಮಾತಿನಲ್ಲಿ ತಮಗಿರುವ ನಂಬಿಕೆಯಿಂದ, ಆ ಶಕುಂತಳೆಯನ್ನು ಕುರಿತು ಹೀಗೆಂದು ನೀತಿಬೋಧೆಗಳನ್ನು ಮಾಡತೊಡಗಿದರು.

"ಎಲೆ ಭದ್ರೆ! ಕೇಳು! ಲೋಕನ್ಯಾಯವನ್ನು ನಾವು ಹೇಳುವೆವು. ಅದರಮೇಲೆ ನಿನಗೆ ಹೇಗೆ ಹಿತವೆಂದು ತೋರುವುದೋ ಹಾಗೆ ನಡೆಸು. ನೀನು ತಂದೆಯ ಮಾತನ್ನು ಅಸಡ್ಡೆಯಾಗಿ ಕಾಣಬಾರದು ದೇವತೆಗಳಿಗೆಲ್ಲ ವಿಷ್ಣುವೇ ದೈವವು. ಬ್ರಾಹ್ಮಣರಿಗೆ ಅಗ್ನಿಯೂ, ವೇದವೂ ದೈವವು ಸ್ತ್ರೀಯರಿಗೆ ಪತಿಯೇ ದೈವವು ಜನರಿಗೆಲ್ಲ ಬ್ರಾಹ್ಮಣನೇ ದೈವವೆಂದು ತಿಳಿ. ಪೂಜ್ಯನಾದ ನಿನ್ನ ತಂದೆಯು ಪ್ರಸವಕಾಲದಲ್ಲಿ ಸುಖಪ್ರಸವವಾಗಲೆಂದು ನಿನಗೆ ಹೇಳಿರುವನಲ್ಲವೆ? ಆ ಪಿತೃವಾಕ್ಯವಿಶ್ವಾಸದಿಂದ ನೀನು ಪ್ರಸವಿಸಬೇಕಾದುದು ನ್ಯಾಯವು. ಪಿತೃವಾಕ್ಯಪರಿಪಾಲನಾರ್ಥವಾಗಿ ಈ ಕಾರ್ಯವನ್ನು ನಡೆಸುವುದಾಗಿ ನೀನು ಸಂಕಲ್ಪಿಸಿ ನೀನು ಸುಖಪ್ರಸವವನ್ನು ಹೊಂದು ಆಗಲೇ ಪುಣ್ಯಭಾಗಿನಿಯಾಗುವೆ" ಎಂದರು. ಋಷಿಪತ್ನಿಯರು ಹೇಳಿದ ಈ ಮಾತಿಗೆ ಶಕುಂತಳೆಯು ಅನುಮೋದಿಸಿ "ಒಳ್ಳೇದು! ಹಾಗೆಯೇ ಆಗಲಿ!" ಎಂದಳು ಕೂಡಲೇ ಅವಳಿಗೆ ಪ್ರಸವವಾಯಿತು. ಅವಳ ಗರ್ಭದಿಂದ ಎಣೆಯಿಲ್ಲದ ತೇಜಸ್ಸುಳ್ಳ ಕುಮಾರನೊಬ್ಬನು ಹುಟ್ಟಿದನು. ಶಕುಂತಳೆಯ ಗರ್ಭದಲ್ಲಿ ಮೂರುವರ್ಷಗಳಕಾಲದವರೆಗೆ ಬೆಳೆದು ಜನಿಸಿದ ಆ ಕುಮಾರನು ರೂಪ ಗಾಂಭೀರ್ಯಾದಿ ಗುಣಗಳಿಂದ ಅಸಮಾನನೆನಿಸಿದ್ದನು. ಮುಂದೆ ಆ ಕುಮಾರನು ಧರ್ಮಪರಿಪಾಲಕನೆಂಬುದನ್ನು ಸೂಚಿಸುವಂತೆ, ಅವನ ಜನನಕಾಲದಲ್ಲಿ ಆಕಾಶದಿಂದ ಪುಷ್ಪವರ್ಷವಾಯಿತು. ದೇವದುಂದುಭಿಗಳು ಮೊಳಗಿದುವು. ಅಪ್ಸರಸಿಯರು ನರ್ತಿಸಿದರು. ದೇವತೆಗಳು ಗಾನಮಾಡಿದರು. ಈ ಸಂಭ್ರಮಗಳ ನಡುವೆ ದೇವೇಂದ್ರನು ಆಕಾಶದಲ್ಲಿ ಅದೃಶ್ಯರೂಪದಲ್ಲಿದ್ದು "ಶಕುಂತಳೆ! ಈ ನಿನ್ನ ಮಗನು ಚಕ್ರವರ್ತಿಯಾಗುವನು! ರೂಪ, ಬಲ, ತೇಜಸ್ಸು, ಮುಂತಾದುವುಗಳಲ್ಲಿ ಈತನಿಗೆ ಸಮಾನನು ಬೇರೊಬ್ಬನಿರಲಾರನು. ಇವನು ಮುಂದೆ ನೂರು ಅಶ್ವಮೇಧಗಳನ್ನು ನಡೆಸುವನು. ರಾಜಸೂಯಾದಿಗಳಾದ ಇನ್ನೂ ಸಾವಿರಾರು

ಯಾಗಗಳನ್ನೂ ನಡೆಸುವನು. ಈ ಯಾಗಗಳ ಮೂಲಕವಾಗಿ, ಬ್ರಾಹ್ಮಣ ರಿಗೆ ಅಮಿತದಕ್ಷಿಣೆಯನ್ನು ಕೊಟ್ಟು, ತನ್ನ ಸಕಲ ಸಂಪತ್ತನ್ನೂ ಅಂತಹ ಸತ್ಪಾತ್ರಗಳಿಗಾಗಿ ವಿನಿಯೋಗಿಸುವನು'' ಎಂದನು

ಓ ಜನಮೇಜಯರಾಜಾ! ಹೀಗೆ ದೇವತೆಗಳ ಕಡೆಯಿಂದ ಹೊರಟು ಬಂದ ಅಶರೀರವಾಕ್ಯವನ್ನು ಕೇಳಿ ಆ ಕಣ್ವಾಶ್ರಮದಲ್ಲಿದ್ದವರೆಲ್ಲರೂ ಆಶ್ಚ ರ್ಯಪಟ್ಟು, ಆ ಶಕುಂತಳೆಯನ್ನು ಮೊದಲಿಗಿಂತಲೂ ಅಧಿಕವಾಗಿ ಗೌರ ವಿಸಿ ಪೂಜಿಸುತ್ತಿದ್ದರು. ದೇವವಾಕ್ಯವನ್ನು ಕೇಳಿ ಶಕುಂತಳೆಗೂ ಅತಿ ಸಂತೋಷವಾಯಿತು. ಆಮೇಲೆ ಕಣ್ವನು ಅನೇಕ ಬ್ರಾಹ್ಮಣರನ್ನು ಕರೆ ಯಿಸಿ, ಆ ಕುಮಾರನಿಗೆ ಜಾತಕರ್ಮಾದಿ ಸಂಸ್ಕಾರಗಳೆಲ್ಲವನ್ನೂ ನಡೆಸಿ ದನು. ಕ್ಷತ್ರಿಯರಿಗೆ ಯೋಗ್ಯವಾದ ಎಲ್ಲಾ ಕಾರ್ಯಗಳೂ ಶಾಸ್ತ್ರೋಕ್ತ ವಾಗಿ ಆ ಕುಮಾರನಿಗೆ ನಡೆಸಲ್ಪಟ್ಟುವು. ಆ ಶಿಶುವು ಬೆಳ್ಳಗೆ ಅಂದವಾಗಿ ರುವ ನಾಲ್ಕು ಹಲ್ಲುಗಳಿಂದಲೂ, ಸಿಂಹದಂತಿರುವ ಮೈಕಟ್ಟಿನಿಂದಲೂ ಶೋ ಭಿಸುತ್ತ, ಕೈಯಲ್ಲಿ ಸಹಜವಾಗಿರುವ ಚಕ್ರರೇಖೆಯಿಂದ ಬೇರೊಬ್ಬ ವಿಷ್ಣು ವೇ ಎಂಬತಿದ್ದನು. ನಾಲ್ಕು ಮೊಳಗಳ ಉದ್ದವಾದ ದೇಹಪ್ರಮಾಣದಿಂ ದಲೂ, ಅದ್ಭುತ ತೇಜಸ್ಸಿನಿಂದಲೂ, ಪರಾಕ್ರಮದಿಂದಲೂ, ಬಲದಿಂದಲೂ ಕೂಡಿದ ಆ ಕುಮಾರನು ದೇವಕುಮಾರನಂತೆ ಶೋಭಿಸುತ್ತ ಆ ಆಶ್ರಮದ ಲ್ಲಿಯೇ ದಿನದಿನಕ್ಕೆ ಬೆಳೆಯುತ್ತ ಬಂದನು.

ಓ ಜನಮೇಜಯರಾಜಾ! ಅತ್ತಲಾಗಿ ದುಷ್ಯಂತನು, ಈ ಆಶ್ರಮ ದಿಂದ ಹೊರಟುಹೋಗುವಾಗ, ಕಣ್ವಮುನಿಯು ತನ್ನ ಕಾರ್ಯಕ್ಕಾಗಿ ಏನು ಹೇಳುವನೋ ಎಂದು ಭಯಾಕುಲನಾಗಿ ಅದನ್ನೇ ಚಿಂತಿಸುತ್ತ ಹೋದನಲ್ಲ ವೇ? ಅವನಿಗೂ ಕೆಲವು ದಿನಗಳವರೆಗೆ ಶಕುಂತಳೆಯ ಸ್ಮರಣವು ಮನಸ್ಸಿ ನಲ್ಲಿದ್ದರೂ, ಕಣ್ವಮುನಿಯ ಭಯಕ್ಕಾಗಿ ಅವಳನ್ನು ಕರಸಿಕೊಳ್ಳದೆ ಹಾಗೆ ಯೇ ಕಾಲವನ್ನು ಕಳೆಯುತಿದ್ದನು. ಕೆಲವು ದಿನಗಳಾದಮೇಲೆ ಅವನಿಗೆ ಎಲ್ಲವೂ ಮರೆತುಹೋಯಿತು. ಶಕುಂತಳೆಯ ನೆನಪೇ ಅವನಿಗೆ ಬಾರದಂ ತಾಯಿತು. ಶಕುಂತಳೆಯ ಮಗನಿಗೆ ಆರು ವಯಸ್ಸು ತುಂಬಿತು. ಆಗಿ ನಿಂದಲೇ ಆ ಕುಮಾರನು ಸಮೀಪದ ಕಾಡುಗಳಿಂದ ಆ ಆಶ್ರಮಕ್ಕೆ



ಪುಟ ೪೬೩. ಆಶ್ರಮದಲ್ಲಿ ದುಷ್ಯಂತಪುತ್ರನಾದ ಭರತನು (ಸರ್ವದಮನನು) ಕಾಡುಮೃಗಗಳನ್ನು ಹಿಡಿದು ನಿಗ್ರಹಿಸುವ ರೀತಿ.

ಬಂದು ಉಪದ್ರವಕೊಡುತಿದ್ದ ಹುಲಿ, ಸಿಂಹ, ತೋಳ, ಕಾಡುಹಂದಿ, ಕಾಡೆಮ್ಮೆ, ಕರಡಿ, ಕಾಡಾನೆ, ಮುಂತಾದ ದುಷ್ಟಮೃಗಗಳನ್ನೆಲ್ಲ ಕೈಗಳಿಂದ ಹಿಡಿದು ಕಾಲುಗಳಿಂದ ಒದೆಯುವುದು, ಅವುಗಳನ್ನು ಸೆಳೆತಂದು ಆಶ್ರಮವೃಕ್ಷಗಳಿಗೆ ಬಿಗಿದು ಕಟ್ಟಿಹಾಕುವುದು, ಅವುಗಳಮೇಲಿಂದ ತಾನು ಆ ಮರಗಳನ್ನೇರಿ ಕುಳ್ಳಿರುವುದು, ಓಡಿಸುವುದು, ಹೀಗೆಲ್ಲ ಆಟವಾಡುತಿದ್ದನು. ಮತ್ತು ಅವನು ಸಿಹ್ಮವ್ಯಾಘ್ರಗಳಿರತಕ್ಕ ಕಾಡುಗಳಲ್ಲಿ ಗದ್ದಲವನ್ನೆಬ್ಬಿಸಿ, ಅವುಗಳನ್ನು ಚದರಿಸುವನು. ಅಲ್ಲದೆ ಋಷಿಗಳಿಗೆ ವೈರಿಗಳಾದ ರಾಕ್ಷಸರನ್ನೂ, ಪಿಶಾಚಗಳನ್ನೂ ಹಿಡಿದು ಅವರನ್ನೆಲ್ಲ ಮುಷ್ಟಿಗಳಿಂದ ಅಪ್ಪಳಿಸಿ ಕೊಂದು, ಅವರ ದೇಹವನ್ನು ಋಷಿಗಳಿಗೆ ತಂದು ತೋರಿಸುವನು. ಹೀಗಿರುತ್ತಿರುವಾಗ ಒಮ್ಮೆ ಮಹಾಬಲಾಢ್ಯನಾದ ಅಸುರನೊಬ್ಬನು ಇವನಿಂದ ತನ್ನ ಕಡೆಯವರಿಗೆ ಉಂಟಾಗುತಿದ್ದ ಬಾಧೆಯನ್ನು ಸಹಿಸಲಾರದೆ ಅವನನ್ನು ಕೊಲ್ಲುವುದಕ್ಕಾಗಿ ಬಂದನು. `ಆಗ ಆ ದುಷ್ಯಂತಕುಮಾರನು ತನ್ನನ್ನು ಹಿಡಿಯುವುದಕ್ಕಾಗಿ ಬರುತಿದ್ದ ಆತನನ್ನು ನೋಡಿ ನಗುಮುಖದಿಂದಲೇ ಮುಂದೆ ಹೋಗಿ, ತನ್ನ ತೋಳುಗಳಿಂದ ಅವನನ್ನು ಅಪ್ಪಿ ಹಿಡಿದುಬಿಟ್ಟನು. ಆ ಬಾಲಕನ ತೋಳುಗಳ ಬಿಗಿತಕ್ಕೆ ಸಿಕ್ಕಿಬಿದ್ದ ಅವನಿಗೆ ಅಲ್ಲಿಂದ ಬಿಡಿಸಿಕೊಳ್ಳುವುದೇ ಅಸಾಧ್ಯವಾಯಿತು. ನೋವನ್ನು ಸಹಿಸಲಾರದೆ ಭಯಂಕರವಾಗಿ ಅರಚಿಕೊಂಡನು. ಅವನ ದೇಹದ ನವದ್ವಾರಗಳಿಂದಲೂ ರಕ್ತವು ಹೊರಡಲಾರಂಭಿಸಿತು. ಅಲ್ಲದೆ ಆ ಅಸುರನ ಭಯಂಕರವಾದ ಆಕ್ರೋಶಧ್ವನಿಗೆ ಆ ಕಾಡಿನಲ್ಲಿದ್ದ ಸಿಂಹವ್ಯಾಘ್ರಾದಿ ವನಜಂತುಗಳೆಲ್ಲವೂ ಭಯಪಟ್ಟು ಮಲಮೂತ್ರಗಳನ್ನು ಸುರಿಸಿದುವು. ಅಷ್ಟರಲ್ಲಿಯೇ ಈ ಕುಮಾರನು ಆ ಅಸುರನನ್ನು ತನ್ನ ಮೊಳಕಾಲುಗಳಿಂದ ಗುದ್ದಿ, ಅವನ ಪ್ರಾಣವನ್ನು ತೆಗೆದುಬಿಟ್ಟನು. ಅಸುರನು ಸತ್ತುಬಿದ್ದನು. ಆ ಕುಮಾರನ ಈ ಅದ್ಭುತಕಾರ್ಯವನ್ನು ನೋಡಿ ಎಲ್ಲರೂ ಆಶ್ಚರ್ಯಪಟ್ಟರು. ಹೀಗೆ ಈ ಕುಮಾರನು ಪ್ರತಿದಿನವೂ ತನ್ನ ಕೈಗೆ ಸಿಕ್ಕಿದ ದೈತ್ಯರಾಕ್ಷಸರನ್ನು ಕೊಲ್ಲುತ್ತಿರಲು, ಇವನ ಭಯಕ್ಕಾಗಿ ಆ ಆಶ್ರಮಕ್ಕೆ ದುಷ್ಟರಾರೂ ಕಾಲಿಡುತ್ತಿರಲಿಲ್ಲ. ಈ ಕುಮಾರನು ಹೀಗೆ ಮನುಷ್ಯಶಕ್ತಿಗೆ ಮಿಾರಿದ ಕಾರ್ಯಗಳನ್ನು ಮಾಡುತ್ತ, ಎಲ್ಲರನ್ನೂ ತನ್ನ ಬಾಹುಬಲದಿಂದ ಅಡಗಿಸುವುದನ್ನು

ನೋಡಿ, ಆ ಆಶ್ರಮವಾಸಿಗಳಾದ ಎಲ್ಲಾ ಋಷಿಗಳೂ ಕಣ್ವಮುನಿಯೊಡನೆ ಸೇರಿ, ಇವನು ಎಲ್ಲರನ್ನೂ ಅಡಗಿಸುವುದರಿಂದ ಇವನಿಗೆ **ಸರ್ವದಮನ**ನೆಂಬ ಹೆಸರೇ ಇರಲಿ! ಎಂದರು. ಇದರಿಂದ ಅವನಿಗೆ ಸರ್ವದಮನನೆಂಬ ಹೆಸರೇ ಪ್ರಸಿದ್ಧವಾಯಿತು. ಬಲದಲ್ಲಿಯೂ, ಪರಾಕ್ರಮದಲ್ಲಿಯೂ, ತೇಜಸ್ಸಿನಲ್ಲಿಯೂ ಅವನು ಅಸಮಾನನೆನಿಸಿದ್ದನು.

ಓ ಜನಮೇಜಯರಾಜಾ! ಇಷ್ಟಾದರೂ ಅತ್ತಲಾಗಿ ದುಷ್ಯಂತನಿಗೆ ತನ್ನ ಪತ್ನಿಯಾದ ಶಕುಂತಳೆಯ ಸ್ಮರಣೆಯೇ ಬಾರದೆ ಹೋಯಿತು. ಅವನು ತನ್ನನ್ನೂ, ತನ್ನ ಮಗನನ್ನೂ ಕರೆಸಿಕೊಳ್ಳಲಿಲ್ಲವೆಂದು ಇತ್ತಲಾಗಿ ಶಕುಂತಳೆಗೆ ಚಿಂತೆಯು ಪ್ರಬಲವಾಯಿತು. ಅವಳ ಮೈ ಬಿಳುಪೇರಿತು. ದೇಹವು ಬಡವಾಯಿತು. ಕೇಶಸಂಸ್ಕಾರವೂ ಇಲ್ಲದೆ ಮಲಿನವಸ್ತ್ರವನ್ನುಟ್ಟು ಬಹಳ ದೈನ್ಯದಿಂದ ಸಂಕಟಪಡುತ್ತಿದ್ದ ಮಗಳನ್ನು ನೋಡಿ ಕಣ್ವಮುನಿಗೂ ಚಿಂತೆ ಹುಟ್ಟಿತು. ಆ ಕುಮಾರನಿಗೆ ಹನ್ನೆರಡು ವರ್ಷಗಳಾದುವು. ಆಗ ಮಹರ್ಷಿಯು ಅವನಿಗೆ ಎಲ್ಲಾ ವೇದಶಾಸ್ತ್ರಗಳನ್ನೂ, ಅಸ್ತ್ರವಿದ್ಯೆಗಳನ್ನೂ ಕಲಿಸಿದನು.

ಇದು ತೊಂಭತ್ತೈದನೆಯ ಅಧ್ಯಾಯವು.

---

ಶಕುಂತಳೆಯನ್ನು ಪತಿಗೃಹಕ್ಕೆ ಕಳುಹಿಸುವಾಗ ಕಣ್ವರ ಉಪದೇಶಗಳು. ಅವರಿಬ್ಬರ ಸಂಭಾಷಣಗಳು. ಕಣ್ವಮುನಿಯು ಶಿಷ್ಯರೊಡನೆ ಪುತ್ರಸಹಿತಳಾದ ಶಕುಂತಳೆಯನ್ನು ಕಳುಹಿಸಿದುದು. ಪುರಪ್ರವೇಶಕ್ಕೆ ಬೇಸರಿಸಿ ಶಿಷ್ಯರು ಹಿಂತಿರುಗಿ ಬಂದುದು.

ಓ ಜನಮೇಜಯರಾಜಾ! ಕೇಳು! ಕಣ್ವಮುನಿಯು ಆ ಕುಮಾರನಿಗೆ ವಯಸ್ಸುಬಂದುದನ್ನೂ, ಅವನು ನಡೆಸುತ್ತಿದ್ದ ಅತಿಮಾನುಷಕಾರ್ಯಗಳನ್ನೂ ನೋಡಿ, ಇನ್ನು ಅವನಿಗೆ ಯೌವರಾಜ್ಯಾಭಿಷೇಕಕ್ಕೆ ತಕ್ಕಕಾಲವೆಂದು ತೋರಿತು. ಒಡನೆಯೇ ಶಕುಂತಳೆಯನ್ನು ಕರೆದು ಹೀಗೆಂದು

ಹೇಳುವನು. "ಭದ್ರೇ! ಈಗ ನಾನು ನಿನಗೆ ಕೆಲವು ಮಾತುಗಳನ್ನು ಹೇಳಬೇಕಾಗಿದೆ. ನೀನು ಸಾವಧಾನವಾಗಿ ಕೇಳಬೇಕು. ಪತಿವ್ರತೆಯರೆನಿಸಿಕೊಂಡ ಸ್ತ್ರೀಯರಿಗೆ, ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ ಪತಿಶುಶ್ರೂಷೆಯನ್ನು ಮಾಡುತ್ತಿರುವುದೇ ಎಲ್ಲಕ್ಕಿಂತಲೂ ಉತ್ತಮಧರ್ಮವೆಂದು ಹೇಳಲ್ಪಟ್ಟಿದೆ. ಇದೇ ಅವರಿಗೆ ಮೊದಲನೆಯ ಕರ್ತವ್ಯವು. ನಿನ್ನ ವಿವಾಹಕ್ಕಾಗಿ ನಾನು ಮನಃಪೂರ್ವಕವಾಗಿ ಅನುಮತಿಸಿಯೇ ಇರುವೆನು. ನೀನು ನಿನ್ನ ಪತಿಗೃಹದಲ್ಲಿ ಮೇಲೆ ಹೇಳಿದ ಧರ್ಮವನ್ನು ಶ್ರದ್ಧೆಯಿಂದ ನಡೆಸುತ್ತಿರು. ಆ ಮಹಾವ್ರತದಿಂದಲೇ ನಿನಗೆ ಪುಣ್ಯಲೋಕಗಳೆಲ್ಲ ಲಭಿಸುವುವು. ಆಮೇಲೆ ತಿರುಗಿ ಮನುಷ್ಯಲೋಕಕ್ಕೆ ಬಂದರೂ ನೀನು ಮಹಾಭಾಗ್ಯವತಿಯಾಗಿ ಮೆರೆಯುವೆ. ಈಗ ನೀನು ಪೌರವರಾಜನಾದ ನಿನ್ನ ಪತಿಯ ಗೃಹಕ್ಕೆ ಪ್ರಯಾಣವನ್ನು ಬೆಳೆಸಬೇಕಾಗಿದೆ. ಓ ಕುಮಾರೀ! ನಿನ್ನ ಪತಿಯು ನಿನ್ನನ್ನು ಕರೆಸಿಕೊಳ್ಳಲಿಲ್ಲವೆಂದು ನೀನು ಚಿಂತಿಸಬೇಡ! ಅವನು ನಿನಗೆ ಹೇಳಿಹೋಗಿದ್ದ ಕಾಲವು ಅತಿಕ್ರಮಿಸಿಹೋದುದರಿಂದ, ನಿನ್ನನ್ನು ತಾನಾಗಿ ಕರೆಸಿಕೊಳ್ಳಲು ಸಂಕೋಚಪಟ್ಟು ಸುಮ್ಮನಿರುವನು. ಆದುದರಿಂದ ನೀನಾಗಿಯೇ ಅವನಲ್ಲಿಗೆ ಹೋಗಿ ಅವನನ್ನು ಪಚರಿಸಿ ಸಂತೋಷಗೊಳಿಸು. ನಿನ್ನ ಈ ಕುಮಾರನನ್ನು ಅವನು ಯೌವರಾಜ್ಯದಲ್ಲಿರಿಸಿ ಅಭಿಷೇಕಿಸುವುದನ್ನು ನೋಡಿ ಸಂತೋಷಿಸು. ದೇವರು, ಗುರುಗಳು, ರಾಜರು, ಇವರ ಬಳಿಗೆ ಕರೆಸಿಕೊಳ್ಳದೆಯೇ ಹೋಗಬೇಕಾದುದುಚಿತವು. ಅದರಲ್ಲಿಯೂ ಸ್ತ್ರೀಯರು ಪತಿಯ ಬಳಿಗೆ ತಾವಾಗಿಯೇ ಹೋಗುವುದು ತಪ್ಪಲ್ಲ. ಅದೇ ಅವರಿಗೆ ಶ್ರೇಯಸ್ಕರವು. ಆದುದರಿಂದ ಪುತ್ರೀ! ನೀನು ನಿನ್ನ ಪುತ್ರನನ್ನೂ ಕರೆದುಕೊಂಡು, ಪತಿಗೃಹಕ್ಕೆ ಹೊರಡು. ನೀನು ಹೀಗೆ ಮಾಡಿದರೆ ಮಾತ್ರವೇ ನನಗೆ ಪ್ರಿಯವಾಗುವುದು. ನೀನು ಈ ನನ್ನ ಮಾತಿಗೆ ಇದಿರಾಡಬಾರದು. ನನ್ನ ಪಾದಗಳಮೇಲೆ ಆಣೆಯಿಟ್ಟು ಹೇಳುವೆನು. ಇನ್ನು ನೀನು ಹೊರಡು" ಎಂದನು. ಹೀಗೆಂದು ಶಕುಂತಳೆಗೆ ಹೇಳಿದಮೇಲೆ ಕಣ್ವಮುನಿಯು ತನ್ನ ದೌಹಿತ್ರನಾದ ಆ ಕುಮಾರನನ್ನು ತೋಳುಗಳಿಂದಾಲಿಂಗಿಸಿ ಅವನ ತಲೆಯನ್ನು ಮೂಸಿ ನೋಡಿ "ಕುಮಾರಾ! ಚಂದ್ರವಂಶದಲ್ಲಿ ಹುಟ್ಟಿದ ದುಷ್ಯಂತನೆಂಬ

ಪ್ರಖ್ಯಾತರಾಜನುಂಟು. ಅವನ ಪಟ್ಟಮಹಿಷಿಯೇ ಈ ನಿನ್ನ ತಾಯಿ. ಈಗ ನಿನ್ನನ್ನೂ ಕರೆದುಕೊಂಡು ಅವಳು ಪತಿಗೃಹಕ್ಕೆ ಪ್ರಯಾಣಮಾಡುವಳು. ನೀನು ಅಲ್ಲಿಗೆ ಹೋದೊಡನೆ ನಿನ್ನ ತಂದೆಯ ಪಾದಗಳನ್ನು ಹಿಡಿದು ಅಭಿವಾದನಮಾಡು. ಅವನಿಂದ ಯೌವರಾಜ್ಯವನ್ನು ಪಡೆದು ಸುಖವಾಗಿ ಬಾಳು. ಅವನು ನಿನ್ನ ತಂದೆಯಾದುದರಿಂದ ಅವನಿಗೆ ನೀನು ಸರ್ವವಿಧದಲ್ಲಿಯೂ ವಿಧೇಯನಾಗಿರಬೇಕು. ಆಮೇಲೆ ನೀನು ಕಾಲಕ್ರಮದಿಂದ ಪಿತೃಪಿತಾಮಹ ಪರಂಪರೆಯಿಂದ ಬಂದ ನಿನ್ನ ರಾಜ್ಯದಲ್ಲಿ ಅಭಿಷಿಕ್ತನಾಗಿ ಮಹಾರಾಜನೆನಿಸಿಕೊಳ್ಳುವೆ. ಆದರೆ ನೀನು ರಾಜನಾಗಿರುವಾಗ, ನಮ್ಮನ್ನು ಮಾತ್ರ ಮರೆಯದೆ ಆಗಾಗ ನೆನಸುತ್ತಿರು!'' ಎಂದನು.

ಆಗ ಆ ಕುಮಾರನು ಕಣ್ವನ ಪಾದಗಳನ್ನು ಹಿಡಿದು ನಮಸ್ಕರಿಸಿ, "ತಾತಾ! ನೀನೇ ನನಗೆ ತಂದೆ! ನೀನೇ ನನಗೆ ತಾಯಿ! ನೀನೇ ನನಗೆ ಗತಿ! ನನಗೆ ಎಲ್ಲವೂ ನೀನೇ! ನಿನ್ನನ್ನು ಬಿಟ್ಟು ಬೇರೆ ತಂದೆಯನ್ನು ನಾನು ಕಂಡವನಲ್ಲ! ನಿನ್ನ ಪಾದಶುಶ್ರೂಷೆಯೇ ನನಗೆ ಇಹಪರಗಳೆರಡರಲ್ಲಿಯೂ ಶ್ರೇಯಸ್ಕರವಾದುದು. ನನ್ನ ತಾಯಿಯಾದ ಈ ಶಕುಂತಳೆಗೆ ಇಷ್ಟವಿದ್ದರೆ ಅವಳುಮಾತ್ರ ಪತಿಗೃಹಕ್ಕೆ ಹೋಗಲಿ! ಗಂಡನಮೇಲೆ ಆಸೆಯಿದ್ದು ಅವಳು ಹೋಗುವುದಕ್ಕೆ ನನ್ನ ಅಡ್ಡಿಯಿಲ್ಲ. ನಾನು ತಮ್ಮ ಪಾದಶುಶ್ರೂಷೆ ಮಾಡುತ್ತ ಇಲ್ಲಿಯೇ ಇರುವೆನು. ಆದರೆ, ನನ್ನಿಂದ ನಿಮ್ಮ ಆಶ್ರಮಕ್ಕೇನೂ ಬಾಧೆಯಿಲ್ಲದಂತೆ ಎಚ್ಚರದಿಂದಿರುವೆನು. ಮೊದಲಿನಂತೆ ನಾನು ಇಲ್ಲಿನ ದುಷ್ಟ ಮೃಗಗಳೊಡನೆ ಆಟವಾಡುವುದಕ್ಕೂ ಹೋಗುವುದಿಲ್ಲ. ನಾನು ಯಾವಾಗಲೂ ನಿಮಗೆ ವಿಧೇಯನಾಗಿ, ನಿಮ್ಮಲ್ಲಿ ವೇದಾಧ್ಯಯನವನ್ನು ಮಾಡುತ್ತಿರುವೆನು'' ಎಂದು ಹೇಳಿ, ಆ ಕಣ್ವಮುನಿಯ ಪಾದಗಳನ್ನು ಬಿಗಿಯಾಗಿ ಹಿಡಿದುಕೊಂಡನು. ಈ ಮಾತನ್ನು ಕೇಳಿ ಶಕುಂತಳೆಗೆ ಕಣ್ಣುಗಳಲ್ಲಿ ಪಳಪಳನೆ ನೀರು ಬಂದಿತು. ತನ್ನ ಮಗನು ತನ್ನ ತಂದೆಯಲ್ಲಿ ತೋರಿಸಿದ ಭಕ್ತಿಯನ್ನೂ, ತನ್ನೊಡನೆ ಅವನು ಬರುವುದಿಲ್ಲವೆಂದು ಹೇಳಿದ ಅವನ ಮಾತುಗಳನ್ನೂ ಕೇಳಿ, ಹರ್ಷ ದುಃಖಗಳೆರಡೂ ಅವಳ ಮನಸ್ಸನ್ನು ಏಕಕಾಲದಲ್ಲಿ ಆವರಿಸಿದುವು. ಹೀಗೆ ಅಳುತ್ತ

ರುವ ತಾಯಿಯನ್ನು ನೋಡಿ, ಆ ಕುಮಾರನು "ಅಮ್ಮಾ! ಇದೇನು! ಹೀಗೆ ಅಳುತ್ತಿರುವೆ? ತಾತನು ಹೇಳಿದ ಮಾತನ್ನು ನೀನು ಗಮನಿಸಲಿಲ್ಲವೇನು? ನಿನಗೆ ನಿಜವಾಗಿ ನಿನ್ನ ಪತಿಯಲ್ಲಿ ಪ್ರೀತಿಯಿದ್ದರೆ, ಬೆಳಗ್ಗೆ ಹಾಸಿಗೆಯಿಂದೆದ್ದೊಡನೆ ಹೊರಟಿರಬೇಕಲ್ಲವೆ?" ಎಂದನು. ಆಗ ಶಕುಂತಳೆಯು "ಅಯ್ಯೋ! ಪಾಪಮಾಡುವವನೊಬ್ಬನು. ಅದರ ಫಲವನ್ನು ಅನುಭವಿಸುವವರು ಮಹಾಜನರು. ಕುಮಾರಾ! ನಾನು ಪ್ರತಿದಿನವೂ ಬೇಡವೆಂದು ತಡೆಯುತಿದ್ದರೂ, ನನ್ನ ಮಾತನ್ನು ಕೇಳದೆ ನೀನು ಭಿನ್ನ ಚೇಷ್ಟೆಗಳನ್ನು ನಡೆಸುತ್ತಲೇ ಇರುವೆ. ಇದಿರಿಗೆ ಬಂದ ಆನೆಗಳನ್ನು ಕೈಗಳಿಂದಲೇ ಗುದ್ದಿ, ಸಿಮ್ಹವ್ಯಾಘ್ರಾದಿಗಳಿಂದ ತುಂಬಿದ ವನಗಳನ್ನೆಲ್ಲ ನೀನು ಕಲಗಿಸುತ್ತಿರುವೆ. ಹೀಗೆಯೇ ನೀನು ಇನ್ನೂ ಎಷ್ಟೋ ವಿಧವಾದ ದುಷ್ಟಕಾರ್ಯಗಳನ್ನು ಮಾಡಿ, ನನ್ನ ತಂದೆಗೆ ಬೇಸರವನ್ನು ಹುಟ್ಟಿಸಿದುದರಿಂದ, ಅವನು ನಿನ್ನ ಚೇಷ್ಟೆಯನ್ನು ತಡೆಯಲಾರದೆ ಕೋಪಗೊಂಡು ನಮ್ಮಿಬ್ಬರನ್ನೂ ಈ ಆಶ್ರಮದಿಂದ ಹೊರಡಿಸಬೇಕೆಂದು ನಿಶ್ಚಯಿಸಿರುವನು. ನಿನ್ನ ಚೇಷ್ಟೆಯನ್ನು ತಡೆಯಲಾರದೆ ಇವನು ನನ್ನನ್ನೂ ಇಲ್ಲಿಂದ ಹೊರಡಿಸುತ್ತಿರುವನು. ಕುಮಾರಾ! ನನಗೇನೂ ಆ ದುಷ್ಯಂತನ ಬಳಿಗೆ ಹೋಗಬೇಕೆಂಬ ಆಸೆಯಿಲ್ಲ. ನಾನು ನಿನಗೆ ರಾಜ್ಯವನ್ನೂ, ಬೇರೆ ಯಾವ ಹಿತವನ್ನೂ ಕೋರತಕ್ಕವಳಲ್ಲ. ಜಿತೇಂದ್ರಿಯನಾದ ಈ ಮಹರ್ಷಿಯ ಪಾದಮೂಲದಲ್ಲಿಯೇ ವಾಸಿಸುವೆನು" ಎಂದಳು.

ಓ ಜನಮೇಜಯರಾಜಾ! ಹೀಗೆಂದು ಹೇಳಿ ಶಕುಂತಳೆಯು ರೋದಿಸುತ್ತ ಆ ಮಹರ್ಷಿಯ ಪಾದಗಳಮೇಲೆ ಬಿದ್ದಳು. ಆಗ ಕಣ್ವನು ಆಕೆಗೆ ಸಕಾರಣಗಳಾದ ಅನೇಕ ಸಮಾಧಾನೋಕ್ತಿಗಳನ್ನು ಹೇಳುತ್ತ, "ಶಕುಂತಳೆ! ನಿನಗೆ ಹಿತವಾಗಿಯೂ, ಪಥ್ಯವಾಗಿಯೂ ಇರುವ ನನ್ನ ಮಾತನ್ನು ಕೇಳು. ಸ್ತ್ರೀಯರಿಗೆ ಪಾತಿವ್ರತ್ಯಗುಣವನ್ನು ಬಿಟ್ಟು ಬೇರೆ ಯಾವುದೂ ಫಲಕಾರಿಯಾಗದು. ದೇವತೆಗಳು ಪತಿವ್ರತೆಯರ ವಿಷಯದಲ್ಲಿಯೇ ಸಂತುಷ್ಟರಾಗಿ, ಅವರಿಗೆ ಸಮಸ್ತವರಗಳನ್ನೂ ಕೊಡುವರು. ಅವರಲ್ಲಿ ಅನುಗ್ರಹವನ್ನು ತೋರಿಸುವರು. ಅವರನ್ನು ಸಮಸ್ತ ವಿಪತ್ತುಗಳಿಂದ ಬಿಡಿ

ಸುವರು. ಪತಿಯ ಅನುಗ್ರಹದಿಂದ ಸ್ತ್ರೀಯರು ಸರ್ವವಿಧವಲ್ಲಿಯೂ ಪುಣ್ಯವನ್ನು ಪಡೆಯುವರೇ ಹೊರತು ಅವರಿಗೆ ಅಶುಭವುಂಟಾಗದು. ಆದುದರಿಂದ ಎಲೆ ಶುಚಿಸ್ಮಿತೆ! ನೀನು ಹೋಗಿ ದುಷ್ಯಂತರಾಜನನ್ನು ಆರಾಧಿಸು" ಎಂದನು. ಆಮೇಲೆ ಕಣ್ವನು ತಿರುಗಿ ಆ ಶಕುಂತಳೆಯ ಮಗನನ್ನು ನೋಡಿ, "ಕುಮಾರಾ! ನೀನು ನನಗೆ ದೌಹಿತ್ರನು. ಮಹಾತ್ಮನಾದ ಇಲಿಲನ ಪೌತ್ರನು. ನಾನು ಹೇಳುವ ಮಾತನ್ನು ಕೇಳು. ನನ್ನ ಮಾತನ್ನು ಸತ್ಯವೆಂದು ನಂಬು. ಈ ನಿನ್ನ ತಾಯಿಗೆ ಮನಸ್ಸಿನಲ್ಲಿ ಪತಿಯನ್ನು ನೋಡಬೇಕೆಂಬ ಆಸೆಯು ಬಹಳವಾಗಿದ್ದರೂ ಬಾಯಲ್ಲಿಮಾತ್ರ ಬೇರೆ ವಿಧವಾಗಿ ಆಡುತ್ತಿರುವಳು. ಅಲ್ಲಿ ಹೋಗುವುದಕ್ಕೆ ಇಷ್ಟವಿಲ್ಲವೆಂದು ನುಡಿಯುತ್ತಿರುವಳು. ಆದುದರಿಂದ ಓ ಕುಮಾರಾ! ನೀನೇ ಅವಳನ್ನು ಹೇಗಾದರೂ ಕರೆದುಕೊಂಡು ಹೋಗಿ ಅವಳ ಪತಿಯ ಬಳಿಗೆ ಸೇರಿಸು. ಋಷಿಗಳೊಡನೆ ಇವಳನ್ನು ಕರೆದುಕೊಂಡು ಅಲ್ಲಿಗೆ ಹೋಗಲು ನೀನೇ ಶಕ್ತನು. ಇನ್ನು ಹೊರಡು" ಎಂದು ಹೇಳಿ, ಒಡನೆಯೇ ತನ್ನ ಶಿಷ್ಯರನ್ನು ಕರೆದು "ಎಲೈ ಶಿಷ್ಯರೆ! ಇದೋ! ಈ ಶಕುಂತಳೆಯನ್ನು ನೀವು ಇವಳ ಈ ಮಗನೊಡನೆ ಕರೆದುಕೊಂಡು ಹೋಗಿ ಅವಳ ಗಂಡನ ಮನೆಯಲ್ಲಿ ಬಿಟ್ಟು ಬರಬೇಕು. ಸ್ತ್ರೀಯರು ಗಂಡನ ಮನೆಯನ್ನು ಬಿಟ್ಟು ಬಹುಕಾಲದವರೆಗೆ ಬೇರೆ ಕಡೆಯಲ್ಲಿರುವುದು ಯುಕ್ತವಲ್ಲ. ಇದರಿಂದ ಅವರ ಕೀರ್ತಿಗೂ, ನಡತೆಗೂ, ಧರ್ಮಕ್ಕೂ ಕಳಂಕವುಂಟಾಗುವುದು. ಆದುದರಿಂದ ನೀವು ಬೇಗನೆ ಅವಳನ್ನು ಕರೆದುಕೊಂಡು ಹೊರಡಿರಿ" ಎಂದನು.

ಹೀಗೆ ಕಶ್ಯಪಪುತ್ರನಾದ ಕಣ್ವಮುನಿಯಿಂದ ಧರ್ಮಕ್ಕನುಸಾರವಾಗಿ ಶ್ಲಾಘಿಸಲ್ಪಟ್ಟ ತನ್ನ ಪುತ್ರನ ವಿಷಯವನ್ನು ಕೇಳಿದಮೇಲೆ, ಶಕುಂತಲೆಯು ಚಿತ್ತಸಮಾಧಾನದಿಂದ ಸಂತೋಷಹೊಂದಿ, ಪ್ರಯಾಣಕ್ಕಾಗಿ ಆ ಮಹರ್ಷಿಯ ಅನುಮತಿಯನ್ನು ಕೇಳಿದಳು. ಆ ಕುಮಾರನೂ ಕೂಡ ತಂದೆಯ ಮನೆಗೆ ಹೋಗಲು ಸಮ್ಮತಿಸಿ, ತಾಯಿಯನ್ನು ಕುರಿತು "ಅಮ್ಮಾ! ಇನ್ನೇಕೆ ತಡಮಾಡುವೆ? ಹೊರಡುವೆವು ನಡೆ" ಎಂದು ಹೇಳಿ, ತಿರುಗಿ ಕಣ್ವನ ಪಾದಗಳನ್ನು ಹಿಡಿದು ನಮಸ್ಕರಿಸಿದನು. ಶಕುಂತಲೆಯೂ ಆಗ

ತನ್ನ ತಂದೆಯ ಪಾದಗಳನ್ನು ಹಿಡಿದು ನಮಸ್ಕರಿಸಿ, ಕೈಮುಗಿದು ಪ್ರದಕ್ಷಿಣೆಮಾಡಿ ಬಂದು ಹೀಗೆಂದು ಹೇಳುವಳು. "ಮಹಾತ್ಮಾ! ನಾನು ನಿನ್ನಲ್ಲಿ ತಂದೆಯೆಂಬ ಸಲಿಗೆಯಿಂದಲೋ, ಅಜ್ಞಾನದಿಂದಲೋ ಅತಿಕ್ರಮಿಸಿ ಮಾತನಾಡಿರಬಹುದು. ಅನೃತವನ್ನಾಡಿರಬಹುದು. ಅಕಾರ್ಯವನ್ನೋ, ನಿನಗೆ ಅಪ್ರಿಯವಾದ ಕಾರ್ಯವನ್ನೋ ಮಾಡಿರಬಹುದು. ಅವೆಲ್ಲವನ್ನೂ ಮನ್ನಿಸಬೇಕು" ಎಂದಳು. ಈ ಮಾತನ್ನು ಕೇಳಿ ಕಣ್ವನಿಗೆ ತಡೆಯಲಾರದ ವ್ಯಸನವುಂಟಾಯಿತು. ಮಾತಾಡದೆ ತಲೆತಗ್ಗಿಸಿ ಸುಮ್ಮನೆ ನಿಂತಿದ್ದನು. ಮನುಷ್ಯಧರ್ಮಕ್ಕೆ ತಕ್ಕಂತೆ ಆ ಮಹರ್ಷಿಯ ಕಣ್ಣುಗಳಲ್ಲಿಯೂ ನೀರು ತುಳುಕುತಿದ್ದಿತು. ಆಮೇಲೆ ಆ ಮಹರ್ಷಿಯು ತನ್ನ ಆಶ್ರಮದಲ್ಲಿದ್ದ ಎಲ್ಲಾ ಮಹರ್ಷಿಗಳನ್ನೂ ಕರಸಿಕೊಂಡನು. ಅವರಲ್ಲಿ ಕೇವಲ ಜಲಾಹಾರದಿಂದಲೇ ಜೀವಿಸತಕ್ಕವರು ಕೆಲವರು, ಕೇವಲ ವಾಯುಭಕ್ಷಕರು ಕೆಲವರು, ತರಗೆಲೆಗಳನ್ನೇ ತಿಂದು ಜೀವಿಸತಕ್ಕ ಮುನಿಗಳು ಕೆಲವರು. ಹಣ್ಣುಗಡ್ಡೆಗಳನ್ನು ಮಾತ್ರ ಭುಜಿಸತಕ್ಕವರು ಕೆಲವರು. ಇಂದ್ರಿಯನಿಗ್ರಹವನ್ನು ಮಾಡಿ, ದೇಹವನ್ನು ದಂಡಿಸಿ, ಕೇವಲ ಕೃಶರಾಗಿ, ಬರೀ ನರಗಳಿದ್ದ ಮೈಯುಳ್ಳವರು ಕೆಲವರು. ವ್ರತನಿಷ್ಠರು ಕೆಲವರು. ಜಟಾಧಾರಿಗಳು ಕೆಲವರು. ಚೀರಧಾರಿಗಳು ಕೆಲವರು. ಕೇಶವಿಲ್ಲದವರು ಕೆಲವರು. ಅಜಿನಗಳನ್ನೂ, ವಲ್ಕಲಗಳನ್ನೂ ಧರಿಸಿದ್ದವರು ಕೆಲವರು, ಅಂತವರನ್ನೆಲ್ಲ ಕರೆಯಿಸಿ, ಅವರನ್ನು ಕುರಿತು "ಎಲೈ ತಾಪಸರೆ! ಈ ಶಕುಂತಳೆಯು ನಮ್ಮಿಂದ ಪೋಷಿಸಲ್ಪಟ್ಟ ಮಗಳು! ಇವಳು ಮಹಾಯಶಸ್ವಿನಿ! ಕಾಡಿನಲ್ಲಿ ಹುಟ್ಟಿ, ಕಾಡಿನಲ್ಲಿಯೇ ಬೆಳೆದವಳು. ಅವಳು ಏನೂ ತಿಳಿದವಳಲ್ಲ. ನೀವೆಲ್ಲರೂ ಸೇರಿ ಇವಳನ್ನು ಈಕೆಯ ಗಂಡನ ಅರಮನೆಗೆ ಕರೆದುಕೊಂಡು ಹೋಗಿ ಬಿಟ್ಟುಬರಬೇಕು. ಆ ಪೌರವರಾಜನ ಪಟ್ಟಣವು ಈ ಆಶ್ರಮದಿಂದ ಎರಡು ಯೋಜನಗಳ ದೂರಕ್ಕಿರುವುದು. ಆ ರಾಜಧಾನಿಗೆ ಪ್ರತಿಷ್ಠಾನವೆಂದು ಹೆಸರು. ಈ ಕುಮಾರನ ಪಿತಾಮಹನು ಆ ಪ್ರತಿಷ್ಠಾನನಗರದಲ್ಲಿ ಊರ್ವಶಿಯೊಡನೆ ಬಹುಕಾಲದವರೆಗೆ ಇರುತಿದ್ದನು. ಅವನಿಗೆ ಪೂರೂರವಸ್ಸು ಎಂದು ಹೆಸರು. ಆ ಪಟ್ಟಣವು ಜಲವಸತಿಗಳಿಂದಲೂ, ಕಾಡುಗಳಿಂದಲೂ, ಧನಧಾನ್ಯಸಮೃದ್ಧಿಗಳಿಂದಲೂ,

ಅತಿ ರಮ್ಯವಾಗಿರುವುದು. ಅದು ಗಂಗಾಯಮುನೆಗಳ ಸಂಗಮಸ್ಥಳದಲ್ಲಿರುವುದು. ನೀವು ಅಲ್ಲಿಗೆ ಹೋದೊಡನೆ ಆ ನದಿಗಳ ಸಂಗಮಸ್ಥಳದಲ್ಲಿ ಸ್ನಾನವನ್ನು ಮಾಡಿ, ಅಗ್ನಿಹೋತ್ರವನ್ನು ಮುಗಿಸಿ, ಫಲಮೂಲಗಳನ್ನೂ, ಕಾಯಿಗಳನ್ನೂ ಭುಜಿಸಿ ಹಿಂತಿರುಗಿ ಬನ್ನಿರಿ. ಓ ಮಹರ್ಷಿಗಳಿರಾ! ನೀವು ಅಲ್ಲಿ ಭೋಜನಮಾಡದೆ ಬಂದರೆ, ಪ್ರಯಾಣವು ಕಷ್ಟವಾಗುವುದು. ನೀವು ದಾರಿಯಲ್ಲಿ ನಡೆಯುವಾಗ ಬಹಳ ಶ್ರಮಪಡುವಿರಿ'' ಎಂದನು. ಆಗ ಋಷಿಗಳು '' ತಮ್ಮ ಆಜ್ಞೆಯಂತೆಯೇ ನಡೆಯುವೆವು'' ಎಂದು ಹೇಳಿ, ಶಕುಂತಳೆಯನ್ನು ಮುಂದಿಟ್ಟುಕೊಂಡು ಅಲ್ಲಿಂದ ಹೊರಟರು. ದೇವಕುಮಾರನಂತೆ ಶೋಭಿಸುತ್ತಿರುವ ಆ ಶಕುಂತಳೆಯ ಮಗನನ್ನೂ, ಆ ಶಕುಂತಳೆಯನ್ನೂ ಬಹಳ ಎಚ್ಚರಿಕೆಯಿಂದ ನಡೆಸಿಕೊಂಡು, ಧರ್ಮವತ್ಸಲರಾದ ಆ ಮಹರ್ಷಿಗಳೆಲ್ಲರೂ ಪ್ರಯಾಣಮಾಡಿ ದಾರಿಯಲ್ಲಿ ಅನೇಕ ವನಗಳನ್ನೂ, ನದಿಗಳನ್ನೂ, ಬೆಟ್ಟಗಳನ್ನೂ, ಗಿರಿನದಿಗಳನ್ನೂ, ಗುಹೆಗಳನ್ನೂ, ರಮ್ಯವಾದ ತಪ್ಪಲುಗಳನ್ನೂ ನೋಡುತ್ತಾ ಬಂದರು. ನಡುನಡುವೆ ಅನೇಕರಾಷ್ಟ್ರಗಳೂ, ನಗರಗಳೂ, ಪುಣ್ಯಾಶ್ರಮಗಳೂ ಕಾಣಿಸುತಿದ್ದುವು. ಇವುಗಳನ್ನೆಲ್ಲ ನೋಡುತ್ತ ಬರುವಾಗ ಅವರಲ್ಲಿ ಯಾರಿಗೂ ದಾರಿನಡೆದ ಶ್ರಮವೇ ತೋರದಂತಾಯಿತು. ಅವರು ಮೆಲ್ಲಗೆ ನಡೆದು, ಮಧ್ಯಾಹ್ನದ ಹೊತ್ತಿಗೆ ಸರಿಯಾಗಿ ಪ್ರತಿಷ್ಠಾನಗರದ ಬಳಿಗೆ ಬಂದು ಸೇರಿದರು. ಪುರೂರವಸ್ಸಿಗಾಗಿ ಹಿಂದೆ ಸಾಕ್ಷಾದ್ದೇವೇಂದ್ರನಿಂದಲೇ ನಿರ್ಮಿತವಾದ ಆ ನಗರದ ಸೊಬಗನ್ನು ಕೇಳಬೇಕೆ? ಆ ಪಟ್ಟಣದ ಸುತ್ತಲೂ ಅಗಾಧವಾದ ಅಗಳು! ಉನ್ನತವಾದ ಅಟ್ಟಲೆಗಳು! ಪ್ರಧಾನವಾದ ಸುತ್ತಿನ ಕೋಟೆಗಳ ಮೇಲೆ ನೂರಾರು ಫಿರಂಗಿಗಳು! ಚಕ್ರಯಂತ್ರಗಳು! ಇನ್ನೂ ನಾನಾಬಗೆಯ ದಿವ್ಯಾಯುಧಗಳು! ಇವುಗಳಿಂದ ರಕ್ಷಿತವಾಗಿ, ಆ ನಗರವು ಎಂಥವರಿಗೂ ಜಯಿಸಲಸಾಧ್ಯವಾಗಿರುವುದು. ಶ್ರೀಮಂತರ ಗೃಹಗಳೂ, ಅರಮನೆಗಳೂ, ಉಪ್ಪರಿಗೆಗಳೂ, ಸರ್ವವಸ್ತು ಸಮೃದ್ಧಗಳಾದ ಅಂಗಡಿಬೀದಿಗಳೂ, ಸಭಾಮಂಟಪಗಳೂ, ಅರವಟ್ಟಿಗೆಗಳೂ, ಅಲ್ಲಲ್ಲಿ ಕಂಗೊಳಿಸುತ್ತಿರುವುವು. ಬೇರೆಬೇರೆ ವಿಭಾಗಗಳುಳ್ಳ ವಿಸ್ತಾರವಾದ ರಾಜಮಾರ್ಗಗಳಿಂದ ಶೋಭಿಸುತ್ತಿರುವುದು. ಅಲ್ಲಲ್ಲಿ ಕೈಲಾಸಶಿಖರಗಳಂತಿರುವ

ಗೋಪುರಗಳೂ, ಮಂಗಳಾಲಂಕಾರಗಳಿಂದ ಕೂಡಿದ ಬಾಗಿಲುಗಳೂ, ತೋರಣಗಳೂ, ವಿಚಿತ್ರ ಸ್ತಂಭಗಳೂ, ಶೋಭಿಸುತ್ತಿರುವುವು. ಅಲ್ಲಲ್ಲಿ ಹೂತೋಟಗಳೂ, ಮಾವಿನ ತೋಪುಗಳೂ, ಅತ್ಯಂತ ಮನೋಹರವಾಗಿರುವುವು. ಸುತ್ತಲೂ ಮೇಖಲೆಯಂತೆ ದೊಡ್ಡ ಪ್ರಾಕಾರವು ಆವರಿಸಿರುವುದು. ಎಲ್ಲಾ ಬಗೆಯ ಜಲಪುಷ್ಪಗಳಿಂದ ಶೋಭಿತವಾದ ಸರೋವರಗಳೂ, ಉಪವನಗಳೂ ಅಲ್ಲಲ್ಲಿ ಕಂಗೊಳಿಸುತ್ತಿರುವುವು. ಅಲ್ಲಿನ ಜನರೆಲ್ಲರೂ ತಮ್ಮತಮ್ಮ ವರ್ಣಾಶ್ರಮಧರ್ಮಗಳಲ್ಲಿ ನಿರತರಾಗಿ ನಿತ್ಯೋತ್ಸವ ಸಂತುಷ್ಟರಾಗಿರುವರು. ಜನರೆಲ್ಲರೂ ಧನಧಾನ್ಯಸಮೃದ್ಧಿಗಳಿಂದ ಪುಷ್ಟರಾಗಿ ರತ್ನಗಳಿಂದಲೇ ಅರ್ಚಿಸಲ್ಪಡುತ್ತಿರುವರು. ಯಜ್ಞಶೀಲರೂ, ವಿದ್ವಾಂಸರೂ, ಅಗ್ನಿಹೋತ್ರಿಗಳೂ, ಶಿಲ್ಪಿಗಳೂ, ದಾನಶೀಲರೂ ಅಲ್ಲಿ ತುಂಬಿರುವರು. ಅಲ್ಲಿನ ಜನರೆಲ್ಲರೂ ಅಕಾರ್ಯಗಳಿಗೆ ನಾಚುವವರಾಗಿ, ಸ್ವಧರ್ಮಗಳಲ್ಲಿಯೇ ನಿರತರಾಗಿರುವರು. ಒಬ್ಬೊಬ್ಬರೂ ಅಧರ್ಮಕ್ಕೆ ಅಂಜತಕ್ಕವರು. ಒಬ್ಬೊಬ್ಬರೂ ಸದ್ಗತಿಯನ್ನು ಸಾಧಿಸಬೇಕೆಂಬ ಆಶೆಯುಳ್ಳವರು. ಇಂತಹ ಸಾಧುಸಮೂಹಗಳಿಂದ ತುಂಬಿ, ಬೇರೊಂದು ಇಂದ್ರಲೋಕವೋ ಎಂಬಂತೆ ಕಾಣುತ್ತಿರುವ ಆ ಪಟ್ಟಣದ ಮಧ್ಯಭಾಗದಲ್ಲಿ ರಾಜನ ಅರಮನೆಯು ಶೋಭಿಸುತ್ತಿರುವುದು ಅದು ದೇವೇಂದ್ರನ ಗೃಹಕ್ಕೆ ಸಮಾನವಾಗಿ, ಸರ್ವವಸ್ತುಗಳಿಂದ ಸಮೃದ್ಧವಾಗಿರುವುದು. ಆ ಅರಮನೆಯ ನಡುವೆ ನಾನಾ ರತ್ನಗಳಿಂದ ಅಲಂಕೃತವಾದ ಸಭಾಸ್ಥಾನವೊಂದಿರುವುದು. ಆ ಸಭೆಯಲ್ಲಿ ಸರ್ವಾಲಂಕಾರಭೂಷಿತನೂ, ರಾಜರ್ಷಿಯೂ ಆದ ದುಷ್ಯಂತನು ಉತ್ತಮಾಸನದಮೇಲೆ ಕುಳಿತಿರುವನು. ಅವನ ಸುತ್ತಲೂ ಬ್ರಾಹ್ಮಣರೂ, ಕ್ಷತ್ರಿಯಕುಲದ ರಾಜರೂ, ಮಂತ್ರಿಗಳೂ ನೆರೆದಿರುವರು. ಸೂತರು, ಮಾಗಧರು, ಮಂದಿಗಳು ಮೊದಲಾದ ಹೊಗಳುಭಟರು ಆ ರಾಜನ ವಂಶಾವಳಿಗಳನ್ನೂ ಗುಣಗಳನ್ನೂ, ಬಿರುದುಗಳನ್ನೂ ಆಗಾಗ ಉದ್ಘೋಷಿಸುತ್ತಿರುವರು. ಇಂತಹ ಆಸ್ಥಾನದಲ್ಲಿ ಧರ್ಮಾಸನದಮೇಲೆ ಕುಳಿತಾಗ ಆ ರಾಜನ ಬಳಿಗೆ ಕಾರ್ಯಾರ್ಥಿಗಳು ಬಂದು ತಮ್ಮತಮ್ಮ ಕಾರ್ಯಗಳನ್ನು ವಿಜ್ಞಾಪಿಸಿ ಹೋಗುತ್ತಿರುವರು. ಆಯಾ ದಿನದಲ್ಲಿ ರಾಜನು ತಮ್ಮ ದರ್ಶನಕ್ಕಾಗಿ ಬಂದವರೆಲ್ಲರನ್ನೂ ವಿಚಾರಿಸಿ, ಅವರವರ ಕೋರಿಕೆಗಳನ್ನೆಲ್ಲ ಈಡೇರಿಸಿ ಕಳು

ಹಿಸಿದಮೇಲೆ, ವಿಶ್ರಾಂತಿಯಲ್ಲಿ ಸುಖವಾಗಿ ಕುಳಿತಿರುವನು. ಈ ಸಮಯಕ್ಕೆ ಮಹರ್ಷಿಗಳೂ ಆ ಪಟ್ಟಣಕ್ಕೆ ಬಂದು ಸೇರಿದರು. ಅವರ ಪ್ರವೇಶಕಾಲಕ್ಕೆ ಸರಿಯಾಗಿ ಸಮಿಾಪದಲ್ಲಿ ಕೆಲವು ಪಕ್ಷಿಗಳು ಕೂಗಿದುವು. ಆ ಪಕ್ಷಿಗಳ ಧ್ವನಿಯನ್ನು ಕೇಳಿ, ಶಕುನಶಾಸ್ತ್ರವನ್ನು ಬಲ್ಲ ಆ ಋಷಿಕುಮಾರರು ಶಕುಂತಳೆಯನ್ನು ಕುರಿತು "ಅಮ್ಮಾ ಶಕುಂತಳೆ ! ಅದೋ! ಆ ಪಕ್ಷಿಗಳು ಶುಭವಾಗಿ ಕೂಗುತ್ತಿವೆ. ಇದೊಂದು ಒಳ್ಳೇ ಶುಭಶಕುನವು. ನಿನಗೆ ಮುಂದೆ ಕ್ಷೇಮವುಂಟು. ನೀನು ರಾಜನ ಪಟ್ಟಮಹಿಷಿಯಾಗುವೆ. ಈಗ ನಿನ್ನ ಮಗನೂ ಈ ದಿನದಲ್ಲಿಯೇ ಯುವರಾಜನಾಗುವನು" ಎಂದರು.

ಓ ಜನಮೇಜಯರಾಜಾ! ಆ ಮಹರ್ಷಿಗಳು ಶಕುಂತಳೆಯನ್ನು ಮುಂದಿಟ್ಟುಕೊಂಡು ಅನೇಕ ವಾದ್ಯಘೋಷಗಳಿಂದ ತುಂಬಿದ ಆ ವರ್ಧಮಾನಪುರದೊಳಗೆ ಪ್ರವೇಶಿಸಿದರು. ಬೀದಿಯಲ್ಲಿ ಬರುತಿದ್ದ ಆ ಕುಮಾರನನ್ನು ಕಂಡವರೆಲ್ಲರೂ, ಅವನ ರೂಪಕ್ಕೂ, ತೇಜಸ್ಸಿಗೂ ಮರುಳಾಗಿ ಅವನನ್ನು ಕೊಂಡಾಡುತಿದ್ದರು. ಕಾಡಿನಲ್ಲಿಯೇ ಬೆಳೆದ ಆ ಕುಮಾರನೂ ಕೂಡ, ಆ ಪುರದ ಅತಿಶಯವನ್ನು ನೋಡಿ ತಾನು ಆಗ ಇಂದ್ರಲೋಕದಲ್ಲಿರುವಂತೆಯೇ ಸಂತೋಷಪರವಶನಾಗಿದ್ದನು. ಈ ರಾಜಕುಮಾರನನ್ನು ನೋಡುವ ಕುತೂಹಲದಿಂದ ಪುರಜನರೆಲ್ಲರೂ ಒಬ್ಬರನ್ನೊಬ್ಬರು ಕರೆದುಕೊಂಡು ಬೀದಿಯಲ್ಲಿ ನೆರೆದು ನಿಂತಿದ್ದರು. ಆಗ ಅಲ್ಲಿ ನೆರದ ಜನರು ತಮ್ಮತಮ್ಮೊಳಗೆ ಒಬ್ಬರಿಗೊಬ್ಬರು "ಆಹಾ! ಈಕೆ ಯಾರು? ಈ ಮುನಿಜನಗಳ ನಡುವೆ ದೇವತಾಸ್ತ್ರೀಯಂತೆಯೂ, ಬೇರೊಬ್ಬ ಮಹಾಲಕ್ಷ್ಮಿಯಂತೆಯೂ ಕಾಣಿಸುತ್ತಿರುವಳು. ಇಂದ್ರಲೋಕದಿಂದ ಶಚೀದೇವಿಯು ತನ್ನ ಮಗನಾದ ಜಯಂತನನ್ನು ಕರೆದುಕೊಂಡು ಬಂದಂತೆಯೇ ತೋರುತ್ತಿರುವಳು" ಎಂದು ಆಶ್ಚರ್ಯದಿಂದ ಬೆರಗಾಗಿ ನೋಡುತ್ತ, ಕೊನೆಗೆ ಆ ಮಹರ್ಷಿಗಳ ಮುಂದೆ ಬಂದು ನಮಸ್ಕರಿಸಿ, "ಓ ಮಹಾತ್ಮರೆ! ಈಗ ನಮ್ಮೆಲ್ಲರ ಜನ್ಮವು ಸಾರ್ಥಕವಾಯಿತು. ನಾವೆಲ್ಲರೂ ಕೃತಾರ್ಥರಾದೆವು. ಸೂರ್ಯತೇಜಸ್ಸುಳ್ಳ ತಮ್ಮಂತಹ ಮಹರ್ಷಿಗಳನ್ನು ನಾವು ಕಣ್ಣಾರೆ ಈ ನಗರದಲ್ಲಿ ನೋಡುವಂತಾದುದು ನಮ್ಮ ಭಾಗ್ಯವಿಶೇಷವು"

ಎಂದರು. ಹೀಗೆಂದು ಹೇಳುತ್ತ ಕೆಲವರು ಪಾರ್ವತೀಸಹಿತನಾದ ಕುಮಾರಸ್ವಾಮಿಯಂತೆ ಬರುತ್ತಿರುವ ಆ ಕುಮಾರನ ಹಿಂದೆಯೇ ನಡೆದುಬಂದರು. ಮೂಢರಾದ ಬೇರೆ ಕೆಲವರಿಗೆ, ಆ ಋಷಿಗಳ ರೂಪವನ್ನೂ, ವೇಷವನ್ನೂ ನೋಡಿ ಭಯವೂ, ಬೇಸರವೂ ಹುಟ್ಟಿತು. ಆ ಮಹರ್ಷಿಗಳಾದರೋ ಸೊಂಟಕ್ಕೆ ಮರದ ಪಟ್ಟೆಯನ್ನುಟ್ಟು, ಜಿಂಕೆಯ ಚರ್ಮವನ್ನು ಹೊದೆದಿರುವರು. ಮೊದಲೇ ಕೇವಲಕೃಶವಾಗಿ ನರಗಳೆದ್ದ ಮೈಯಿಂದ ಬಡವಾಗಿರುವರು. ಇದರಮೇಲೆ ಪ್ರಯಾಣಮಾಡಿಬಂದ ಶ್ರಮವೊಂದು, ಹಸಿವು ಬಾಯಾರಿಕೆಗಳಿಂದಾದ ಬಳಲಿಕೆಯೊಂದು, ಇವುಗಳಿಂದ ಮುಖವು ಕಂದಿರುವುದು. ಅವರ ಮೈಯಲ್ಲಿ ಮಾಂಸವೇ ಇಲ್ಲದೆ ಬರೀ ಚರ್ಮವೂ, ಮೂಳೆಯೂ ಕಾಣಿಸುತ್ತಿರುವುದು. ಪಿಂಗಳವಾದ ನೇತ್ರಗಳು! ಉದ್ದವಾಗಿ ಹೊಂಬಣ್ಣವಾದ ಜಡೆ! ಉದ್ದವಾದ ಹಲ್ಲುಗಳು! ಆಳಕ್ಕೆ ಬಿದ್ದ ಹೊಟ್ಟೆ! ಸಣ್ಣ ತಲೆ! ಮೇಲೆತ್ತಿದ ತೋಳು! ಇಂತಹ ವಿಲಕ್ಷಣಾಕೃತಿಗಳನ್ನು ನೋಡಿ ನಾಗರಿಕರೆನಿಸಿದ ಆ ಮೂಢರು "ಅಯ್ಯೋ! ಈ ಪಿಶಾಚಿಗಳೆಲ್ಲಿ ಬಂದುವು? ರಾತ್ರಿಯಾಗುವುದಕ್ಕೆ ಮೊದಲೇ ಊರೊಳಗೆ ನುಗ್ಗಿದ ಭೂತಗಳಂತೆ ಕಾಣುತ್ತಿವೆ" ಎಂದು ಹಾಸ್ಯಮಾಡತೊಗಿದರು. ಈ ಮಾತುಗಳೆಲ್ಲ ಆ ಮಹರ್ಷಿಗಳ ಕಿವಿಗೂ ಬಿದ್ದುವು. ಅವರ ಮನಸ್ಸಿಗೆ ಬಹಳ ಕಿಂಕ್ಕೃತಿಯುಂಟಾಗಿ ಅವರು ತಮ್ಮೊಳಗೆ ಒಬ್ಬರ ಮುಖವನ್ನೊಬ್ಬರು ನೋಡುತ್ತ "ಆಹಾ! ಪೂಜ್ಯರಾದ ಕಣ್ವರು ಪುರದೊಳಗೆ ಪ್ರವೇಶಮಾಡಬಾರದೆಂದು ನಮಗೆ ಆಜ್ಞೆಮಾಡಬೇಕಾಗಿದ್ದಿತು. ಅವರು ಆ ವಿಷಯವನ್ನು ಸೂಚಿಸದೆ ಕಳುಹಿಸಿಬಿಟ್ಟರು. ಆದರೆ, ಸತ್ಯವಾದಿಗಳಾದ ಅವರಿಗೆ ಸುಳ್ಳಾಡಿ ನಮ್ಮನ್ನು ಮೋಸಪಡಿಸಬೇಕೆಂಬ ಉದ್ದೇಶವಿರದು. ಏತಕ್ಕಾಗಿ ಈ ವಿಚಾರವನ್ನು ತಿಳಿಸಲಿಲ್ಲವೋ ಕಾಣೆವು. ಇಂತಹ ದುಷ್ಟಜನರಿಂದ ತುಂಬಿದ ಈ ಪುರದೊಳಗೆ ನಾವು ಹೇಗೆ ಪ್ರವೇಶಿಸಬೇಕು? ಸರ್ವಸಂಗಪರಿತ್ಯಾಗಮಾಡಿದ ಮುನಿಗೆ ಇಂತಹ ನಗರದಲ್ಲಿ ಆಗಬೇಕಾದ ಪ್ರಯೋಜನವೇನಿದೆ? ಸರಿ! ನಾವು ಹಿಂತಿರುಗಿ ವನಪ್ರದೇಶಕ್ಕೇ ಹೋಗಿಬಿಡುವೆವು. ಗಂಗಾಯಮುನಾ ಸಂಗಮಸ್ಥಳದಲ್ಲಿರುವ ವನಕ್ಕೇ ನಾವು

ಹೋಗಿ ಸೇರುವೆವು" ಎಂದು ಹೇಳಿ ಥಟ್ಟನೆ ಅವರು ಅಲ್ಲಿಂದ ಹಿಂತಿರುಗಿ ಬಿಟ್ಟರು.

ಇದು ತೊಂಭತ್ತಾರನೆಯ ಅಧ್ಯಾಯವು.

{ ಶಕುಂತಳೆಯು ತನ್ನ ಮಗನೊಡನೆ ದುಷ್ಯಂತನ ಬಳಿಗೆ ಬಂದುದು. ಶಕುಂತಳೆಗೂ, ದುಷ್ಯಂತನಿಗೂ ನಡೆದ ಸಂವಾದಗಳು. }

ಆಗ ಶಕುಂತಳೆಯು ತನ್ನನ್ನು ಬಿಟ್ಟು ಹಿಂತಿರುಗಿ ಹೋಗುತ್ತಿರುವ ಆ ಮಹರ್ಷಿಗಳನ್ನು ನೋಡಿ ದುಃಖಿತಳಾಗಿ, ತನ್ನ ಮಗನ ಕೈಯನ್ನು ಹಿಡಿದುಕೊಂಡು, ತಾಯಿತಂದೆಗಳಿಲ್ಲದ ತಬ್ಬಲಿಮಕ್ಕಳು ಶೋಕಿಸುವಂತೆ ಬಹಳ ಭಯಶೋಕಗಳಿಂದ ತತ್ತಳಿಸುತಿದ್ದಳು. ಆಮೇಲೆ ಹೇಗೋ ಕೊನೆಗೆ ಧೈರ್ಯವನ್ನು ತಂದುಕೊಂಡು, ರಾಜವೀಥಿಯ ಮಾರ್ಗವಾಗಿ ತನ್ನ ಮಗನೊಡನೆ ಮೆಲ್ಲಗೆ ನಡೆಯುತ್ತಾ ಮುಂದೆ ಹೋದಳು. ರಾಜವೀಥಿಯಲ್ಲಿ ಅವರಿಬ್ಬರೂ ಬರುತ್ತಿರುವಾಗ, ಆ ರಾಜಕುಮಾರನಿಗೆ ಹಿಂದೆ ಯಾವಾವಾಗಲೂ ತಾನು ನೋಡಿಲ್ಲದ ಆ ಪುರಸನ್ನಿವೇಶಗಳನ್ನೆಲ್ಲ ನೋಡಿ, ಆಶ್ಚರ್ಯವುಂಟಾಯಿತು. ಎಲ್ಲಿ ನೋಡಿದರೂ ಉಪ್ಪರಿಗೆಗಳು! ಎಲ್ಲಿ ನೋಡಿದರೂ ರಾಜಮಂದಿರಗಳು! ಅಲ್ಲಲ್ಲಿ ವಿಚಿತ್ರಾಲಂಕಾರಗಳಿಂದ ಕೂಡಿದ ಸಭಾಮಂಟಪಗಳು! ಇವನ್ನೆಲ್ಲಾ ಅವನು ನೋಡುತ್ತಾ ಬಂದನು. ಹೀಗೆ ರಾಜವೀಥಿಯಲ್ಲಿ ಅವರಿಬ್ಬರೂ ಬರುವುದನ್ನು ನೋಡಿ ಪುರಜನರು ಆಶ್ಚರ್ಯಪಡುತ್ತ ತಮ್ಮೊಳಗೆ ಒಬ್ಬರೊಬ್ಬರು "ಏನಿದು! ಇವಳು ಪದ್ಮವಿಲ್ಲದ ಲಕ್ಷ್ಮಿಯಂತೆ ಕಾಣುವಳು. ಹಂಸದಂತೆ ನಡೆ! ಕೋಗಿಲೆಯಂತೆ ಕಂಠಧ್ವನಿ! ಚಂದ್ರನಂತಿರುವ ಮುಖದ ಸೊಬಗು! ಸಾಕ್ಷಾತ್ ಲಕ್ಷ್ಮಿಯಂತೆ ತೋರುವಳು. ಇವಳ ಮಂದಹಾಸವು ಮೊಲ್ಲೆಯ ಹೂವಿನಂತೆ ಮನಸ್ಸನ್ನಾಕರ್ಷಿಸುವುದು. ಕಮಲಕಾಂತಿಯಂತಿರುವ ಇವಳ ದೇಹಲಾವಣ್ಯವೂ, ತಾವರೆಯೆಸಳಿನಂತಿರುವ ಇವಳ ವಿಶಾಲವಾದ ಕಣ್ಣುಗಳೂ, ಪುಟಹಾಕಿದ ಬಂಗಾರದಂತಿರುವ ಇವಳ ದೇಹಕಾಂತಿಯೂ ಅದ್ಭುತವಾಗಿರುವುದು.

ಒಂದೇ ಹಿಡಿಯಲ್ಲಿ ಅಡಗುವಂತಿರುವ ನಡು! ಅಂದವಾದ ಮತ್ತು ನುಣು ಪಾದ ತಲೆಕೂದಲು! ಒತ್ತಾದ ಎದೆಕಟ್ಟು! ವಿಶಾಲವಾದ ಜಘನಗಳು! ಆನೆಯ ಸುಂಡಿಲಿನಂತಿರುವ ಉರುಟಾದ ತೊಡೆಗಳು! ನೆಲದಲ್ಲಿ ಸಮ ಮಟ್ಟಕ್ಕೆ ನಿಲ್ಲುವ ಕೆಂಪಾದ ಅಂಗಾಲುಗಳು! ಇಂತಹ ರೂಪಸಂಪತ್ತುಳ್ಳ ಈ ತರುಣಿಯು ಸ್ವರ್ಗಲೋಕದಿಂದಲೇ ಇಲ್ಲಿಗೆ ಬಂದಿರುವಂತೆ ತೋರುವುದು" ಎಂದು ಜನರೆಲ್ಲರೂ ಅವಳ ರೂಪಕ್ಕೆ ಬೆರಗಾಗಿದ್ದರು. ಮತ್ತು ಅವರು ಸ್ತ್ರೀಯ ಪಕ್ಕದಲ್ಲಿರುವ ಮಗನ ಠೀವಿಯನ್ನೂ, ಅವನ ರೂಪಸಂಪತ್ತನ್ನೂ ನೋಡುತ್ತ "ಆಹಾ! ಸಿಂಹವಂತೆ ಗಂಭೀರದೃಷ್ಟಿ! ಸಿಂಹದಂತೆ ಹೆಗಲು! ಸಿಂಹದಂತೆ ಹಲ್ಲುಗಳು! ಸಿಂಹದಂತೆ ಎದೆ! ಸಿಂಹದಂತೆ ಬಲಪರಾಕ್ರಮಗಳು! ಸಿಂಹದಂತೆ ಗಂಭೀರವಾದ ನಡೆ! ಉದ್ದವಾದ ತೋಳುಗಳು! ಉಬ್ಬಿದ ಹೆಗಲು! ವಿಶಾಲವಾದ ಎದೆ! ಚಕ್ರದಂತೆ ತಲೆ! ಕೆಂಪಾದ ಅಂಗೈ ಮತ್ತು ಅಂಗಾಲುಗಳು! ಹವಳದಂತಿರುವ ಬಾಯಿ! ತುಂಬಿಯಂತೆ ಕಂಠಧ್ವನಿ! ಇಂತಹ ರಾಜಲಕ್ಷಣಗಳಿಂದ ಕೂಡಿದ ಈತನು ಯಾರ ಮಗನೋ ತಿಳಿಯಲಿಲ್ಲ. ಇವನಲ್ಲಿ ರಾಜಲಕ್ಷ್ಮಿಯ ಲಕ್ಷಣಗಳೆಲ್ಲವೂ ಕಾಣಿಸುತ್ತಿರುವುವು. ಇವನು ಆಕಾರದಲ್ಲಿಯೂ, ರೂಪದಲ್ಲಿಯೂ, ಮೈಕಟ್ಟಿನಲ್ಲಿಯೂ, ತೇಜಸ್ಸಿನಲ್ಲಿಯೂ ನಮ್ಮ ಪ್ರಭುವಾದ ದುಷ್ಯಂತನನ್ನೇ ಹೋಲುತ್ತಿರುವನು. ಇವನು ಯಾರ ಮಗನಾಗಿರಬಹುದು?" ಎಂದು, ಅಲ್ಲಲ್ಲಿ ಸಾವಿರಾರು ಮಂದಿ ಗುಂಪುಕೂಡಿ ಪ್ರಶಂಸೆಮಾಡುತಿದ್ದರು. ಅವರ ನಿಜಾಂಶವನ್ನು ತಿಳಿಯದೆ, ಅನೇಕ ಸ್ತ್ರೀಯರು ಅನೇಕವಿಧವಾಗಿ ತಮಗೆ ತೋರಿದ ಯುಕ್ತಿವಾದಗಳನ್ನೆಲ್ಲ ಆಡಿಕೊಳ್ಳುತಿದ್ದರು. ಕೆಲವು ಸ್ತ್ರೀಯರು ಅನಾಥೆಯಾಗಿ ಬಂದಿರುವ ಆ ಶಕುಂತಳೆಯಲ್ಲಿ ಕನಿಕರದಿಂದ, ಅವಳ ಹಿಂದೆಯೇ ಹೊರಟು ಬರುತ್ತಾ, ಅವಳಿಗೆ ಪ್ರಿಯವಚನಗಳನ್ನು ನುಡಿಯುತಿದ್ದರು. ಕುಹಕಬುದ್ಧಿಯುಳ್ಳ ಕೆಲವರು ಅವಳನ್ನು ಕುರಿತು ಕುಹಕವಾಕ್ಯಗಳನ್ನೂ ನುಡಿಯುತಿದ್ದರು. ಹೀಗೆ ಅವರವರು ತನ್ನ ವಿಷಯವಾಗಿ ಆಡಿಕೊಳ್ಳುತ್ತಿದ್ದ ಹಲವು ಮಾತುಗಳನ್ನು ಕೇಳುತ್ತ, ಶಕುಂತಳೆಯು ಬಾಯೆತ್ತದೆ ತಲೆತಗ್ಗಿಸಿಕೊಂಡೇ ಆ ದುಷ್ಯಂತನ ಅರಮನೆಯ ಬಾಗಿಲಿಗೆ ಬಂದು ಸೇರಿದಳು.

ಅರಮನೆಯು ಸಮೀಪಿಸುತ್ತ ಬಂದಹಾಗೆಲ್ಲ ಆ ಶಕುಂತಳೆಗೆ ಮನಸ್ಸಿನಲ್ಲಿ ತಾನು ಬಂದ ಕಾರ್ಯವು ಬಹಳ ಮಹತ್ತಾದುದರಿಂದ ಮುಂದೆ ಏನಾಗುವುದೋ ಎಂಬ ಭೀತಿ ಹುಟ್ಟಿತು. ಲಜ್ಜೆಯೊಂದು ಕಡೆ. ಇದರಿಂದ ಕುಗ್ಗಿದ ಮೈಯುಳ್ಳವಳಾಗಿ ಅವಳು ತನ್ನೊಳಗೆ ತಾನು "ಅಯ್ಯೋ! ಲಜ್ಜೆಯಿಲ್ಲದೆ ನನ್ನ ವಿಚಾರವನ್ನು ನಾನೇ ಆ ರಾಜನಮುಂದೆ ಹೇಗೆ ಹೇಳಲಿ?" ಎಂದು ಕಳವಳಿಸುತಿದ್ದಳು. ಧೈರ್ಯದಿಂದ ಸ್ವಲ್ಪ ಮುಂದೆ ಹೋಗಿ, ದ್ವಾರಪಾಲಕರ ಮೂಲಕವಾಗಿ ರಾಜನಿಗೆ ಹೇಳಿಕಳುಹಿಸಿದಳು. ಅವರು ರಾಜಾಜ್ಞೆಯಿಂದ ಅವಳನ್ನು ಒಳಕ್ಕೆ ತಂದುಬಿಟ್ಟರು. ಬಾಲಸೂರ್ಯನಂತೆ ತೇಜಸ್ವಿಯಾದ ಆ ಕುಮಾರನೊಡನೆ ಅವಳು ಸಿಂಹಾಸನದಲ್ಲಿರತಕ್ಕ ರಾಜನಮುಂದೆ ಬಂದು ನಿಂತಳು. ಸಿಂಹಾಸನದಮೇಲೆ ಇಂದ್ರನಂತೆ ಕುಳಿತಿದ್ದ ತನ್ನ ಪತಿಯನ್ನು ನೋಡಿ ಅವಳಿಗೆ ಮನಸ್ಸಿನಲ್ಲಿ ಅಪಾರ ಸಂತೋಷವಾದರೂ, ಲಜ್ಜೆಯಿಂದ ಬಾಯೆತ್ತಲಾರದೆ, ಸ್ವಲ್ಪ ಹೊತ್ತು ತಲೆಬಗ್ಗಿಸಿದಹಾಗೆಯೇ ನಿಂತಿದ್ದು, ಆಮೇಲೆ ನ್ಯಾಯರೀತಿಯಿಂದ ರಾಜನನ್ನ ವಂದಿಸಿದಳು. ಆಮೇಲೆ ಮಗನನ್ನು ನೋಡಿ "ಕುಮಾರಾ! ನಿನ್ನ ತಂದೆಯಾದ ಆ ರಾಜನಿಗೆ ನಮಸ್ಕರಿಸು" ಎಂದು ಹೇಳಿ ತಿರುಗಿ ಲಜ್ಜೆಯಿಂದ ತಲೆಬಗ್ಗಿಸಿ, ಸಭಾಸ್ಥಾನದಲ್ಲಿದ್ದ ಒಂದು ಕಂಬವನ್ನೊರಗಿಕೊಂಡು ನಿಂತಳು. ಆಮೇಲೆ ಮೆಲ್ಲಗೆ ತಲೆಯೆತ್ತಿ "ಮಹಾರಾಜನು ಪ್ರಸನ್ನನಾಗಬೇಕು" ಎಂದಳು. ಆಮೇಲೆ ಅವಳ ಮಗನೂ ಕೂಡ ರಾಜನಿಗೆ ನಮಸ್ಕರಿಸಿ ಕೈಮುಗಿದು, ಸಂತೋಷದಿಂದ ಅರಳಿದ ಕಣ್ಣುಗಳೊಡನೆ ರಾಜನನ್ನೇ ನೋಡುತಿದ್ದನು. ದುಷ್ಯಂತನಾದರೋ ಕೇವಲ ಧರ್ಮನಿರತನು. ಪರಸ್ತ್ರೀಯರನ್ನು ಧಾರಾಳವಾಗಿ ಕಣ್ಣೆತ್ತಿ ನೋಡತಕ್ಕವನಲ್ಲ. ಅಲ್ಲದೆ ತನ್ನ ಆಸ್ಥಾನಕ್ಕೆ ಬಂದವರನ್ನು ಕ್ರಮವಾಗಿ ವಿಚಾರಿಸದೆ ಅಲಕ್ಷ್ಯಮಾಡಿಬಿಡುವವನಲ್ಲ. ಹೀಗಿರುವುದರಿಂದ, ಕೊನೆಗೆ ರಾಜಧರ್ಮವನ್ನನುಸರಿಸಿ ಅವಳನ್ನು ಕುರಿತು "ಎಲೆ ಮಾನಿನಿ! ನೀನು ನನ್ನಲ್ಲಿಗೆ ಬಂದ ಕಾರ್ಯವೇನು? ಅಲ್ಲದೆ ನೀನು ನಿನ್ನ ಮಗನನ್ನೂ ಇಲ್ಲಿಗೆ ಕರೆತಂದಿರುವುದರಲ್ಲಿ ಏನೋ ವಿಶೇಷವಿರಬೇಕು. ನಿನಗೆ ಬೇಕಾದುದನ್ನು ಕೇಳು. ನಡೆಸಿಕೊಡುವೆನು" ಎಂದನು. ಈ ಮಾತನ್ನು ಕೇಳಿದಾಗಲೇ ಶಕುಂತಳೆಗೆ

ಡು. ನಿನ್ನನ್ನು ನಾನು ಪತ್ನಿಯೆಂದುಮಾತ್ರ ಪರಿಗ್ರಹಿಸಲು ಅವಕಾಶ ವಿಲ್ಲ" ಎಂದನು.

ಇದು ತೊಂಭತ್ತೇಳನೆಯ ಅಧ್ಯಾಯವು.



ಶಕುಂತಳೆಗೂ, ದುಷ್ಯಂತನಿಗೂ ನಡೆದ ಸಂವಾದಗಳು.

ದುಷ್ಯಂತನ ಬಾಯಿಂದ ಹೊರಟ ಈ ಮಾತುಗಳನ್ನು ಕೇಳಿದೊಡನೆ ಶಕುಂತಳೆಗೆ ಮೈಮೇಲೆ ಪ್ರಜ್ಞೆತಪ್ಪಿದಂತಾಯಿತು. ಲಜ್ಜೆಯಿಂದ ತಲೆ ಬಗ್ಗಿಸಿ ಸುಮ್ಮನೆ ಒಂದು ಕಂಬದಂತೆ ನಿಂತುಬಿಟ್ಟಳು. ತನ್ನನ್ನು ವಂಚಿಸಿದ ಆ ರಾಜನಮೇಲೆ ಅವಳಿಗೆ ದುಸ್ಸಹವಾದ ಆಗ್ರಹವುಂಟಾಗಿ, ಕಣ್ಣುಗಳು ಕೆಂಪೇರಿದುವು. ತುಟಿಗಳು ನಡುಗುತಿದ್ದುವು. ತನ್ನ ಕಡೆಗಣ್ಣುಗಳಿಂದಲೇ ದಹಿಸಿಬಿಡುವಂತೆ ಆ ರಾಜನನ್ನು ಓರೆನೋಟದಿಂದ ನೋಡಿದಳು. ಅಷ್ಟು ಕೋಪವುಂಟಾದರೂ ಅವಳು ತನ್ನ ವಿಕಾರವನ್ನು ಮರೆಸಿಟ್ಟುಕೊಂಡು, ತಪೋಬಲದಿಂದ ತನಗಿದ್ದ ತೇಜಸ್ಸನ್ನೂ ಹೊರಪಡಿಸದೆ, ತಡೆದಿಟ್ಟುಕೊಂಡಳು. ಸ್ವಲ್ಪಹೊತ್ತಿನವರೆಗೆ ತನ್ನಲ್ಲತಾನೇ ಧ್ಯಾನಿಸಿ, ಆಮೇಲೆ ತನ್ನ ಪತಿಯನ್ನು ನೋಡಿ ನ್ಯಾಯಯುಕ್ತವಾದ ಈ ಮಾತನ್ನಾಡುವಳು. "ಓ ಮಹಾರಾಜಾ! ನೀನು ನನ್ನೊಡನೆ ವಿವಾಹವಾದ ಸಂಗತಿಯನ್ನು ತಿಳಿದೂ ನಿರ್ಭಯವಾಗಿ ನಾನು ತಿಳಿಯೆನೆಂದು ಬಾಯಿಂದಾಡುತ್ತಿರುವೆ! ರಾಜನಾದ ನೀನು ಕೇವಲಪ್ರಾಕೃತಮನುಷ್ಯನಂತೆ ಹೀಗೆ ಸುಳ್ಳಾಡಬಹುದೆ? ಸತ್ಯಕ್ಕೂ, ಅಸತ್ಯಕ್ಕೂ ನಿನ್ನ ಹೃದಯವೇ ಸಾಕ್ಷಿಯಾಗಿದೆ. ಇಂತಹ ಸತ್ಯಾಸತ್ಯಗಳಿಗೆ ಸಾಕ್ಷಿಯಾದ ನಿನ್ನ ಆತ್ಮವನ್ನೇ ನೀನು ವಂಚಿಸುತ್ತಿರುವೆಯಾ! ಯಾವನು ತಾನು ಒಳಗೆ ಒಂದು ವಿಧವಾಗಿದ್ದು, ಹೊರಕ್ಕೆ ಬೇರೆ ವಿಧವಾಗಿ ತೋರಿಸಿಕೊಳ್ಳುವನೋ, ಅಂತವನು ಮಹಾಪಾಪಿ! ಆತ್ಮಾಪಹಾರಿಯೆನಿಸಿಕೊಳ್ಳುವ ಅಂತಹ ಮಹಾಚೋರನು ಬೇರೆ ಯಾವ ಪಾಪಕ್ಕೆ ತಾನೇ ಹೇಸುವನು? ಓ ರಾಜಾ! "ನಾನು ಮಾಡಿದ ಕಾರ್ಯವನ್ನು ನಾನೊಬ್ಬನುಹೊರತು ಬೇರೆ ಕಂಡವರಾರು? ನನಗೆ ನಾನೇ ಬಲ್ಲೆನು" ಎಂದು ನೀನು ಈಗ ತಿಳಿದಿರುವಂತಿದೆ. ನಿನ್ನ ಹೃದಯದಲ್ಲಿ

ಎದೆ ನಡುಗಿತು. ಆಗ ಅವಳು “ ಮಹಾರಾಜಾ ! ಪ್ರಸನ್ನನಾಗು ! ನಾನು ಹೇಳುವುದನ್ನು ಆಮೂಲಾಗ್ರವಾಗಿ ಲಾಲಿಸು. ಈ ಕುಮಾರನು ನಿನ್ನ ಮಗನಲ್ಲದೆ ಬೇರೆಯವನಲ್ಲ. ನನ್ನ ಗರ್ಭದಲ್ಲಿ ಜನಿಸಿದವನು. ನೀನೂ ಈ ಪುತ್ರನಿಗೆ ಯುವರಾಜಪದವಿಯನ್ನು ಕೊಡುವುದಾಗಿ ವಾಗ್ದಾನಮಾಡಿರುವೆ. ಇದೋ ! ನಿನ್ನ ಮಗನನ್ನು ಕರೆದುಕೊಂಡು, ನಿನ್ನ ಮಾತಿನಂತೆ ಯುವರಾಜಪದವಿಯಲ್ಲಿ ಅಭಿಷೇಕಿಸು. ನೀನು ನಮ್ಮ ಆಶ್ರಮದಲ್ಲಿ ಹೇಳಿದ ಮಾತಿನಂತೆ ನಡೆಸು. ನಿನ್ನನ್ನು ವರಿಸುವ ಕಾಲದಲ್ಲಿಯೇ ನೀನು ಈ ಪ್ರತಿಜ್ಞೆಯನ್ನು ಮಾಡಿಕೊಟ್ಟಿರುವೆ ! ಓ ಮಹಾಬಾಹೂ ! ಪುರುಷೋತ್ತಮಾ ! ಕಣ್ವಾಶ್ರಮದಲ್ಲಿ ನಡೆದ ವೃತ್ತಾಂತಗಳನ್ನೆಲ್ಲ ನೀನು ನಿನ್ನ ಸ್ಮರಣೆಗೆ ತಂದುಕೊಳ್ಳುವವನಾಗು ” ಎಂದಳು.

ಓ ಜನಮೇಜಯರಾಜಾ ! ದುಷ್ಯಂತನಿಗೆ ಆ ಹಿಂದಿನ ಸಂಗತಿಗಳೆಲ್ಲವೂ ಆಗಲೇ ಮರೆತುಹೋಗಿದ್ದುವು. ಕಣ್ವಾಶ್ರಮದಿಂದ ಹಿಂತಿರುಗಿ ಬಂದಮೇಲೆ, ತನ್ನ ಇತರಸ್ತ್ರೀಯರಲ್ಲಿ ಭೋಗಾಸಕ್ತನಾದ ಅವನಿಗೆ ಈ ಶಕುಂತಳೆಯ ವಿಷಯವಾಗಲಿ, ಅವಳಿಗೆ ಅವನು ಪುತ್ರನೆಂದಾಗಲಿ, ಯಾವುದೂ ಮನಸ್ಸಿಗೆ ಹತ್ತಲಿಲ್ಲ. ಆದರೆ, ಮಂದಹಾಸವಿಶಿಷ್ಟವಾದ ಆ ಶಕುಂತಳೆಯ ಮುಖವನ್ನೂ, ಅವಳು ಕರೆತಂದಿರುವ ಪುತ್ರನ ತೇಜಸ್ಸನ್ನೂ ನೋಡಿ ಅವನ ಮನಸ್ಸು ಸ್ವಲ್ಪಮಟ್ಟಿಗೆ ಕದಲಿತು. ಅವನಿಗೆ ಅಂತರಂಗದಲ್ಲಿ ಸಂತೋಷವೂ, ಒಂದು ಬಗೆಯ ಪ್ರೀತಿಯೂ ಹುಟ್ಟಿತು. ಆ ಶಕುಂತಳೆಯ ಮಾತನ್ನು ಕೇಳಿದಮೇಲೆ, ಅವಳ ವೃತ್ತಾಂತವು ಸ್ವಲ್ಪಮಟ್ಟಿಗೆ ಅವನ ಸ್ಮರಣೆಗೂ ಬಂದಿತು. ಹಾಗಿದ್ದರೂ ಅವನು ಆಕೆಯನ್ನು ಕುರಿತು “ ಎಲೆ ಭದ್ರೆ ! ನಿನ್ನನ್ನು ವಿವಾಹವಾದ ಸಂಗತಿಯು ನನಗೇನೂ ಸ್ಮರಣೆಗೆ ಬರಲಿಲ್ಲ. ಕ್ರಮವಾದ ವಿವಾಹವಿಲ್ಲದೆ, ಹೀಗೆ ಸಿಕ್ಕಿದ ಕಡೆಯಲ್ಲಿ, ಸಿಕ್ಕಿದ ಸ್ತ್ರೀಯರೊಡನೆ ನಾನು ಸೇರಿರಲಾರೆನೆಂಬುದೇ ನನ್ನ ದೃಢನಿಶ್ಚಯವು. ನಿನ್ನ ವಿವಾಹದ ಸ್ಮರಣವೇನೂ ನನಗಿಲ್ಲ. ಎಲೆ ಕಲ್ಯಾಣಿ ! ಧರ್ಮಾರ್ಥಕಾಮಗಳನ್ನನುಸರಿಸಿ ನಿನ್ನೊಡನೆ ಸಂಬಂಧವುಂಟಾದಹಾಗೆ ನಾನು ನೆನೆಸಲಿಲ್ಲ. ನೀನು ಹೋದರೆ ಹೋಗು ! ಇದ್ದರೆ ಇರು ! ನಿನ್ನ ಇಷ್ಟಬಂದಂತೆ ಮಾ

ಎಚ್ಚರಗೊಂಡಿರುವ ಆ ಪರಮಾತ್ಮನನ್ನೂ ನೀನು ಮರೆತಂತಿದೆ. ಅವನು ನಿನ್ನ ಹೃದಯದಲ್ಲಿದ್ದುಕೊಂಡು, ನಿನ್ನ ಪಾಪಕಾರ್ಯಕ್ಕೆಲ್ಲ ಸಾಕ್ಷಿಯಾಗಿ ನೋಡುತ್ತಿರುವಾಗ, ಅವನಿಗಿದಿರಾಗಿಯೇ ನೀನು ಪಾಪಕಾರ್ಯವನ್ನು ಮಾಡುತ್ತಿರುವೆ! ಲೋಕದಲ್ಲಿ ಸಾಧುಗಳಿಗೆಲ್ಲ ಧರ್ಮವೇ ಹಿತಕ್ಕೆ ಕಾರಣವು. ಎಂತಹ ಸಂದರ್ಭದಲ್ಲಿಯೂ ಅಸತ್ಯಕ್ಕೆ ಹೋಗದಿರತಕ್ಕವರಿಗೆ ಆ ಧರ್ಮವು ಎಂದಿಗೂ ದುಃಖವನ್ನುಂಟುಮಾಡದೆ ಅವರನ್ನು ರಕ್ಷಿಸುವುದು. ನೀನಾದರೋ ರಹಸ್ಯವಾಗಿ ಪಾಪಕಾರ್ಯವನ್ನು ಮಾಡಿ, ನಿನ್ನ ಕಾರ್ಯವನ್ನು ಯಾರೂ ತಿಳಿಯರೆಂದು ನೆನೆಸಿರುವೆ. ಅದನ್ನು ದೇವತೆಗಳೆಲ್ಲರೂ ಬಲ್ಲರು! ನಿನ್ನ ಹೃದಯದಲ್ಲಿರುವ ಪರಮಾತ್ಮನೂ ನೋಡಿರುವನು! ಪ್ರತಿಮಾನುಷನೂ ಆಗಾಗ ನಡೆಸುವ ಕಾರ್ಯಗಳನ್ನು, ಸೂರ್ಯಚಂದ್ರರು, ವಾಯು, ಅಗ್ನಿ, ಭೂಮ್ಯಾಕಾಶಗಳು, ನೀರು, ಆಯಾ ಮನುಷ್ಯನ ಹೃದಯ, ಯಮಧರ್ಮರಾಜನು, ಅಹೋರಾತ್ರಿಗಳು, ಎರಡು ಸಂಧ್ಯೆಗಳು, ಧರ್ಮದೇವತೆ, ಇವರಿಷ್ಟುಮಂದಿಯೂ ಸದಾ ನೋಡುತ್ತಲೇ ಇರುವರು. ಮನುಷ್ಯನು ಆಗಾಗ ಮಾಡುವ ಕರ್ಮಗಳನ್ನೆಲ್ಲ ಕಣ್ಣಿಟ್ಟು ನೋಡುತ್ತಿರುವ ಹೃದಯಾಂತರ್ಯಾಮಿಯಾದ ಪರಮಾತ್ಮನು ಯಾರಲ್ಲಿ ತೃಪ್ತಿಹೊಂದುವನೋ, ಅವನ ಪಾಪವನ್ನು ವೈವಸ್ವತಯಮನು ತಾನಾಗಿಯೇ ನೀಗಿಸುವನು. ದುರ್ಬುದ್ಧಿಯುಳ್ಳ ಯಾವನ ವಿಷಯದಲ್ಲಿ ಆ ಅಂತರಾತ್ಮನು ತೃಪ್ತಿಹೊಂದುವುದಿಲ್ಲವೋ, ಆ ಪಾಪಕರ್ಮಿಯನ್ನು ಆ ಯಮನೇ ಹೆದರಿಸುವನು. ಯಾವನು ತನ್ನನ್ನು ತಾನೇ ವಂಚಿಸಿ ಅವಮಾನಗೊಳಿಸುವ ಆತ್ಮವಂಚಕನಾಗಿ, ತನ್ನ ಮನಸ್ಸಾಕ್ಷಿಯನ್ನು ಬೇರೆ ವಿಧವಾಗಿ ಹೊರಗೆ ತೋರಿಸುವನೋ, ಅವನಿಗೆ ದೇವತೆಗಳು ಎಂದಿಗೂ ಶ್ರೇಯಸ್ಸನ್ನುಂಟುಮಾಡಲಾರರು. ಅವನಿಗೆ ಅವನ ಆತ್ಮವೇ ವಿರೋಧಿಯಾಗುವುದು. ಎಲೈ ರಾಜನೆ! ಪತಿವ್ರತೆಯಾದ ನಾನು ನಿನ್ನನ್ನು ಕಂಡು ಈಗ ನಾನಾಗಿ ಮೇಲೆಬಿದ್ದು ಬಂದವಳೆಂದು ತಿಳಿದು ಅವಮಾನಗೊಳಿಸಬೇಡ! ಮಾನ್ಯೆಯಾದ ನಾನು ಈಗ ನಿನ್ನಲ್ಲಿಗೆ ಸ್ವಯವಾಗಿ ಬಂದಿದ್ದರೂ, ಕೇವಲಸಾಮಾನ್ಯಮನುಷ್ಯನಂತೆ ನೀನು ಈ ಮಹಾಸಭೆಯಲ್ಲಿ ನನ್ನನ್ನು ನಿರಾಕರಿಸುತ್ತಿರುವುದು ನಿನಗೆ ನ್ಯಾಯವಲ್ಲ. ಈಗ ನಾನು (ಜಾರಿಣಿಯಂತೆ) ಯಾರೂ ಇಲ್ಲದ ನಿರ್ಜನಸ್ಥಳದಲ್ಲಿ

ಬಂದು ನಿನ್ನಲ್ಲಿ ಮೊರೆಯಿಡುವುದಿಲ್ಲ. ರಾಜಾ! ನಾನು ಹೇಳುವುದೇನೂ ನಿನ್ನ ಕಿವಿಗೆ ಬೀಳುವುದಿಲ್ಲವೇನು? ಈಗ ನಾನು ಇಷ್ಟು ಮೊರೆಯಿಟ್ಟರೂ ನನ್ನ ಮಾತನ್ನು ನೀನು ಲಕ್ಷಿಸದಿದ್ದರೆ, ನಿನ್ನ ಶಿರಸ್ಸು ಈಗಲೇ ಸಹಸ್ರ ಭಾಗವಾಗಿ ಭೇದಿಸದೆ ಹೋಗಲಾರದು. ಪತಿಯಾದವನು ತನ್ನ ಪತ್ನಿಯ ಗರ್ಭದಲ್ಲಿ ತಾನೇ ಪ್ರವೇಶಿಸಿ, ತಾನೇ ಅವಳ ಗರ್ಭದಿಂದ ತಿರುಗಿ ಪುತ್ರರೂ ಪದಿಂದ ಜನಿಸುವನೆಂದು ತಿಳಿ. ಹೀಗೆ ಜನಿಸುವುದರಿಂದಲೇ ಪುರಾಣಜ್ಞ ರಾದ ಕವಿಗಳೂ, ಮಹರ್ಷಿಗಳೂ ಪತ್ನಿಗೆ "ಜಾಯೆ" ಯೆಂದು ಹೆಸರಿಟ್ಟಿ ರುವರು. ಪುರುಷನು ಶಾಸ್ತ್ರೋಕ್ತಕ್ರಮಗಳನ್ನು ನಡೆಸಿದಮೇಲೆ, ಅವನಿಗೆ ಉಂಟಾಗತಕ್ಕ ಸಂತತಿಯೇ ಅವನ ಪಿತೃಪಿತಾಮಹರನ್ನೆಲ್ಲ ತನ್ನಿಂದಲೂ, ಮತ್ತು ತನ್ನ ಮುಂದಿನ ಸಂತತಿಯಿಂದಲೂ ಉದ್ಧರಿಸತಕ್ಕುದು. ಮಗನು ತಂದೆಯನ್ನು 'ಪುತ್' ಎಂಬ ನರಕದಿಂದ ತಪ್ಪಿಸುವುದರಿಂದಲೇ ಅವನಿಗೆ ಪುತ್ರನೆಂಬ ಹೆಸರು ಬ್ರಹ್ಮಕಲ್ಪಿತವಾಗಿದೆ. ಮನುಷ್ಯನಿಗೆ ಪುತ್ರನಿಂದಲೇ ಪುಣ್ಯಲೋಕವು ವಶವಾಗುವುದು. ಆ ಪುತ್ರನ ಪುತ್ರನಿಂದ ಆ ಲೋಕಗಳು ಅವನಿಗೆ ಸ್ಥಿರಪಡುವುವು. ಅದರಿಂದ ಮುಂದೆ ಪೌತ್ರಪ್ರಪೌತ್ರಾದಿ ಸಂತಾ ನಗಳಿಂದ ಅವನ ಪಿತೃಗಳೆಲ್ಲರೂ ಆಯಾ ಪುಣ್ಯಲೋಕಗಳಲ್ಲಿ ಪೂರ್ಣಾನಂ ದವನ್ನನುಭವಿಸುವರು. ಯಾವಳು ಗೃಹಕಾರ್ಯದಲ್ಲಿ ಸಮರ್ಥಳೋ, ಮತ್ತು ಯಾವಳು ಪುತ್ರವತಿಯೋ, ಯಾವಳು ಪತಿಯನ್ನು ಪ್ರಾಣವೆಂದು ತಿಳಿದಿರುವಳೋ, ಯಾವಳು ಪತಿವ್ರತೆಯೋ ಅಂತವಳೇ ಭಾರ್ಯೆಯೆನಿಸು ವಳು. ಪುರುಷನಿಗೆ ಭಾರ್ಯೆಯೇ ಅರ್ಧದೇಹವು. ಅವನಿಗೆ ಭಾರ್ಯೆಯೇ ಉತ್ತಮ ಸ್ನೇಹಿತಳು. ಧರ್ಮಾರ್ಥಕಾಮಗಳೆಂಬ ತ್ರಿವರ್ಗಗಳಿಗೂ ಅವಳೇ ಮೂಲವು. ಭಾರ್ಯೆಯಿದ್ದವನೇ ಬಂಧುಗಳುಳ್ಳವನು. ಭಾರ್ಯೆಯಿದ್ದ ವರೇ ಕರ್ಮಶೀಲರು. ಭಾರ್ಯೆಯುಳ್ಳವರೇ ಗೃಹಮೇಧಿಗಳು. ಭಾರ್ಯೆ ಯುಳ್ಳವರೇ ನಿತ್ಯಸಂತೋಷಿಗಳು. ಭಾರ್ಯೆಯುಳ್ಳವರೇ ಶ್ರೀಮಂತರು. ಪುರುಷನಿಗೆ ಪತ್ನಿಯರೇ ರಹಸ್ಯದಲ್ಲಿ ಮಿತ್ರರೆನಿಸುವರು. ಅವರು ಯಾವಾ ಗಲೂ ಪ್ರಿಯವನ್ನು ನುಡಿಯುವವರು. ಪುರುಷನಿಗೆ ಪತ್ನಿಯರು ಧರ್ಮ ಕಾರ್ಯಗಳಲ್ಲಿ ತಂದೆಗಳಂತಿರುವರು. ಕಷ್ಟಕಾಲಗಳಲ್ಲಿ ತಾಯಿಯಂತೆ ಸಹಾಯಮಾಡುವರು. ದಾರಿನಡೆಯುವಾಗಲೂ, ಅರಣ್ಯಗಳಲ್ಲಿಯೂ ಅವ

ರು ವಿಶ್ರಾಂತಿರೂಪವಾಗಿರುವರು. ಲೋಕದಲ್ಲಿ ಪತ್ನಿಯಿದ್ದವರೇ ನಂಬಿಕೆಗೆ ಅರ್ಹರು. ಅಂತವರೇ ವಿಶ್ವಾಸಾರ್ಹರು. ಎಲ್ಲಾ ವಿಷಯದಲ್ಲಿಯೂ ಪತ್ನಿಯೇ ಪುರುಷನಿಗೆ ದಿಕ್ಕೆನಿಸುವಳು. ಪುರುಷನು ಬದುಕಿದ್ದಾಗಲೂ ಅವನು ಸತ್ತುಹೋದಮೇಲೆಯೂ, ಅವನ ಕಷ್ಟದಶೆಯಲ್ಲಿಯೂ, ಅವನು ಅಸಹಾಯನಾಗಿದ್ದಾಗಲೂ ಪತಿವ್ರತೆಯಾದ ಅವನ ಭಾರ್ಯೆಯೊಬ್ಬಳೇ ಅವನನ್ನು ಅನುಸರಿಸತಕ್ಕವಳು. ಮೊದಲೇ ಮರಣಹೊಂದಿದ ಭಾರ್ಯೆಯು ಪರಲೋಕದಲ್ಲಿ ತನ್ನ ಪತಿಗಾಗಿ ಆದರದಿಂದ ನಿರೀಕ್ಷಿಸುವಳು. ಮೊದಲು ಪತಿಯು ಸತ್ತರೆ, ಅವಳು ಸತ್ತಮೇಲೆ ಆ ಪತಿಯನ್ನೇ ಹಿಂಬಾಲಿಸುವಳು. ಓ ಮಹಾರಾಜಾ! ಈ ಕಾರಣದಿಂದಲೇ ಪತ್ನಿಯು ಇಹಪರಗಳೆರಡರಲ್ಲಿಯೂ ಪತಿಗೆ ದಿಕ್ಕಾಗಿರುವಳೆನ್ನುವರು. ಈ ಲೋಕದಲ್ಲಿ ಅವಳು ಪತಿಯ ದೇಹವನ್ನು ಚೆನ್ನಾಗಿ ಪೋಷಿಸಿ ಬೆಳೆಸುವಳು. ಪರಲೋಕಕ್ಕೆ ಹೋಗುವಾಗ ಅವನಿಗೆ ಪಾಥೇಯ (ಅನ್ನದ ಬುತ್ತಿ) ದಂತಿರುವಳು. ಈ ಕಾರಣದಿಂದಲೇ ಅವರಿಬ್ಬರಿಗೆ ಪಾಣಿಗ್ರಹಣ (ಕೈಕೊಡುವುದು) ವೆಂಬುದು ಶಾಸ್ತ್ರಸಿದ್ಧವಾಗಿ ಏರ್ಪಟ್ಟಿದೆ. ಮನುಷ್ಯನು ತನ್ನಿಂದ ತಾನೇ ಭಾರ್ಯೆಯ ಗರ್ಭದಲ್ಲಿ ಹುಟ್ಟಿಸಲ್ಪಟ್ಟು ಪುತ್ರನೆನಿಸುವನೆಂದು ಜ್ಞಾನಿಗಳು ಹೇಳುವರು. ಆದುದರಿಂದ ಪುರುಷನು ತನ್ನ ಭಾರ್ಯೆಯನ್ನು ತನ್ನ ತಾಯಿಯಂತೆ ಆದರಿಸಬೇಕಾದುದೇ ಧರ್ಮವು. ಆತ್ಮವೇ ಪುತ್ರನೆಂದು ಹೇಳಲ್ಪಡುವನು. ಅದಕ್ಕೆ ತಕ್ಕಂತೆ ನಡೆನುಡಿಗಳೂ, ಆಕಾರವೂ, ವ್ಯವಹಾರಗಳೂ, ಸುಳಿ ಮೊದಲಾದ ದೇಹಲಕ್ಷಣಗಳೂ, ತಂದೆಯಲ್ಲಿ ಕಾಣುವಂತೆಯೇ ಪುತ್ರನಲ್ಲಿ ಕಾಣುವುವು. ಪುತ್ರರಿಗೆ ತಂದೆಯ ಸಂಬಂಧದಿಂದಲೇ ಸದ್ಗುಣ ದುರ್ಗುಣಗಳೂ, ನಡತೆಗಳೂ, ಸ್ವಭಾವಗಳೂ ಏರ್ಪಡುವುವು. ತಂದೆಯು ತನ್ನ ಭಾರ್ಯೆಯಲ್ಲಿ ಉಂಟಾದ ಪುತ್ರನನ್ನು ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡುವಂತೆಯೇ ನೋಡಿ, ಪುಣ್ಯಶಾಲಿಯು ಸ್ವರ್ಗದಲ್ಲಿ ಹೇಗೋ ಹಾಗೆ ಆನಂದಭರಿತನಾಗುವನು. ಪತಿವ್ರತೆಯರಂತೆ ವೇಷಧಾರಿಗಳಾದ ಸ್ತ್ರೀಯರು ಪರಪುರುಷರಿಂದ ತಮ್ಮ ಗರ್ಭವನ್ನು ತಳೆದರೆ, ತಾವೂ ಕೆಟ್ಟು ನರಕಕ್ಕೆ ಹೋಗುವುದಲ್ಲದೆ, ತಮ್ಮ ಪತಿಯ ಕುಲವನ್ನೂ ನಾಶಮಾಡುವರು. ಹಾಗೆ ಹುಟ್ಟಿದ ಮಕ್ಕಳನ್ನು ಅವರು ತಮ್ಮ

ಮಕ್ಕಳೆಂದು ಭಾವಿಸಿದರೂ, ಆ ಮಕ್ಕಳೇ ಅವರಿಗೆ ಶತ್ರುಗಳಲ್ಲದೆ ಬೇರೆಯು ಲ್ಲ. ಅಂತಹ ಪುತ್ರರು ತಾಯಿಯನ್ನು ದ್ವೇಷಿಸುವರು. ಅವರು ಹೇಳಿದುದ ಕ್ಕೆಲ್ಲ ವಿರೋಧವಾಗಿಯೇ ನಡೆಸುವರಲ್ಲದೆ ಅವರ ಮಾತುಗಳನ್ನು ಕೇಳ ಲಾರರು. ತಂದೆಯೂಕೂಡ ಅಂತಹ ಮಕ್ಕಳನ್ನು ದ್ವೇಷಿಸುವನು. ನಿಜ ವಾಗಿ ತನ್ನ ಭಾರ್ಯೆಯಲ್ಲಿಯೇ ತನ್ನ ಬೀಜದಿಂದ ಹುಟ್ಟಿದ ಮಗನಲ್ಲಿ ಇಂತಹ ನಡತೆಗಳು ಕಾಣಲಾರವು. ಅಂತಹ ಪುತ್ರನು ತಂದೆಯ ನ್ನಾಗಲಿ, ತಾಯಿಯನ್ನಾಗಲಿ ದ್ವೇಷಿಸಲಾರನು. ತಂದೆಯೂ ಅವನನ್ನು ದ್ವೇಷಿಸಲಾರನು. ಇದರಿಂದಲೇ "ಆತ್ಮಾವೈ ಪುತ್ರನಾಮಾಸಿ" ಎಂದು ಹೇಳುವುದು ಸ್ಪಷ್ಟವಾಗುವುದು. ಬೇಸಗೆಯಲ್ಲಿ ತಾಪದಿಂದ ಕೂಡಿದ ಜನರು ತಣ್ಣೀರಿನಲ್ಲಿ ಮುಳುಗಿದರೆ ಹೇಗೋ ಹಾಗೆ ಮನೋವ್ಯಾಧಿಯಿಂದ ಲೂ, ರೋಗಗಳಿಂದಲೂ ಕಷ್ಟಪಡುವ ಜನಗಳು ತಮ್ಮ ಪತ್ನಿಯರಿಂದ ಸಂತೋಷವನ್ನು ಹೊಂದುವರು. ದೂರದೇಶಕ್ಕೆ ಹೋಗಿ ಕಷ್ಟಪಟ್ಟು ಕೊಳೆಹಿಡಿದ ಬಟ್ಟೆಯೊಡನೆ ಮನೆಗೆ ಬಂದವನು, ತನ್ನ ಪತ್ನಿಯ ಮುಖ ವನ್ನು ಕಂಡೊಡನೆ, ದರಿದ್ರನು ಧನವನ್ನು ಕಂಡಂತೆ ಸಂತೋಷವನ್ನು ಹೊಂದುವನು. ಅವನ ಆಯಾಸವೆಲ್ಲವೂ ತೀರುವುದು. ವಿವೇಕಿಯಾದ ಪುರುಷನು ತನ್ನ ಸುಖಸಂತೋಷಗಳೂ, ಧರ್ಮವೂ ತನ್ನ ಭಾರ್ಯೆಯಲ್ಲಿ ಯೇ ನೆಲೆಗೊಂಡಿರುವುದೆಂಬುದನ್ನು ತಿಳಿದು, ಒಂದುವೇಳೆ ಆ ಪತ್ನಿಯರು ತನ್ನೊಡನೆ ಅಪ್ರಿಯವಾದ ಮಾತನ್ನಾಡಿದರೂ ಅವರಿಗೆ ಅಪ್ರಿಯವಾದ ಪ್ರತಿಮಾತನ್ನಾಡಬಾರದು. ತನ್ನ ಅರ್ಧಭಾಗವೇ ಪತ್ನಿಯೆಂಬುದು ವೇದ ವಾಕ್ಯವೇ! ಆ ಪತ್ನಿಯೇ ಅವನ ಧನವನ್ನೂ, ಸಂತಾನವನ್ನೂ, ಅವನ ದೇಹವನ್ನೂ, ಪರಲೋಕಗಳನ್ನೂ, ಧರ್ಮವನ್ನೂ, ಸ್ವರ್ಗವನ್ನೂ, ಅವರ ಗೋತ್ರದ ಋಷಿಗಳನ್ನೂ, ಮತ್ತು ಪಿತೃಗಳನ್ನೂ ಕಾಪಾಡುವಳು. ಶುದ್ಧಾ ತ್ಮರಾದ ಸ್ತ್ರೀಯರು ಪುರುಷನಿಗೆ ಅವನ ಪುನರುತ್ಪತ್ತಿಗೆ ಉತ್ತಮಕ್ಷೇತ್ರವೆನಿ ಸುವರು. ಅವರು ಯಾವಾಗಲೂ ಪುರುಷನನ್ನು ಬಿಡದವರು. ಸ್ತ್ರೀಯರಿ ಲ್ಲದೆ ಸಂತಾನವನ್ನು ಪಡೆಯುವುದಕ್ಕೆ ಋಷಿಗಳಿಂದಾದರೂ ಸಾಧ್ಯವೇ! ಕ್ಷೇತ್ರವಿಲ್ಲದೆ ದೇವತೆಗಳಿಗಾದರೂ ಸಂತಾನೋತ್ಪತ್ತಿಯಿಲ್ಲ! ಲೋಕದಲ್ಲಿ ಎಂತಹ ಜ್ಞಾನಿಗಳಿಗಾದರೂ, ಸಂತಾನಪ್ರಾಪ್ತಿಗೆ ಸ್ತ್ರೀಯರು ಬೇಕಾಗಿ



ಪುಟ ೪೮೩. ಶಕುಂತಲೆಯು ದುಷ್ಯಂತನಲ್ಲಿಗೆ ಬಂದು ಅವನಿಗೆ ತನ್ನಲ್ಲಿ ಹುಟ್ಟಿದ ಮಗ್ಗನನ್ನು ತೋರಿಸುವುದು.

ಯೇ ಇರುವರು. ಬ್ರಹ್ಮಚರ್ಯೆಯಲ್ಲಿದ್ದ ಕೆಲವು ಮಹರ್ಷಿಗಳಿಗೆ ಚಂಡಾಲಸ್ತ್ರೀಯರಲ್ಲಿ ಹುಟ್ಟಿದ ಮಕ್ಕಳುಕೂಡ ದೊಡ್ಡ ಮಹರ್ಷಿಗಳೆನಿಸಿಕೊಂಡಿರುವರು. ಮಕ್ಕಳು ನೆಲದ ಮಣ್ಣಿನಲ್ಲಿ ಹೊರಳಿ, ಆ ಧೂಳಿನೊಡನೆ ಬಂದು ತಮ್ಮ ದೇಹವನ್ನು ಆಲಿಂಗಿಸಿಕೊಳ್ಳುವುದಕ್ಕಿಂತ ಮೇಲಾದ ಸುಖವು ತಾಯ್ತಂದೆಗಳಿಗೆ ಬೇರೇನಿದೆ? ಆದುದರಿಂದ ಓ ರಾಜಾ! ಅದೋ! ನಿನ್ನ ಪುತ್ರನು ಬಂದು ನಿನ್ನ ಮುಂದೆ ನಿಂತಿರುವನು. ನಿನ್ನನ್ನು ಎಷ್ಟೋ ಆದರದಿಂದ ತನ್ನ ಕಡೆಗಣ್ಣಿನಲ್ಲಿ ನೋಡುತ್ತಿರುವನು. ಆಸೆಪಟ್ಟು ಬಂದಿರುವ ಅವನನ್ನು ನೀನು ಹೀಗೇಕೆ ಅವಮಾನಗೊಳಿಸಿ ಕಳುಹಿಸುವೆ? ಎಲೈ ಮಹಾರಾಜನೇ! ಕೆಲಸಕ್ಕೆ ಬಾರದ ಸಣ್ಣ ಇರುವೆಗಳೂಕೂಡ ತಮ್ಮ ಮೊಟ್ಟೆಗಳನ್ನು ಬಿಡಲಾರದೆ ಹೊತ್ತುಕೊಂಡು ತಿರುಗುವುವು. ಮನುಷ್ಯನಾದ ನಿನಗೆ ಅಷ್ಟು ವಿವೇಕವು ಬೇಡವೆ? ನೀನು ಇಂತಹ ಪುತ್ರನಲ್ಲಿ ಪ್ರೇಮವನ್ನು ತೋರಿಸಬೇಡವೆ? ನನ್ನಲ್ಲಿ ಜನಿಸಿದ ನಿನ್ನ ಸ್ವಂತಪುತ್ರನನ್ನು ನೀನು ಪೋಷಿಸಬೇಡವೆ? ಎಲೈ ರಾಜನೇ! ಕಾಗೆಗಳು ಕೋಗಿಲೆಗಳ ಮೊಟ್ಟೆಗಳನ್ನುಕೂಡ ತನ್ನ ಮೊಟ್ಟೆಗಳೆಂದು ತಿಳಿದು ಎಷ್ಟೋ ಪ್ರಿತಿಯಿಂದ ಪೋಷಿಸುವುವು. ಆ ವಿಧವಾದ ಕನಿಕರವಾದರೂ ನಿನಗೆ ಬೇಡವೆ? ಎಲ್ಲವನ್ನೂ ತಿಳಿದ ನೀನು ಇಂತಹ ಪುತ್ರನನ್ನು ಆದರಿಸಬೇಡವೆ? ಲೋಕದಲ್ಲಿ ಜನರು ಮಲಯಪರ್ವತದಲ್ಲಿ ಹುಟ್ಟಿದ ಚಂದನವನ್ನು ಬಹು ಶೀತಲವೆಂದು ಹೇಳುವರು. ಪುತ್ರನ ದೇಹಾಲಿಂಗನವೆಂಬುದು ಅದಕ್ಕಿಂತಲೂ ಶೀತಲವಾದುದು. ಆದುದರಿಂದ ಚಂದನಕ್ಕಿಂತಲೂ ನೀನು ನಿನ್ನ ಪುತ್ರನನ್ನು ಹೆಚ್ಚೆಂದು ಭಾವಿಸಬೇಕು. ತನ್ನ ಹೊಟ್ಟೆಯಲ್ಲಿ ಹುಟ್ಟಿದ ಪುತ್ರನು ಶಿಶುವಾಗಿರುವಾಗ, ಅವನನ್ನು ಆಲಿಂಗಿಸುವ ಕಾಲದಲ್ಲಿ ಅವನ ಅಂಗಸ್ಪರ್ಶದಿಂದುಂಟಾಗುವಷ್ಟು ಆನಂದವು, ಮೈಮೇಲೆ ಎಂತಹ ಉತ್ತಮ ವಸ್ತ್ರಗಳನ್ನು ಧರಿಸಿಕೊಂಡಾಗಲೂ, ಎಂತಹ ಸುಂದರಸ್ತ್ರೀಯರನ್ನು ಸ್ಪರ್ಶಿಸಿದಾಗಲೂ, ಎಂತಹ ತಂಪಾದ ಪನ್ನೀರನ್ನು ಸೇಚಿಸಿದಾಗಲೂ ಲಭಿಸಲಾರದು. ಪುತ್ರಸ್ಪರ್ಶಕ್ಕಿಂತಲೂ ಆನಂದಕರವಾದ ಬೇರೆ ಸ್ಪರ್ಶವೇ ಲೋಕದಲ್ಲಿಲ್ಲವು. ಆದುದರಿಂದ ರಾಜನೆ! ಇದೋ! ನಿನ್ನ ಪ್ರಿಯದರ್ಶನವುಳ್ಳ ಪುತ್ರನು ನಿನ್ನನ್ನಾಲಿಂಗಿಸಲಿ! ದ್ವಿಪಾತ್ತುಗಳಲ್ಲಿ

(ಮನುಷ್ಯರು) ಬ್ರಾಹ್ಮಣನು ಶ್ರೇಷ್ಠನು. ಚತುಷ್ಪಾದಗಳಲ್ಲಿ ಗೋವು ಶ್ರೇಷ್ಠವು. ದೊಡ್ಡವರಲ್ಲಿ ಗುರುವು ಶ್ರೇಷ್ಠನು. ಸ್ಪರ್ಶಯೋಗ್ಯವಾದುವುಗಳಲ್ಲಿ ಪುತ್ರನೇ ಮೇಲೆನಿಸಿರುವನು. ಮೂರು ವರ್ಷಗಳವರೆಗೆ ಪೂರ್ಣವಾಗಿ ನಾನು ಗರ್ಭವನ್ನು ಧರಿಸಿ ಇವನನ್ನು ಹಡೆದೆನು. ಈಗ ನಾನು ಇವನನ್ನು ಕರೆತಂದು ನಿನ್ನ ಮುಂದೆ ಬಿಟ್ಟೆನು. ನನ್ನ ಮಾತಿನಿಂದ ಅವನು ಇಲ್ಲಿ ನಿಂತು, ನೀನು ಕರೆಯುವುದನ್ನೇ ನಿರೀಕ್ಷಿಸುತ್ತಿರುವನು. ರಾಜೇಂದ್ರಾ! ಇವನೇ ನಿನ್ನ ದುಃಖವನ್ನು ನೀಗಿಸತಕ್ಕವನು. ಇವನು ನೂರು ಅಶ್ವಮೇಧಗಳನ್ನು ನಡೆಸುವನು. ಅಲ್ಲದೆ ರಾಜಸೂಯವೇ ಮೊದಲಾಗಿ ಅಮಿತದಕ್ಷಿಣೆಗಳುಳ್ಳ ಇನ್ನೂ ಅನೇಕಯಾಗಗಳನ್ನೂ ನಡೆಸುವನು. ಮೊದಲು ಈ ವಿಚಾರವನ್ನು ಆಕಾಶವಾಣಿಯು ನಾನು ಸೂತಕದಲ್ಲಿರುವಾಗಲೇ ಸೂಚಿಸಿದೆ. ಗ್ರಾಮಾಂತರಕ್ಕೆ ಹೋಗಿದ್ದ ತಾಯಿತಂದೆಗಳು ಮೊದಲು ಮನೆಗೆ ಬಂದೊಡನೆ ಮಕ್ಕಳನ್ನೆತ್ತಿ ತೊಡೆಯಲ್ಲಿಟ್ಟುಕೊಂಡು, ಅವರ ತಲೆಯನ್ನು ಮೂಸಿನೋಡಿ, ಎಷ್ಟು ಆನಂದಪಡುವರೆಂಬುದನ್ನು ಕಾಣೆಯಾ? ವೇದಗಳಲ್ಲಿಯೂಕೂಡ ಬ್ರಾಹ್ಮಣರು ಇದೇ ವಿಷಯವಾಗಿ ಹೇಳುವ ಮಂತ್ರಗಳನ್ನಾದರೂ ನೀನು ಕೇಳಿಲ್ಲವೆ? ಅವರು ಜಾತಕರ್ಮವನ್ನು ನಡೆಸುವಾಗ, ಪುತ್ರನನ್ನುಕುರಿತು ತಂದೆಯ ಮುಖದಿಂದ "ನನ್ನ ಅಂಗಾಂಗಗಳಿಂದಲೂ ನೀನು ಹುಟ್ಟುವೆ. ನನ್ನ ಹೃದಯದಿಂದ ಹೆಚ್ಚಾಗಿ ಜನಿಸುವೆ. ನಾನೇ ಪುತ್ರನೆಂಬ ಹೆಸರಿನಿಂದ ಕರೆಯಲ್ಪಡುವೆ. ನೂರಾರು ವರ್ಷಗಳವರೆಗೆ ಜೀವಿಸು! ನನ್ನ ಪೋಷಣವು ನಿನ್ನ ಅಧೀನವಾಗಿದೆ! ನನ್ನ ಸಂತಾನವೂ ನಿನ್ನಿಂದ ಅಕ್ಷಯವಾಗಬೇಕು. ಆದುದರಿಂದ ಓ ಪುತ್ರಾ! ನೂರಾರು ವರ್ಷಗಳವರೆಗೆ ನೀನು ಸುಖವಾಗಿ ಜೀವಿಸಿರು" ಎಂಬೀ ಮಂತ್ರಗಳನ್ನು ಹೇಳಿಸುವರಲ್ಲವೆ? ಅದನ್ನು ಹೇಳಿಯೇ ತಂದೆಯು ಮಗನ ತಲೆಯನ್ನು ಆಘ್ರಾಣಿಸುವನು. ಅಲ್ಲದೆ ತಂದೆಯು ಮೊದಲು ಒಬ್ಬನಾಗಿದ್ದು, ಆಮೇಲೆ ಪುತ್ರರೂಪದಿಂದ ಎರಡು ವ್ಯಕ್ತಿಗಳಾಗುವನೆಂದೂ ಹೇಳುವರು. ರಾಜಾ! ಅದರಂತೆಯೇ ನಿನ್ನ ಶರೀರದಿಂದ ಇವನು ಒಬ್ಬ ಪುರುಷನಿಂದ ಬೇರೊಬ್ಬಪುರುಷನು ಹುಟ್ಟಿದಂತೆ ಜನಿಸಿ

ರುವನು. ನಿರ್ಮಲವಾದ ಸರಸ್ಸಿನಲ್ಲಿ ತನ್ನ ಪ್ರತಿಬಿಂಬವನ್ನೇ ನೋಡು ವಂತೆ, ನೀನು ನಿನ್ನ ಮಗನನ್ನು ನೋಡು. ಶುದ್ಧಜಲದಲ್ಲಿ ಚಂದ್ರನ ಪ್ರತಿಬಿಂಬವನ್ನು ನೋಡುವಂತೆ ನನ್ನಲ್ಲಿ ಹುಟ್ಟಿದ ಈ ಪ್ರತಿಬಿಂಬವನ್ನು ನೋಡು. ಇವನು ನಿನ್ನಿಂದ ನಿರ್ಮಿಸಲ್ಪಟ್ಟವನು. ನೀನೇ ಎರಡನೆಯ ಆಕಾರವಾಗಿ ಅಲ್ಲಿ ಪುತ್ರರೂಪದಿಂದ ಕಾಣಿಸುತ್ತಿರುವೆ.

ರಾಜೇಂದ್ರಾ ! ನೀನು ಬೇಟೆಗಾಗಿ ಹೊರಟು ಮೃಗವನ್ನು ಬೆನ್ನಟ್ಟಿ ಬರುತ್ತಿದ್ದಾಗ, ನನ್ನ ತಂದೆಯ ಆಶ್ರಮದಲ್ಲಿ ನಾನು ನಿನಗೆ ಲಭಿಸಿದೆನು. ಅಪ್ಸರಸಿಯರಲ್ಲಿ ಊರ್ವಶಿ, ಪೂರ್ವಚಿತ್ತಿ, ಸಹಜನ್ಯೆ, ಮೇನಕೆ, ವಿಶ್ವಾಚಿ, ಘೃತಾಚಿ, ಎಂಬೀ ಆರುಮಂದಿ ಉತ್ತಮರೆನಿಸಿರುವರು. ಅವರಲ್ಲಿ ಮೇನಕೆ ಯೆಂಬವಳು ಸಾಕ್ಷಾದ್ಬ್ರಹ್ಮನಿಂದ ಜನಿಸಿದವಳು. ಅವಳು ಕಾರಣಾಂತ ರದಿಂದ ಸ್ವರ್ಗವನ್ನು ಬಿಟ್ಟು ಭೂಮಿಗೆ ಬಂದು, ವಿಶ್ವಾಮಿತ್ರನಿಂದ ನನ್ನ ನ್ನು ಪಡೆದಳು. ಆ ಮಹರ್ಷಿಯ ಸಂತತಿಯಾದರೂ ಸಾಮಾನ್ಯವಲ್ಲ. ಶ್ರೀಮಂತನೂ, ಧರ್ಮಪರನೂ, ಅಗ್ನಿಸಮಾನನೂ, ಬ್ರಹ್ಮನಿಂದ ಜನಿಸಿದ ವನೂ ಆದ ಕುಶನೆಂಬ ರಾಜನಿದ್ದನು. ಅವನೇ ವಿಶ್ವಾಮಿತ್ರನ ಪಿತಾಮ ಹನು. ಕುಶನ ಮಗನು ಬಲಾಢ್ಯನಾದ ಕುಶನಾಭನೆಂಬವನು. ಧಾರ್ಮಿಕ ನಾದ ಆ ಕುಶನಾಭನ ಮಗನು ಗಾಧಿ. ಆ ಗಾಧಿಯ ಮಗನೇ ವಿಶ್ವಾಮಿ ತ್ರನು. ನನ್ನ ತಂದೆಯಾದ ವಿಶ್ವಾಮಿತ್ರನ ಕುಲವು ಈ ವಿಧವಾದುದು. ನನ್ನ ತಾಯಿ ಮೇನಕೆ! ಅವಳು ನನ್ನನ್ನು ಹಿಮವತ್ಪರ್ವತದ ತಪ್ಪಲಲ್ಲಿ ಹಡೆದು, ಕಂಡವರ ಮಕ್ಕಳನ್ನು ಬಿಟ್ಟುಹೋಗುವಂತೆ ನನ್ನನ್ನು ಅಲ್ಲಿಯೇ ಬಿಟ್ಟು ಹೊರಟುಹೋದಳು. ಆಮೇಲೆ ಅಲ್ಲಿದ್ದ ಪಕ್ಷಿಗಳೆಲ್ಲ ಸೇರಿ ತಮ್ಮ ರೆಕ್ಕೆಗಳಿಂದ ಹೊದ್ದಿಸಿ ನನ್ನನ್ನು ಕನಿಕರದಿಂದ ಕಾಪಾಡಿದುವು. ಪುಣ್ಯ ಬುದ್ಧಿಯುಳ್ಳ ಆ ಪಕ್ಷಿಗಳಿಂದ ರಕ್ಷಿಸಲ್ಪಟ್ಟುದರಿಂದಲೇ ನನಗೆ ಶಕುಂತಳೆ ಯೆಂಬ ಹೆಸರಾಯಿತು. ನಾನು ಕಾಡಿನಲ್ಲಿ ಪಕ್ಷಿಗಳ ನಡುವೆ ಇದ್ದಾಗ, ಕಾಶ್ಯಪನು (ಕಣ್ವನು) ಅಲ್ಲಿಗೆ ಬಂದು, ನನ್ನ ಸ್ಥಿತಿಯನ್ನು ಕಂಡನು. ಅಗ್ನಿ ಹೋತ್ರಕ್ಕಾಗಿ ಜಲವನ್ನು ತರಲು ಅಲ್ಲಿಗೆ ಬಂದ ಆ ಮುನಿಯನ್ನು ಕಂಡು ಪಕ್ಷಿಗಳೇ ನನ್ನನ್ನು ಅವನಿಗೆ ನ್ಯಾಸರೂಪವಾಗಿ ಒಪ್ಪಿಸಿಕೊಟ್ಟುವು. ಆಗ

ಕಣ್ವನು ನನ್ನನ್ನು ನೋಡಿ ಸಂತೋಷಗೊಂಡು, "ಈ ಕನ್ಯೆಯ ಲಾಭದಿಂದ ಅಗ್ನಿಗಳೂ ಸಂತೋಷಗೊಳ್ಳುವುವು" ಎಂದು ಹೇಳುತ್ತ ಅರಣಿಯನ್ನೆತ್ತಿಕೊಂಡು ಹೋಗುವಂತೆ ನನ್ನನ್ನು ಎತ್ತಿಕೊಂಡು ತನ್ನ ಆಶ್ರಮಕ್ಕೆ ಬಂದನು. ಹೀಗೆ ಆ ಮಹರ್ಷಿಯು ಪರಮುದಯೆಯಿಂದ ನನ್ನನ್ನು ತನ್ನ ಮಗಳಂತೆ ಕಂಡು ಪೋಷಿಸಿದನು. ನಾನು ವಿಶ್ವಾಮಿತ್ರನ ಔರಸಪುತ್ರಿ. ಕಣ್ವಮುನಿಯಿಂದ ಬೆಳೆಸಲ್ಪಟ್ಟವಳು. ನನಗೆ ಯೌವನವು ಬಂದಮೇಲೆ ನಾನು ನಿನ್ನ ದೃಷ್ಟಿಗೆ ಬಿದ್ದೆನು. ಆಶ್ರಮದಲ್ಲಿ ಪರ್ಣಶಾಲೆಯಲ್ಲಿ ನಾನೊಬ್ಬಳೇ ಇರುವಾಗ, ಮತ್ತು ನನ್ನ ತಂದೆಯು ಆಶ್ರಮದಲ್ಲಿಲ್ಲದ ಸಮಯದಲ್ಲಿ ದೈವವು ನನ್ನನ್ನು ನಿನ್ನ ಕಣ್ಣಿಗೆ ಬೀಳುವಂತೆ ಮಾಡಿತು. ಆಗ ನೀನು ಏನೇನೋ ಪ್ರಿಯವಾಕ್ಯಗಳಿಂದ ಸಂತಾನಾರ್ಥವಾಗಿ ನನ್ನನ್ನು ಪ್ರೇರಿಸಿದೆಯಲ್ಲದೆ, ಧರ್ಮಾರ್ಥಕಾಮಗಳನ್ನುದ್ದೇಶಿಸಿ ನನ್ನನ್ನು ವಿವಾಹವಾಗಬೇಕೆಂಬ ಉದ್ದೇಶದಿಂದ ನಮ್ಮ ಆಶ್ರಮದಲ್ಲಿಯೇ ನೀನು ನನಗಾಗಿ ನಿರೀಕ್ಷಿಸುತಿದ್ದೆ. ಕೊನೆಗೆ ಗಾಂಧರ್ವವಿಧಿಯಿಂದ ನನ್ನ ಕೈಯನ್ನೂ ನೀನು ಪರಿಗ್ರಹಿಸಿದೆ. ರಾಜೇಂದ್ರಾ! ನಾನು ನಮ್ಮಿಬ್ಬರ ಕುಲವನ್ನೂ, ಶೀಲವನ್ನೂ, ಸತ್ಯಸಂಧತೆಯನ್ನೂ, ಸ್ವಧರ್ಮವನ್ನೂ (ನಂಬಿಯೇ) ಮುಂದಿಟ್ಟುಕೊಂಡೇ ಧೈರ್ಯದಿಂದ ಈಗ ನಿನ್ನಲ್ಲಿ ಮರೆಹುಗಲು ಬಂದೆನು. ಆದುದರಿಂದ ಈಗ ನೀನು ಹಿಂದೆ ನನಗೆ ಮಾಡಿಕೊಟ್ಟ ಪ್ರತಿಜ್ಞೆಯನ್ನು ಈಗ ಸುಳ್ಳಾಗಿಸುವುದು ನಿನಗೆ ನ್ಯಾಯವಲ್ಲ. ಲೋಕಕ್ಕೆಲ್ಲ ನಾಥನೆನಿಸಿಕೊಂಡ ನೀನು ಅನಾಥೆಯಾಗಿ, ನಿನ್ನನ್ನೇ ನಾಥನೆಂದು ನಂಬಿ ಬಂದಿರುವ ನಿರಪರಾಧಿನಿಯಾದ ನನ್ನನ್ನು ನಿರಾಕರಿಸಬಾರದು. ಆಹಾ! ಪೂರ್ವಜನ್ಮದಲ್ಲಿ ನಾನು ಎಂತಹ ಘೋರಪಾಪವನ್ನು ಮಾಡಿದೆನೋ ಕಾಣೆನು. ಬಾಲ್ಯದಲ್ಲಿಯೇ ನನ್ನನ್ನು ಹೆತ್ತ ತಾಯಿತಂದೆಗಳಿಬ್ಬರೂ ತೊರೆದರು. ಈಗ ಕೈಹಿಡಿದ ನೀನೂ ನನ್ನನ್ನು ತೊರೆಯುತ್ತಿರುವೆ. ರಾಜಾ! ಒಂದುವೇಳೆ ನೀನು ನನ್ನನ್ನು ತೊರೆದರೂ ನಾನು ಹಿಂತಿರುಗಿ ಆಶ್ರಮಕ್ಕೆ ಹೋಗಿ ಅಲ್ಲಿ ತಾಪಸಿಯಾಗಿ ಕಾಲವನ್ನು ಕಳೆಯುವೆನು. ನಿನ್ನ ಮಗನಾದ ಈ ಬಾಲನನ್ನು ಮಾತ್ರ ನೀನು ಕೈಬಿಡಬಾರದು" ಎಂದಳು.

ಆದಕ್ಕಾ ದುಷ್ಯಂತನು “ ಎಲೆ ಶಕುಂತಳೆ! ನಿನ್ನಲ್ಲಿ ನನಗೆ ಪುತ್ರನು ಹುಟ್ಟಿದುದಾಗಿ ನನ್ನ ಸ್ಮರಣೆಗೆ ಬರಲಿಲ್ಲ. ಸ್ತ್ರೀಯರು ಯಾವಾಗಲೂ ಸುಳ್ಳಾಡಿ ಪುರುಷರನ್ನು ವಂಚಿಸುವುದು ಸಹಜವು. ಹೆಂಗಸಾದ ನಿನ್ನ ಮಾತನ್ನು ಹೇಗೆ ನಂಬುವುದು? ನಂಬಬಾರದ ಈ ಮಾತನ್ನು ಹೇಳುವುದಕ್ಕೆ ನಿನಗಾವರೂ ನಾಚಿಕೆಯಿಲ್ಲವೆ? ಅದರಲ್ಲಿಯೂ ರಾಜನಾದ ನನ್ನ ಮುಂದೆಯೇ ನಿಂತು, ಹೀಗೆ ನನ್ನನ್ನೇ ಅಪವಾದಕ್ಕೀಡುಮಾಡುತ್ತಿರುವೆಯಾ! ಛೀ! ದುಷ್ಟತಾಪಸಿ! ಹೊರಟುಹೋಗು! ಏನು! ನೀನು ವಿಶ್ವಾಮಿತ್ರನಿಂದ ಮೇನಕೆಯಲ್ಲಿ ಹುಟ್ಟಿದವಳೆ? ಎಂತಹ ಸುಳ್ಳನ್ನು ಕಲ್ಪಿಸುತ್ತಿರುವೆ? ಉಗ್ರತಪಸ್ಸಿನಲ್ಲಿರುವ ಆ ಮಹರ್ಷಿಯೆಲ್ಲಿ? ಮೇನಕೆಯೆಂಬ ಅಪ್ಸರಸ್ತ್ರೀಯೆಲ್ಲಿ? ಅವರಿಬ್ಬರಿಗೂ ಸಂಬಂಧವೆಂದರೇನು? ಅಯ್ಯೋ! ನಿನಗೆ ಈ ಸ್ಥಿತಿಯು ಹೇಗೆ ಬಂದಿತು? ಕೇವಲ ದರಿದ್ರಳಾದ ನೀನು ಆ ಮಹರ್ಷಿಗೆ ಹುಟ್ಟುವುದೆಂದರೇನು! ತಾಪಸೀವೇಷದಿಂದ ಬಂದು ನನ್ನನ್ನು ವಂಚಿಸುವೆಯಾ! ನೀನು ಕರೆತಂದಿರುವ ಈ ಹುಡುಗನೋ ಕೊಬ್ಬಿಬೆಳೆದ ಮೈಯುಳ್ಳವನು. ಇನ್ನೂ ಬಾಲನಾಗಿದ್ದರೂ ಮಹಾಬಲಾಢ್ಯನಂತೆ ತೋರುವನು. ಆಹಾ! ಅವನ ಹೆಗಲೇನು! ಅವನ ಎದೆಯೇನು! ಇಷ್ಟು ಅಲ್ಪಕಾಲದೊಳಗಾಗಿ ಇವನು ಹೀಗೆ ಬೆಳೆದನೆಂಬುದು ತಾನೇ ಹೇಗೆ? ನೀನು ಕೇವಲ ನಿಕೃಷ್ಟಯೋನಿಯುಳ್ಳ ವ್ಯಭಿಚಾರಿಣಿಯೆಂದು ತೋರುತ್ತಿದೆ. ಒಂದುವೇಳೆ ನೀನು ಮೇನಕೆಯಲ್ಲಿ ಹುಟ್ಟಿದವಳಾದರೂ, ಅವಳೂ ವೇಶ್ಯೆಯಾದುದರಿಂದ, ಕಾಮವಿಕಾರದಿಂದ ಅವಳ ಸ್ವೇಚ್ಛಾಪ್ರವರ್ತನೆಯಲ್ಲಿ ಹುಟ್ಟಿದವಳೇ ನೀನಲ್ಲವೇ? ಎಲೆ ತಾಪಸೀ! ನೀನು ಈಗ ಹೇಳಿದುದೊಂದನ್ನೂ ನಾನು ನಂಬುವಹಾಗಿಲ್ಲ. ಯಾವುದಕ್ಕೂ ನನಗೆ ಪ್ರಮಾಣವೊಂದೂ ತೋರಲಿಲ್ಲ. ಲೋಕದಲ್ಲಿ ಸ್ತ್ರೀಜಾತಿಯೇ ವಕ್ರಬುದ್ಧಿಯುಳ್ಳದು. ಸ್ತ್ರೀಯರೆಲ್ಲರೂ ಕಾಮಪರಾಯಣರು. ಎಲ್ಲಾ ಸ್ತ್ರೀಯರೂ ಪರಪುರುಷನನ್ನು ಮೋಸಗೊಳಿಸತಕ್ಕವರು. ಎಲ್ಲಾ ಸ್ತ್ರೀಯರೂ ಕೇವಲ ಕೋಪಸ್ವಭಾವವುಳ್ಳವರು. ಅಸತ್ಯವನ್ನೇ ನುಡಿಯತಕ್ಕವರು. ಎಲೆ ತಾಪಸಿ! ಆ ಕಣ್ವಮುನಿಯ ಹೆಸರನ್ನೇಕೆ ಎಳೆಯುತ್ತಿರುವೆ? ನಿನ್ನನ್ನು ಹೆತ್ತವಳು ಮೇನಕೆಯಾದರೆ ಅವಳೇ ನಿನ್ನನ್ನು ಬೆಳೆಸಬೇಕಾದ

ತಾಯಲ್ಲವೆ? ಅಂತವಳೇ ನಿನ್ನನ್ನು ಹಿಮವತ್ಪರ್ವತದ ಬುಡದಲ್ಲಿ, ಮುಡಿದು ಬಾಡಿಹೋದ ಹೂವನ್ನು ಬಿಸುಡುವಂತೆ ಉಪೇಕ್ಷೆಮಾಡಿ ಬಿಟ್ಟು ಹೋದಳು. ನಿನ್ನ ತಂದೆಯೆಂದು ಹೇಳಿಕೊಳ್ಳುವ ಆ ವಿಶ್ವಾಮಿತ್ರನಾದರೂ ಸಾಮಾನ್ಯನೇ? ಮೊದಲು ಕ್ಷತ್ರಿಯ ಯೋನಿಯಲ್ಲಿ ಹುಟ್ಟಿದವನು. ಆಮೇಲೆ ಬ್ರಾಹ್ಮಣ್ಯಕ್ಕಾಗಿ ಆಸೆಪಟ್ಟವನು. ನಿನ್ನನ್ನು ಬಿಟ್ಟು ಹೋದಾಗಲೇ ಅವನು ದಯಾಶೂನ್ಯನೆಂದೂ ಸ್ಪಷ್ಟವಾಗುವುದು. ಮೇನಕೆಯೆಂಬ ವೇಶ್ಯೆಯಲ್ಲಿ ಅವನು ಯಾವಾಗ ಪ್ರವರ್ತಿಸಿದನೋ ಆಗಲೇ ಅವನು ಕೇವಲಕಾಮಪರಾಯಣನೆಂಬುದೂ ಸ್ಪಷ್ಟವು. ದೇವಸ್ತ್ರೀಯಾದ ಮೇನಕೆಯು ತಾನಾಗಿ ಇಷ್ಟಪಟ್ಟು ವಿಶ್ವಾಮಿತ್ರನಿಂದ ನಿನ್ನನ್ನು ಪಡೆದುದಾಗಿ ನೀನೇ ಹೇಳುತ್ತಿರುವೆಯಲ್ಲವೆ? ಆಹಾ! ನಿನ್ನ ಜನ್ಮವು ಎಷ್ಟು ಶುದ್ಧವಾದುದೋ? ವೇಶ್ಯೆಗೆ ವ್ಯಭಿಚಾರದಿಂದ ಹುಟ್ಟಿದ ನಿನ್ನ ಜನ್ಮಕ್ಕಿಂತಲೂ ಹೀನಜನ್ಮವುಂಟೆ? ನಿನ್ನ ಜನ್ಮಕ್ಕೆ ತಕ್ಕಂತೆ ನೀನು ವ್ಯಭಿಚಾರಿಣಿಯೆನಿಸಿಕೊಳ್ಳುವುದೂ ಸಹಜವೇ? ಮೇನಕೆಯು ಅಪ್ಸರಸ್ತ್ರೀಯರಲ್ಲಿ ಮೇಲೆನಿಸಿದವಳೆಂದೂ, ಅವಳೇ ನಿನಗೆ ತಾಯಿಯೆಂದೂ, ಋಷಿಶ್ರೇಷ್ಠನಾದ ವಿಶ್ವಾಮಿತ್ರನೇ ತನ್ನ ತಂದೆಯೆಂದೂ ಹೇಳಿಕೊಳ್ಳುವ ನೀನು, ಅಂತಹ ದೊಡ್ಡವರ ಮಗಳಾಗಿದ್ದು, ಇಲ್ಲಿ ನನ್ನಮುಂದೆ ವ್ಯಭಿಚಾರಿಣಿಯಂತೆ ಮಾತಾಡುವುದೇಕೆ? ನಿನ್ನ ಜನ್ಮವು ಕೇವಲ ನಿಕೃಷ್ಟವಾಗಿರುವಾಗಲೂ, ಒಳ್ಳೇ ಕುಲದವಳೆಂದು ಹೇಳಿಕೊಳ್ಳುವೆ. ಕೋಗಿಲೆಯು ತನ್ನ ಮೊಟ್ಟೆಯನ್ನು ಬಿಟ್ಟುಹೋಗುವಂತೆ ನಿನ್ನ ಹೆತ್ತ ತಾಯಿತಂದೆಗಳಿಬ್ಬರೂ ಬಿಟ್ಟುಹೋಗಿರುವರು. ನಿನ್ನನ್ನು ಬೇರೆ ಯಾರೋ ಬೆಳೆಸಿರುವರು. ಪಾಪಗಳಿಂದ ಕೆಟ್ಟಬುದ್ಧಿಯು ವೃದ್ಧಿಗೊಳಿಸಲ್ಪಡುವಂತೆ ಕಣ್ವರೂ, ಅವನ ಶಿಷ್ಯರೂ ನಿನ್ನನ್ನು ಬೆಳೆಸಿರುವರು. ಎಲೆ ತಾಪಸೀ! ನೀನು ಇದುವರೆಗೆ ಹೇಳಿದ ಯಾವ ಮಾತೂ ನಂಬತಕ್ಕುದಲ್ಲ. ಇಂತಹ ರಾಜಸನ್ನಿಧಿಯಲ್ಲಿ ಇಂತಹ ಮಾತುಗಳನ್ನಾಡುವುದಕ್ಕೆ ಹೇಗೆತಾನೇ ನಿನಗೆ ಧೈರ್ಯವುಂಟಾಯಿತು? ನಾಚಿಕೆಯಿಲ್ಲದವಳೆ ಹೋಗು! ಎಲೆ ತಾಪಸಿ! ಒಂದುವೇಳೆ ನೀನು ನನ್ನಲ್ಲಿ ಧನವನ್ನಪೇಕ್ಷಿಸಿ ಈ ಎತ್ತುಗಡೆಯನ್ನು ಮಾಡಿರುವುದಾದರೆ, ವಾಸ್ತವನ್ನು ಹೇಳಿಬಿಡು. ನಿನಗೆ ಸುವರ್ಣಗಳೂ, ರತ್ನಗಳೂ, ಮುತ್ತು

ಗಳೂ, ವಸ್ತ್ರಾಭರಣಗಳೂ ಯಾವುವು ಬೇಕಾಗಿದ್ದರೂ ಹೇಳು! ನಿನ್ನ ಭೋಗಕ್ಕೆ ಬೇಕಾದುದನ್ನೆಲ್ಲಾ ಕೊಡುವೆನು. ತೆಗೆದುಕೊಂಡು ಹೊರಟು ಹೋಗು. ಇನ್ನು ಇಲ್ಲಿ ನಿಲ್ಲಬೇಡ. ನಾನು ನಿನ್ನಂತಹ ಪರಸ್ತ್ರೀಯ ಮುಖವನ್ನಾದರೂ ಕಣ್ಣೆತ್ತಿ ನೋಡತಕ್ಕವನಲ್ಲ. ಇನ್ನು ನಿಲ್ಲಬೇಡ. ಹೊರಡು " ಎಂದನು.

ಇದು ತೊಂಭತ್ತೆಂಟನೆಯ ಅಧ್ಯಾಯವು.

ಶಕುಂತಳಾ ದುಷ್ಯಂತರ ವಿವಾದಗಳು.

ಆಗ ಶಕುಂತಳೆಯು " ರಾಜಾ! ಇತರರಲ್ಲಿರುವ ಸಾಸಿವೆಯಷ್ಟು ದೋಷವಾದರೂ, ನಿನ್ನ ಕಣ್ಣಿಗೆ ಚೆನ್ನಾಗಿ ಕಾಣುವುದು. ನಿನ್ನಲ್ಲಿರುವ ದೋಷಗಳು ಬಿಲ್ವದ ಕಾಯಷ್ಟಿದ್ದರೂ ಅದು ನಿನ್ನ ಕಣ್ಣಿಗೆ ಕಾಣುವುದಿಲ್ಲವೆಂದು ತೋರುತ್ತಿದೆ. ಎಲೈ ರಾಜನೇ! ನನ್ನ ತಾಯಿಯಾದ ಮೇನಕೆಯು ಸಾಮಾನ್ಯಳಲ್ಲ. ಅವಳು ಯಾವಾಗಲೂ ದೇವತೆಗಳೊಡನೆಯೇ ಇರತಕ್ಕವಳು. ದೇವತೆಗಳೂ ಅವಳನ್ನು ಅನುಸರಿಸತಕ್ಕವರು. ಹೀಗೆ ನನ್ನ ಜನ್ಮವು ಸಾಕ್ಷಾತ್ ದೇವತೆಗಳ ಸಂಬಂಧದಿಂದ ಆದುದು. ನಿನ್ನ ಜನ್ಮಕ್ಕಿಂತಲೂ ನನ್ನ ಜನ್ಮವು ಮೇಲೆಂದು ತಿಳಿ. ಈ ಜನ್ಮವಿಷಯವು ಹಾಗಿರಲಿ! ದುಷ್ಯಂತರಾಜಾ! ನೀನು ನೆಲದಲ್ಲಿ ನಡೆಯತಕ್ಕವನು. ನಾನು ಆಕಾಶದಲ್ಲಿ ಸಂಚರಿಸಬಲ್ಲವಳು. ಮಹಾಮೇರುಪರ್ವತಕ್ಕೂ, ಒಂದು ಸಾಸಿವೆಕಾಳಿಗೂ ಇರುವಷ್ಟು ತಾರತಮ್ಯವು ನನಗೂ ನಿನಗೂ ಇರುವುದೆಂದು ತಿಳಿ. ಎಲೈ ರಾಜನೆ! ನನ್ನ ಪ್ರಭಾವವನ್ನು ನೀನು ಕಾಣೆ. ಇಂದ್ರ, ಯಮ, ಕುಬೇರ, ವರುಣಾದಿ ದಿಕ್ಪಾಲಕರ ಭವನಗಳಿಗೆಲ್ಲಾ ನಾನು ಹೋಗಿ ಬರಬಲ್ಲೆನು. ಮಹಾರಾಜಾ! ನಿನ್ನ ಜನ್ಮಪರಂಪರೆಯೆಂತಹದೆಂದು ಬಲ್ಲೆಯಾ? ಪೂರ್ವದಲ್ಲಿ ಊರ್ವಶಿಯಿಂದ ಆಯುವೆಂಬವನು ಜನಿಸಿದನು. ಅವನೇ ನಿನ್ನ ಮುತ್ತಾತನು. ಆ ಊರ್ವಶಿಯೆಂಬವಳು ಅಪ್ಸರಸಿಯೆಂಬ ದೇವವೇಶ್ಯೆಯಲ್ಲವೆ? ನಿನಗೆ ಆಗ

ಆ ವೇಶ್ಯೆಯ ಸಂಬಂಧವು ಇಲ್ಲದೆ ಹೋಯಿತೆ? ಹೀಗೆಯೇ ಎಷ್ಟೋ ಮಹರ್ಷಿಗಳೂ, ಎಷ್ಟೋ ಮಂದಿ ಕ್ಷತ್ರಿಯರೂ, ಋಷಿಗಳಿಗೆ ಆ ಅಪ್ಸರಸ್ತ್ರೀಯರಲ್ಲಿ ಹುಟ್ಟಿರುವರು. ಆದುದರಿಂದ ಈ ಮಾತೃಸಂಬಂಧವಾದ ದೋಷವು ಬಾರದು. ಇದಕ್ಕೆ ತಕ್ಕ ಒಂದು ಲೋಕವಾರ್ತೆಯನ್ನು ನಿದರ್ಶನವಾಗಿ ನಿನಗೆ ಹೇಳುವೆನು. ನೀನು ಮನ್ನಿಸಬೇಕು. ನಾನು ಅದನ್ನು ನಿನ್ನಲ್ಲಿ ದ್ವೇಷಬುದ್ಧಿಯಿಂದ ಹೇಳುವೆನೆಂದು ತಿಳಿಯಬೇಡ. ವಿಕಾರರೂಪವುಳ್ಳ ಮನುಷ್ಯನು, ಕನ್ನಡಿಯಲ್ಲಿ ತನ್ನ ವಿಕೃತವಾದ ಮುಖವನ್ನು ಯಾವವರೆಗೆ ನೋಡಿಕೊಳ್ಳುವುದಿಲ್ಲವೋ, ಅದುವರೆಗೆ ತಾನೇ ಬೇರೆಯವರಿಗಿಂತಲೂ ರೂಪವಂತನೆಂದು ತಿಳಿದುಕೊಂಡಿರುವನು. ಯಾವಾಗ ಅವನು ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಳ್ಳುವನೋ ಆಗ ತನ್ನ ವಿಕೃತಾಕಾರವನ್ನು ತಿಳಿದು ತನಗೆ ತಾನೇ ಲಜ್ಜೆಪಡುವನು. ಆಗಲೇ ಅವನಿಗೆ ತಾನು ಬೇರೆ ಎಲ್ಲರಿಗಿಂತಲೂ ಮೇಲೆಂಬ ಹೆಮ್ಮೆಯು ಮುರಿದುಹೋಗುವುದು. ಒಳ್ಳೇ ರೂಪಸಂಪನ್ನನಾದವನು ಬೇರೆ ಯಾರನ್ನೂ ಅವಮಾನಿಸಿ ಮಾತನಾಡಲಾರನು. ಅಧಿಕವಾಗಿ ಕೆಟ್ಟಮಾತುಗಳನ್ನಾಡುವ ಮನುಷ್ಯನು, ಯಾವಾಗಲೂ ಕಾರ್ಯಾಕಾರ್ಯಗಳನ್ನು ಸರಿಯಾಗಿ ಯೋಚಿಸತಕ್ಕವನಲ್ಲ. ಮದದಾನೆಯು ತನ್ನ ಮೈಮೇಲೆ ತಾನೇ ಮಣ್ಣನ್ನು ಸುರಿದುಕೊಂಡು ಹೇಗೆ ಸಂತೋಷಪಡುವುದೋ, ಹಾಗೆ ದುರ್ಜನರು ಬೇರೊಬ್ಬರನ್ನು ದೂಷಿಸುವುದರಿಂದಲೇ ತೃಪ್ತಿಹೊಂದುವರು. ಸತ್ಯವನ್ನೂ ಧರ್ಮವನ್ನೂ ಬಿಟ್ಟು ಕೋಪಸ್ವಭಾವವುಳ್ಳವನನ್ನು ಕಂಡಾಗ ನಾಸ್ತಿಕನಾದರೂ ಕೋಪಗೊಂಡ ಹಾವಿನಂತೆ ಕಾಣುವನು. ಇನ್ನು ಆಸ್ತಿಕರ ಪಾಡೇನು? ಯಾವನು ತನಗೆ ಸಮಾನನಾದ ಮಗನನ್ನು ಪಡೆದು, ಅವನಲ್ಲಿ ದ್ವೇಷಿಸುವನೋ, ಅವನ ಸರ್ವೈಶ್ವರ್ಯಗಳನ್ನೂ ದೇವತೆಗಳೇ ಕೆಡಿಸುವರು. ಅವನನ್ನು ಕಲಿಯು ಆವರಿಸುವನು. ಪರೋಪಕಾರವಿಲ್ಲದವನು, ಸುಳ್ಳಾಡುವವನು, ನಾಸ್ತಿಕನು, ಪಾಪಕಾರ್ಯಗಳಲ್ಲಿ ಬಿದ್ದವನು, ದುರಾಚಾರಪರನು, ಇಂತವರಲ್ಲಿ ಕಲಿಯು ಒಡನೆಯೇ ಅವರಿಸಿಕೊಳ್ಳುವುದು. ಧರ್ಮಚಾರಿಗಳಲ್ಲಿ ಆ ಕಲಿಗೆ ಸ್ಥಳವಿಲ್ಲ. ಮೂರ್ಖನಾದವನು ಇತರರು ಆಡತಕ್ಕ ಶುಭಾಶುಭವಾಕ್ಯಗಳಲ್ಲಿ ಶುಭವಾಕ್ಯಗಳನ್ನು ಬಿಟ್ಟು, ಹಂದಿಗಳು ಮಲ

ವನ್ನೇ ಹುಡುಕುವಂತೆ ಅಶುಭವಾಕ್ಯಗಳನ್ನೇ ತೆಗೆದುಕೊಳ್ಳುವರು. ಪ್ರಾಜ್ಞ ನಾದರೋ ಹಂಸವು ಜಲಮಿಶ್ರವಾದ ಹಾಲಿನಲ್ಲಿ ಹಾಲನ್ನು ಮಾತ್ರ ಗ್ರಹಿಸುವಂತೆ ಗುಣದೋಷಗಳಲ್ಲಿ ಗುಣವನ್ನು ಮಾತ್ರ ಗ್ರಹಿಸುವನು. ಬುದ್ಧಿಯಲ್ಲಿ ತಿಳಿವಿಲ್ಲದ ನೀಚನು ತನ್ನಲ್ಲಿರುವ ದೌಷ್ಟ್ಯವನ್ನೇ ಇತರರಲ್ಲಿ ಆರೋಪಿಸಿ ತನ್ನಂತೆಯೇ ಅವರಲ್ಲಿಯೂ, ದುರ್ಗುಣಗಳನ್ನು ತಿಳಿವನು. ಇತರರ ಕೀರ್ತಿಯೆಂಬ ಅಗ್ನಿಯು ನೀಚರ ಹೃದಯವನ್ನು ಅತಿ ತೀವ್ರವಾಗಿ ದಹಿಸುವುದು. ಆ ತಾಪವನ್ನು ತಡೆಯಲಾರದೆ ಅವರು ಅವರನ್ನು ನಿಂದಿಸುವರು. ಇತರರ ನಿಂದೆಯನ್ನು ಕೇಳಿದರೆ ಸಾಧುಗಳ ಹೃದಯವು ಎಷ್ಟುಮಟ್ಟಿಗೆ ಪರಿತಪಿಸುವುದೋ, ಇತರರ ದೂಷಣೆಯಿಂದ ದುರ್ಜನರ ಹೃದಯವು ಅಷ್ಟುಮಟ್ಟಿಗೆ ಸಂತೋಷಗೊಳ್ಳುವುದು. ಯಾವಾಗಲೂ ಮೂರ್ಖರಿಗೆ ವಿಶೇಷವಾಗಿ ದೂಷಿಸುವುದೇ ಸ್ವಭಾವವು. ಸತ್ಪುರುಷರಿಗೆ ಪರನಿಂದೆಯಿಂದ ದೂರವಾಗಿರುವುದೇ ಸ್ವಭಾವವು. ಸಾಧುವಾದವನು ಹಿರಿಯರನ್ನು ಗೌರವಿಸಿ, ನಮಸ್ಕರಿಸಿದಾಗ ಮನಸ್ಸಿಗೆ ಎಷ್ಟು ತೃಪ್ತಿಯನ್ನು ಹೊಂದುವನೋ, ಸಜ್ಜನರನ್ನು ಕೋಪಗೊಳಿಸಿದಾಗ ಮೂರ್ಖನು ಅಷ್ಟು ಸಂತೋಷಗೊಳ್ಳುವನು. ಲೋಕದಲ್ಲಿ ಮೂರ್ಖರು ಇತರರ ದೋಷಗಳನ್ನೇ ಗಮನಿಸುತ್ತಾ ತಮ್ಮಲ್ಲಿರುವ ದೋಷಗಳನ್ನು ತಿಳಿಯದೆ ಸುಖವಾಗಿ ಜೀವಿಸುತ್ತಿರುವರು. ಅದರಿಂದ ತಾವು ಇತರರಿಗೆ ನಿಂದಾರ್ಹರಾಗಿದ್ದರೂ, ಇತರರನ್ನು ತಾವೇ ನಿಂದೆಗೆ ಗುರಿಮಾಡುತ್ತಿರುವರು. ತಾವೇ ದುರ್ಜನರಾಗಿದ್ದುಕೊಂಡು ಇತರರನ್ನು ದುರ್ಜನರೆಂದು ಹೇಳುವುದಾದರೆ, ಲೋಕವಲ್ಲಿ ಇದಕ್ಕಿಂತಲೂ ಪರಿಹಾಸ್ಯಾಸ್ಪದವು ಬೇರೇನಿರುವುದು? ಗುಣಾಢ್ಯರು ಇತರರಿಗೆ ಉಂಟಾಗತಕ್ಕ ಕ್ಲೇಶಗಳನ್ನು ನೋಡಿ, ತಾವೂ ಅವರಂತೆಯೇ ಸಂಕಟಪಡಬೇಕಾದುದು ನ್ಯಾಯವು. ಸಜ್ಜನರಾಗಿದ್ದವರಿಗೆ ಅಂತಹ ದುಃಖವುಂಟಾಗುವುದರಲ್ಲಿ ಸಂದೇಹವೂ ಇಲ್ಲ. ಪಿತೃಗಳು ಪುತ್ರನನ್ನು ವಂಶದ ಸಂತಾನಾಭಿವೃದ್ಧಿಗೆ ಆಧಾರನೆಂದು ಎಷ್ಟೋ ಆದರಿಸುವರು. ಸಮಸ್ತಧರ್ಮಗಳಿಗಿಂತಲೂ ಉತ್ತಮ ಧರ್ಮಸ್ವರೂಪನಾದ ಪುತ್ರನನ್ನು ಪರಿತ್ಯಾಗಮಾಡಲೇ ಬಾರದು. ಪುತ್ರರಲ್ಲಿ ಅನೇಕವಿಧಗಳುಂಟು. ತನ್ನ ಕೈಹಿಡಿದ ಧರ್ಮಪತ್ನಿಯಲ್ಲಿ ಹುಟ್ಟಿದವನು ಔರಸಪುತ್ರ

ನು. ಅನಾಥನಾಗಿದ್ದು ತನಗೆ ಲಭಿಸಿದ ಮಗನು, ಸ್ವೀಕೃತನಾದ ದತ್ತ ಪುತ್ರನು, ಅಭಿಮಾನದಿಂದ ತಂದು ಬೆಳೆಸಲ್ಪಟ್ಟವನು, ಕ್ರಯಕ್ಕಾಗಿ ತೆಗೆಯಲ್ಪಟ್ಟವನು, ವಿವಾಹವಾಗದೇ ಇರುವ ಸ್ತ್ರೀಯಲ್ಲಿ ಹುಟ್ಟಿದವನು. ಇವರೆಲ್ಲರೂ ಪುತ್ರರೇ ಎಂದು ಮನುವಾಕ್ಯವುಂಟು. ಈ ಆರು ಮಂದಿಯೂ ತಂದೆಯ ದಾಯಭಾಗಕ್ಕೆ ಅರ್ಹರೇ ! (ಈ ಆರುಮಂದಿಗೂ ಕ್ರಮವಾಗಿ ಔರಸ, ಕ್ಷೇತ್ರಜ, ದತ್ತ, ಕ್ರೀತ, ಗೂಢೋತ್ಪನ್ನ, ಅಪವಿದ್ಧರೆಂದು ಹೆಸರು) (ಬೇರೆ ಆರುಮಂದಿ ದಾಯಭಾಗಕ್ಕೆ ಅರ್ಹರಲ್ಲದ ಬಂಧುಗಳು ?) ತಂದೆತಾಯಿಗಳನ್ನು ಪುತ್ರರೇ ನರಕದಿಂದ ತಪ್ಪಿಸತಕ್ಕವರು ಯಾವಾಗಲೂ ಧರ್ಮವನ್ನೂ, ಕೀರ್ತಿಯನ್ನೂ ವೃದ್ಧಿಗೊಳಿಸತಕ್ಕವರು. ಮನಸ್ಸಿಗೆ ಆನಂದವನ್ನು ಕೊಡತಕ್ಕವರು. ಧರ್ಮರೂಪವಾದ ತೆಪ್ಪದಂತಿರುವರು. ಆದುದರಿಂದ ರಾಜಶ್ರೇಷ್ಠನೇ ! ಪುತ್ರನನ್ನು ನೀನು ತ್ಯಜಿಸಬೇಡ. ನಿನ್ನ ಪುತ್ರನನ್ನೂ, ನಿನ್ನ ಸತ್ಯವನ್ನೂ ರಕ್ಷಿಸುವನಾಗು. ಇವೆರಡನ್ನೂ ನೀನು ಬಿಟ್ಟುಬಿಡತಕ್ಕುದಿಲ್ಲ. ರಾಜನೆ! ಅಸತ್ಯದಲ್ಲಿ ಬೀಳಬೇಡ. ಮಹಾರಾಜಾ! ನಿನ್ನ ಆತ್ಮವನ್ನೂ, ಸತ್ಯವನ್ನೂ, ಧರ್ಮವನ್ನೂ ಕಾಪಾಡು. ರಾಜಸಿಂಹಾ! ನಿನ್ನಂತವನು ಕಪಟವನ್ನು ಹಿಡಿಯಬಾರದು. ನೂರು ಬಾವಿಗಳನ್ನು ತೆಗೆಯಿಸುವುದಕ್ಕಿಂತಲೂ ಒಂದು ಕೊಳವನ್ನು ಕಟ್ಟಿಸುವುದು ಮೇಲು. ನೂರು ಕೊಳಗಳನ್ನು ಕಟ್ಟಿಸುವುದಕ್ಕಿಂತಲೂ ಒಂದು ಯಾಗವು ಮೇಲು. ನೂರು ಯಾಗಗಳಿಗಿಂತಲೂ ಒಬ್ಬ ಪುತ್ರನನ್ನು ಪಡೆಯುವುದು ಅಧಿಕಪುಣ್ಯಪ್ರ. ನೂರು ಪುತ್ರರಿಗಿಂತಲೂ ಸತ್ಯವು ಮೇಲೆಂದು ತಿಳಿ! ಸಹಸ್ರಾಶ್ವಮೇಧಗಳನ್ನೂ, ಸತ್ಯವನ್ನೂ ತ್ರಾಸಿನಲ್ಲಿಟ್ಟು ತೂಗಿ ನೋಡಿದರೆ, ಆ ಸಹಸ್ರಾಶ್ವಮೇಧಗಳಿಗಿಂತಲೂ ಸತ್ಯವೇ ಅತಿಶಯವೆನಿಸುವುದು. ಎಲ್ಲಾ ವೇದಗಳನ್ನು ಅಧ್ಯಯನಮಾಡುವುದೂ, ಎಲ್ಲಾ ತೀರ್ಥಗಳನ್ನು ಯಾತ್ರೆಮಾಡಿಬರುವುದೂ, ಸತ್ಯದ ಹದಿನಾರನೆಯ ಭಾಗಕ್ಕೂ (ಒಂದು ವೀಸಪಾಲಿಗೂ) ಸಮವೆನಿಸಲಾರದು. ಸತ್ಯಕ್ಕೆ ಸಮಾನವಾದ ಧರ್ಮವಿಲ್ಲ. ಸತ್ಯಕ್ಕಿಂತಲೂ ಮೇಲಾದ ವಸ್ತುವಿಲ್ಲ. ಅನೃತಕ್ಕಿಂತಲೂ ಕ್ರೂರವಾದ ಪಾಪವಿಲ್ಲ. ರಾಜೇಂದ್ರಾ ! ಸತ್ಯವೇ ಉತ್ತಮಧರ್ಮವು. ವಾಗ್ದಾನವೆಂಬುದು ಸತ್ಯಕ್ಕಿಂತಲೂ ಮೇಲಾದುದು. ಆದ್ದ

ದರಿಂದ ನಿನ್ನ ವಾಗ್ದಾನವನ್ನು ಸುಳ್ಳಾಗಿಸಬೇಡ! ಸತ್ಯವು ನಿನ್ನಲ್ಲಿ ಸ್ಥಿರವಾಗಿ ನೆಲೆಗೊಂಡಿರಲಿ! ಯಾವ ಪಾಪಿಯು, ತಾನು ಒಂದು ಕಾರ್ಯವನ್ನು ಮಾಡಿ ಅದನ್ನು ಮರೆತುಬಿಡುವನೋ, ಅವನು ಅನೃತವಾದಿಯೇ! ಅಂತಹ ಅನೃತಕ್ಕಿಂತಲೂ ಬೇರೆ ಪಾತಕವು ಯಾವುದೂ ಇಲ್ಲ. ಸತ್ಯವಾವುದು, ಅಸತ್ಯವಾವುದೆಂಬುದನ್ನು ನಿನ್ನ ಹೃದಯವೇ ಚೆನ್ನಾಗಿ ಬಲ್ಲುದು. ಆದುದರಿಂದ ನಿನ್ನ ಶ್ರೇಯಸ್ಸಿಗೆ ಯಾವುದು ದಾರಿಯೆಂಬುದನ್ನು ನಿನ್ನಲ್ಲಿ ನೀನೇ ಪರಿಶೀಲಿಸಿ ನೋಡು! ಯಾವನು ತನ್ನ ಮಿತ್ರನನ್ನಾಗಲಿ, ಅಮಿತ್ರನನ್ನಾಗಲಿ, ಕಾಮಕ್ರೋಧಗಳಿಗೊಳಪಟ್ಟು ವಂಚಿಸದಿರುವನೋ ಅವನೇ ಉತ್ತಮಪುರುಷನೆನಿಸುವನು. ರಾಜನೆ! ನೀನು ನನ್ನ ಸಂಬಂಧವನ್ನು ಮಾಡಿದುದು ನಿನಗೂ ನೆನಪಿಲ್ಲದೆ ಹೋದರೆ, ನನ್ನ ಮಾತಿನಲ್ಲಿಯೂ ನಿನಗೆ ನಂಬಿಕೆ ಹುಟ್ಟದೆ ಹೋದರೆ, ನಾನು ಹಿಂತಿರುಗಿ ಆಶ್ರಮಕ್ಕೆ ಹೋಗುವೆನು. ನಿನ್ನಂತವನೊಡನೆ ಬಾಳುವುದಕ್ಕಿಂತಲೂ ಬಿಟ್ಟು ಹೋಗುವುದೇ ಮೇಲು. ಇವನು ನಿನ್ನ ಮಗನೆಂಬುದರಲ್ಲಿಯೂ ನಿನಗೆ ಸಂದೇಹವಿದ್ದ ಪಕ್ಷದಲ್ಲಿ, ಇನ್ನೂ ಚೆನ್ನಾಗಿ ನಿನ್ನಲ್ಲಿ ನೀನೇ ವಿಮರ್ಶಿಸಿ ನೋಡು! ಆಗ ನಿನಗೇ ತಿಳಿಯಬಹುದು. ಇವನ ನಡೆ, ನುಡಿ, ಕಂಠಧ್ವನಿ, ಜ್ಞಾಪಕಶಕ್ತಿ, ಬಲ, ವೀರ್ಯ, ಶೀಲ, ವಿದ್ಯೆ, ವಿಕ್ರಮ, ಧೈರ್ಯ, ಪ್ರಕೃತಿ, ಗಂಭೀರ ಸ್ವಭಾವಗಳು, ದೇಹದಲ್ಲಿ ಕಾಣಿಸುವ ಕೂದಲಿನ ಸುಳಿಗಳು, ಇವನ್ನೆಲ್ಲ ಪರೀಕ್ಷಿಸು. ಯಾವ ಇಬ್ಬರಲ್ಲಿ ಇವು ಸಮಾನವಾಗಿ ಕಾಣುವುವೋ, ಅವರಲ್ಲಿ ಪಿತೃ ಪುತ್ರ ಸಂಬಂಧವುಂಟೆಂಬುದರಲ್ಲಿ ಸಂದೇಹವೇ ಇಲ್ಲ. ರಾಜೇಂದ್ರಾ! ನಿಮ್ಮಿಬ್ಬರಲ್ಲಿ ಸಾದೃಶ್ಯವನ್ನು ನೋಡಿದರೆ, ಇವನು ನಿನ್ನ ದೇಹದಿಂದ ಎತ್ತಲ್ಪಟ್ಟ ಪ್ರತಿಬಿಂಬವಂತೆಯೇ ಇರುವನು. ರಾಜಾ! "ಅಪ್ಪಾ!" ಎಂದು ಕರೆಯುತ್ತಿರುವ ಈ ಕುಮಾರನನ್ನು ನೀನು ನಿರಾಕರಿಸಬಾರದು. ಈ ನನ್ನ ಮಗನು ಸಾಮಾನ್ಯನಲ್ಲ. ಕತ್ತಿಯ ಹಾಲಿಲ್ಲದೆ (ರಾಜ್ಯಭೋಗವಿಲ್ಲದೆ) ಇವನು ಶುದ್ಧವಾದ ಹಾಲನ್ನು (ಯೋಗಸುಖವನ್ನು) ಕುಡಿಯತಕ್ಕವನು. ನೀನೊಪ್ಪದಿದ್ದರೂ ಇವನು ಮಹಾಮೇರುವನ್ನೇ ಕಿರೀಟವನ್ನಾಗಿಯೂ, ಚತುಸ್ಸಮುದ್ರವೇ ಎಲ್ಲೆಯಾಗಿಯೂ ಉಳ್ಳ ಭೂಮಿಯನ್ನೆಲ್ಲ ಆಳದೆ ಹೋಗುವವನಲ್ಲವೆಂದು ತಿಳಿ! ಈ ಮಗನು

ನನ್ನಲ್ಲಿ ಜನಿಸಿದಾಗಲೇ ಮಹೇಂದ್ರನು ನನ್ನನ್ನು ನೋಡಿ “ಶಕುಂತಳೇ! ನಿನ್ನ ಮಗನು ಚಕ್ರವರ್ತಿಯಾಗುವನು” ಎಂದು ಹೇಳಿರುವನು. ಅದು ಎಂದಿಗೂ ಸುಳ್ಳಾಗುವುದೇ? ದೇವದೂತರೇ ಮೊದಲಾಗಿ ಅನೇಕರನ್ನು ನಾನು ನನ್ನ ನಿಜಕ್ಕೆ ಸಾಕ್ಷಿಯಾಗಿರಬೇಕೆಂದು ಕೋರಿರುವೆನು. ಅವರಾವರೂ ಈಗಿನ ನನ್ನ ಧರ್ಮಸಂಕಟದಲ್ಲಿ ಇದು ಸತ್ಯವೆಂದಾಗಲಿ, ಅಸತ್ಯವೆಂದಾಗಲಿ ಹೇಳದೆ ಸುಮ್ಮನಿರುವರು. ಮಂದಭಾಗ್ಯೆಯಾದ ನನಗೆ ಸಾಕ್ಷಿಗಳೂ ಕೈಬಿಟ್ಟುಹೋದಮೇಲೆ ನಾನು ಮಾಡುವುದೇನಿದೆ? ನಾನು ಬಂದ ದಾರಿಯನ್ನು ಹಿಡಿದು ಹೋಗುವೆನು” ಎಂದಳು.

ಓ ಜನಮೇಜಯರಾಜಾ! ಶಕುಂತಳೆಯು ಇಷ್ಟನ್ನು ಹೇಳಿ ಅಲ್ಲಿಂದ ಹಿಂತಿರುಗಿಬಿಟ್ಟಳು. ಆವಳ ಕೋಪಾಗ್ನಿಯ ಜ್ವಾಲೆಯು ಅವಳ ತಲೆಯಮೇಲೆ ಹೊಗೆಯಾಡುವಂತೆ ಕಾಣಿಸುತ್ತಿದ್ದಿತು. ಹಾಗಿದ್ದರೂ ತನ್ನಲ್ಲಿ ಹುಟ್ಟಿದ ಆ ಕೋಪಾಗ್ನಿಯನ್ನು ಪ್ರಯತ್ನದಿಂದ ತನ್ನ ದೇಹದಲ್ಲಿಯೇಯೇ ಅಡಗಿಸಿಟ್ಟುಕೊಂಡು, ತನ್ನ ಮಗನೊಡನೆ ಹಿಂತಿರುಗಿ ಆಶ್ರಮದ ಕಡೆಗೆ ಹೊರಟೇಬಿಟ್ಟಳು.

ಇದು ತೊಂಭತ್ತೊಂಭತ್ತನೆಯ ಅಧ್ಯಾಯವು.



(ಆಕಾಶವಾಣಿಯನ್ನು ಕೇಳಿದಮೇಲೆ ದುಷ್ಯಂತನು ಶಕುಂತಲೆಯನ್ನು ಅಂಗೀಕರಿಸಿದುದು. ಪುತ್ರನಿಗೆ ಭರತನೆಂಬ ಹೆಸರಿಟ್ಟು, ತನ್ನ ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿದುದು.)

ಓ ಜನಮೇಜಯರಾಜಾ! ಇಷ್ಟರಲ್ಲಿಯೇ ಅಂತರಿಕ್ಷದಿಂದ ಅಶರೀರವಾಕ್ಯೊಂದು ಹೊರಟಿತು. ಋತ್ವಿಕ್ಕುಗಳು, ಪುರೋಹಿತರು, ಆಚಾರ್ಯರು, ಮಂತ್ರಿಗಳು ಮುಂತಾಗಿ ಸಮಸ್ತಪರಿವಾರಗಳಿಂದ ಪರಿವೃತನಾಗಿದ್ದ ದುಷ್ಯಂತನ ಕಿವಿಗೆ ಬೀಳುವಂತೆ ಆ ಅಶರೀರವಾಣಿಯು “ಪುತ್ರಜನನದಲ್ಲಿ ತಾಯಿಯು ಬರೀ ಒಂದು ಚರ್ಮದ ಚೀಲವೇ ಹೊರತು, ತಂದೆಯು

ಸ್ವರೂಪವೇ ಮಗನು. ಯಾವನಿಂದ ಮಗನು ಹುಟ್ಟುವನೋ ಅವನೇ ಅವನು. ದುಷ್ಯಂತಪುತ್ರನಾದ ಈ ಕುಮಾರನನ್ನು ಭರಿಸು! ಶಕುಂತಳೆಯು ಸತ್ಯವನ್ನು ಹೇಳಿರುವಳು. ತಂದೆಯ ಒಂದೊಂದು ಅಂಗದಿಂದಲೂ ತನ್ನ ಒಂದೊಂದು ಅಂಗವನ್ನೂ ಹೊಂದಿ ಪುತ್ರನು ತಂದೆಯಿಂದಲೇ ನೇರವಾಗಿ ಹುಟ್ಟುವನು. ಆದುದರಿಂದ ಈ ನಿನ್ನ ಶರೀರವೇ ಪುತ್ರನೆಂದು ಕರೆಯಲ್ಪಡುವುದು. ನಿನ್ನಿಂದಲೇ ಗರ್ಭವಿಡಲ್ಪಟ್ಟು, ನೀನಾಗಿಯೇ ಹುಟ್ಟಿದ ಈ ಪುತ್ರನನ್ನು ನೀನು ಕಾಪಾಡು. ಅನನ್ಯಪರಾಯಣಳಾದ ಈ ಶಕುಂತಳೆಯನ್ನು ನೀನು ನಿರಾಕರಿಸಿ ಅವಮಾನಗೊಳಿಸಬೇಡ. ಸ್ತ್ರೀಯರು ಎಣೆಯಿಲ್ಲದ ಪವಿತ್ರವಸ್ತುವೆಂದು ಭಾವಿಸು. ಇದು ಧರ್ಮಶಾಸ್ತ್ರವಿಹಿತವಾದುದೇ! ಏಕೆಂದರೆ, ಸ್ತ್ರೀಯರಿಗೆ ಪ್ರತಿತಿಂಗಳೂ ಅವರ ದೋಷಗಳೆಲ್ಲ ರಜೋರೂಪವಾಗಿ ಕಳೆದುಹೋಗಿ ಅವರು ಶುದ್ಧರಾಗುತ್ತಿರುವರು" ಎಂಬೀ ವಾಕ್ಯಗಳು ಹೊರಟುವು. ಆಮೇಲೆ ಇದೇ ವಾಕ್ಯವನ್ನನುಮೋದಿಸಿ, ನಾನಾಕಡೆಗಳಿಂದಲೂ ಸಮಸ್ತ ಭೂತಗಳೂ ದುಷ್ಯಂತನನ್ನು ಕುರಿತು ಹೀಗೆಂದು ಹೇಳುವುವು "ರಾಜೇಂದ್ರಾ! ಈ ಕುಮಾರನು ನಿನ್ನ ಶರೀರದಿಂದಲೇ ಗರ್ಭಾದಾನ ಮಾಡಲ್ಪಟ್ಟು ಜನಿಸಿದವನು. ನಿನ್ನ ಪತ್ನಿಯಾದ ಶಕುಂತಳೆಯನ್ನು ನಿರಾಕರಿಸಬೇಡ! ಪುತ್ರನು ತನಗೆ ಬೀಜವನ್ನು ನಟ್ಟ ತಂದೆಯನ್ನು ನರಕದಿಂದ ತಪ್ಪಿಸುವನು. ನೀನೇ ಇವನಿಗೆ ಗರ್ಭಾದಾನವನ್ನು ಮಾಡಿದವನು ಶಕುಂತಳೆಯು ಹೇಳಿದುದು ನಿಜವು. ಪತಿಯೇ ತನ್ನ ಪತ್ನಿಯ ಶರೀರದಲ್ಲಿ ಪ್ರವೇಶಿಸಿ, ಅವನೇ ತಿರುಗಿ ಪುತ್ರರೂಪದಿಂದ ಜನಿಸುವನು. ಹೀಗೆ ತಂದೆಮಕ್ಕಳಲ್ಲಿ ಅನ್ಯೋನ್ಯ ಕಾರ್ಯಕಾರಣವಿರುವುದರಿಂದ, ನೀನು ಈ ಶಕುಂತಳೆಯನ್ನು ನಿರಾಕರಿಸಬಾರದು. ತಾಯಿಯು ತನ್ನ ಶರೀರದಿಂದ ವಿಭಾಗಿಸಲ್ಪಟ್ಟ ಆಕೃತಿಯನ್ನೇ ಪುತ್ರರೂಪದಿಂದ ಹಡೆಯುವಳು. ಆದುದರಿಂದ ಓ ದುಷ್ಯಂತಾ! ನಿನ್ನ ಪುತ್ರನಾದ ಈ ಶಕುಂತಳೆಯ ಮಗನನ್ನು ಭರಿಸು. ರಾಜಾ! ಇದೋ! ಈ ಶಕುಂತಳೆಯು ನಿನಗೆ ಮಹತ್ತಾದೊಂದು ಐಶ್ವರ್ಯವೆಂದು ತಿಳಿ! ಅವಳನ್ನು ಬಿಡಬಾರದು. ಈ ಪುತ್ರನೂ ನಿನಗೆ ಪ್ರಾಣಭೂತನು. ಅವನನ್ನು ನೀನು ಕಾಪಾಡು. ಶಕುಂತಳಾಪುತ್ರನೂ, ಮಹಾತ್ಮನೂ, ಪೂರು ವಂಶ

ದವನೂ ಆದ ಈ ಕುಮಾರನನ್ನು ಭರಿಸು. ಇವನನ್ನು ಭರಿಸುವುದು ನಿನ್ನ ಕರ್ತವ್ಯವು. ಅಲ್ಲದೆ ನಮ್ಮ ಮಾತಿಗಾಗಿ ನೀನು ಇವನನ್ನು ಭರಿಸಲೇಬೇಕು. ಇದರಿಂದ ಈ ನಿನ್ನ ಮಗನಿಗೆ **ಭರತ**ನೆಂದೇ ಹೆಸರಾಗಲಿ! ಈ ಭರತನಿಂದ ನಿನ್ನ ಕುಲಕ್ಕೂ, ಭಾರತಕುಲವೆಂಬ ಪ್ರಖ್ಯಾತಿಯುಂಟಾಗಲಿ! ಇವನ ಹಿಂದುಮುಂದಿನ ಸಂತತಿಯವರಿಗೆಲ್ಲ ಭರತರೆಂಬ ಪ್ರಸಿದ್ಧಿಯೇ ಉಂಟಾಗಲಿ!" ಎಂದರು.

ಜನಮೇಜಯರಾಜಾ! ದೇವತೆಗಳೂ, ತಪೋಧನರಾದ ದೇವರ್ಷಿಗಳೂ ಹೀಗೆಂದು ಹೇಳಿ "ಈ ಶಕುಂತಳೆಯು ಮಹಾಪ್ರತಿವ್ರತೆ"ಯೆಂದು ಘೋಷಿಸುತ್ತ, ಅವಳಮೇಲೆ ಪುಷ್ಪವರ್ಷವನ್ನು ಕರೆದರು. ದೇವತೆಗಳು ಹೇಳಿದ ಈ ಮಾತುಗಳನ್ನೆಲ್ಲ ಕೇಳಿದೊಡನೆ ದುಷ್ಯಂತನು ತಾನು ಕುಳಿತಿದ್ದ ಸಿಂಹಾಸನದಿಂದ ಮೇಲೆದ್ದು ಆ ದೇವತೆಗಳಿಗೆ ತಲೆಬಗ್ಗಿ ನಮಸ್ಕರಿಸಿದನು. ಆಮೇಲೆ ತನ್ನ ಪುರೋಹಿತರನ್ನೂ ಮಂತ್ರಿಗಳನ್ನೂ ಕರೆದು ಸಂತೋಷದಿಂದ ಹೀಗೆಂದು ಹೇಳುವನು. "ದೇವದೂತರ ಈ ವಾಕ್ಯವನ್ನು ನೀವೆಲ್ಲರೂ ಕೇಳಿರಿ. ದೇವತೆಗಳೂ, ಮಹರ್ಷಿಗಳೂ ಇವನು ನನ್ನ ಮಗನೆಂದೇ ಹೇಳುವರು. ಆದರೆ, ಇದಕ್ಕೆ ಮೊದಲೇ ನಾನು ಇವಳನ್ನು ನನ್ನ ಪತ್ನಿಯೆಂದೂ, ಇವನು ನನ್ನ ಮಗನೆಂದೂ ಚೆನ್ನಾಗಿ ತಿಳಿದಿದ್ದೆನು. ಆದರೆ, ಇವಳ ಮಾತಿನಮೇಲೆಯೇ ನಾನು ಇವರನ್ನು ಪರಿಗ್ರಹಿಸಿಬಿಟ್ಟರೆ, ಲೋಕಕ್ಕೆ ನಮ್ಮ ನಡತೆಯಲ್ಲಿ ಅನುಮಾನವುಂಟಾಗುವುದು. ಆಗ ಈ ಪುತ್ರನು ಶುದ್ಧನೆಂದು ಯಾರಿಗೂ ನಂಬಿಕೆಯಿರದು. ಅದಕ್ಕಾಗಿಯೇ ನಾನು ನಿರಾಕರಿಸಿದೆನು" ಎಂದನು.

ಓ ಜನಮೇಜಯರಾಜಾ! ಹೀಗೆ ದುಷ್ಯಂತನು ದೇವತೆಗಳ ಮತ್ತು ಮಹರ್ಷಿಗಳ ಮಾತುಗಳಿಂದ ಆ ಪುತ್ರನ ಮೇಲಿನ ಶಂಕೆಯನ್ನು ಲೋಕಕ್ಕೆ ಪರಿಹರಿಸಿ, ತೃಪ್ತಿಯಿಂದಲೂ, ಸಂತೋಷದಿಂದಲೂ ಆ ಪುತ್ರನನ್ನು ಸಮೀಪಕ್ಕೆ ಕರೆದನು. ಒಡನೆಯೇ ಆ ಪುತ್ರನಿಗೆ ತಂದೆಯು ನಡೆಸತಕ್ಕ ಶುಭಕರ್ಮಗಳನ್ನೆಲ್ಲ ನಡೆಸಿದನು. ಆ ಕುಮಾರನ ತಲೆಯನ್ನಾಘ್ರಾಣಿಸಿ, ಪ್ರೀತಿಯಿಂದ ಅಪ್ಪಿ ಮುದ್ದಾಡಿದನು. ಬ್ರಾಹ್ಮಣರ ಸತ್ಕಾರಗಳಿಂ

ದಲೂ, ಸ್ತುತಿಪಾಠಕರ ಸ್ತೋತ್ರಗಳಿಂದಲೂ ಆದರಿಸಲ್ಪಡುತ್ತ, ಪುತ್ರಸ್ಪರ್ಶ ದಿಂದುಂಟಾದ ಅಮಿತಾನಂದವನ್ನು ಅನುಭವಿಸಿದನು. ಆಮೇಲೆ ತನ್ನ ಭಾರ್ಯೆಯಾದ ಶಕುಂತಲೆಯನ್ನು ನ್ಯಾಯರೀತಿಯಿಂದ ಆದರಿಸಿ ಸತ್ಕರಿಸಿದನು. ಅವಳನ್ನು ಕರೆದು ಸಾಂತ್ವಪೂರ್ವಕವಾಗಿ ಹೀಗೆಂದು ಹೇಳುವನು. "ಪ್ರಿಯೆ! ನಮ್ಮಿಬ್ಬರ ಸಂಸರ್ಗವನ್ನು ಇದಕ್ಕೆ ಮೊದಲು ಯಾರೂ ಕಂಡವರಿಲ್ಲ. ಈಗ ತಿರುಗಿ ಈ ನಮ್ಮ ಸಂಬಂಧವು ಎಲ್ಲಾ ಜನಗಳಿಗೂ ಪ್ರತ್ಯಕ್ಷವಾಗಿ ತಿಳಿಯುಂತೆ ತಿರುಗಿ ಘಟಿಸಿತು. ಇದು ಲೋಕವಿದಿತವಾಗಿ ನಡೆಯಬೇಕೆಂದೇ ನಾನು ಮೊದಲು ನಿನ್ನೊಡನೆ ಹಾಗೆ ಮಾತಾಡಿದೆನು. ನೀನು ಸ್ತ್ರೀಯಾದುದರಿಂದ ನಮ್ಮಿಬ್ಬರ ಸಂಬಂಧವನ್ನು ಕುರಿತು ಲೋಕವು ಸಂದೇಹಿಸಲು ಅವಕಾಶವುಂಟು. ಆ ಸಂದೇಹ ಪರಿಹಾರಾರ್ಥವಾಗಿಯೇ ನಾನು ಅಷ್ಟು ವಿಚಾರಮಾಡಬೇಕಾಯಿತು. ದೇವಿ! ನಿನ್ನ ಪಾತಿವ್ರತ್ಯವನ್ನು ಕುರಿತು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದವರೂ ನಂಬಿ ನಿನ್ನನ್ನು ಗೌರವಿಸುವಂತಾಯಿತು. ಇದೋ! ಈ ಪುತ್ರನನ್ನು ನಾನು ರಾಜ್ಯಕ್ಕಾಗಿಯೇ ವರಿಸಿರುವೆನು. ನೀನು ನನ್ನ ಪಟ್ಟಮಹಿಷಿಯಾಗಿರು. ಪ್ರಿಯೆ! ಮೊದಲು ನನ್ನಲ್ಲಿ ನೀನು ಮಿತಿಮೀರಿದ ಕೋಪದಿಂದ ಬಹಳ ಕಠಿನವಾಗಿ ಏನೇನನ್ನೋ ಹೇಳಿದೆ. ನಿನ್ನಲ್ಲಿ ನನಗಿರುವ ಅಸಾಧಾರಣಪ್ರೀತಿಗಾಗಿ ಅವನ್ನೆಲ್ಲ ನಾನು ಸಹಿಸಿಕೊಂಡೆನು. ಹಾಗೆಯೇ ನೀನೂ ನನ್ನ ವಿಷಯದಲ್ಲಿರಬೇಕು. ನಾನು ನಿನ್ನೊಡನೆ ಆಡಿದ ಮಾತುಗಳು ಅಸತ್ಯವಾಗಿದ್ದರೂ, ಅಪ್ರಿಯವಾಗಿದ್ದರೂ, ಆಡಬಾರದ ಮಾತುಗಳಾಗಿದ್ದರೂ, ಪಾಪಿಷ್ಠವಾಗಿದ್ದರೂ ನನ್ನ ದುರಾಚಾರಗಳನ್ನು ನೀನು ಮನ್ನಿಸಬೇಕು. ಪತಿವಾಕ್ಯಗಳನ್ನು ಸಹಿಸಿಕೊಳ್ಳುವುದೇ ಸ್ತ್ರೀಯರ ಪಾತಿವ್ರತ್ಯಕ್ಕೆ ಲಕ್ಷಣವು" ಎಂದನು.

ದುಷ್ಯಂತನು ಹೀಗೆಂದು ಹೇಳಿ, ನಿರ್ದುಷ್ಟವಾದ ನಡತೆಯುಳ್ಳ ಆಕೆಯನ್ನು ಅರಮನೆಗೆ ಕರೆದುಕೊಂಡು ಹೋಗಿ, ಉತ್ತಮ ವಸ್ತ್ರಗಳಿಂದಲೂ, ಅನ್ನಪಾನಗಳಿಂದಲೂ ಅವಳನ್ನು ಆದರಿಸಿದನು. ಆ ಪತ್ನೀಪುತ್ರರಿಬ್ಬ

ರನ್ನೂ ತನ್ನ ತಾಯಿಯಾದ ರಥಂತರ್ಯೆಯ ಬಳಿಗೆ ಕರೆದುಕೊಂಡು ಹೋಗಿ ಅವಳಿಗೆ ತೋರಿಸಿ "ಅಮ್ಮಾ! ಇವನು ನನಗೆ ಅರಣ್ಯದಲ್ಲಿ ಜನಿಸಿದ ಪುತ್ರನು. ಇವನಿಂದ ನಾನು ಪಿತೃಋಣದಿಂದ ಮುಕ್ತನಾದೆನು. ನಿನ್ನ ದುಃಖವನ್ನು ನೀಗಿಸತಕ್ಕ ಪೌತ್ರನು ಇವನೇ. ಇವಳು ವಿಶ್ವಾಮಿತ್ರನ ಮಗಳು. ಕಣ್ವಮುನಿಯಿಂದ ಪೋಷಿಸಲ್ಪಟ್ಟವಳು. ನಿನ್ನ ಸೊಸೆಯಾದ ಈ ಶಕುಂತಳೆಯನ್ನು ಅನುಗ್ರಹಿಸು" ಎಂದನು. ಒಡನೆಯೇ ರಥಂತರ್ಯೆಯು ತನ್ನ ಮೊಮ್ಮಗನನ್ನು ಪ್ರೀತಿಯಿಂದ ಆಲಿಂಗಿಸಿದಳು. ಮತ್ತು ತನ್ನ ಕಾಲುಗಳಮೇಲೆ ಬಿದ್ದ ಶಕುಂತಳೆಯನ್ನು ಕೈಹಿಡಿದು ಮೇಲಕ್ಕೆತ್ತಿ ಆಲಿಂಗಿಸಿ ಆನಂದಬಾಷ್ಪವನ್ನು ಸುರಿಸುತ್ತ "ಕುಮಾರೀ! ನಿನ್ನ ಕುಮಾರನಲ್ಲಿ ಎಲ್ಲಾ ಶುಭಲಕ್ಷಣಗಳೂ ಕಾಣುತ್ತಿವೆ. ಅವನು ಮುಂದೆ ಚಕ್ರವರ್ತಿಯಾಗುವನು. ನಿನ್ನ ಪತಿಯು ತ್ರಿಲೋಕವಿಜಯಿಯೆನಿಸುವನು. ನೀನು ದಿವ್ಯಭೋಗಗಳನ್ನನುಭವಿಸುತ್ತ ಸುಖವಾಗಿರು" ಎಂದಳು. ರಥಂತರ್ಯೆಯು ಈ ಆಶೀರ್ವಚನಗಳಿಂದ ಶಕುಂತಳೆಗೂ ಅತ್ಯಂತ ಹರ್ಷವಾಯಿತು. ಆಮೇಲೆ ರಾಜನು ಶಕುಂತಳೆಯನ್ನು ಸರ್ವಾಭರಣಗಳಿಂದಲಂಕರಿಸಿ, ಶಾಸ್ತ್ರೋಕ್ತವಿಧಿಯಿಂದ ಅವಳನ್ನು ಅಗ್ರಮಹಿಷಿಯನ್ನಾಗಿ ಮಾಡಿದನು. ಆ ಕಾಲದಲ್ಲಿ ಬ್ರಾಹ್ಮಣರಿಗೆ ವಿಶೇಷಧನವನ್ನು ದಾನ ಕೊಟ್ಟನು. ಸೈನಿಕರೆಲ್ಲರಿಗೂ ಬೇಕಾದುದನ್ನು ಕೊಟ್ಟು ಸಂತೋಷಗೊಳಿಸಿದನು. ಆಮೇಲೆ ಶಕುಂತಳೆಯ ಮಗನಿಗೆ ಭರತನೆಂಬ ನಾಮಕರಣವನ್ನು ವಿಧ್ಯುಕ್ತವಾಗಿ ಮಾಡಿ, ಅವನನ್ನು ಯೌವರಾಜ್ಯದಲ್ಲಿ ಅಭಿಷೇಕಿಸಿದನು. ತನ್ನ ರಾಜ್ಯಕಾರ್ಯದ ಭಾರವನ್ನೆಲ್ಲ ಆ ಭರತನಿಗೇ ವಹಿಸಿ, ತಾನು ಕೃತಕೃತ್ಯನಾದನು. ಆಮೇಲೆ ತಾನು ನೂರುವರ್ಷಗಳವರೆಗೆ ಪೂರ್ಣವಾಗಿ ರಾಜ್ಯವನ್ನು ನಡೆಸುತಿದ್ದು, ಆಮೇಲೆ ವಾನಪ್ರಸ್ಥಾಶ್ರಮದಲ್ಲಿದ್ದು ಕೊನೆಗೆ ಸ್ವರ್ಗವನ್ನು ಸೇರಿದನು.

ಇದು ನೂರನೆಯ ಅಧ್ಯಾಯವು.



 ಭರತ ಚರಿತ್ರವು. ಭರತವಂಶವು. 

ಭರತನು ಧರ್ಮಕ್ಕನುಸಾರವಾಗಿ ದುಷ್ಯಂತನಿಂದ ರಾಜ್ಯವನ್ನು ಪಡೆದನು. ಮಹಾತ್ಮನಾದ ಆ ಭರತನ ರಾಜ್ಯಭಾರವು ಪ್ರಸಿದ್ಧವಾಗಿಯೂ, ದುರ್ಜಯವಾಗಿಯೂ, ಲೋಕದಲ್ಲಿ ಜನರೆಲ್ಲರ ಕೊಂಡಾಟಕ್ಕೆ ಪಾತ್ರವಾಗಿಯೂ ಶೋಭಿಸುತಿದ್ದಿತು. ಆತನು ಇತರ ರಾಜರೆಲ್ಲರನ್ನೂ ಜಯಿಸಿ, ಅವರನ್ನು ತನ್ನ ಅಧೀನರನ್ನಾಗಿ ಮಾಡಿಕೊಂಡನು. ಸತ್ಪುರುಷರ ಧರ್ಮವನ್ನನುಸರಿಸುತ್ತ ಪ್ರತಾಪಶಾಲಿಯಾಗಿ, ಎಣೆಯಿಲ್ಲದ ಯಶಸ್ಸನ್ನು ಹೊಂದಿ ಚಕ್ರವರ್ತಿಯೆನಿಸಿದನು. ದೇವೇಂದ್ರನಂತೆ ಅನೇಕಯಜ್ಞಗಳನ್ನು ಮಾಡಿದನು. ದಕ್ಷನಿಗೆ ಸಮಾನನಾದ ಕಣ್ವಮುನಿಯು ಆತನಿಂದ ಯಾಗ ಮಾಡಿಸಿ ಭೂರಿದಕ್ಷಿಣೆಗಳನ್ನು ಕೊಡಿಸಿದನು. ಆತನು ಗೋವಿತ್ತವೆಂಬ ಒಂದು ದೊಡ್ಡ ಅಶ್ವಮೇಧ ಯಾಗವನ್ನು ಮಾಡಿಸಿದನು. ಭರತನು ಆ ಯಾಗದಲ್ಲಿ ಕಣ್ವಮಹರ್ಷಿಗೆ ಒಂದು ಪದ್ಮಸಂಖ್ಯೆಯಷ್ಟು ಭಂಗಾರವನ್ನು ಕೊಟ್ಟನು. ಭರತನು ಯಮುನಾತೀರದಲ್ಲಿ ನೂರು ಅಶ್ವಮೇಧಯಾಗಗಳನ್ನು ಮಾಡಿದನು. ಸರಸ್ವತೀ ನದೀತೀರದಲ್ಲಿ ಮುನ್ನೂರು ಅಶ್ವಮೇಧಯಾಗಗಳನ್ನು ಮಾಡಿದನು. ಗಂಗಾತೀರದಲ್ಲಿ ನಾನೂರು ಅಶ್ವಮೇಧ ಯಾಗಗಳನ್ನು ಮಾಡಿದನು. ಆತನ ಕಾಲದಿಂದಲೇ ಭರತವಂಶಕ್ಕೆ ವಿಶೇಷ ಕೀರ್ತಿಯು ಹರಡಿತು. ಭರತನಿಗೆ ಬೇರೆಬೇರೆ ಸ್ತ್ರೀಯರಲ್ಲಿ ಬೇರೆ ಬೇರೆ ಮಕ್ಕಳು ಹುಟ್ಟಿದರು. ಆಗ ಆ ರಾಜನು ಆ ಮಕ್ಕಳು ತನಗೆ ಅನುರೂಪರಲ್ಲವೆಂದು ತಿಳಿದು, ಅವರನ್ನು ಅನಾದರಣೆಯಿಂದ ಕಾಣುತಿದ್ದನು. ಅದನ್ನು ನೋಡಿ ಆ ಮಕ್ಕಳ ತಾಯಿಯರೇ ಅವುಗಳನ್ನು ಕೊಂದುಬಿಟ್ಟರು. ಆದುದರಿಂದ ಆ ರಾಜನಿಗೆ ಮಕ್ಕಳು ಹುಟ್ಟಿದರೂ ತೃಪ್ತಿಯಿಲ್ಲದೆ ಹೋಯಿತು. ಆಮೇಲೆ ಭರತನು ದೊಡ್ಡ ಯಾಗಗಳನ್ನು ಮಾಡಿ ಭರದ್ವಾಜಮಹರ್ಷಿಯ ಅನುಗ್ರಹದಿಂದ ಭುಮನ್ಯುವೆಂಬ ಪುತ್ರನನ್ನು ಪಡೆದನು. ಆ ಮಗನು ಹುಟ್ಟಿದಮೇಲೆಯೇ ತಾನು ಪುತ್ರವಂತನೆಂದು ಭಾವಿಸಿಕೊಂಡು, ಆತನಿಗೆ ಯುವರಾಜಪಟ್ಟವನ್ನು ಕಟ್ಟಿದನು. ಆ ಭುಮನ್ಯುವಿಗೆ ದಿವಿರಥನೆಂಬ ಮಗನು ಹುಟ್ಟಿದನು. ಇದಲ್ಲದೆ, ಅವನಿಗೆ ಪುಷ್ಕರಿಣಿ

ಯೆಂಬಾಕೆಯಲ್ಲಿ ಸಹೋತ್ರ, ಸುಹೋತ, ಸುಹವಿಸ್ಸು, ಸುಯುಜಸ್ಸು, ಋಷೀಕರೆಂಬ ಮಕ್ಕಳು ಹುಟ್ಟಿದರು. ಅವರಲ್ಲಿ ಜ್ಯೇಷ್ಠನಾದ ಸುಹೋತ್ರನು ಪೈತೃಕವಾದ ರಾಜ್ಯವನ್ನು ಹೊಂದಿದನು. ಆತನು ರಾಜಸೂಯ, ಅಶ್ವಮೇಧ ಮೊದಲಾದ ದೊಡ್ಡ ಯಾಗಗಳನ್ನು ಮಾಡಿದನು. ಸಮೃದ್ಧವಾದ ಆನೆಗಳನ್ನೂ, ಹಸುಗಳನ್ನೂ, ಕುದುರೆಗಳನ್ನೂ, ಉತ್ತಮ ರತ್ನಗಳನ್ನೂ ಪಡೆದು ಸಮುದ್ರವನ್ನು ಮೇರೆಯಾಗುಳ್ಳ ಭೂಮಂಡಲವೆಲ್ಲವನ್ನೂ ಪರಿಪಾಲಿಸಿದನು. ಆಗ ಚತುರಂಗಗಳ ಮತ್ತು ಪ್ರಜಾಸಂಖ್ಯೆಯ ಭಾರದಿಂದ ಭೂಮಿಯು ಕುಗ್ಗುವಂತೆ ಕಾಣುತಿತ್ತು. ಆ ರಾಜನು ಧರ್ಮಯುಕ್ತವಾಗಿ ಪ್ರಜೆಗಳನ್ನು ಪಾಲಿಸುತ್ತಿರುವಾಗ, ಭೂಮಿಯೆಲ್ಲವೂ ಲಕ್ಷೋಪಲಕ್ಷ ದೇವಾಲಯಗಳಿಂದಲೂ, ಯೂಪಸ್ತಂಭಗಳಿಂದಲೂ ಶೋಭಿಸುತಿದ್ದಿತು. ಭೂಮಿಯಲ್ಲಿ ಸದಾ ಧನಧಾನ್ಯಗಳ ಮತ್ತು ಪ್ರಜೆಗಳ ಸಮೃದ್ಧಿಯಿದ್ದಿತು. ಇಕ್ಷ್ವಾಕುವಿನ ಮಗಳಾದ ಅವನ ಪತ್ನಿಯಲ್ಲಿ ಅಜಮೀಢ, ಸುಮೀಢ, ಪುರುಮೀಢರೆಂಬ ಮಕ್ಕಳಾದರು. ಅವರಲ್ಲಿ ಹಿರಿಯವನಾದ ಅಜಮೀಢನಿಂದ ಆ ರಾಜವಂಶವು ಬೆಳೆಯಿತು. ಅವನು ತನ್ನ ಮೂವರು ಹೆಂಡತಿಯರಲ್ಲಿಯೂ ಆರು ಮಕ್ಕಳನ್ನು ಪಡೆದನು. ಧೂಮಿನಿ ಎಂಬಾಕೆಯ ಹೊಟ್ಟೆಯಲ್ಲಿ ಋಕ್ಷನೂ, ನೀಲಿಯೆಂಬಾಕೆಯಲ್ಲಿ ದುಷ್ಯಂತ ಪರಮೇಷ್ಠಿಯೆಂಬಿಬ್ಬರೂ, ಕೇಶಿನಿಯಲ್ಲಿ ಜಹ್ನು, ಜನನ ಮತ್ತು ರೂಷ್ಣನೆಂಬ ಮಕ್ಕಳೂ ಹುಟ್ಟಿದರು. ವೀರನಾದ ಸಂವರಣನು ಋಕ್ಷನಿಗೆ ರಥಂತರನ ಮಗಳಲ್ಲಿ ಹುಟ್ಟಿದವನು. ಹಾಗೆಯೇ ಈ ಪಾಂಚಾಲದೇಶದ ರಾಜರೆಲ್ಲರೂ ದುಷ್ಯಂತನ ಮತ್ತು ಪರಮೇಷ್ಠಿಯ ಸಂತತಿಯೆಂದು ತಿಳಿ. ಕುಶಿಕರು ಅಪಾರತೇಜಸ್ಸುಳ್ಳ ಜಹ್ನುವಿನ ಸಂತತಿಯವರು. ಋಕ್ಷಕನು ಜನನ ಮತ್ತು ರೂಷ್ಣರಿಗಿಂತಲೂ ಹಿರಿಯವನಾದುದರಿಂದ ಆತನೇ ರಾಜನಾದನು. ರಾಜಾ! ನಿನ್ನ ವಂಶಸ್ಥನಾದ ಸಂವರಣನು ಋಕ್ಷನ ಹೊಟ್ಟೆಯಲ್ಲಿ ಹುಟ್ಟಿದವನು. ಋಕ್ಷನ ಮಗನಾದ ಸಂವರಣನು ರಾಜ್ಯಭಾರ ಮಾಡುತಿದ್ದಾಗ ಪ್ರಜೆಗಳಿಗೆ ದೊಡ್ಡ ನಾಶವು ಸಂಭವಿಸಿತೆಂಬ ಪ್ರತೀತಿಯುಂಟು. ಆಗ ದೇಶವು ಹಸಿವು, ಕ್ಷಾಮ, ಅನಾವೃಷ್ಟಿ, ವ್ಯಾಧಿ, ಮೊದಲಾದ ಹಲವು ಕಾರಣಗಳಿಂದ ಪೀಡಿತವಾಗಿ ನಾಶಕ್ಕೆ ಗುರಿಯಾಯಿತು.

ಶತ್ರುಸೈನ್ಯವು ಭರತವಂಶದವರನ್ನು ಹೊಡೆದೋಡಿಸಿತು. ಪಾಂಚಾಲದೇಶದ ರಾಜನು ತನ್ನ ಪರಾಕ್ರಮದಿಂದ ಭೂಮಿಯನ್ನು ಜಯಿಸಿ, ತನ್ನ ಚತುರಂಗಬಲದಿಂದ ಈ ಲೋಕವೆಲ್ಲವನ್ನೂ ನಡುಗಿಸುತ್ತಾ, ತನ್ನ ಹತ್ತು ಅಕ್ಷೌಹಿಣೀ ಸೈನ್ಯದಿಂದ ಆ ಸಂವರಣನನ್ನಿದಿರಿಸಿ ಜಯಿಸಿದನು. ರಾಜನು ಹೆದರಿಕೆಯಿಂದ ಹೆಂಡಂದಿರು, ಮಂತ್ರಿಗಳು, ಮಕ್ಕಳು, ಸ್ನೇಹಿತರು ಮುಂತಾದವರೆಲ್ಲರೊಡನೆ ಆ ದೇಶವನ್ನು ಬಿಟ್ಟು ಓಡಿಹೋದನು. ಆಗ ಆ ಭರತನ ವಂಶದವರು ಅಪಜಯವನ್ನು ಹೊಂದಿ ಪಶ್ಚಿಮಕ್ಕೋಡಿದರು. ಪರ್ವತದ ಬುಡಕ್ಕೆ ಸೇರಿದಂತಿರುವ ಸಿಂಧೂನದೀತೀರದ ಅಡವಿಯಲ್ಲಿ ಅವರು ವಾಸಮಾಡಿಕೊಂಡಿದ್ದರು. ಅವರು ಅಲ್ಲಿಯೇ ಕೋಟೆಗಳನ್ನು ಕಟ್ಟಿಕೊಂಡು, ಒಂದು ಸಾವಿರವರ್ಷ ವಾಸಮಾಡುತಿದ್ದಮೇಲೆ, ಮಹಾಮಹಾಮುಹಿಮುನಾದ ವಸಿಷ್ಠನು ಆ ಭರತವಂಶಸ್ಥರ ಬಳಿಗೆ ಬಂದನು. ಅವರೆಲ್ಲರೂ ಅಲ್ಲಿಗೆ ಬಂದ ವಸಿಷ್ಠನನ್ನು ಆದರದಿಂದ ಇದಿರುಗೊಂಡು ಬಂದು ಕರೆದುಕೊಂಡುಹೋಗಿ, ಆತನಿಗೆ ಅರ್ಘ್ಯಪಾದ್ಯಾದಿಗಳನ್ನು ಅರ್ಪಿಸಿದರು. ಬ್ರಹ್ಮತೇಜೋಮಯನಾದ ಆ ವಸಿಷ್ಠಮಹರ್ಷಿಯನ್ನು ಸತ್ಕರಿಸಿ ಬೇಕಾದ ವಸ್ತುಗಳನ್ನು ಕೊಟ್ಟರು. ಆತನು ಕುಳಿತುಕೊಂಡಮೇಲೆ ಸಂವರಣರಾಜನು ಆತನನ್ನು ಕುರಿತು "ನಾವು ತಿರುಗಿ ನಮ್ಮ ರಾಜ್ಯಕ್ಕಾಗಿ ಪ್ರಯತ್ನಿಸಬೇಕು. ನೀವು ನಮಗೆ ಪುರೋಹಿತರಾಗಬೇಕು" ಎಂದನು. ವಸಿಷ್ಠನು ಹಾಗೆಯೇ ಆಗಲೆಂದು ಒಪ್ಪಿ, ಪುರುವಂಶೋದ್ಭವನಾದ ಆ ಸಂವರಣನನ್ನು ಭೂಮಂಡಲಕ್ಕೆಲ್ಲಾ ಶಿಖರದಂತಿರುವಹಾಗೆ ಸಮಸ್ತ ಕ್ಷತ್ರಿಯರಿಗೂ ಚಕ್ರವರ್ತಿತ್ವದಲ್ಲಿ ಪಟ್ಟಾಭಿಷೇಕಮಾಡಿದನೆಂದು ಕೇಳಿರುವೆನು. ಹಿಂದೆ ಭರತನು ವಾಸಮಾಡಿದ ಹಸ್ತಿನಾಪುರವನ್ನೇ ಅವನು ತಿರುಗಿ ವಶಮಾಡಿಕೊಂಡು ಅಲ್ಲಿ ವಾಸಮಾಡಿದನು. ತಿರುಗಿ ಸಮಸ್ತರಾಜರೂ ತನಗೆ ಕಪ್ಪವನ್ನು ಕೊಡುವಂತೆ ಮಾಡಿಕೊಂಡನು. ಮಹಾಪರಾಕ್ರಮಶಾಲಿಯಾದ ಸಂವರಣನು ಹೀಗೆ ರಾಜ್ಯವನ್ನು ಹೊಂದಿ, ದೊಡ್ಡ ಯಾಗಗಳನ್ನು ಮಾಡಿ, ವಿಶೇಷಭೂರಿದಕ್ಷಿಣೆಗಳನ್ನು ಕೊಟ್ಟನು. ಸೂರ್ಯನ ಮಗಳಾದ ತಪತಿಯಲ್ಲಿ ಆ ಸಂವರಣನಿಗೆ ಕುರುವೆಂಬವನು ಹುಟ್ಟಿದನು. ಪ್ರಜೆಗಳೆಲ್ಲರೂ ಆ ಕುರುವನ್ನು ಧರ್ಮಜ್ಞನೆಂದು ಭಾವಿಸಿ, ಆತನನ್ನು ರಾಜ

ನನ್ನಾಗಿ ಅಂಗೀಕರಿಸಿದರು. ಆತನ ಮಹತ್ವದಿಂದ ಕುರುವಂಶದವರು ವಿಶೇಷ ಕೀರ್ತಿಯನ್ನು ಪಡೆದರು. ಆತನ ಕೀರ್ತಿಯಿಂದಲೇ ಕುರುಜಾಂಗಾಲವೆಂಬ ಭೂಭಾಗವು ಪ್ರಸಿದ್ಧವಾಗಿದೆ. ಮಹಾತಪಸ್ವಿಯಾದಾರಾಜನು, ತನ್ನ ತಪಸ್ಸಿನಿಂದ ಕುರುಕ್ಷೇತ್ರವನ್ನು ಪವಿತ್ರಕ್ಷೇತ್ರವನ್ನಾಗಿ ಮಾಡಿದನು. ವಾಹಿನಿಯೆಂಬಾಕೆಯಲ್ಲಿ ಅವನಿಗೆ ಅಶ್ವವಂತ, ಅಭಿಷ್ಯಂತ, ಚೈತ್ರರಥ, ಮುನಿ, ಮತ್ತು ಜನಮೇಜಯನೆಂಬ ಐದುಮಂದಿ ಕುಮಾರರು ಹುಟ್ಟಿದರೆಂದು ಕೇಳಿರುವೆವು. ಅವಿಕ್ಷಿತ್ತೆಂಬ ನಾಮಾಂತರವುಳ್ಳ ಅಶ್ವವಂತನಿಗೆ ಪರೀಕ್ಷಿತ್ತು, ಶಬಲಾಶ್ವ, ಆದಿರಾಜ, ವಿರಾಜ, ಶಾಲ್ಮಲಿ, ಉಚ್ಚೈಶ್ರವ, ಭಂಗಕಾರ, ಜಿತಾರಿಯೆಂಬ ಎಂಟು ಮಕ್ಕಳಾದರು. ಮುಂದೆ ಇವರ ವಂಶದಲ್ಲಿ ಅವರ ಪುಣ್ಯಕಾರ್ಯಗಳ ಫಲದಿಂದ, ಜನಮೇಜಯನೇ ಮೊದಲಾಗಿ ಏಳುಮಂದಿ ಮಹಾರಥರು ಹುಟ್ಟಿದರು. ಪರೀಕ್ಷಿತ್ತಿನ ಮಕ್ಕಳಾದ ಕಕ್ಷಸೇನ, ಉಗ್ರಸೇನ, ಚಿತ್ರಸೇನ, ಇಂದ್ರಸೇನ, ಸುಷೇಣ, ಭೀಮಸೇನರೆಂಬೀ ಏಳುಮಂದಿ ಮಕ್ಕಳೂ ಧರ್ಮಶಾಸ್ತ್ರದಲ್ಲಿಯೂ, ರಾಜನೀತಿಯಲ್ಲಿಯೂ ನಿಪುಣರಾಗಿದ್ದರು. ಜನಮೇಜಯನ ಮಕ್ಕಳು ಭೂಮಿಯಲ್ಲಿ ಮಹಾಬಲಶಾಲಿಗಳೆಂದು ಪ್ರಸಿದ್ಧಿಹೊಂದಿದರು. ಅವರಲ್ಲಿ ಜ್ಯೇಷ್ಠನು ಧೃತರಾಷ್ಟ್ರನು. ಎರಡನೆಯವನು ಪಾಂಡು. ಆಮೇಲೆ ಬಾಹ್ಲೀಕ, ನಿಷಧ, ಜಾಂಬೂನದ, ಕುಂಡೋದರ, ಪದಾತಿಗಳೆಂಬವರು ಹುಟ್ಟಿದರು. ಎಂಟನೆಯವನು ವಸಾತಿ. ಅವರೆಲ್ಲರೂ ಧರ್ಮಶಾಸ್ತ್ರನಿಪುಣರು ಮತ್ತು ದಯಾಪರರು. ಧೃತರಾಷ್ಟ್ರನೇ ರಾಜನಾದನು. ಆತನ ಮಕ್ಕಳು, ಕುಂಡಿಕ, ಹಸ್ತಿ, ವಿತರ್ಕ, ಕ್ರಾಥ, ಕುಂಡಿನ, ಹವಿಶ್ರವಸ್ಸು, ಇಂದ್ರಾಭ, ಭುಮನ್ಯು ಎಂಬ ಎಂಟುಮಂದಿ. ಧೃತರಾಷ್ಟ್ರನ ಮುಮ್ಮಕ್ಕಳಲ್ಲಿ ಪ್ರತೀಪ, ಧರ್ಮನೇತ್ರ, ಸುನೇತ್ರರೆಂಬೀ ಮೂವರೂ ಭೂಮಿಯಲ್ಲಿ ಪ್ರಸಿದ್ಧಿಹೊಂದಿದರು. ಆ ಮೂವರಲ್ಲಿ ಪ್ರತೀಪನು ತನಗೆ ಸಮಾನರು ಭೂಮಿಯಲ್ಲಿಯೇ ಇಲ್ಲವೆಂಬ ಹೊಗಳಿಕೆಗೆ ಪಾತ್ರನಾಗಿದ್ದನು. ಪ್ರತೀಪನಿಗೆ ದೇವಾಪಿ, ಶಂತನು, ಬಾಹ್ಲೀಕರೆಂಬ ಮೂವರು ಮಕ್ಕಳು ಹುಟ್ಟಿದರು. ಅವರಲ್ಲಿ ಹಿರಿಯನಾದ ದೇವಾಪಿಯು, ತನ್ನ ತಮ್ಮಂದಿರಿಗೇ ರಾಜ್ಯವು ದೊರೆಯಲೆಂಬ ಧರ್ಮಬುದ್ಧಿಯಿಂದ ಅರಣ್ಯಕ್ಕೆ ಹೋದನು.

ಮಹಾರಥರಾದ ಶಂತನು ಬಾಹ್ಲೀಕರಿಬ್ಬರೂ, ರಾಜ್ಯವನ್ನು ಪಡೆದರು. ಈ ಭರತವಂಶದಲ್ಲಿ ಹುಟ್ಟಿದ ಅನೇಕರಾಜಶ್ರೇಷ್ಠರು ಮಹಾರಥರಾಗಿ ದೇವತಾಸಮಾನರೆನಿಸಿದ್ದರು. ಅನೇಕರಾಜರು ಬ್ರಹ್ಮದೇವನಿಗೆ ಸಮಾನರಾಗಿದ್ದರು. ಮಹಾಬಲಶಾಲಿಗಳಾಗಿ, ಗುಣದಲ್ಲಿಯೂ ತಪೋಮಹಿಮೆಯಲ್ಲಿಯೂ, ದೇವಋಷಿಗಳಿಗೆ ಸಮಾನರಾಗಿಯೂ ಇದ್ದರು. ಜನಮೇಜಯಾ! ಮಹಾಯಶಸ್ವಿಯೂ, ಶಕುಂತಳಾಪುತ್ರನೂ ಆದ ಭರತನೆಂಬ ಆದಿರಾಜನು ಗಂಗಾತೀರಕ್ಕೆ ಬಂದು ದೀಕ್ಷೆವಹಿಸಿ, ಸಾವಿರ ಅಶ್ವಮೇಧಗಳನ್ನೂ, ನೂರು ವಾಜಪೇಯಗಳನ್ನೂ ಮಾಡಿದನು. ಮತ್ತು ಆತನು ಅಗ್ನಿಷ್ಟೋಮ, ಅತಿರಾತ್ರ, ಉಕ್ಥ, ವಾಜಪೇಯ, ಇಷ್ಟ, ಸತ್ರಯಾಗಗಳೆಂಬ ಸಾವಿರಾರು ಮಹಾಯಾಗಗಳನ್ನು ವಿಶೇಷಸಾಮಗ್ರಿಗಳೊಡನೆ ನಡೆಸಿ, ಸೋಮಪಾನವನ್ನು ಮಾಡಿ, ಬ್ರಾಹ್ಮಣರಿಗೆ ದೊಡ್ಡ ದಕ್ಷಿಣೆಗಳನ್ನು ಕೊಟ್ಟು ತೃಪ್ತಿಪಡಿಸಿದನು. ಮಹಾಯಶಸ್ವಿಯಾದ ಭರತನು ಒಂದು ಸಾವಿರ ಪದ್ಮಸಂಖ್ಯೆಯುಳ್ಳ ಸ್ವಚ್ಛವಾದ ಭಂಗಾರದ ನಾಣ್ಯಗಳನ್ನು ಕಣ್ವನಿಗೆ ಕೊಟ್ಟನು. ನೂರು ಮೊಳಗಳ ವ್ಯಾಸವೂ, ಸಾವಿರಮೊಳಗಳ ಉದ್ದವೂ ಆಗಿ, ಮನೋಜ್ಞವಾಗಿ ಸಕಲವಿಧರತ್ನಗಳಿಂದ ಅಲಂಕರಿಸಲ್ಪಟ್ಟು ಪ್ರಕಾಶಿಸುತ್ತಿರುವ ಆತನ ಸುವರ್ಣಯೂಪಸ್ತಂಭಗಳನ್ನು ಇಂದ್ರಾದಿ ದೇವತೆಗಳೇ ಬಂದು ನಾಟಿ ನಿಲ್ಲಿಸಿದರು. ಆನೆ, ಕುದುರೆ, ಎಮ್ಮೆ, ಒಂಟೆ, ಬಂಗಾರ, ಮೇಕೆಗಳು, ದಾಸದಾಸಿಯರು, ಧನಧಾನ್ಯಗಳು, ಅಲಂಕರಿಸಲ್ಪಟ್ಟ ಮತ್ತು ಸಾಧುವಾದ ಹಸುಗಳು, ಸಹಸ್ರಯೂಪಗಳಿಂದ ಅಂಕಿತವಾದ ಭೂಪ್ರದೇಶಗಳು, ಇವುಗಳನ್ನು ಕಣ್ವನಿಗೆ ದಕ್ಷಿಣೆಯಾಗಿ ಕೊಟ್ಟನು. ಬ್ರಹ್ಮನಿಗೆ ಸಮಾನರಾದ ಅನೇಕ ಬ್ರಾಹ್ಮಣರಿಗೆ ಗೋವುಗಳನ್ನೂ, ಗ್ರಾಮಗಳನ್ನೂ, ಗೃಹಗಳು ಮುಂತಾದುವುಗಳನ್ನೂ ಕೋಟಿಲೆಕ್ಕದಲ್ಲಿ ಕೊಟ್ಟನು. ಭರತನಿಂದ ಭರತವಂಶಕ್ಕೆ ಅಪಾರಕೀರ್ತಿಯುಂಟಾಯಿತು. ಆತನಿಂದಲೇ ನಿನ್ನ ಕುಲಕ್ಕೆ ಭಾರತಕುಲವೆಂದು ಹೆಸರಾಯಿತು. ಭರತವಂಶದಲ್ಲಿ ಹುಟ್ಟಿದ ರಾಜೋತ್ತಮರನೇಕರು ದೇವತೆಗಳಿಗೆ ಸಮಾನರೂ, ಮಹಾರಥರೂ ಆಗಿದ್ದರು. ಅನೇಕರು ಬ್ರಹ್ಮಸಮಾನರಾಗಿದ್ದರು. ಅವರ ಸಂಖ್ಯೆಯು ಅಪರಿಮಿತವಾದುದರಿಂದ ಎಣಿಸುವುದೂ ಸಾಧ್ಯವಿಲ್ಲ. ಭಾರತಾ !

ಅವರ ವಂಶದಲ್ಲಿ ಮಹಾತ್ಮರೂ, ದೇವತಾಸಮಾನರೂ ಆಗಿ, ಸತ್ಯದಿಂದಲೂ, ನಿಷ್ಕಪಟವೃತ್ತಿಯಿಂದಲೂ ನಡೆದುಕೊಳ್ಳುತಿದ್ದ ಕೆಲವು ಪ್ರಮುಖರನ್ನು ಮಾತ್ರ ನಿನಗೆ ತಿಳಿಸುವೆನು" ಎಂದನು.

ಇದು ನೂರೊಂದನೆಯ ಅಧ್ಯಾಯವು.

(ಮಹಾಭಿಷಗೆಂಬ ರಾಜನ ಚರಿತ್ರವು ಮಹಾಭಿಷಕ್ಕಿಗೂ ಗಂಗೆಗೂ ಬ್ರಹ್ಮನ ಶಾಪವು. ಅಷ್ಟವಸುಗಳಿಗೂ ಗಂಗೆಗೂ ಸಂವಾದವು.)

ಇಕ್ಷ್ವಾಕುವಂಶದಲ್ಲಿ ಮಹಾಭಿಷಕ್ಕೆಂಬ ರಾಜನು ಭೂಮಿಯನ್ನಾಳುತಿದ್ದನು. ಆತನು ಸತ್ಯಸಂಧನು. ಮಹಾ ಪರಾಕ್ರಮಿ ಆತನು ಸಹಸ್ರ ಅಶ್ವಮೇಧಯಾಗಗಳನ್ನೂ, ನೂರು ವಾಜಪೇಯಗಳನ್ನೂ ಮಾಡಿ ಇಂದ್ರನನ್ನು ತೃಪ್ತಿಪಡಿಸಿದಮೇಲೆ, ಸ್ವರ್ಗಕ್ಕೆ ಹೋದನು ಅಲ್ಲಿ ಒಮ್ಮೆ ಬ್ರಹ್ಮದೇವನ ಸುತ್ತಲೂ ದೇವತೆಗಳೂ, ರಾಜರ್ಷಿಗಳೂ ನೆರೆದಿದರು ಮಹಾಭಿಷಕ್ಕೆಂಬ ರಾಜನೂ ಅಲ್ಲಿದ್ದನು. ಆಗ ನದಿಗಳಿಗೆಲ್ಲಾ ಶ್ರೇಷ್ಠಳಾದ ಗಂಗಾದೇವಿಯು ಬ್ರಹ್ಮನ ಬಳಿಗೆ ಬಂದಳು. ಚಂದ್ರಕಿರಣದಂತೆ ಬಿಳುಪಾಗಿದ್ದ ಆಕೆಯ ಮೈಮೇಲಿನ ದುಕೂಲವು ಗಾಳಿಗೆ ಹಾರಿ, ಆಕೆಯ ದೇಹಭಾಗವು ಸ್ವಲ್ಪ ಕಾಣಿಸುವಂತಾಯಿತು. ಅಲ್ಲಿದ್ದ ದೇವತೆಗಳೆಲ್ಲರೂ ತಲೆಬಾಗಿಸಿಕೊಂಡರು. ರಾಜಋಷಿಯಾದ ಮಹಾಭಿಷಕ್ಕಾದರೋ, ಮರ್ಯಾದೆಯಿಲ್ಲದೆ ಆಕೆಯನ್ನೇ ದುರದುರನೆ ನೋಡಿದನು. ಭಗವಂತನಾದ ಬ್ರಹ್ಮದೇವನು ಆ ಮಹಾಭಿಷಕ್ಕನ್ನು ಬಹಳವಾಗಿ ನಿಂದಿಸಿ, ಆತನನ್ನು ಕುರಿತು "ನೀಚಾ! ನೀನು ಗಂಗೆಯನ್ನು ನೋಡಿದೊಡನೆ ಮೈಮರೆತುದರಿಂದ ನೀನು ಪುನಃ ಭೂಲೋಕದಲ್ಲಿ ಜನಿಸು. ಆದರೆ ತಿರುಗಿ ನೀನು ಈ ಲೋಕವನ್ನೇ ಸೇರುವೆ. ನಿನ್ನ ಮನಸ್ಸನ್ನು ಅಪಹರಿಸಿದ ಆ ಗಂಗೆಯೂ ಮನುಷ್ಯಲೋಕದಲ್ಲಿ ಹುಟ್ಟಿ ನಿನಗೆ ಅಪ್ರಿಯವನ್ನು ಮಾಡುವಳು. ಅದರಿಂದ ನಿನಗೆ ಯಾವಾಗ ಕೋಪಬರುವುದೋ ಆಗಲೇ ನಿನಗೆ ಶಾಪವಿಮೋಚನೆಯಾಗುವುದು" ಎಂದನು. ಆಗ ಮಹಾಭಿಷ

ಕ್ಕು ಭೂಲೋಕದಲ್ಲಿರುವ ಎಲ್ಲಾ ರಾಜರನ್ನೂ, ಋಷಿಗಳನ್ನೂ ಜ್ಞಾಪಿಸಿಕೊಂಡು, ಅವರಲ್ಲಿ ಅಪಾರತೇಜಸ್ಸುಳ್ಳ ಪ್ರತೀಪನಿಗೇ ತಾನು ಮಗನಾಗಿ ಹುಟ್ಟುವಂತೆ ನಿಶ್ಚಯಿಸಿಕೊಂಡನು. ಗಂಗೆಯೂ ಮಹಾಭಿಷಕ್ಕಿಗೆ ತನ್ನನ್ನು ನೋಡಿ ಚಿತ್ತಚಾಂಚಲ್ಯವಾದುದರಿಂದ, ಆತನನ್ನೇ ತಾನೂ ಮನಸ್ಸಿನಲ್ಲಿ ನೆನೆಸಿಕೊಂಡು ಹಿಂತಿರುಗಿದಳು. ಆಕೆಯು ದಾರಿಯಲ್ಲಿ ಹೋಗುತ್ತಿರುವಾಗ, ದೇವಲೋಕದಲ್ಲಿ ವಾಸಿಸುವ ವಸುಗಳೂ, ಅದೇ ದಾರಿಯಲ್ಲಿ ಬರುತ್ತಿರುವುದನ್ನು ಕಂಡಳು. ಆಗ ಗಂಗೆಯು "ಸ್ವರ್ಗವಾಸಿಗಳೇ! ನೀವೇಕೆ ಹೀಗೆ ರೂಪುಗೆಟ್ಟಿರುವಿರಿ! ದೇವತೆಗಳೆಲ್ಲರೂ ಕ್ಷೇಮವಷ್ಟೆ?" ಎಂದು ಕೇಳಿದಳು. ಆಗ ವಸುಗಳು ಆಕೆಯೊಡನೆ "ಮಹಾನದೀ! ಮಹಾತ್ಮನಾದ ವಸಿಷ್ಠನಲ್ಲಿ ನಾವು ಅಪರಾಧಮಾಡಲು, ಆತನು ಕೋಪದಿಂದ ಶಪಿಸಿದನು. ಋಷಿಶ್ರೇಷ್ಠನಾದ ವಸಿಷ್ಠನು ಸಂಧ್ಯಾವಂದನೆಯನ್ನು ಮಾಡುತ್ತ ಕುಳಿತುಕೊಂಡಿದ್ದನು. ಆತನು ನಮಗೆ ಕಾಣದಂತೆ ಮೌನದಿಂದಿದ್ದುದನ್ನು ನೋಡಿ, ನಾವು ಅಜ್ಞಾನದಿಂದ ಆತನನ್ನು ದಾಟಿಹೋದೆವು. ಆತನು ಕೋಪಿಸಿಕೊಂಡು "ನೀವು ಮನುಷ್ಯಗರ್ಭದಲ್ಲಿ ಹುಟ್ಟಿರೆಂದು" ಶಪಿಸಿದನು. ಆತನು ಬ್ರಹ್ಮವಾದಿಯಾದುದರಿಂದ, ಆತನ ಶಾಪವನ್ನು ಮೀರಲು ಸಾಧ್ಯವಿಲ್ಲ. ಆದುದರಿಂದ ನೀನು ಮನುಷ್ಯಸ್ತ್ರೀಯಾಗಿ ಭೂಮಿಯಲ್ಲಿ ಹುಟ್ಟುವೆಯಷ್ಟೆ? ವಸುಗಳಾದ ನಮ್ಮನ್ನೂ ನೀನೇ ಪುತ್ರರನ್ನಾಗಿ ಪಡೆ. ಶುಭಾತ್ಮಳೇ! ನಾವು ಬೇರೆ ಮನುಷ್ಯಸ್ತ್ರೀಯ ಹೊಟ್ಟೆಯಲ್ಲಿ ಹುಟ್ಟಲು ಸಮ್ಮತಿಸುವುದಿಲ್ಲ" ಎಂದರು. ಆಗ ಗಂಗೆಯು ಹಾಗೆಯೇ ಆಗಲೆಂದೊಪ್ಪಿ, ಮನುಷ್ಯರಲ್ಲಿ ಯಾವ ಪುರುಷಶ್ರೇಷ್ಠನು ನಿಮಗೆ ಜನಕನಾಗುವನು?" ಎಂದು ಕೇಳಿದಳು. ಆಗ ವಸುಗಳು "ಪ್ರತೀಪನ ಮಗನಾದ ಶಂತನುವೆಂಬ ರಾಜನು ಲೋಕದಲ್ಲಿ ಪ್ರಸಿದ್ಧನಾಗುವನು. ಮನುಷ್ಯಲೋಕದಲ್ಲಿ ಆತನೇ ನಮಗೆ ಜನಕನಾಗುವನು" ಎಂದರು. ಗಂಗೆಯು ಅವರೊಡನೆ "ದೇವತೆಗಳಿರಾ! ನೀವು ನನ್ನೊಡನೆ ಹೇಳಿದುದೇ ನನಗೂ ಸಮ್ಮತವು. ಆ ರಾಜನಿಗೆ ಹಿತವನ್ನು ಕೋರಿ ನಿಮಗೆ ಇಷ್ಟವಾದ ಈ ಕಾರ್ಯವನ್ನು ಮಾಡುವೆನು" ಎಂದಳು. ಒಡನೆಯೇ ವಸುಗಳು "ದೇವಿ! ನಮಗೀ ಶಾಪವು ಬಹುಕಾಲದವರೆಗೆ ಬಾಧಿಸದಂತೆ

ನಿನ್ನ ಮಕ್ಕಳಾಗಿ ಹುಟ್ಟಿದೊಡನೆ ನೀನು ನಮ್ಮನ್ನು ನೀರಿನಲ್ಲಿ ಹಾಕಿಬಿಡು. ನಾವೆಲ್ಲರೂ ಬುದ್ಧಿಗೆಟ್ಟು ವಸಿಷ್ಠನ ಹೋಮಧೇನುವನ್ನು ಹಿಡಿಯುವುದಕ್ಕೆ ಹೋಗಲು, ಆ ಬ್ರಹ್ಮರ್ಷಿಯು ನಮ್ಮನ್ನು ಶಪಿಸಿದನು. ಶಾಪತಪ್ತರಾದ ನಮ್ಮನ್ನು ನೀನು ಬೇಗನೆ ಶಾಪವಿಮುಕ್ತರನ್ನಾಗಿ ಮಾಡು" ಎಂದರು. ಗಂಗೆಯು ಹಾಗೆಯೇ ಆಗಲೆಂದೊಪ್ಪಿಕೊಂಡು, ತಿರುಗಿ ಅವರೊಡನೆ "ಆ ಮಹಾರಾಜನಿಗೆ ಒಬ್ಬ ಮಗನಾದರೂ ಉಳಿದಿರಬೇಕು. ಪುತ್ರೋತ್ಪತ್ತಿಗಾಗಿ ಆತನು ನನ್ನನ್ನು ವರಿಸಿದುದು ವ್ಯರ್ಥವಾಗಕೂಡದು" ಎಂದಳು. ಅದಕ್ಕೆ ಅವರು "ನಾವು ಒಬ್ಬೊಬ್ಬರೂ ನಮ್ಮ ತೇಜಸ್ಸಿನಲ್ಲಿ ಎಂಟನೆಯ ಒಂದು ಭಾಗವನ್ನು ಕೊಡುವೆವು. ಆ ವೀರ್ಯದಿಂದ ನೀನೂ ಆ ರಾಜನೂ ಅಪೇಕ್ಷಿಸುವಂತೆ ಒಬ್ಬ ಮಗನು ಹುಟ್ಟುವನು ಆದರೂ ಆತನಿಗೆ ಈ ಮನುಷ್ಯಲೋಕದಲ್ಲಿ ಸಂತತಿಯಾಗದು. ವೀರ್ಯಶಾಲಿಯಾದ ನಿನ್ನ ಮಗನು ಪುತ್ರಹೀನನಾಗುವನು" ಎಂದರು. ಆ ವಸುಗಳು ಗಂಗಾದೇವಿಯೊಡನೆ ಹೀಗೆ ನಿರ್ಣಯಿಸಿಕೊಂಡು ಸಂತುಷ್ಟರಾಗಿ ಒಡನೆಯೇ ಹೊರಟುಹೋದರು.

ಇದು ನೂರೆರಡನೆಯ ಅಧ್ಯಾಯವು.



(ಪ್ರತೀಪನು ಗಂಗೆಯನ್ನು ಸೊಸೆಯನ್ನಾಗಿ ಮಾಡಿಕೊಂಡುದು ಶಂತನುವಿನ ಜನನವು. ಆತನ ರಾಜ್ಯಾಭಿಷೇಕವು ಬೇಟೆಗೆ ಹೋದ ಶಂತನುವಿಗೂ, ಗಂಗೆಗೂ ನಡೆದ ಸಂವಾದವು.)

ಜನಮೇಜಯರಾಜಾ! ಕೇಳು! ಆಮೇಲೆ ಪ್ರತೀಪನೆಂಬ ರಾಜನಿದ್ದನು. ಆತನು ಯಾವಾಗಲೂ ಸರ್ವಭೂತಗಳಿಗೂ ಹಿತವನ್ನು ಮಾಡುವುದರಲ್ಲಿಯೇ ಆಸಕ್ತನಾಗಿದ್ದನು. ಆತನು ಗಂಗೆಯ ಉತ್ಪತ್ತಿಸ್ಥಾನಕ್ಕೆ ಹೋಗಿ, ಅಲ್ಲಿ ಹಲವು ಸಂವತ್ಸರಗಳವರೆಗೆ ಜಪಮಾಡುತ್ತ ಕುಳಿತಿದ್ದನು. ಆ ರಾಜರ್ಷಿಯು ವೇದಪಠನಮಾಡುತ್ತ ಕುಳಿತಿರಲು, ಗಂಗಾದೇವಿಯು ಪ್ರಸನ್ನಳಾಗಿ ಸ್ತ್ರೀರೂಪವನ್ನು ಧರಿಸಿ ಜಲದಿಂದ ಹೊರಟು, ಆ ರಾಜನ

ಬಳಿಗೆ ಬಂದಳು. ಅತ್ಯಂತ ಸುಂದರಿಯಾಗಿ ರೂಪಲಾವಣ್ಯಾದಿಗಳಿಂದೊಪ್ಪುತಿದ್ದ ಆ ದೇವಿಯು ಸಾಲವೃಕ್ಷದಂತಿದ್ದ ಆತನ ಬಲತೊಡೆಯಮೇಲೆ ಕುಳಿತುಕೊಂಡಳು. ಅಂತಹ ಸುಂದರಾಂಗಿಯು ತನ್ನ ತೊಡೆಯಮೇಲೆ ಕುಳಿತಿದ್ದುದನ್ನು ನೋಡಿಯೂ ಮರುಳಾಗದೆ ಆಕೆಯನ್ನು ಕುರಿತು ಆ ರಾಜರ್ಷಿಯು "ಕಲ್ಯಾಣಿ! ನಿನ್ನ ಅಪೇಕ್ಷೆಯೇನು? ನಾನು ನಿನಗೆ ಯಾವ ಉಪಕಾರವನ್ನು ಮಾಡಲಿ?" ಎಂದು ಕೇಳಿದನು. ಅದಕ್ಕಾ ಸುಂದರೀಮಣಿಯು "ರಾಜಾ! ನಾನು ನಿನ್ನನ್ನು ವರಿಸಲು ಬಂದಿರುವೆನು. ನೀನು ನನ್ನವನಾಗು. ಕಾಮಿಸಿಬಂದ ಸ್ತ್ರೀಯನ್ನು ಉಪೇಕ್ಷೆಮಾಡುವುದು ಸರಿಯಲ್ಲ. ಪ್ರಾಜ್ಞರು ಒಪ್ಪುವುದಿಲ್ಲ" ಎಂದಳು. ಪ್ರತೀಪನು "ನಾನು ಕೇವಲ ಕಾಮುಕ್ಕೊಳಗಾಗಿ ಪರಸ್ತ್ರೀಯನ್ನು ಪೊಂದುವುದಿಲ್ಲ. ಕಲ್ಯಾಣೀ! ನನ್ನ ವರ್ಣಕ್ಕೆ ಸೇರದಿರುವ ಪರಸ್ತ್ರೀಯನ್ನೂ ನಾನು ವರಿಸುವುದಿಲ್ಲ. ಇದು ಧರ್ಮಯುಕ್ತವಾದ ನನ್ನ ವ್ರತವು. ಯಾರು ತನ್ನ ಹೆಂಡತಿಯನ್ನು ಬಿಟ್ಟು ಪರಸ್ತ್ರೀಯನ್ನು ಹೊಂದುವನೋ, ಆತನಿಗೆ ಪ್ರಳಯಕಾಲದವರೆಗೂ ನರಕವು ತಪ್ಪುವುದಿಲ್ಲ" ಎಂದನು. ಅದಕ್ಕೆ ಗಂಗೆಯು "ರಾಜಾ! ನಾನೇನೂ ವರ್ಣದಲ್ಲಿ ಕಡಿಮೆಯಾದವಳಲ್ಲ ವಿವಾಹಕ್ಕೆ ಅಯೋಗ್ಯಳೂ ಅಲ್ಲ. ಪರರ ನಿಂದೆಗೆ ಪಾತ್ರಳೂ ಅಲ್ಲ. ನಾನು ದೇವಕನ್ಯೆ! ಸ್ತ್ರೀಯರಲ್ಲಿ ಮೇಲಾದವಳು. ನಾನೇ ನಿನ್ನನ್ನು ಪತಿಯಾಗೆಂದು ಬೇಡುತ್ತಿರುವಾಗ, ನೀನು ನನ್ನನ್ನು ತಿರಸ್ಕರಿಸಬಹುದೇ?" ಎಂದಳು. ಅದಕ್ಕೆ ಪ್ರತೀಪನು "ಮಾನಿನೀಮಣಿ! ನೀನು ಹೇಳುವ ಈ ಕಾರ್ಯವನ್ನು ನಾನು ಮಾಡಲಾರೆನು. ನಾನು ನನ್ನ ಪ್ರತಿಜ್ಞೆಯನ್ನು ಬಿಟ್ಟರೆ ಪ್ರಬಲಪಾಪವು ನನ್ನನ್ನು ಕೊಲ್ಲುವುದು. ಇದಲ್ಲದೆ ನೀನು ನನ್ನ ಬಲದೊಡೆಯಮೇಲೆ ಕುಳಿತುಕೊಂಡು, ನನ್ನನ್ನು ಹೀಗೆ ಮೋಹಕ್ಕೊಳಗುಮಾಡುತ್ತಿರುವೆ. ಇದು ನನ್ನ ಮಕ್ಕಳೂ, ಸೊಸೆಯರೂ ಕುಳಿತುಕೊಳ್ಳುವ ಸ್ಥಾನವು. ಎಡತೊಡೆಯೇ ಹೆಂಡತಿಯು ಕುಳಿತುಕೊಳ್ಳುವ ಸ್ಥಳವು. ನೀನು ಆ ತೊಡೆಯನ್ನು ಬಿಟ್ಟಿಯಾದುದರಿಂದ ನಾನು ನಿನ್ನನ್ನು ವರಿಸಲಾರೆನು ನೀನು ನನ್ನ ಸೊಸೆಯಾಗಿರಬಹುದು. ನಿನ್ನನ್ನು ನನ್ನ ಮಗನಿಗೆ ಮದುವೆಮಾಡಿಕೊಳ್ಳುವೆನು. ಸೊಸೆಯರು ಕುಳಿತುಕೊಳ್ಳುವ ಸ್ಥಳದಲ್ಲಿ ನೀನು ಬಂದು

ಕುಳಿತೆಯಲ್ಲವೆ?" ಎಂದನು. ಅದನ್ನು ಕೇಳಿ ಆ ಸ್ತ್ರೀಯು "ನೀನು ಧರ್ಮಜ್ಞನು. ನೀನು ಹೇಳಿದಂತೆಯೇ ಆಗಲಿ. ನಾನು ನಿನ್ನ ಪುತ್ರನನ್ನೇ ವರಿಸುವೆನು. ನಿನ್ನಲ್ಲಿರುವ ಭಕ್ತಿಯಿಂದಲೇ ನಾನು ಪ್ರಖ್ಯಾತವಾದ ಭಾರತವಂಶವನ್ನು ಸೇರುವೆನು. ಈ ಭೂಮಿಯಲ್ಲಿರುವ ರಾಜರೆಲ್ಲರಿಗೂ ನೀನೇ ಮುಖ್ಯ ಗತಿ. ನಿಮ್ಮ ಕುಲದ ಪ್ರಭಾವವನ್ನು ನೂರಾರು ವರ್ಷಗಳಕಾಲ ವಾದರೂ ವರ್ಣಿಸಿ ತೀರದು ನಿನ್ನ ವಂಶದಲ್ಲಿ ಪ್ರಖ್ಯಾತರಾದವರ ಮಹಿಮೆಯೂ ಸಾಧುತ್ವವೂ ಅಪಾರವಾದುದು. ಆದರೆ ನಾನು ನಿನ್ನ ಸೊಸೆಯಾದಮೇಲೆ, ನಾನು ಏನು ಮಾಡಿದರೂ ಅದೊಂದನ್ನೂ ನಿನ್ನ ಮಗನು ವಿಚಾರಿಸದಿರಬೇಕೆಂದು ನಾನು ನಿನ್ನೊಡನೆ ಈಗ ಒಡಂಬಡಿಕೆಮಾಡಿಕೊಳ್ಳಬೇಕಾಗಿದೆ. ನಾನು ನಿನ್ನ ಪುತ್ರನೊಡನೆ ವಾಸಮಾಡಿಕೊಂಡಿದ್ದು, ಆತನಿಗೆ ಹಿತವನ್ನೇ ಕೋರಿ, ಅವನ ಸೌಖ್ಯವನ್ನು ಹೆಚ್ಚಿಸುವೆನು. ಕೊನೆಗೆ ನಿನ್ನ ಮಗನು ಪುಣ್ಯಾತ್ಮರಾದ ತನ್ನ ಮಕ್ಕಳೊಡನೆ ಸ್ವರ್ಗಕ್ಕೂ ಹೋಗುವನು" ಎಂದು ಹೇಳಿ, ಒಡನೆಯೇ ಆಕೆಯು ಕಣ್ಮರೆಯಾದಳು. ಆ ರಾಜನು ತನ್ನ ಪ್ರತಿಜ್ಞೆಯು ನೆರವೇರಲು, ಮಗನು ಹುಟ್ಟುವುದನ್ನೇ ಇದಿರುನೋಡುತ್ತಿದ್ದನು ಇದೇ ಕಾಲದಲ್ಲಿ ಪುತ್ರಾಭಿಲಾಷೆಯಿಂದ ಪ್ರತೀಪರಾಜನೂ, ಅವನ ಹೆಂಡತಿಯೂ ತಪಸ್ಸುಮಾಡಿದರು. ಆಗ ಪ್ರತೀಪನ ಹೆಂಡತಿಗೆ ಗರ್ಭವುಂಟಾಯಿತು. ಆ ಗರ್ಭವು ಶರತ್ಕಾಲದ ಚಂದ್ರನಂತೆ ವೃದ್ಧಿಹೊಂದಿತು. ಆಮೇಲೆ ಹತ್ತನೆಯ ತಿಂಗಳಲ್ಲಿ ಪ್ರತೀಪನ ಪಟ್ಟದ ರಾಣಿಗೆ ಸೂರ್ಯನಂತೆ ಪ್ರಕಾಶಿಸುತ್ತ, ದೇವಕುಮಾರನಂತೆ ಕುಮಾರನೊಬ್ಬನು ಹುಟ್ಟಿದನು. ಜನಮೇಜಯರಾಜಾ! ಈ ಶಿಶುವೇ ಮಹಾಭಿಷಕ್ಕು. ತನ್ನ ತಂದೆಯು ಉಗ್ರತಪಸ್ಸನ್ನು ಮಾಡುತ್ತ ಇಂದ್ರಿಯವನ್ನು ನಿಗ್ರಹಿಸಿ ಶಾಂತನಾಗಿದ್ದ ಕಾಲದಲ್ಲಿ, ಈತನು ಹುಟ್ಟಿದುದರಿಂದಲೇ ಈತನಿಗೆ '**ಶಂತನು**'ವೆಂದು ನಾಮಕರಣ ಮಾಡಿದರು. ಪ್ರತೀಪನು ಆ ಮಗುವಿಗೆ ಬ್ರಾಹ್ಮಣರಿಂದ ವೇದೋಕ್ತವಿಧಿಗನುಸಾರವಾಗಿ ಜಾತಕರ್ಮವೇ ಮೊದಲಾದ ಸಂಸ್ಕಾರಗಳನ್ನು ಮಾಡಿಸಿದನು. ಆ ಶಂತನುವಿಗೆ ಪ್ರಾಯವು ಬರಲು, ಆತನು ಲೋಕದಲ್ಲಿ ಮಹಾ ಧರ್ಮಿಷ್ಠನೆನಿಸಿದನು. ಅವನು ವಿಶೇಷ ತಪಸ್ಸನ್ನು ಪಡೆದು ಧರ್ಮರಕ್ಷಣೆ ಮಾಡುವವರಲ್ಲೆಲ್ಲ ಮುಂದಾಳಾಗಿ, ವೇದದ

ಲ್ಲಿಯೂ, ಧನುರ್ವಿದ್ಯೆಯಲ್ಲಿಯೂ ಉತ್ತಮಜ್ಞಾನವನ್ನು ಪಡೆದನು. ವಾಗ್ಮಿಗಳಲ್ಲಿ ಮೇಲೆನಿಸಿದ ಆ ಕುಮಾರನಿಗೆ ಯೌವನವು ಬಂದಿತು. ಕುರುವಂಶಶ್ರೇಷ್ಠನಾದ ಆತನು, ತನ್ನ ಪುಣ್ಯಕರ್ಮವಿಶೇಷದಿಂದ ಹಲವು ಪುಣ್ಯಲೋಕಗಳನ್ನು ತಾನು ಗೆದ್ದಿರುವುದನ್ನು ತಿಳಿದಿದ್ದರೂ, ಇನ್ನೂ ಬಿಡದೆ ಪುಣ್ಯಕರ್ಮವನ್ನು ಮಾಡುತ್ತಲೇ ಇದ್ದನು. ಪ್ರತೀಪನು ಯೌವನವನ್ನು ಪಡೆದ ತನ್ನ ಮಗನಾದ ಶಂತನುವನ್ನು ನೋಡಿ "ಶಂತನೂ! ನಿನ್ನ ಮೇಲ್ಮೆಗಾಗಿ ಹಿಂದೆ ಒಬ್ಬ ಸ್ತ್ರೀಯು ನನ್ನ ಬಳಿಗೆ ಬಂದಳು. ಆಕೆಯು ವಿಶೇಷ ಬುದ್ಧಿಶಾಲಿನಿ! ಮತ್ತು ದೇವಸ್ತ್ರೀ! ಆಕೆಯು ಪುತ್ರನನ್ನು ಪಡೆಯುವ ಅಪೇಕ್ಷೆಯಿಂದ ನಿನ್ನನ್ನು ಕಾಮಿಸಿ ರಹಸ್ಯವಾಗಿ ನಿನ್ನ ಬಳಿಗೆ ಬಂದರೆ ಆಕೆಯನ್ನು ಕುರಿತು 'ನೀನು ಯಾರು? ಯಾರ ಮಗಳು?' ಎಂದೇನನ್ನೂ ಕೇಳಬೇಡ! ಆಕೆಯು ಯಾವ ಕಾರ್ಯವನ್ನು ಮಾಡಿದರೂ ಆಕೆಯನ್ನು ನೀನು ಆಕ್ಷೇಪಿಸಬೇಡ. ನನ್ನ ಆಜ್ಞೆಯಮೇಲೆಯೇ ಆಕೆಯು ನಿನ್ನನ್ನು ವರಿಸುವಳಾದುದರಿಂದ, ನೀನು ಆಕೆಯನ್ನು ಪರಿಗ್ರಹಿಸು" ಎಂದನು. ಆಮೇಲೆ ಪ್ರತೀಪರಾಜನು ತನ್ನ ಮಗನಾದ ಶಂತನುವಿಗೆ ಪಟ್ಟವನ್ನು ಕಟ್ಟಿ ಕಾಡಿಗೆ ಹೋದನು. ಪ್ರಾಜ್ಞನೂ, ದೇವೇಂದ್ರಸಮಾನವಾದ ತೇಜಸ್ಸುಳ್ಳವನೂ ಆದ ಶಂತನುವು ಸತ್ಯವಾದಿಯೆಂದು ಸಮಸ್ತಲೋಕಗಳೂ ಕೊಂಡಾಡಿದುವು. ಆ ಶಂತನುವಿನ ಸೌಂದರ್ಯವು ಅತಿಶಯವಾದುದು. ದೀರ್ಘವಾದ ಬಾಹುಗಳು! ಮದಗಜದಂತೆ ನಡೆ! ಉಬ್ಬಿದ ಹೆಗಲು! ಹೀಗೆ ಸರ್ವಸೌಭಾಗ್ಯದಿಂದ, ಮತ್ತು ಸಕಲರಾಜಲಕ್ಷಣಗಳಿಂದ ಕೂಡಿದ ಆ ರಾಜನು ಉತ್ತಮ ಮಂತ್ರಿಗಳೊಡಗೂಡಿ, ಕ್ಷತ್ರಧರ್ಮವಿಶೇಷಗಳನ್ನೆಲ್ಲ ತಿಳಿದುಕೊಂಡು, ಶತ್ರುರಾಜರನ್ನೆಲ್ಲ ಜಯಿಸಿ, ಏಕಛತ್ರಾಧಿಪತಿಯಾದನು. ಸಮಸ್ತವೇದಗಳನ್ನೂ, ಎಲ್ಲಾ ರಾಜಧರ್ಮಗಳನ್ನೂ ತಿಳಿದುಕೊಂಡನು. ಭೂರಿದಕ್ಷಿಣೆಗಳೊಡನೆ ದೊಡ್ಡ ಸತ್ರಯಾಗಗಳನ್ನೂ, ಇತರ ಯಾಗಗಳನ್ನೂ ಮಾಡಿದನು. ವೇದವಿತ್ತುಗಳಾದ ಬ್ರಾಹ್ಮಣರನ್ನು ಅಪರಿಮಿತವಾದ ರತ್ನದಿಂದಲೂ, ಗೋವುಗಳಿಂದಲೂ, ಕುದುರೆಗಳಿಂದಲೂ, ಧನದಿಂದಲೂ ತೃಪ್ತಿಪಡಿಸಿದನು. ಅಲ್ಲದೆ ಆತನು ರೂಪ, ಯೌವನ, ಪೌರುಷ, ಬಲ, ಐಶ್ವರ್ಯ, ಪ್ರತಾಪ, ಪರಾಕ್ರಮ, ಧನಸಮೃದ್ಧಿ, ಇವುಗಳಿಂದ ಕೂಡಿ,

ಸತ್ಯದಿಂದ ರಾಜ್ಯಭಾರವಮಾಡುತ್ತ, ಸರ್ವಧರ್ಮವಿಶಾರದನಾಗಿದ್ದನು. ರಾಜರೆಲ್ಲರೂ ಅವನನ್ನು ಚಕ್ರಾಧಿಪತಿಯೆಂದು ಭಾವಿಸಿದ್ದರು. ಎಲ್ಲಾ ರಾಜರೂ ಅವನ ಕೈಕೆಳಗೆ ಭಯ ಶೋಕಗಳನ್ನು ಬಿಟ್ಟು, ಶತ್ರುಬಾಧೆಗಳಿಗೆ ಗುರಿಯಾಗದೆ ಐಶ್ವರ್ಯಸಮೃದ್ಧರಾಗಿ ನೆಮ್ಮದಿಯಿಂದಿದ್ದರು. ಅವನ ರಾಜ್ಯದಲ್ಲಿ ಸಮಸ್ತವರ್ಣಗಳಲ್ಲಿ ಬ್ರಾಹ್ಮಣವರ್ಣವು ಉತ್ತಮವೆನಿಸಿದ್ದಿತು. ಕ್ಷತ್ರಿಯರು ಬ್ರಾಹ್ಮಣರಿಗೆ ಅನುಕೂಲರಾಗಿ ವರ್ತಿಸುತಿದ್ದರು. ಬ್ರಾಹ್ಮಣರಿಗೂ, ಕ್ಷತ್ರಿಯರಿಗೂ ಅನುಕೂಲರಾಗಿದ್ದ ವೈಶ್ಯರಿಗೆ ಶೂದ್ರರು ಸೇವೆಮಾಡುತ್ತಿದ್ದರು. ಹೀಗೆ ಶಂತನುವು ರಾಜ್ಯಪರಿಪಾಲನೆ ಮಾಡುತ್ತಿರಲು ಚತುರ್ವರ್ಣಗಳಿಗೆ ಹೇಗೋ ಹಾಗೆ, ಪಶುಗಳಿಗೂ, ಹಂದಿಗಳಿಗೂ, ಜಿಂಕೆಗಳಿಗೂ, ಪಕ್ಷಿಗಳಿಗೂ ನಿಷ್ಕಾರಣಹಿಂಸೆಯಾಗುತ್ತಿರಲಿಲ್ಲ. ಸುಖಹೀನರಿಗೂ, ದಿಕ್ಕಿಲ್ಲದವರಿಗೂ, ತಿರ್ಯಗ್ಜಾತಿಗಳಿಗೂ ಆ ರಾಜನೇ ಪಿತನಂತಿದ್ದನು. ಧರ್ಮಾತ್ಮನಾದ ಆ ಕುರುವಂಶತಿಲಕನು, ಹಸ್ತಿಯೆಂಬ ಹೆಸರುಳ್ಳ ಪಟ್ಟಣದಲ್ಲಿ ವಸಿಸುತ್ತ, ತೇಜಸ್ಸಿನಲ್ಲಿ ಸೂರ್ಯನಿಗೂ, ಬಲದಲ್ಲಿ ವಾಯುವಿಗೂ, ಕೋಪದಲ್ಲಿ ಯಮನಿಗೂ, ಕ್ಷಮೆಯಲ್ಲಿ ಭೂಮಿಗೂ ಸಮನಾಗಿದ್ದನು. ಸತ್ಯಪರಾಕ್ರಮಿಯಾದ ಆ ರಾಜನು ತನ್ನ ಪ್ರಜೆಗಳಲ್ಲಿ ಅತಿಪ್ರೀತಿಯುಳ್ಳವನಾಗಿದ್ದನು. ಒಮ್ಮೆ ಆತನು ಬೇಟೆಗಾಗಿ ಅರಣ್ಯಕ್ಕೆ ಹೋಗಿ ರಮಣೀಯವಾದ ವನಗಳಲ್ಲಿ ಮೃಗಗಳನ್ನೂ, ಕಾಡೆಮ್ಮೆಗಳನ್ನೂ, ಕೊಲ್ಲುತಿದ್ದನು. ಹೀಗಿರುತ್ತ ಒಮ್ಮೆ ಸಿದ್ಧಚಾರಣರಿಗೆ ನಿವಾಸಭೂತವಾದ ಗಂಗಾತೀರಕ್ಕೆ ಬಂದಾಗ, ಅಲ್ಲಿ ಪರಮಸುಂದರಿಯಾಗಿ ಪ್ರತ್ಯಕ್ಷಲಕ್ಷ್ಮಿಯಂತಿದ್ದ ನಾರೀಮಣಿಯನ್ನು ಕಂಡನು. ಕಂದುಕುಂದಿಲ್ಲದೆ ಅತ್ಯಂತ ಸುಂದರವಾದ ದಂತಪಜ್ಞ್ತಿಗಳಿಂದ ಕೂಡಿ, ದಿವ್ಯಾಭರಣಗಳಿಂದ ಅಲಂಕೃತಳಾಗಿ, ದುಕೂಲವನ್ನುಟ್ಟು, ತಾವರೆಯೆಸಳಿನಂತೆ ದೇಹಕಾಂತಿಗಳಿಂದ ಒಪ್ಪುತ್ತಿದ್ದ ಆಕೆಯು ಒಂಟಿಯಾಗಿ ಕಾಣಿಸಿದಳು. ಆಕೆಯು ಆಗಲೇ ಸ್ನಾನಮಾಡಿ ಧೌತವಸ್ತ್ರವನ್ನುಟ್ಟು, ಸುಳಿಸುಳಿಯಾಗಿದ್ದ ತನ್ನ ತಲೆಕೂದಲನ್ನು ಕೈಯಿಂದ ಬಿಡಿಸಿಕೊಳ್ಳುತ್ತಿದ್ದಳು. ಹಾವ ಭಾವ ವಿಲಾಸ ಸೌಂದರ್ಯಗಳಿಂದ ಎಣೆಯಿಲ್ಲದವಳಾಗಿದ್ದಳು. ಯೌವನ, ವಯಸ್ಸು, ಕಾಂತಿ, ಅವಯವ ಶೋಭೆ, ಮುಗುಳ್ನಗೆ, ಬೊಗಸೆಗಣ್ಣು, ದಟ್ಟವಾದ ಎದೆ, ಉಬ್ಬಿ

ದ ನಿತಂಬಗಳು, ಸಣ್ಣ ನಡು, ದೀರ್ಘಕೇಶಗಳು, ಅಂದವಾದ ದಟ್ಟಡಿಗಳು, ಗಂಭೀರವಾದ ನಡೆ, ಕೋಗಿಲೆಯಂತೆ ಮಧುರಧ್ವನಿ, ಇವುಗಳಿಂದ ಅವಳು ಪಾರ್ವತಿ, ಲಕ್ಷ್ಮಿ, ಸರಸ್ವತಿಯರನ್ನೂ, ಇತರ ಯುವತಿಯರನ್ನೂ, ದೇವ ಕಾಂತೆಯರನ್ನೂ ಮೀರಿಸುತಿದ್ದಳು. ಆ ರಾಜನು ಆ ಸುಂದರೀಮಣಿಯ ನ್ನು ನೋಡಿ ಆಕೆಯ ರೂಪಸಂಪತ್ತಿಗೆ ಬೆರಗಾದನು. ಆತನ ಮೈಯಲ್ಲಿ ರೋಮಾಂಚವೆದ್ದಿತು. ಎವೆಯಾಡಿಸದೆ ತನ್ನ ಎರಡು ಕಣ್ಣುಗಳಿಂದಲೂ ಆಕೆಯ ಸೌಂದರ್ಯವನ್ನು ಎಷ್ಟು ಪಾನಮಾಡಿದರೂ ಆತನಿಗೆ ತೃಪ್ತಿಯಾ ಗಲಿಲ್ಲ. ಆ ವಿಲಾಸಿನಿಯೂ, ವಿಶೇಷ ಕಾಂತಿಯುಕ್ತನಾದ ರಾಜನ ರೂಪ ಕ್ಕೆ ಮರುಳಾದಳು. ಆಕೆಯು ಆತನನ್ನೇ ದೃಷ್ಟಿಸಿ ನೋಡುತ್ತ ಎಷ್ಟು ನೋಡಿದರೂ ತೃಪ್ತಳಾಗದೆ, ಆತನ ಮುಂದೆ ಕಿನ್ನರಸ್ತ್ರೀಯಂತೆಯೂ ಅಪ್ಸ ರಸ್ತ್ರೀಯಂತೆಯೂ ಸಂಚರಿಸಿದಳು. ಆ ಚಲುವೆಯನ್ನು ನೋಡುವುದರ ಲ್ಲಿಯೇ ಸಂತುಷ್ಟನಾಗುತಿದ್ದ ಶಂತನುರಾಜನು ಆಕೆಯನ್ನು ಕುರಿತು “ಕೋಮಲೇ! ನೀನು ದೇವಸ್ತ್ರೀಯೋ? ದಾನವಸ್ತ್ರೀಯೋ? ಗಂಧರ್ವ ಸುಂದರಿಯೋ? ಅಪ್ಸರಸ್ತ್ರೀಯೋ? ಯಕ್ಷಕನ್ಯೆಯೋ? ನಾಗಕನ್ಯೆಯೋ? ಅಥವಾ ಮಾನುಷಸ್ತ್ರೀಯೋ? ನೀನು ದೇವಸ್ತ್ರೀಯಂತೆಯೇ ಕಂಗೊಳಿಸು ತ್ತಿರುವೆಯಲ್ಲ? ನೀನು ಯಾರೇ ಆಗಿದ್ದರೂ ನೀನು ನನಗೆ ಪತ್ನಿಯಾಗಿ ನನ್ನ ಪ್ರಾಣವನ್ನುಳಿಸು. ನನ್ನ ಧನವೆಲ್ಲವೂ ನಿನ್ನ ಸ್ವತ್ತೇ! ನೀನು ನನ್ನನ್ನು ವರಿಸಬೇಕೆಂದು ಬೇಡಿಕೊಳ್ಳುವೆನು” ಎಂದನು.

ಇದು ನೂರಮೂರನೆಯ ಅಧ್ಯಾಯವು.



 ಗಂಗೆಗೂ ಶಂತನುವಿಗೂ ಗಾಂಧರ್ವವಿವಾಹವು. 

ಹಸನ್ಮುಖನಾದ ರಾಜನ ಮೃದುವಾಕ್ಯಗಳನ್ನು ಕೇಳಿದಮೇಲೆ ಆಕೆ ಯು ತಾನು ವಸುಗಳಿಗೆ ಮಾಡಿದ ವಾಗ್ದಾನವನ್ನೂ, ಪ್ರತೀಪನು ಹೇಳಿದ್ದ ಮಾತುಗಳನ್ನೂ ನೆನಪಿಗೆ ತಂದುಕೊಂಡು, ತನ್ನ ಒಂದೊಂದು ವಾಕ್ಯಗಳಿಂ ದಲೂ ಅವನಿಗೆ ಸಂತೋಷವನ್ನುಂಟುಮಾಡುತ್ತ “ರಾಜಾ! ನಾನು

ನಿನ್ನ ಪತ್ನಿಯಾಗಿ ನಿನ್ನ ಆಜ್ಞೆಗಳನ್ನು ಶಿರಸಾವಹಿಸುವೆನು. ಆದರೆ, ನೀನಾಗಲಿ, ಮತ್ತಾರಾಗಲಿ ನಾನು ಯಾರೆಂಬುದನ್ನು ತಿಳಿದುಕೊಳ್ಳಲು ಪ್ರಯತ್ನಿಸಕೂಡದು. ನಾನು ಒಳ್ಳೆಯದನ್ನೇ ಮಾಡಿದರೂ, ಕೆಟ್ಟದನ್ನೇ ಮಾಡಿದರೂ ಹಾಗೆ ಮಾಡಕೂಡದೆಂದು ನನಗೆ ಅಡ್ಡ ಬರಕೂಡದು. ಆ ವಿಷಯಗಳನ್ನು ಕುರಿತು ನೀನು ನನ್ನೊಡನೆ ಯಾವ ಅಪ್ರಿಯವಾಕ್ಯಗಳನ್ನೂ ಆಡಕೂಡದು. ನೀನು ಈ ಒಡಂಬಡಿಕೆಯಂತೆ ನಡೆದುಕೊಳ್ಳುವವರೆಗೂ ನಾನು ನಿನ್ನೊಡನೆ ವಾಸಮಾಡಿಕೊಂಡಿರುವೆನು. ನೀನು ನನ್ನ ಪ್ರವರ್ತನೆಗೆ ತಡೆಮಾಡಿದರೆ, ಅಥವಾ ನನ್ನೊಡನೆ ಅಪ್ರಿಯವಾಕ್ಯಗಳನ್ನಾಡಿದರೆ, ನಾನು ನಿನ್ನನ್ನು ಬಿಟ್ಟುಹೋಗುವೆನು. ಇದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ನೀನು ಅಪೇಕ್ಷಿಸಿದಂತೆ ನನ್ನನ್ನು ವರಿಸು. ನನ್ನ ಈ ವಿವಾಹವನ್ನು ನಿನ್ನ ತಂದೆಯೂ ಅಂಗೀಕರಿಸಿರುವನು. ಪ್ರಭೂ! ನೀನು ನನಗೆ ಪತಿಯಾಗು" ಎಂದಳು. ರಾಜನು ಹಾಗೆಯೇ ಆಗಲೆಂದು ಒಪ್ಪಿದನು. ತರುವಾಯ ಆ ಸುಂದರೀಮಣಿಯು ಆ ಭರತವಂಶಲಲಾಮನನ್ನು ಹೊಂದಿ ಅಪಾರಹರ್ಷವನ್ನು ತಾಳಿದಳು. ಶಂತನುಮಹಾರಾಜನು ಆಕೆಯನ್ನೂ ರಥದಮೇಲೆ ಕುಳ್ಳಿರಿಸಿಕೊಂಡು ಅರಮನೆಗೆ ಹೋದನು. ಆತನು ಪ್ರತ್ಯಕ್ಷಲಕ್ಷ್ಮಿಯಂತಿದ್ದ ಆ ಕಾಂತಾಮಣಿಯೊಡನೆ ಕಾಮಭೋಗಗಳನ್ನನುಭವಿಸಿದನು. ಆಕೆಯೊಡನೆ ಯಾವ ಪ್ರಶ್ನೆಯನ್ನೂ ಮಾಡಕೂಡದೆಂಬ ನಿರ್ಣಯಕ್ಕಾಗಿ ಯಾವುದನ್ನೂ ಕೇಳಲಿಲ್ಲ ಆಕೆಯ ಶೀಲ, ನಡೆವಳಿಕೆ, ಸೌಂದರ್ಯ, ಗಾಂಭೀರ್ಯ, ಸದ್ಗುಣ ಮುಂತಾದುವುಗಳಿಂದಲೂ, ಆಕೆಯು ತನಗೆ ಮಾಡುವ ಉಪಚಾರಗಳಿಂದಲೂ ಸಂತುಷ್ಟನಾದನು. ಗಂಗಾದೇವಿಯೇ ಹೀಗೆ ಸುಂದರವಾದ ಮನುಷ್ಯಸ್ತ್ರೀರೂಪವನ್ನು ಧರಿಸಿ, ದಿವ್ಯರೂಪದಿಂದ ಕೂಡಿ, ರಾಜಸಿಂಹನೂ, ದೇವೇಂದ್ರನಿಗೆ ಸಮಾನವಾದ ತೇಜಸ್ಸುಳ್ಳವನೂ ಆದ ಶಂತನುವನ್ನು ಅವನ ಸದ್ಗುಣದ ಫಲದಿಂದ ಪತಿಯಾಗಿ ವರಿಸಿ, ಆತನೊಡನೆ ವಾಸಮಾಡಿಕೊಂಡಿದ್ದಳು. ತನ್ನ ರೂಪಲಾವಣ್ಯಗಳು, ಪ್ರೀತಿ, ಚಾತುರ್ಯ, ಮುಖವಿಕಾಸ, ಸಂಗೀತ, ನೃತ್ಯ, ಮುಂತಾದುವುಗಳಿಂದ ಆಕೆಯು ರಾಜನನ್ನು ಸಂತುಷ್ಟಿಗೊಳಿಸಿ ತಾನೂ

ಸಂತುಷ್ಟಳಾದಳು. ಲೋಕೋತ್ತರಗಳಾದ ಆ ಹೆಂಡತಿಯ ಗುಣಗಳಿಂದ ಆಕರ್ಷಿಸಲ್ಪಟ್ಟ ಆ ರಾಜನು ಆಕೆಯೊಡನೆ ಭೋಗದಲ್ಲಿ ಮುಳುಗಿದ್ದನು.

ಇದು ನೂರನಾಲ್ಕನೆಯ ಅಧ್ಯಾಯವು.

ಗಂಗೆಯು ತನ್ನ ಏಳುಮಂದಿ ಪುತ್ರರನ್ನು ಹುಟ್ಟಿದೊಡನೆ ಕೊಲ್ಲುವುದು. ಎಂಟನೆಯ ಮಗನನ್ನು ಕೊಲ್ಲುತ್ತಿರುವಾಗ ಶಂತನುವು ಬೇಡವೆಂದು ತಡೆಯಲು ಗಂಗೆಯು ಕೊಟ್ಟ ಪ್ರತ್ಯುತ್ತರವು.

ರಾಜನು ಆ ನಾರೀಮಣಿಯೊಡನೆ ಸ್ವೇಚ್ಛೆಯಿಂದ ರಮಿಸುತ್ತ, ಎಷ್ಟೋ ಸಂವತ್ಸರಗಳು, ಋತುಗಳು, ಮಾಸಗಳು, ದಿನಗಳು ಕಳೆದುಹೋದುದನ್ನೇ ತಿಳಿಯದಿದ್ದನು. ಆತನು ದೇವಲೋಕದಲ್ಲಿಯೂ, ಮನುಷ್ಯಲೋಕದಲ್ಲಿಯೂ ದೊರೆಯತಕ್ಕ ಸಕಲ ಸುಖಗಳನ್ನೂ ಅನುಭವಿಸಿ ಆನಂದದಲ್ಲಿ ಮುಳುಗಿದ್ದನು. ಆ ಗಂಗಾದೇವಿಯು ಋತುಮತಿಯಾಗಿ ಗರ್ಭವನ್ನು ತಾಳಿದಳು. ಆ ರಾಜನಿಗೆ ಆಕೆಯಲ್ಲಿ ದೇವಸಮಾನ ರೂಪವುಳ್ಳ ಎಂಟುಮಂದಿ ಮಕ್ಕಳು ಹುಟ್ಟಿದರು. ಆದರೆ, ಹುಟ್ಟಿದೊಡನೆ ಒಂದೊಂದು ಮಗುವನ್ನೂ ಆಕೆಯು ಪ್ರವಾಹದಲ್ಲಿ ಹಾಕಿಬಿಡುತಿದ್ದಳು. ಆ ಮಗು ಹುಟ್ಟಿದೊಡನೆ ಅದರ ಕತ್ತುಹಿಸುಕಿ "ಇದು ನಿನ್ನ ಪ್ರೀತಿಗೆ" ಎಂದು ಹೇಳಿ ಗಂಗೆಗೆ ಬಿಸುಡುವಳು. ರಾಜನಿಗೆ ಈ ಘೋರಕೃತ್ಯವು ಸಮ್ಮತವಾಗಲಿಲ್ಲ. ಆದರೆ, ತನ್ನನ್ನು ಬಿಟ್ಟುಹೋಗುವಳೆಂಬ ಭಯದಿಂದ ಆ ರಾಜನು ಆಕೆಯನ್ನೇನೂ ಆಕ್ಷೇಪಿಸದೆ ಸುಮ್ಮನಿದ್ದನು. ಆಕೆಯು ಹಾಗೆ ಮಾಡುವುದಕ್ಕೆ ಕಾರಣವನ್ನೂ, ಆಕೆಯು ಬಂದ ಕಾರಣವನ್ನೂ ಕೇಳಕೂಡದೆಂದು ತನ್ನ ತಂದೆಯು ಹೇಳಿದ ಮಾತನ್ನು ಜ್ಞಾಪಿಸಿಕೊಂಡು ವಿಚಾರಿಸದೆಯೇ ಇದ್ದನು. ಆ ಸ್ತ್ರೀಯು ಹೀಗೆ ಏಳುಮಂದಿ ಮಕ್ಕಳನ್ನೂ ಹುಟ್ಟಿದಾಗಲೇ ಕೊಂದರೂ, ಶಂತನುವು ತನ್ನ ಪ್ರತಿಜ್ಞೆಯ ಮೀರಿಗೆ ಧರ್ಮಭಂಗವಾಗುವುದೆಂದು ಮನಸ್ಸನ್ನು ಬಿಗಿಹಿಡಿದು ಕೇಳದೆಯೇ ಇದ್ದನು. ಆಮೇಲೆ ಆಕೆಯು ಎಂಟನೆಯ ಮಗನನ್ನು ಕೊಲ್ಲುವುದಕ್ಕಿರುವುದನ್ನು

ನೋಡಿ ಶಂತನುವಿಗೆ ಮನಸ್ಸು ತಡೆಯಲಿಲ್ಲ. ಮನೋದಾರ್ಢ್ಯವು ಕದಲಿತು. ಎಂಟನೆಯ ಮಗನು ಹುಟ್ಟಿದೊಡನೆಯೇ ಸಂತೋಷದಿಂದ ಆ ಮಗುವನ್ನು ನದಿಯಲ್ಲಿ ಹಾಕುತ್ತಿದ್ದ ಆ ಪತ್ನಿಯನ್ನು ನೋಡಿ, ದುಃಖವಶನಾಗಿ, ಆ ಪುತ್ರನನ್ನುಳಿಸಿಕೊಳ್ಳುವ ಅಪೇಕ್ಷೆಯಿಂದ ಆಕೆಯನ್ನು ಕುರಿತು “ಬೇಡ! ಅವನ್ನು ಕೊಲ್ಲಬೇಡ. ಪುತ್ರಘಾತಕೀ! ಹೀಗೆ ಮಕ್ಕಳನ್ನೇಕೆ ಕೊಲ್ಲುತ್ತಿರುವೆ? ನೀನು ಯಾರ ಮಗಳು? ನೀನು ಯಾರು? ನಿನ್ನ ಘೋರಪಾತಕವು ನನಗೆ ದುಸ್ಸಹವಾಗಿರುವುದು” ಎಂದನು. ಗಂಗೆಯು ಆತನೊಡನೆ “ನೀನು ಈ ಪುತ್ರನನ್ನು ಕೋರಿದೆಯಲ್ಲವೆ? ಸರಿ! ಇವನಿಂದ ನೀನು ಪುತ್ರವಂತರಲ್ಲಿ ಶ್ರೇಷ್ಠನೆನಿಸು! ಇನ್ನು ನಾನು ಮಗನನ್ನು ಕೊಲ್ಲುವುದಿಲ್ಲ. ಹಿಂದೆ ಮಾಡಿರುವ ಒಡಂಬಡಿಕೆಯಂತೆ ಇದುವರೆಗೂ ನಿನ್ನೊಡನೆ ವಾಸಮಾಡಿಕೊಂಡಿದ್ದ ಅವಧಿಯು ಮುಗಿಯಿತು. ನಾನು ಜಹ್ನುಮುನಿಯ ಮಗಳಾದ ಗಂಗೆ! ಮಹರ್ಷಿಸಮೂಹಗಳೆಲ್ಲ ನನ್ನನ್ನು ಪೂಜಿಸುತ್ತಿರುವುವು. ನಾನು ದೇವತಾಕಾರ್ಯವೊಂದನ್ನು ನೆರವೇರಿಸುವುದಕ್ಕಾಗಿ ನಿನ್ನೊಡನೆ ಇದುವರೆಗೂ ವಾಸಮಾಡುತ್ತಿದ್ದೆನು. ನಾನು ಕೊಂದ ಮಕ್ಕಳು ಬೇರೆ ಯಾರೂ ಅಲ್ಲ. ದೇವತೆಗಳು! ಮಹಾಭಾಗ್ಯಶಾಲಿಗಳೂ, ತೇಜಸ್ವಿಗಳೂ ಆದ ಅಷ್ಟವಸುಗಳು. ವಸಿಷ್ಠನ ಶಾಪದಿಂದ ಮನುಷ್ಯತ್ವವನ್ನು ಹೊಂದಿದ್ದರು. ಅವರಿಗೆ ಭೂಮಿಯಲ್ಲಿ ನೀನು ಹೊರತು ಮತ್ತೆ ಯಾರೂ ತಂದೆಯಾಗತಕ್ಕವರಿಲ್ಲ. ಅವರನ್ನು ಗರ್ಭದಲ್ಲಿ ಧರಿಸಲು ನನ್ನಂತಹ ಸ್ತ್ರೀಯು ಮತ್ತೆ ಯಾರೂ ಈ ಲೋಕದಲ್ಲಿಲ್ಲ. ಅವರಿಗೆ ತಾಯಿಯಾಗಿರುವುದಕ್ಕಾಗಿಯೇ ನಾನು ಈ ಮನುಷ್ಯದೇಹವನ್ನೆತ್ತಿದೆನು. ಅಷ್ಟವಸುಗಳನ್ನು ನೀನು ಪುತ್ರರನ್ನಾಗಿ ಪಡೆದು ಅಕ್ಷಯವಾದ ಲೋಕಗಳನ್ನು ನೀನೂ ಗೆದ್ದಿರುವೆ. ದೇವತೆಗಳಾದ ವಸುಗಳಿಗೆ “ನೀವು ಹುಟ್ಟಿದೊಡನೆಯೇ ಮನುಷ್ಯಜನ್ಮದಿಂದ ನಿಮ್ಮನ್ನು ಬಿಡಿಸುವೆನೆಂದು” ಪ್ರತಿಜ್ಞೆಮಾಡಿದ್ದೆನು. ಆದುದರಿಂದ ಮಹಾತ್ಮನಾದ ಆಪವನ (ವಸಿಷ್ಠನ) ಶಾಪದಿಂದ ಅವರಿಗೆ ಈಗ ವಿಮೋಚನೆಯಾಯಿತು. ನಿನಗೆ ಶುಭವಾಗಲಿ. ನಾನು ಹೋಗುವೆನು. ಮಹಾವ್ರತನಾದ ಈ ಮಗನನ್ನು ಕಾಪಾಡು. ನಿಮ್ಮ ಕುಲಕ್ಕೆಲ್ಲ ಕೀರ್ತಿಯನ್ನು ತರುವ ಈ ಮಗನು ಆ




ಪುಟ ೨೧೪. ಗಂಗೆಯು ಆಗಲೇ ಹುಟ್ಟಿದ ಶಿಶುವನ್ನು (ಭೀಷ್ಮನನ್ನು) ಗಂಗಾಪ್ರವಾಹ
ದಲ್ಲಿ ಬಿಸುಡುವುದಕ್ಕೆ ಹೋದಾಗ ಶಂತನುವು ಬಂದು ತಡೆದುದು.

ಎಂಟುಮಂದಿ ವಸುಗಳ ತೇಜಸ್ಸೆಲ್ಲ ಸೇರಿ ಹುಟ್ಟಿದವನು. ಇವನು ಮನುಷ್ಯರಿಗೆ ಅಸಾಧ್ಯವಾದ ಕಾರ್ಯಗಳೆಲ್ಲವನ್ನೂ ಮಾಡುವನು. ಇದು ಸತ್ಯವು. ವಸುಗಳು ಕ್ರಮವಾಗಿ ನನ್ನ ಹೊಟ್ಟೆಯಲ್ಲಿ ಈ ರೂಪಗಳಿಂದ ಹುಟ್ಟಿ ಹೋದರು. ಈ ಮಗನೊಬ್ಬನನ್ನು ಮಾತ್ರ "ಗಂಗಾದತ್ತ" ನೆಂದು ತಿಳಿದು ಕಾಪಾಡು" ಎಂದಳು.

ಇದು ನೂರೈದನೆಯ ಅಧ್ಯಾಯವು.



{ ವಸಿಷ್ಠನು ತನ್ನ ಗೋವುಗಳನ್ನು ಅಪಹರಿಸಿದ ವಸುಗಳನ್ನು ಶಪಿಸಿದುದು. ಗಂಗೆಯು ಭೀಷ್ಮನೊಡನೆ ತನ್ನ ಲೋಕಕ್ಕೆ ಹೋದುದು }

ಶಂತನುವು ಗಂಗಾದೇವಿಯನ್ನು ಕುರಿತು "ಕಲ್ಯಾಣೀ! ಯಾರ ಶಾಪದಿಂದ ಆ ವಸುಗಳೆಲ್ಲರೂ ಮನುಷ್ಯಜನ್ಮವನ್ನು ಹೊಂದಿದರು? ಆಪವನೆಂಬನಾವನು? ಆತನ ಶಾಪಕ್ಕೆ ಗುರಿಯಾಗಲು ಅವರು ಮಾಡಿದ ತಪ್ಪೇನು? ಈ ಶಿಶುವೊಂದುಮಾತ್ರ ಕೊಲ್ಲಲ್ಪಡದೆ ಮನುಷ್ಯಲೋಕದಲ್ಲಿಯೇ ವಾಸಿಸಲು ಈತನು ಮಾಡಿದ ಅಧಿಕಪಾಪವಾವುದು? ಸಕಲ ಲೋಕಗಳಿಗೂ ಒಡೆಯರಾದ ವಸುಗಳು ಹೇಗೆ ಮನುಷ್ಯರಲ್ಲಿ ಹುಟ್ಟಿದರು? ಜಹ್ನುಪುತ್ರೀ! ಅದೆಲ್ಲವನ್ನೂ ನನಗೆ ತಿಳಿಸು" ಎಂದು ಕೇಳಿದನು. ಜನಮೇಜಯ ರಾಜಾ! ಆತನು ಹೀಗೆ ಕೇಳಲು ಗಂಗೆಯು ಆ ಮಹಾರಾಜನನ್ನು ನೋಡಿ "ಹಿಂದೆ ವರುಣನು ಪುತ್ರನನ್ನಾಗಿ ಪಡೆದ ವಸಿಷ್ಠನೆಂಬ ಮುನಿಯೇ ಆಪವನು. (ಆಪಃ=ಜಲ; ಅದಕ್ಕೆ ಅಧಿಪತಿಯಾದ ವರುಣನು ಆಪವನು. ಆತನ ಪುತ್ರನಾದ ವಸಿಷ್ಠನೂ ಆ ಹೆಸರನ್ನೇ ಉಳ್ಳವನೆಂದು ತಿಳಿಯಬೇಕು) ಆ ವಸಿಷ್ಠನ ಆಶ್ರಮವು ಅತಿ ಪವಿತ್ರವಾಗಿ, ಮೃಗಪಕ್ಷಿಗಳಿಂದ ತುಂಬಿ, ಸಾರ್ವರ್ತುಕಗಳಾದ ಫಲಪುಷ್ಪಗಳಿಂದ ಸಮೃದ್ಧವಾಗಿ, ಮೇರುಪರ್ವತದ ಪಾರ್ಶ್ವದಲ್ಲಿ ಕಂಗೊಳಿಸುತಿದ್ದಿತು. ಪುಣ್ಯಾತ್ಮನೂ, ವರುಣಪುತ್ರನೂ ಆದ ಆ ವಸಿಷ್ಠನು ಉತ್ತಮವಾದ ಫಲವೃಕ್ಷಗಳೂ, ತಟಾಕಗಳೂ ಇರುವ ಆ ವನದಲ್ಲಿ ತಪಸ್ಸುಮಾಡುತಿದ್ದನು. ದಕ್ಷನ ಮಗಳಾದ ಸುರಭಿದೇವಿ

ಯು, ಲೋಕಾನುಗ್ರಹಕ್ಕಾಗಿ ಕೋರಿದ ಕೋರಿಕೆಗಳೆಲ್ಲವನ್ನೂ ನೆರವೇರಿಸ ತಕ್ಕ ಉತ್ತಮವಾದ ನಂದಿನಿಯೆಂಬ ಹಸುವನ್ನು ಕಶ್ಯಪನಿಂದ ಹಡೆದಳು. ಧರ್ಮಾತ್ಮನಾದ ವಸಿಷ್ಠನು ಆ ಹಸುವನ್ನು ಹೋಮಧೇನುವನ್ನಾಗಿ ಪಡೆದನು. ಆ ಹಸುವು ಮುನಿಗಳ ಪೂಜೆಗೆ ಅರ್ಹವಾಗಿ, ಪುಣ್ಯಕರವೂ, ರಮಣೀಯವೂ ಆದ ಆ ತಾಪಸಾಶ್ರಮದಲ್ಲಿ ನಿರ್ಭಯವಾಗಿ ಸಂಚರಿಸುತ್ತಿದ್ದಿತು. ಕೆಲವು ಕಾಲದಮೇಲೆ ಪೃಥು ಮೊದಲಾದ ಅಷ್ಟವಸುಗಳೆಲ್ಲರೂ ದೇವರ್ಷಿಗಳಿಂದ ಪೂಜಿತವಾದ ಆ ವನಕ್ಕೆ ಬಂದರು. ಅವರು ತಮ್ಮ ತಮ್ಮ ಪತ್ನಿಯರೊಡನೆ ರಮಣೀಯವಾದ ಪರ್ವತಗಳಲ್ಲಿಯೂ, ವನದಲ್ಲಿಯೂ ತಮ್ಮ ವಯಸ್ಸಿಗನುಗುಣವಾಗಿ ಸುಖವನ್ನು ಅನುಭವಿಸುತ್ತ ಕ್ರೀಡಿಸುತಿದ್ದರು. ಹಾಗೆ ಅವರು ಸಂಚರಿಸುತ್ತಿರುವಾಗ ಪರಮಸುಂದರಿಯಾದ ವಸುಪತ್ನಿಯೊಬ್ಬಳು ಕಾಮಪ್ರದೆಯೆನಿಸಿದ ನಂದಿನಿಯೆಂಬ ಕಾಮಧೇನುವನ್ನು ನೋಡಿದಳು. ವಿಶಾಲವಾದ ಕಣ್ಣುಗಳು, ಊದಿದ ಕೆಚ್ಚಲು, ಅಂದವಾದ ಬಾಲ, ಸೊಗಸಾದ ಗೊರಸುಗಳು, ಈ ಮುಂತಾದ ಸರ್ವಲಕ್ಷಣಗಳಿಂದಲೂ ಕೂಡಿ, ಹೆಚ್ಚಾಗಿ ಹಾಲನ್ನು ಕೊಡುವ ಉತ್ತಮವಾದ ಆ ಕಾಮಧೇನುವನ್ನು ದ್ಯುವೆಂಬ ಹೆಸರುಳ್ಳ ತನ್ನ ಪತಿಗೆ ತೋರಿಸಿದಳು. ದ್ಯುವೂ ಕೂಡ ಆ ಗೋವನ್ನು ನೋಡಿ, ತನ್ನ ಪತ್ನಿಗೆ ಅದರ ಸೌಂದರ್ಯವನ್ನೂ, ಔದಾರ್ಯವನ್ನೂ ವರ್ಣಿಸುತ್ತ “ ಪ್ರಿಯೆ ! ಈ ಧೇನುವು ಉತ್ತಮವಾದುದು. ಈ ತಪೋವನಕ್ಕಧಿಪತಿಯಾದ ವಸಿಷ್ಠಮುನಿಗೆ ಸೇರಿದುದು. ಈ ಹಸುವು ಕೊಡತಕ್ಕ ಹಾಲನ್ನು ಪಾನಮಾಡತಕ್ಕ ಮನುಷ್ಯನು, ಹತ್ತುಸಾವಿರ ವರ್ಷಗಳ ವರೆಗೆ ಜರಾರಹಿತನಾಗಿ ಯೌವನನದಿಂದಿರುವನು ” ಎಂದನು. ಜನಮೇಜಯಾ ! ಆಗ ವಸುಪತ್ನಿಯು ತನ್ನ ಪತಿಯನ್ನು ಕುರಿತು “ ಮನುಷ್ಯಲೋಕದಲ್ಲಿ ರೂಪಯೌವನಾದಿಗಳಿಂದ ಕೂಡಿದ ಜಿತವತಿಯೆಂಬ ರಾಜಪುತ್ರಿಯೊಬ್ಬಳಿರುವಳು. ಆಕೆಯು ನನಗೆ ಸ್ನೇಹಿತಳು. ಆಕೆಯು ಸತ್ಯಸಂಧನೂ, ಧೀಮಂತನೂ ಆದ ಉಶೀನರ ರಾಜರ್ಷಿಯ ಮಗಳು. ಮನುಷ್ಯಲೋಕದಲ್ಲೆಲ್ಲಾ ಆಕೆಯು ಅತ್ಯಂತ ಸುಂದರಿ. ನೀನೋ ಮಹಾಭಾಗ್ಯಶಾಲಿ ! ದೇವತೆಗಳಲ್ಲಿ ಶ್ರೇಷ್ಠನು. ಪುಣ್ಯವರ್ಧನನು. ನಿನಗೆ ಅಸಾಧ್ಯವಾದ ಕಾರ್ಯವಾವುದೂ ಇಲ್ಲ. ಈ ಹಸು

ವನ್ನೂ, ಕರುವನ್ನೂ ಆಕೆಗೆ ಕೊಡಬೇಕೆಂದು ನಾನು ಅಪೇಕ್ಷಿಸುವೆನು. ಆದುದರಿಂದ ಕರುವಿನೊಡನೆ ಆ ಹಸುವನ್ನು ಕರೆದುಕೊಂಡು ಬಾ! ಆ ನನ್ನ ಸ್ನೇಹಿತೆಯು ಈ ಹಸುವಿನ ಹಾಲನ್ನು ಕುಡಿದು ನಮ್ಮಂತೆ ಮನುಷ್ಯ ಲೋಕದಲ್ಲಿ ವ್ಯಾಧಿ ಮತ್ತು ಮುಪ್ಪುಗಳ ಬಾಧೆಯಿಲ್ಲದೆ ಜೀವಿಸಿರಲಿ. ನೀನು ಈ ಕಾರ್ಯವನ್ನು ಮಾಡಬೇಕು. ನನಗೆ ಇದಕ್ಕಿಂತಲೂ ಪ್ರಿಯವಾದುದು ಮತ್ತೆ ಬೇರೆಯಿಲ್ಲ" ಎಂದಳು. ಆಕೆಯು ಹೇಳಿದುದನ್ನು ಕೇಳಿ, ತನ್ನ ಹೆಂಡತಿಯ ಕೋರಿಕೆಯನ್ನು ನೆರವೇರಿಸುವುದಕ್ಕಾಗಿ ದ್ಯುವು, ಪೃಥು ಮೊದಲಾದ ತನ್ನ ಸಹೋದರರೊಡನೆ ಆ ಹಸುವನ್ನು ಕದ್ದುಕೊಂಡು ಹೋದನು. ಋಷೀಶ್ವರನ ತಪಃಪ್ರಭಾವವನ್ನೂ ಮರೆತು ಹೆಂಡತಿಯ ಮಾತುಗಳಿಗೆ ಮರುಳಾಗಿ ಈ ಅಕಾರ್ಯವನ್ನು ಮಾಡಿದನು. ಆಗ ಆತನಿಗೆ ಈ ಕೃತ್ಯದಿಂದ ಬರುವ ಪಾಪವೂ ಸ್ಮರಣೆಗೆ ಬಾರದೆ ಹೋಯಿತು. ಸಾಯಂಕಾಲವಾಗಲು ವಸಿಷ್ಠಮುನಿಯು ಕಾಡಿನಿಂದ ಹಣ್ಣುಗಳನ್ನು ಕಿತ್ತುಕೊಂಡು ಆಶ್ರಮಕ್ಕೆ ಬಂದು, ಅಲ್ಲಿ ತನ್ನ ಹಸುವೂ, ಕರುವೂ ಇಲ್ಲದುದನ್ನು ಕಂಡು, ಅವುಗಳನ್ನು ಆ ವನದಲ್ಲೆಲ್ಲಾ ಹುಡುಕಿ ನೋಡಿದನು. ಎಷ್ಟು ಹುಡುಕಿ ನೋಡಿದರೂ ಆ ಹಸುವು ಕಾಣಿಸಲಿಲ್ಲ. ಆಗ ಆತನು ತನ್ನ ದಿವ್ಯದೃಷ್ಟಿಯಿಂದ ನೋಡಲು, ವಸುಗಳು ತನ್ನ ಹಸುವನ್ನು ಕದ್ದುಕೊಂಡುಹೋದ ವಿಷಯವು ಗೋಚರವಾಯಿತು. ಒಡನೆ ಕೋಪೋದ್ರೇಕದಿಂದ ಆ ವಸುಗಳನ್ನು ಈ ರೀತಿಯಾಗಿ ಶಪಿಸಿದನು. "ನನ್ನ ಧೇನುವನ್ನು ವಸುಗಳು ಕದ್ದುಕೊಂಡು ಹೋಗಿರುವುದರಿಂದ ಅವರೆಲ್ಲರೂ ಮನುಷ್ಯರಾಗಿ ಹುಟ್ಟಲಿ" ಎಂದನು. ಆ ಮುನಿಶ್ರೇಷ್ಠನು ಹೀಗೆ ಕೋಪಿಸಿಕೊಂಡು ವಸುಗಳನ್ನು ಶಪಿಸಿ, ಆಮೇಲೆ ತಪಸ್ಸಿನಲ್ಲಿ ಮನಸ್ಸಿಟ್ಟನು. ಮಹಾಪ್ರಭಾವನೂ, ತಾಪಸೋತ್ತಮನೂ ಆದ ಆ ಬ್ರಹ್ಮಋಷಿಯು ತಮ್ಮನ್ನು ಶಪಿಸಿದ ವಿಷಯವು ವಸುಗಳಿಗೆ ತಿಳಿದೊಡನೆ ಅವರು ಆಶ್ರಮಕ್ಕೆ ಬಂದು, ಋಷಿಯ ಅನುಗ್ರಹವನ್ನು ಪಡೆಯಲು ಅವನನ್ನು ಪ್ರಾರ್ಥಿಸಿದರು. ಸಮಸ್ತ ಧರ್ಮಗಳನ್ನೂ ತಿಳಿದ ಆ ವಸಿಷ್ಠಮಹಾಮುನಿಯು "ನೀವೆಲ್ಲರೂ ಒಂದು ಸಂವತ್ಸರವು ಕಳೆದಮೇಲೆ ಶಾಪಮುಕ್ತರಾಗುವಿರಿ! ಯಾರಿಗಾಗಿ ನಾನು ನಿಮ್ಮೆಲ್ಲರನ್ನೂ ಶಪಿಸಿದೆನೋ, ಆ ದ್ಯುವೆಂಬ ವಸುವುಮಾತ್ರ

ತಾನು ಮಾಡಿದ ದುಷ್ಕಾರ್ಯಕ್ಕಾಗಿ ದೀರ್ಘಕಾಲದವರೆಗೆ ಮನುಷ್ಯಲೋಕದಲ್ಲಿರುವನು. ನನ್ನ ಶಾಪವು ಸುಳ್ಳಾಗಲಾರದು. ದ್ಯುವು ಮನುಷ್ಯಲೋಕದಲ್ಲಿದ್ದರೂ ಆತನಿಗೆ ಸಂತತಿಯಿಲ್ಲ. ಆದರೆ, ಆತನು ಧರ್ಮಾತ್ಮನಾಗಿ, ಸಕಲ ಶಾಸ್ತ್ರಗಳಲ್ಲಿಯೂ ಪಂಡಿತನಾಗಿ, ತನ್ನ ತಂದೆಗೆ ಪ್ರಿಯವನ್ನೂ, ಹಿತವನ್ನೂ ಮಾಡುವುದರಲ್ಲಿ ಆಸಕ್ತಿಯುಳ್ಳವನಾಗುವನು" ಎಂದನು.

ವಸುಗಳಿಗೆ ಹೀಗೆಂದು ಹೇಳಿ ಆ ಋಷಿಶ್ರೇಷ್ಠನು ಹೊರಟುಹೋದಮೇಲೆ ವಸುಗಳು ನನ್ನನ್ನು ನೋಡಿ "ನಾವು ಹುಟ್ಟಿದೊಡನೆ ನೀರಿನಲ್ಲಿ ಹಾಕಿಬಿಡು" ಎಂದು ನನ್ನನ್ನು ಕೇಳಿದರು. ಈಗ ನಾನು ಅವರು ಕೇಳಿಕೊಂಡಂತೆ ಮನುಷ್ಯಲೋಕದಿಂದ ತಪ್ಪಿಸಲು ಅವರಿಗೆ ಉಪಕಾರವನ್ನೇ ಆಚರಿಸಿರುವೆನು. ರಾಜತಿಲಕಾ! ವಸುಗಳಲ್ಲಿ ದ್ಯುವೆಂಬ ಈ ಮಗನೊಬ್ಬನುಮಾತ್ರ ಆ ಮಹರ್ಷಿಯ ಶಾಪದಿಂದ ಮನುಷ್ಯಲೋಕದಲ್ಲಿ ಬಹಳಕಾಲವಿರುವನು. ನಿನ್ನ ಈ ಮಗನು ದೊಡ್ಡವನಾದಮೇಲೆ ತಿರುಗಿ ನಿನ್ನ ಬಳಿಗೇ ಬರುವನು. ನೀನು ನನ್ನನ್ನು ಸ್ಮರಿಸಿದಾಗ ನಾನೂ ಬರುವೆನು" ಎಂದು ಹೇಳಿ ಗಂಗೆಯು ಕಣ್ಮರೆಯಾದಳು. ಆಕೆಯು ಆ ಮಗುವನ್ನೂ ತನ್ನೊಡನೆ ಕರೆದುಕೊಂಡು ಹೊರಟುಹೋದಳು. ಆ ಕುಮಾರನು ದೇವವ್ರತ, ಗಾಂಗೇಯರೆಂಬ ಹೆಸರುಗಳಿಂದ ಪ್ರಸಿದ್ಧನಾಗಿ, ಗುಣದಲ್ಲಿ ಶಂತನುವಿಗಿಂತಲೂ ಅಧಿಕನೆನಿಸಿದನು. ಶಂತನುವು ಗಂಗೆಯು ಹೊರಟುಹೋದ ದುಃಖದಿಂದ ಆ ಕಾಡಿನಿಂದ ತನ್ನ ನಗರಕ್ಕೆ ಹೊರಟನು. ಭರತಕುಲಶ್ರೇಷ್ಠನೂ, ಮಹಾತ್ಮನೂ ಆದ ಆ ಶಂತನುಮಹಾರಾಜನ ಗುಣಾತಿಶಯಗಳೂ, ಮಹಾಭಾಗ್ಯವೂ ಅನಂತವಾದುವು. ವಾಸ್ತವದಲ್ಲಿ ಮಹಾಭಾರತವೆಂಬುದು ತೇಜೋಮಯವಾದ ಆತನ ಚರಿತ್ರೆಯೆಂದೇ ಹೇಳಬೇಕು.

ಇದು ನೂರ ಆರನೆಯ ಅಧ್ಯಾಯವು.



ಶಂತನುವು ಗಂಗೆಯನ್ನು ನೋಡಿ ಆಕೆಯೊಡನೆ ಮಾತನಾಡು
ವುದು. ಭೀಷ್ಮನಿಗೆ ಯೌವರಾಜ್ಯಾಭಿಷೇಕವು ಭೀಷ್ಮ
ನು ದಾಶಕನ್ಯೆಯನ್ನು ಕರೆದುಕೊಂಡು ಬರುವುದು.
ಶಂತನುವು ಭೀಷ್ಮನಿಗೆ ಇಚ್ಛಾಮರಣೆಯಾಗು
ವಂತೆ ವರವನ್ನು ಕೊಡುವುದು.

ಶಂತನುಮಹಾರಾಜನೋ ವಿಶೇಷ ಜ್ಞಾನವಂತನು. ಮತ್ತು ದೇವತೆಗಳು, ರಾಜರು ಮತ್ತು ಋಷಿಗಳಿಂದ ಪೂಜಿತನಾದವನು. ಧರ್ಮಾತ್ಮನು. ಸತ್ಯಸಂಧನೆಂದು ಸಕಲ ಲೋಕಗಳಲ್ಲಿಯೂ ಪ್ರಸಿದ್ಧಿಗೊಂಡವನು. ಇಂದ್ರಿಯಜಯ, ದಾನ, ಕ್ಷಮೆ, ಬುದ್ಧಿ, ಲಜ್ಜೆ, ಧೈರ್ಯ, ತಾಳ್ಮೆ, ಶೌರ್ಯ ಮೊದಲಾದ ಈ ಸದ್ಗುಣಗಳು ಮಹಾತ್ಮನಾದ ಆ ಶಂತನುವಿನಲ್ಲಿ ಯಾವಾಗಲೂ ನೆಲೆಗೊಂಡಿದ್ದುವು. ಹೀಗೆ ಸರ್ವಗುಣಸಂಪನ್ನನಾಗಿ, ಧರ್ಮಾರ್ಥಗಳಲ್ಲಿ ನಿಪುಣನಾದ ಆ ರಾಜನು, ಭರತವಂಶವನ್ನೂ ಸಮಸ್ತಜನರನ್ನೂ ರಕ್ಷಿಸುತಿದ್ದನು. ಬಲಮುರಿಶಂಖದಂತಿರುವ ಕಂಠದ ಸೊಗಸು! ನೀಡಿದ ತೋಳುಗಳು! ಮದದಾನೆಯಂತೆ ಧೀರಾಕೃತಿ! ಈ ಸಕಲ ರಾಜಲಕ್ಷಣಗಳೂ ತಮ್ಮ ವಾಸಕ್ಕೆ ಆ ರಾಜನ ದೇಹವೇ ತಕ್ಕ ಸ್ಥಳಗಳೆಂದು ಭಾವಿಸಿ ಆತನಲ್ಲಿ ನೆಲೆಗೊಂಡಂತಿದ್ದುವು. ಕೀರ್ತಿವಂತನಾದ ಆ ರಾಜನ ನಡೆವಳಿಕೆಗಳನ್ನು ನೋಡಿ ಮನುಷ್ಯರೆಲ್ಲರೂ ಅರ್ಥಕಾಮಗಳಿಗಿಂತಲೂ ಧರ್ಮವೇ ಉತ್ತಮವಾದುದೆಂದು ನಿಶ್ಚಯಿಸಿಕೊಳ್ಳುತಿದ್ದರು. ಧರ್ಮದಲ್ಲಿ ಪುರುಷಶ್ರೇಷ್ಠನಾದ ಆ ಶಂತನುವಿಗೆ ಸಮಾನರಾದ ರಾಜರಾರೂ ಇಲ್ಲ. ಧರ್ಮಮಾರ್ಗದಿಂದಲೇ ಪ್ರವರ್ತಿಸುತ್ತ, ಧರ್ಮರಕ್ಷಕರಿಗೆಲ್ಲ ಮೇಲೆನಿಸಿದ ಈ ರಾಜನಿಗೆ, ಇತರ ರಾಜರೆಲ್ಲರೂ ಚಕ್ರಾಧಿಪತಿಯೆಂದು ಪಟ್ಟಗಟ್ಟಿದರು. ಆ ರಾಜರೆಲ್ಲ ಶಂತನುವನ್ನೇ ತಮಗೆ ಅಧಿಪತಿಯನ್ನಾಗಿ ಮಾಡಿಕೊಂಡು ದುಃಖ, ಭಯ, ಚಿಂತೆ ಮುಂತಾದುವೇನೂ ಇಲ್ಲದೆ ರಾತ್ರಿ ಸುಖವಾಗಿ ಮಲಗಿ, ಬೆಳಗ್ಗೆ ಸುಖವಾಗಿ ಏಳುತ್ತಿದ್ದರು. ದೇವೇಂದ್ರನಿಗೆ ಸಮಾನವಾದ ತೇಜಸ್ಸುಳ್ಳ ಆ ಶಂತನುವಿನ ಶಾಸನದಂತೆ ರಾಜರು ಯಾಗದಾನಾದಿ ಕ್ರಿಯೆಗಳನ್ನು ಮಾಡುತಿದ್ದರು. ಶಂತನುವೂ ಅವನಂತಹ ಇತರ ರಾಜರೂ ರಾಜ್ಯಭಾರಮಾಡುತ್ತಿದ್ದಾಗ, ಸಕಲ ವರ್ಣಗಳಲ್ಲಿಯೂ ಧರ್ಮವು

ವೃದ್ಧಿಹೊಂದಿತು. ಕ್ಷತ್ರಿಯರು ಬ್ರಾಹ್ಮಣರಿಗೂ, ವೈಶ್ಯರು ಕ್ಷತ್ರಿಯರಿಗೂ ಶುಶ್ರೂಷೆಮಾಡುತಿದ್ದರು. ಶೂದ್ರರು ಬ್ರಾಹ್ಮಣರನ್ನೂ ಕ್ಷತ್ರಿಯರನ್ನೂ ಪೂಜಿಸುತ್ತ, ವೈಶ್ಯರ ಸೇವೆಗಳನ್ನು ಮಾಡುತ್ತಾ ಇದ್ದರು. ಶಂತನುವು ಕೌರವರಾಜಧಾನಿಯಾಗಿಯೂ, ಸುಂದರವಾಗಿಯೂ ಇರುವ ಹಸ್ತಿನಾವತಿಯಲ್ಲಿ ವಾಸಮಾಡುತ್ತಾ, ಸಮುದ್ರಪರ್ಯಂತವಾದ ಭೂಮಂಡಲವನ್ನು ಪರಿಪಾಲಿಸುತಿದ್ದನು. ಈತನು ಇಂದ್ರನಿಗೆ ಸಮಾನನೂ, ಧರ್ಮಜ್ಞನೂ, ಸತ್ಯಸಂಧನೂ, ನಿರ್ವಂಚಕನೂ ಆಗಿದ್ದನು. ದಾನ, ಧರ್ಮ, ತಪಸ್ಸು ಇವು ಮೂರೂ ಆತನಲ್ಲಿ ಸೇರಿದ್ದುದರಿಂದ, ಆತನು ಉತ್ತಮವಾದ ಐಶ್ವರ್ಯವನ್ನು ಪಡೆದನು. ರಾಗದ್ವೇಷಾದಿಗಳನ್ನು ಬಿಟ್ಟು ಸೌಂದರ್ಯದಲ್ಲಿ ಚಂದ್ರನಂತೆಯೂ, ತೇಜಸ್ಸಿನಲ್ಲಿ ಸೂರ್ಯನಂತೆಯೂ, ವೇಗದಲ್ಲಿ ವಾಯುವಿನಂತೆಯೂ, ಕೋಪದಲ್ಲಿ ಯಮನಂತೆಯೂ, ಕ್ಷಮೆಯಲ್ಲಿ ಭೂಮಿಯಂತೆಯೂ ಇದ್ದನು. ಜನಮೇಜಯಾ! ಶಂತನುವು ರಾಜ್ಯಭಾರಮಾಡುತ್ತಿದ್ದಾಗ ಜಿಂಕೆಗಳಾಗಲಿ, ಹಂದಿಗಳಾಗಲಿ, ಪಕ್ಷಿಗಳಾಗಲಿ ಮತ್ತೆ ಇತರ ಪ್ರಾಣಿಗಳಾಗಲಿ ಅಕಾರಣವಾಗಿ ಕೊಲ್ಲಲ್ಪಡುತ್ತಿರಲಿಲ್ಲ. ಆತನ ರಾಜ್ಯದಲ್ಲೆಲ್ಲಾ ಅಹಿಂಸಾಧರ್ಮವು ನೆಲೆಗೊಂಡಿತು. ರಾಜನು ದಯಾಗುಣದಿಂದ ಕೂಡಿ, ಕಾಮಕ್ರೋಧಗಳಲ್ಲಿ ಆಸೆಯನ್ನು ಬಿಟ್ಟು ಪಕ್ಷಪಾತವಿಲ್ಲದೆ ಪ್ರಜೆಗಳನ್ನು ಪಾಲಿಸಿದನು. ಚಕೋರದಂತಿರುವ ಕಣ್ಣುಗಳು! ಕೆಂಪಾದ ನೇತ್ರಾಂತಗಳು! ಸಿಂಹ ವೃಷಭಗಳಿಗೆ ಸಮಾನವಾದ ನಡೆ! ಪೂರ್ಣಚಂದ್ರನಿಗೆ ಸಮಾನವಾದ ಮುಖಕಾಂತಿ! ಇವುಗಳಿಂದ ಕೂಡಿ ಗಾಂಭೀರ್ಯ ಧೈರ್ಯಸ್ವಭಾವಗಳಿಂದೊಪ್ಪುತಿದ್ದನು. ಅವನ ಕಾಲದಲ್ಲಿ ದೇವಯಜ್ಞ, ಪಿತೃಯಜ್ಞ, ಋಷಿಯಜ್ಞಗಳೆಲ್ಲ ತಪ್ಪದೆ ನಡೆಸಲ್ಪಟ್ಟುವು. ಆ ಕಾಲದಲ್ಲಿ ಯಾವ ಪ್ರಾಣಿಯೂ ಮರಣಕ್ಕೆ ಗುರಿಯಾಗುತ್ತಿರಲಿಲ್ಲ. ರಕ್ಷಕರಿಲ್ಲದ ಮತ್ತು ಸುಖವಿಲ್ಲದ ಪಕ್ಷಿಮೃಗಾದಿ ಜೀವಜಂತುಗಳಿಗೆಲ್ಲ ಶಂತನುವೇ ರಾಜನೂ, ಪಿತನೂ ಆಗಿದ್ದನು. ಕುರುಶ್ರೇಷ್ಠನಾದ ಶಂತನುವು ರಾಜನಾಗಿರುವಾಗ, ಜನರಲ್ಲಿ ಸತ್ಯವಾಕ್ಯೇ ನೆಲೆಗೊಂಡಿತು ಮನುಷ್ಯರ ಮನಸ್ಸು ದಾನಧರ್ಮಗಳಲ್ಲಿಯೇ ಆಸಕ್ತವಾಗಿದ್ದಿತು. ಪಶುಗಳು ಯಾಗಕಾರ್ಯಕ್ಕಾಗಿಯೇ ಉಪಯೋಗಪಡುತ್ತಿದ್ದುವು. ಸಂತಾನಾಭಿವೃದ್ಧಿಗಾಗಿಯೇ

ಸ್ತ್ರೀಪುರುಷರು ಸಂಭೋಗಸುಖವನ್ನನುಭವಿಸುತಿದ್ದರು. ಆತನು ಮೂವತ್ತಾರುವರ್ಷದವರೆಗೆ ಸ್ತ್ರೀಸುಖವನ್ನೇ ಅನುಭವಿಸುತ್ತ ವನದಲ್ಲೇ ತಿರುಗಾಡುತಿದ್ದನು. ವಸುಗಳ ಅಂಶವಾಗಿ ಶಂತನುವಿಗೆ ಗಂಗೆಯಲ್ಲಿ ಹುಟ್ಟಿದ ಮಗನಾದ ದೇವವ್ರತನು ರೂಪದಲ್ಲಿಯೂ, ಆಚಾರದಲ್ಲಿಯೂ, ನಡೆವಳಿಕೆಯಲ್ಲಿಯೂ, ವಿದ್ಯಾಪರಿಣತೆಯಲ್ಲಿಯೂ ತಂದೆಗೆ ಸಮಾನನಾಗಿದ್ದನು. ಐಹಿಕ ಮತ್ತು ಆಮುತ್ರಿಕವಾದ ಸಕಲವಿದ್ಯೆಗಳಲ್ಲಿಯೂ ಆತನ ಜ್ಞಾನವು ಅಪಾರವಾದುದು. ಆತನ ಶಕ್ತಿಯೂ, ಪರಾಕ್ರಮವೂ ಅಸಮಾನವಾದುವು. ಮಹಾರಥನಾದ ದೇವವ್ರತನು ಸಕಲ ಶಸ್ತ್ರಾಸ್ತ್ರವಿದ್ಯೆಗಳಲ್ಲಿಯೂ ಪ್ರವೀಣನಾಗಿದ್ದನು.

ಶಂತನುವು, ಒಮ್ಮೆ ಬೇಟೆಯಲ್ಲಿ ಒಂದು ಜಿಂಕೆಯನ್ನು ತನ್ನ ಅಸ್ತ್ರಗಳಿಂದ ಹೊಡೆದು, ಅದಕ್ಕಾಗಿ ಗಂಗಾನದೀತೀರದಲ್ಲಿ ಹುಡುಕುತ್ತಿರಲು ಆತನು ಆ ನದಿಯ ನೀರು ತಗ್ಗಿರುವುದನ್ನು ಕಂಡನು. ಪುರುಷಸಿಂಹನಾದ ಆತನು ಇದನ್ನು ನೋಡಿ " ಈ ಮಹಾನದಿಯು ಈಗ ಹಿಂದಿನಂತೆ ಏಕೆ ಪ್ರವಹಿಸದಿರುವುದು ? " ಎಂದು ಚಿಂತಿಸಿದನು. ಅದಕ್ಕೆ ಕಾರಣವನ್ನು ಊಹಿಸುತ್ತ ಹೋಗುತ್ತಿರುವಾಗ, ಒಳ್ಳೇ ಮೈಕಟ್ಟೂ, ದೇಹಸೌಂದರ್ಯವೂ ಉಳ್ಳವನಾಗಿ, ದೇವೇಂದ್ರನಂತೆ ದಿವ್ಯಾಸ್ತ್ರಗಳನ್ನು ಪ್ರಯೋಗಿಸುತಿದ್ದ ಬಾಲಕನೊಬ್ಬನು, ತನ್ನ ಬಾಣಗಳಿಂದ ಗಂಗಾಪ್ರವಾಹಕ್ಕೆ ತಡೆಗಟ್ಟಿರುವುದನ್ನು ಕಂಡನು. ಆ ಬಾಲಕನ ಸಮೀಪದಲ್ಲಿ ಗಂಗಾನದಿಯು ಶರಪಂಜರದಿಂದ ಕಟ್ಟಲ್ಪಟ್ಟಿರುವುದನ್ನು ನೋಡಿದನು. ಮನುಷ್ಯರಿಗೆ ದುರ್ಲಭವಾದ ಈ ಶೌರ್ಯಕಾರ್ಯವನ್ನು ನೋಡಿ ರಾಜನು ಆಶ್ಚರ್ಯಗೊಂಡನು. ಶಂತನುವು ಹೆಚ್ಚು ತಿಳಿವಳಿಕೆಯುಳ್ಳವನಾದರೂ, ಹಿಂದೆ ಆ ಮಗನು ಹುಟ್ಟಿದಾಗ, ಒಂದು ಕ್ಷಣಮಾತ್ರವೇ ಆತನನ್ನು ನೋಡಿದ್ದುದರಿಂದ, ಅವನು ತನ್ನ ಮಗನೆಂದು ಗುರ್ತಿಸಲಾರದೆಹೋದನು. ದೇವಾಂಶದವನಾದ ಆ ಮಗನು ತನ್ನ ತಂದೆಯನ್ನು ಗುರ್ತಿಸಿದರೂ, ಮಾಯಾಶಕ್ತಿಯಿಂದ ತಂದೆಯನ್ನೂ ಭ್ರಮೆಗೆ ಒಳಗುಮಾಡಿ ತಾನು ಕಣ್ಮರೆಯಾದನು.

ಶಂತನುವು ಅಲ್ಲಿ ನಡೆದುದೆಲ್ಲವನ್ನೂ ನೋಡಿ ಆ ಬಾಲಕನು ತನ್ನ ಮಗನಾಗಿರಬೇಕೆಂದು ಊಹಿಸಿ, ಗಂಗೆಯನ್ನು ತನಗೆ ಪ್ರತ್ಯಕ್ಷವಾಗುವಂತೆ ಪ್ರಾರ್ಥಿಸಿದನು. ಗಂಗೆಯು ಉತ್ತಮವಾದ ರೂಪವನ್ನು ಧರಿಸಿ, ಅಲಂಕೃತನಾದ ತನ್ನ ಮಗನನ್ನೂ ಬಲಗೈಯಲ್ಲಿ ಹಿಡಿದುಕೊಂಡು ಬಂದು ಶಂತನುವಿಗೆ ತೋರಿಸಿದಳು. ಆಭರಣಗಳಿಂದ ಅಲಂಕೃತಳಾಗಿ, ಬಿಳಿಯ ಸೀರೆಯನ್ನುಟ್ಟುಕೊಂಡು ಬಂದ ಆ ಗಂಗಾದೇವಿಯನ್ನು ರಾಜನು ಹಿಂದೆ ನೋಡಿದ್ದರೂ, ಶಂತನುವು ಆಕೆಯ ಗುರುತುಹಿಡಿಯಲಾರದೆ ಹೋದನು. ಆಗ ಗಂಗಾದೇವಿಯು "ರಾಜಾ! ಹಿಂದೆ ನೀನು ನನ್ನಲ್ಲಿ ಪಡೆದ ಎಂಟನೆಯ ಮಗನೇ ಈ ಬಾಲಕನು. ಈತನಿಗೆ ಸಮಸ್ತ ಅಸ್ತ್ರಗಳೂ ತಿಳಿದಿವೆ. ಅಸ್ತ್ರದಲ್ಲಿ ಇವನನ್ನು ಮೀರಿಸಿದವರು ಯಾರೂ ಇಲ್ಲ ನಾನು ಬೆಳೆಸಿದ ಈ ಮಗನನ್ನು ಪರಿಗ್ರಹಿಸು. ಪುರುಷತಿಲಕಾ! ಈತನನ್ನು ನಿನ್ನ ಮನೆಗೆ ಕರೆದುಕೊಂಡು ಹೋಗು! ಈ ವೀರನು ವಸಿಷ್ಠನ ಬಳಿಯಲ್ಲಿ ವೇದವನ್ನೂ, ವೇದಾಂಗಗಳನ್ನೂ ಅಭ್ಯಾಸಮಾಡಿದನು. ಅಸ್ತ್ರವಿದ್ಯೆಯಲ್ಲಿ ನಿಪುಣನು. ಬಾಣವಿದ್ಯೆಯಲ್ಲಿ ಮೇಲಾದವನು. ಯುದ್ಧದಲ್ಲಿ ಇಂದ್ರನಿಗೆ ಸಮಾನನು. ದೇವತೆಗಳಿಂದಲೂ, ಅಸುರರಿಂದಲೂ ಯಾವಾಗಲೂ ಗೌರವಿಸಲ್ಪಡತಕ್ಕವನು. ಶುಕ್ರನಿಗೆ ತಿಳಿದಿರುವ ಸಕಲಶಾಸ್ತ್ರಗಳೂ ಈತನಿಗೆ ತಿಳಿದಿದೆ. ದೇವತೆಗಳಿಂದಲೂ, ಅಸುರರಿಂದಲೂ ಪೂಜಿಸಲ್ಪಡತಕ್ಕ ಅಂಗೀರಸಪುತ್ರನಾದ ಬೃಹಸ್ಪತಿಗೆ ತಿಳಿದಿರುವ ಸಕಲಶಾಸ್ತ್ರಗಳೂ ದೀರ್ಘಬಾಹುಗಳುಳ್ಳ ಈ ನಿನ್ನ ಮಗನಿಗೆ ಸಾಂಗೋಪಾಂಗವಾಗಿ ತಿಳಿದಿರುವುವು ಶತ್ರುದುರ್ಜಯನೂ, ಜಮದಗ್ನಿಪುತ್ರನೂ ಆದ ಪರಶುರಾಮನಿಗೆ ಯಾವಯಾವ ಅಸ್ತ್ರಗಳು ತಿಳಿದಿವೆಯೋ ಅವೆಲ್ಲವೂ ಈತನಿಗೆ ತಿಳಿದಿರುವುವು. ಧನುರ್ವಿದ್ಯೆಯಲ್ಲಿ ನಿಪುಣನೂ, ರಾಜಧರ್ಮದಲ್ಲಿಯೂ, ರಾಜನೀತಿಯಲ್ಲಿಯೂ ನಿಸ್ಸೀಮನೂ ಆದ ಈ ನಿನ್ನ ಮಗನನ್ನು ನಿನಗೆ ಒಪ್ಪಿಸಿರುವೆನು. ಈ ವೀರಬಾಲಕನನ್ನು ನೀನು ಮನೆಗೆ ಕರೆದುಕೊಂಡು ಹೋಗು" ಎಂದು ಹೇಳಿ ಅಲ್ಲಿಯೇ ಕಣ್ಮರೆಯಾದಳು. ಶಂತನುವು ಸೂರ್ಯನಂತೆ ಪ್ರಕಾಶಿಸುತ್ತಿರುವ ತನ್ನ ಮಗನನ್ನು ಕರೆದುಕೊಂಡು ರಾಜಧಾನಿಗೆ ಹೋದನು. ಪುರುವಂಶಸ್ಥನಾದ ಶಂತನುವು ದೇವೇಂದ್ರನಗರಕ್ಕೆ ಸಮಾನವಾದ ತನ್ನ ರಾಜಧಾನಿ

ಯನ್ನು ಸೇರಿ ತಾನೇ ಮಹಾಭಾಗ್ಯಶಾಲಿಯೆಂದು ಭಾವಿಸಿಕೊಂಡನು. ರಾಜ್ಯವನ್ನು ತನ್ನ ವಂಶದವರಲ್ಲಿಯೇ ನಿಲ್ಲಿಸಿಕೊಳ್ಳುವುದಕ್ಕಾಗಿ ಮಹಾತ್ಮನಾದ ತನ್ನ ಮಗನಿಗೆ ಯುವರಾಜಪಟ್ಟವನ್ನು ಕಟ್ಟಿದನು. ಆ ಶಂತನುವುತ್ರನು ತನ್ನ ನಡೆವಳಿಕೆಯಿಂದ ಪೂರುವಂಶದವರನ್ನೂ, ತನ್ನ ತಂದೆಯನ್ನೂ, ದೇಶದ ಪ್ರಜೆಗಳೆಲ್ಲರನ್ನೂ ಸಂತೋಷಪಡಿಸಿದನು. ಅತ್ಯಂತ ಪರಾಕ್ರಮಿಯಾದ ಆ ಶಂತನುವು ತನ್ನ ಮಗನೊಡನೆ ನಾಲ್ಕುವರ್ಷಕಾಲವನ್ನು ಸಂತೋಷದಿಂದ ಕಳೆದನು. ಆ ರಾಜನು ಒಮ್ಮೆ ಯಮುನಾನದೀತೀರದಲ್ಲಿರುವ ಕಾಡಿಗೆ ಹೋಗಿ ಅಲ್ಲಿ ಸಂಚರಿಸುತಿದ್ದನು. ಆಗ ಯಾವುದೋ ಒಂದು ಕಡೆಯಿಂದ ಉತ್ತಮವಾದ ಪರಿಮಳವೊಂದು ಬರುತ್ತಿದ್ದಿತು. ರಾಜನು ಅದರ ಕಾರಣವನ್ನು ತಿಳಿಯುವ ಉದ್ದೇಶದಿಂದ ಆ ವಾಸನೆಯು ಬರುವ ಪ್ರದೇಶವನ್ನೇ ಹುಡುಕಿಕೊಂಡು ಪೋದನು. ಹಾಗೆ ಸುತ್ತುತ್ತಿರುವಾಗ ದೇವಕನ್ಯೆಯಂತೆ ಬಹಳ ಸುಂದರಿಯೂ, ಕಪ್ಪಾದ ಕಣ್ಣುಳ್ಳವಳೂ ಆದ ಬೆಸ್ತರ ಹುಡುಗಿಯೊಬ್ಬಳನ್ನು ಕಂಡನು. ಆಕೆಯನ್ನು ನೋಡಿ ರಾಜನು "ನೀನು ಯಾರು? ಯಾರ ಮಗಳು? ಮಾನಿನೀ! ನೀನು ಇಲ್ಲಿ ಏನುಮಾಡುತ್ತಿರುವೆ?" ಎಂದು ಕೇಳಿದನು. ಅದಕ್ಕೆ ಆಕೆಯು "ರಾಜಾ! ನಿನಗೆ ಶುಭವಾಗಲಿ! ನಾನು ಇಲ್ಲಿನ ದಾಶರಾಜನ ಮಗಳು. ನನ್ನ ತಂದೆಯ ಅಪ್ಪಣೆಯಂತೆ ನಾನು ದೋಣಿಯಲ್ಲಿ ಪ್ರಯಾಣಿಕರನ್ನು ದಾಟಿಸುತ್ತಿರುವೆನು" ಎಂದಳು. ಅತ್ಯಂತ ಸೌಂದರ್ಯದಿಂದಲೂ, ಇಂಪಾದ ನುಡಿಗಳಿಂದಲೂ, ಸುಗಂಧದಿಂದಲೂ ಕೂಡಿ ದೇವಕನ್ಯೆಗೆ ಸಮಾನಳಾದ ಆಕೆಯನ್ನು ನೋಡಿ ಮೋಹಗೊಂಡು, ಅವಳ ತಂದೆಯ ಬಳಿಗೆಹೋಗಿ ಆಕೆಯನ್ನು ತನಗೆ ವಿವಾಹಮಾಡಿಕೊಡುವಂತೆ ಬೇಡಿದನು. ಬೆಸ್ತನು ರಾಜನೊಡನೆ "ರಾಜಾ! ಹೆಣ್ಣಾಗಿ ಹುಟ್ಟಿರುವುದರಿಂದ, ಸುಂದರಿಯಾದ ಆಕೆಯನ್ನು ಒಬ್ಬ ವರನಿಗೆ ವಿವಾಹಮಾಡಿಕೊಡಲೇ ಬೇಕು! ಆದರೆ ನನ್ನ ಮನಸ್ಸಿನಲ್ಲಿರುವ ಒಂದು ಕೋರಿಕೆಯನ್ನು ತಿಳಿಸುವೆನು ಕೇಳು. ನೀನು ಸತ್ಯಸಂಧನು. ನಿನಗೆ ನನ್ನ ಮಗಳನ್ನು ಪಡೆಯಬೇಕೆಂಬ ಅಭಿಲಾಷೆಯಿದ್ದರೆ ನನ್ನ ಒಡಂಬಡಿಕೆಗೆ ಒಪ್ಪಬೇಕು. ನೀನು ನನ್ನ ಒಪ್ಪಂದಕ್ಕೆ ತಪ್ಪುವುದಿಲ್ಲವೆಂದು ಪ್ರತಿಜ್ಞೆಮಾಡಿದರೆ, ನನ್ನ ಮಗಳನ್ನು ನಿನಗೇ ವಿವಾಹಮಾಡಿ

ಕೊಡುವೆನು. ನನಗೆ ನಿನ್ನಂತಹ ವರನು ಸಿಕ್ಕುವುದು ದುರ್ಲಭವೇ" ಎಂದನು. ಆಗ ರಾಜನು "ನೀನು ಮಾಡುವ ಒಪ್ಪಂದವು ಇಂಥದೆಂದು ತಿಳಿದಮೇಲೆ, ಅದನ್ನು ನೆರವೇರಿಸುವುದೋ ಇಲ್ಲವೋ ನಿಶ್ಚಯಿಸಿಕೊಳ್ಳುವೆನು. ನೆರವೇರಿಸುವಂತದಾದರೆ ನಡೆಸುವೆನು. ನೆರವೇರಿಸಕೂಡದುದಾದರೆ ನಾನು ಅದನ್ನು ಹೇಗೆ ನೆರವೇರಿಸಲಿ?" ಎಂದನು. ಆಗ ಬೆಸ್ತನು "ಪ್ರಭೂ! ನಾನು ಕೇಳುವುದಿಷ್ಟೇ! ಈಕೆಗೆ ಹುಟ್ಟಿದ ಮಗನಿಗೇ ನೀನು ನಿನ್ನ ರಾಜ್ಯದಲ್ಲಿ ಪಟ್ಟಗಟ್ಟಬೇಕು. ಬೇರೆ ಯಾರನ್ನೂ ಪಟ್ಟಾಭಿಷಿಕ್ತರನ್ನಾಗಿ ಮಾಡಕೂಡದು" ಎಂದನು. ಜನಮೇಜಯರಾಜಾ! ಇದನ್ನು ಕೇಳಿದ ಶಂತನುವಿಗೆ ಮನ್ಮಥತಾಪವು ಮಿತಿಮೀರುತಿದ್ದರೂ, ಆ ಒಡಂಬಡಿಕೆಗೆ ಒಪ್ಪಲು ಮನಸ್ಸು ಬರಲಿಲ್ಲ. ಆತನು ಆ ಬೆಸ್ತರ ಹುಡುಗಿಯನ್ನೇ ನೆನೆಸಿಕೊಳ್ಳುತ್ತ ಕಾಮತಾಪದಿಂದ ಹಸ್ತಿನಾವತಿಗೆ ಹಿಂತಿರುಗಿದನು. ಪುರಕ್ಕೆ ಬಂದಮೇಲೆಯೂ ಶಂತನುವು ಆ ಬೆಸ್ತರಹುಡುಗಿಯನ್ನೇ ನೆನೆಸಿಕೊಂಡು ದುಃಖಪಡುತ್ತಲೇ ಇದ್ದನು. ಆಗ ಆತನ ಮಗನಾದ ದೇವವ್ರತನು ಸಮೀಪಕ್ಕೆ ಹೋಗಿ "ಅಪ್ಪಾ! ಎಲ್ಲವೂ ಸುಖವಾಗಿರುವುದು. ಸಮಸ್ತರಾಜರೂ ನಿನಗೆ ಅಧೀನರಾಗಿರುವರು. ಹೀಗಿರುವಲ್ಲಿ ನೀನು ಈಗ ಈ ರೀತಿಯಾಗಿ ದುಃಖಪಡುತ್ತಾ ಕಣ್ಣೀರುಬಿಡುತ್ತಿರುವೆಯೇಕೆ? ಚಿಂತಾಕುಲನಾಗಿ ಏಕೆ ಪ್ರತ್ಯುತ್ತರವನ್ನು ಕೊಡದಿರುವೆ? ಎಂದಿನಂತೆ ಅಶ್ವಾರೂಢನಾಗಿ ಹೊರಗೆ ಹೊರಡುವುದೂ ಇಲ್ಲ. ನೀನು ಬಣ್ಣಗೆಟ್ಟು ಕೃಶನಾಗಿಯೂ, ಬಲಹೀನನಾಗಿಯೂ ಇರುವೆ. ನೀನು ಬಾಧೆಪಡುತ್ತಿರುವ ವ್ಯಾಧಿಯಾವುದೋ ತಿಳಿಯಲಪೇಕ್ಷಿಸುವೆನು. ತಿಳಿದಮೇಲೆ ಅದಕ್ಕೆ ಚಿಕಿತ್ಸೆಮಾಡುವೆನು" ಎಂದನು. ಶಂತನುವು ಬಹಳಹೊತ್ತಿನವರೆಗೆ ತನಗೆ ಆ ಬೆಸ್ತರಹುಡುಗಿಯಲ್ಲಿರುವ ಮೋಹವನ್ನು ಮಗನಿಗೆ ತಿಳಿಸಲಾರದೆ ದುಃಖದಿಂದಿದ್ದನು. ತನ್ನ ಮಗನು ತನ್ನನ್ನು ನಿರ್ಬಂಧಿಸಿದಮೇಲೆ ಕೊನೆಗೆ "ಕುಮಾರಾ! ನೀನು ಹೇಳಿದಂತೆ ನಾನು ಚಿಂತಾಕುಲನಾಗಿರುವುದು ನಿಜವೇ. ಅದರ ಕಾರಣವನ್ನು ತಿಳಿಸುವೆನು ಕೇಳು. ನಮ್ಮ ದೊಡ್ಡ ವಂಶಕ್ಕೆ ನೀನೊಬ್ಬ ಮಗನುಮಾತ್ರವೇ ಇರುವೆ. ನೀನೂ ಯಾವಾಗಲೂ ಅಸ್ತ್ರಾಭ್ಯಾಸದಲ್ಲಿಯೂ, ಶೌರ್ಯದಲ್ಲಿಯೂ ಆಸಕ್ತನಾಗಿರುವೆ. ಮನುಷ್ಯಜನ್ಮವು ಅನಿತ್ಯವೆಂಬು

ದಕ್ಕಾಗಿ ನಾನು ವ್ಯಸನಪಡುತ್ತಿರುವೆನು. ಗಂಗಾಪುತ್ರಾ! ಯಾವ ವಿಧದಲ್ಲಿಯಾದರೂ ನಿನಗೆ ಅಪಾಯವು ಸಂಭವಿಸಿದರೆ ನಮ್ಮ ವಂಶವೇ ನಿಂತುಹೋಗುವುದು. ನನಗೆ ನೀನೊಬ್ಬನೇ ನೂರುಮಂದಿ ಪುತ್ರರಿಗಿಂತಲೂ ಅಧಿಕನೆಂಬುದರಲ್ಲಿ ಯಾವಸಂದೇಹವೂ ಇಲ್ಲ. ನಾನು ಮತ್ತೊಂದು ವಿವಾಹವನ್ನು ಮಾಡಿಕೊಳ್ಳುವುದಕ್ಕೂ ಇಷ್ಟಪಡಲಿಲ್ಲ. ಸಂತತಿಯು ನಷ್ಟವಾಗದಿರುವುದಕ್ಕಾಗಿಮಾತ್ರ ಆಶೆಪಡುತ್ತಿರುವೆನು. ನಿನಗೆ ಶುಭವಾಗಲಿ! ಧರ್ಮಶಾಸ್ತ್ರವನ್ನು ಉಪದೇಶಿಸುವವರು, ಒಬ್ಬನೇ ಮಗನಿರುವುದೂ, ಮಕ್ಕಳಿಲ್ಲದಿರುವುದೂ ಸಮಾನವೆಂದು ಹೇಳುವರು. ಒಂದು ಕಣ್ಣಿರುವುದೂ, ವಂಶಕ್ಕೆ ಒಬ್ಬನೇ ಮಗನಿರುವುದೂ ಇಲ್ಲದಿರುವುದಕ್ಕೇ ಸಮಾನವು ಕಣ್ಣುಹೋದರೆ ಶರೀರಕ್ಕೆ ಹಾನಿ! ಪುತ್ರನಿಲ್ಲದಿದ್ದರೆ ಕುಲಕ್ಕೆ ಹಾನಿ! ಅಗ್ನಿಹೋತ್ರ, ವೇದಾಧ್ಯಯನ, ಭೂರಿದಕ್ಷಿಣೆಗಳುಳ್ಳ ಯಾಗಗಳು, ಇವೆಲ್ಲವೂ ಶಾಶ್ವತವಾದ ಪುಣ್ಯವನ್ನು ತರುವುವಾದರೂ, ಇವೆಲ್ಲವೂ ಪುತ್ರನನ್ನು ಪಡೆದ ಪುಣ್ಯದ ಹದಿನಾರರಲ್ಲಿ ಒಂದು ಭಾಗಕ್ಕೂ ಸಮಾನವಾಗಲಾರವು. ಎಲ್ಲಾ ಪ್ರಾಣಿಗಳಿಗೂ ಸಂತತಿಯೇ ಸಮಸ್ತಭಾಗ್ಯವೆಂಬುದರಲ್ಲಿ ಸಂದೇಹವಿಲ್ಲ. ಲೋಕದಲ್ಲಿ ಪುತ್ರಸಂತಾನದಿಂದಲೇ ಒಬ್ಬನು ತನ್ನ ಪಿತೃ ಋಣವನ್ನು ತೀರಿಸುವನೆಂಬುದು ನಿಶ್ಚಯವು. ಪುರಾಣಗಳಿಗೆಲ್ಲ ಮೂಲವಾಗಿ, ದೇವತೆಗಳಿಂದಲೂ ಸಕಲವಿಷಯಗಳಿಗೂ ಆಧಾರವೆಂದು ಭಾವಿಸಲ್ಪಟ್ಟಿರುವ ವೇದದಲ್ಲಿಯೂ ಇದಕ್ಕೆ ಹಲವು ಉದಾಹರಣೆಗಳುಂಟು. ಪುತ್ರರು, ಸತ್ಕರ್ಮಗಳು, ಜ್ಞಾನ, ಎಂಬಿವು ಮೂರೂ ದಿವ್ಯಜ್ಯೋತಿಗಳು. ಪುತ್ರನಾದ ನೀನಾದರೋ ಶೂರನು. ಯಾವಾಗಲೂ ಅಪಮಾನವನ್ನು ಸಹಿಸಲಾರದವನು. ಶಸ್ತ್ರಾಭ್ಯಾಸವನ್ನು ಬಿಡತಕ್ಕವನಲ್ಲ. ಆದುದರಿಂದ ಯುದ್ಧದಲ್ಲಿಹೊರತು ನಿನಗೆ ಮತ್ತೆಲ್ಲಿಯೂ ಅಪಾಯವಿಲ್ಲ. ನಿನಗೆ ಅಪಾಯವು ಸಂಭವಿಸಿದರೆ ಭರತವಂಶವು ಏನಾಗುವುದೋ ಎಂಬ ಸಂದೇಹದಿಂದ ತಪಿಸುವೆನು. ಈ ಯೋಚನೆಯೇ ನನ್ನ ದುಃಖಕ್ಕೆ ಕಾರಣವು. ಈಗ ನಿನಗೆ ನಾನು ನನ್ನ ದುಃಖಕಾರಣವನ್ನು ವಿವರಿಸಿರುವೆನು" ಎಂದನು.

ದೇವವ್ರತನು ಸ್ವಲ್ಪಹೊತ್ತು ತನ್ನ ಮನಸ್ಸಿನಲ್ಲಿಯೇ ಆಲೋಚಿಸಿದನು. ಸಂತಾನಾಭಿವೃದ್ಧಿಯ ವ್ಯಾಜವನ್ನು ಹಿಡಿದು ತನ್ನ ತಂದೆಯು

ಹೇಳಿದ ಮಾತನ್ನು ಕೇಳಿ ದುಃಖದಿಂದ ತನ್ನ ತಂದೆಯ ಸಾರಥಿಯನ್ನು ಕರೆಸಿ "ಸಾರಥೀ! ನೀನು ರಾಜನಿಗೆ ರಥದಮುಂದಿರುವ ನಿತ್ಯಸ್ನೇಹಿತನಾಗಿರುವೆ. ರಾಜನ ಕೋರಿಕೆಯು ಯಾವಳೋ ಒಬ್ಬ ಕನ್ಯೆಯಲ್ಲಿರುವುದು? ನಿನಗೆ ತಿಳಿದಿದ್ದರೆ ಅದನ್ನು ನನಗೆ ತಿಳಿಸು. ನಾನು ಅವಳನ್ನು ತಂದು ಮದುವೆ ಮಾಡುವೆನು" ಎಂದನು.

ಆಗ ಸಾರಥಿಯು "ಕುರುಶ್ರೇಷ್ಠಾ! ಒಬ್ಬ ಬೆಸ್ತರ ಕನ್ಯೆಯಿರುವಳು. ನಿನ್ನ ತಂದೆಯ ಪ್ರೇಮವು ಆಕೆಯಲ್ಲಿರುವುದು. ರಾಜನು ಆ ಕನ್ನಿಕೆಯನ್ನು ಕೇಳಲು, ಬೆಸ್ತನು "ಈಕೆಗೆ ಹುಟ್ಟುವ ಮಗನೇ ನಿನ್ನ ಕಾಲಾನಂತರದಲ್ಲಿ ರಾಜನಾಗಬೇಕು" ಎಂದು ಹೇಳಿದನು. ಆಗ ನಿನ್ನ ತಂದೆಯು ಆತನ ಕೋರಿಕೆಯನ್ನು ನೆರವೇರಿಸಲಾರದೆ ಬಂದನು. ಆ ಒಡಂಬಡಿಕೆಗೆ ಒಪ್ಪಿದಹೊರತು ಆ ಕನ್ಯೆಯನ್ನು ಕೊಡುವುದಿಲ್ಲವೆಂಬುದು ಆ ಬೆಸ್ತನ ನಿಬಂಧನೆ!" ಎಂದನು. ಭೀಷ್ಮನು ತಂದೆಯ ಮನೋಭಾವವನ್ನು ಊಹಿಸಿ ತಿಳಿದು ಯಮುನೆಗೆ ಹೋದನು. ಭೀಷ್ಮನು ಧರ್ಮಿಷ್ಠರಾದ ಕ್ಷತ್ರಿಯವೀರರೊಡನೆ ಆ ಬೆಸ್ತನ ಬಳಿಗೆ ಹೋಗಿ, ತನ್ನ ತಂದೆಗೆ ಆ ಕನ್ಯೆಯನ್ನು ವಿವಾಹಮಾಡಿಕೊಡುವಂತೆ ಕೇಳಿದನು. ಬೆಸ್ತನು ಆತನನ್ನು ಸತ್ಕರಿಸಿ ಆತನನ್ನು ಕುರಿತು "ಭರತಸಿಹ್ಮಾ! ಈ ಕನ್ಯಕೆಗೆ ನಿಮ್ಮ ರಾಜ್ಯವೇ ಶುಲ್ಕವು. (ರಾಜ್ಯವೇ ಇವಳಿಗೆ ಬೆಲೆ) ಈಕೆಯಲ್ಲಿ ಹುಟ್ಟುವ ಮಗನೇ ನಿನ್ನ ತಂದೆಯ ಕಾಲಾನಂತರದಲ್ಲಿ ರಾಜನಾಗಬೇಕು. ಅಸ್ತ್ರವಿದ್ಯೆಯಲ್ಲಿ ನಿಪುಣನಾದ ನೀನೇ ಈಗ ಶಂತನುವಿನ ವಂಶವೃದ್ಧಿಗೆ ಏಕಪುತ್ರನಾಗಿರುವೆ. ನಿನಗೆ ನಾನೇನು ಹೇಳಬಲ್ಲೆನು? ಕನ್ಯೆಗೆ ಕೊಡಬೇಕಾದ ಶುಲ್ಕದವಿಷಯದಲ್ಲಿ ಒಂದು ಮಾತನ್ನು ಕೇಳುವೆನು. ಎಲ್ಲರ ಸ್ತುತಿಗೂ ಪಾತ್ರವಾಗಿ, ಎಲ್ಲರಿಂದ ಕೋರಲ್ಪಡತಕ್ಕ ಇಂತಹ ವಿವಾಹಸಂಬಂಧವನ್ನು ಬಿಟ್ಟರೆ ದೇವೇಂದ್ರನಾದರೂ ಪರಿತಪಿಸುವನು. ಈ ಸತ್ಯವತಿಯ ಜನನಕ್ಕೆ ಕಾರಣನಾದ ಉಪರಿಚರವಸುವೋ ಗುಣದಲ್ಲಿ ನಿನಗೆ ಸಮಾನನು. ಈ ಮಹಾಮಹಿಮಳಾದ ಸತ್ಯವತಿಯು ಯಾರ ವೀರ್ಯಕ್ಕೆ ಹುಟ್ಟಿದಳೋ, ಆ ಉಪರಿಚರವಸುವೇ ನಿನ್ನ ತಂದೆಯನ್ನು ನಿರ್ದೇಶಿಸಿ,

ಅನೇಕಾವರ್ತಿ ನನ್ನೊಡನೆ “ಧರ್ಮಜ್ಞನಾದ ಆ ರಾಜನೇ ಸತ್ಯವತಿಯನ್ನು ವಿವಾಹಮಾಡಿಕೊಳ್ಳತಕ್ಕವನು” ಎಂದು ಹೇಳಿರುವನು. ಸತ್ಯವತಿಯೆಂಬ ಈ ಕನ್ಯೆಯೂ ನಿನ್ನ ತಂದೆಯಲ್ಲಿ ರಾಜ್ಯಾಪೇಕ್ಷೆಯನ್ನೇ ತಿಳಿಸಿದಳು. (ಸತ್ಯವತಿಯನ್ನು ಮದುವೆಮಾಡಿಕೊಡೆಂದು ಅಡಿಗಡಿಗೆ ನನ್ನನ್ನು ಬೇಡುತಿದ್ದ ಬ್ರಹ್ಮಋಷಿಶ್ರೇಷ್ಠನಾದ ಅಸಿತಋಷಿಯ ಪ್ರಾರ್ಥನೆಗಳನ್ನೂ ನಾನು ನಿರಾಕರಿಸಿರುವೆನು) ಆಕೆಯು ಕೋರಿದುದರಿಂದಲೇ ರಾಜಋಷಿಯಾದ ನಿನ್ನ ತಂದೆಯನ್ನು ನಾನು ಹಿಂದೆ ನಿರಾಕರಿಸಿದೆನು. ಆದರೂ ನಾನು ಕನ್ಯಾಪಿತನಾಗಿರುವುದರಿಂದ, ನಿನ್ನೊಡನೆ ಒಂದು ಮಾತನ್ನು ಹೇಳುವೆನು. ಮೊದಲನೇ ಹೆಂಡತಿಯ ಹೊಟ್ಟೆಯಲ್ಲಿ ಹುಟ್ಟಿದ ಮಗನೇ ಈಗ ಈ ವಿವಾಹಕ್ಕಿರುವ ವಿಘ್ನವು. ಅವನೇ ಈಗ ನಮ್ಮ ಕಾರ್ಯಕ್ಕೆ ಶತ್ರುಪ್ರಾಯನು. ಅಂತವನಾರು? ನೀನೇ ಅಲ್ಲದೆ ಬೇರೆಯಲ್ಲ. ಆದರಿಂದ ನಿನ್ನಿಂದಲೇ ಇದಕ್ಕೆ ಅಡ್ಡಿಯಾಗಿದೆ. ನೀನು ಕೋಪಿಸಿ ಪ್ರತಿಭಟಿಸಿದರೆ, ಆತನು ಗಂಧರ್ವನಾಗಿರಲಿ, ಅಸುರನಾಗಿರಲಿ, ಬಹಳಕಾಲ ಜೀವಿಸಿರಲಾರನು. ಈ ವಿವಾಹಕ್ಕಿರುವ ತಡೆಯು ಇದೊಂದಃಹೊರತು ಬೇರೇನೂ ಇಲ್ಲ. ವಿವಾಹಮಾಡಿಕೊಡಬೇಕಾದ ಕನ್ಯೆಯನ್ನು ನಿಮಗೆ ಕೊಡದಿರಲು ಇದೇ ಕಾರಣವೆಂದು ತಿಳಿ. ನಿನಗೆ ಸುಖವಾಗಲಿ” ಎಂದನು. ಆತನು ಹೀಗೆ ಹೇಳಲು ಭೀಷ್ಮನು ತನ್ನೊಡನೆ ಇದ್ದ ರಾಜರೆಲ್ಲರೂ ಕೇಳುವಂತೆ, ತಂದೆಯ ಪ್ರಯೋಜನಕ್ಕಾಗಿ ಆ ದಾಶರಾಜನಿಗೆ ಈ ರೀತಿಯಾಗಿ ಪ್ರತ್ಯುತ್ತರವನ್ನು ಕೊಟ್ಟನು. “ನನ್ನ ಈ ಪ್ರತಿಜ್ಞೆಯನ್ನು ಕೇಳಿರಿ. ಈಗ ನನ್ನಂತೆ ಪ್ರತಿಜ್ಞೆಮಾಡಲು ಧೈರ್ಯವುಳ್ಳ ಮನುಷ್ಯನು ಹುಟ್ಟಿಯೂ ಇಲ್ಲ! ಹುಟ್ಟುವುದೂ ಇಲ್ಲ. ನೀನು ಕೇಳಿದಂತೆಯೇ ಆಚರಿಸುವೆನು. ಈ ಬಾಲಿಕೆಗೆ ಹುಟ್ಟುವ ಮಗನೇ ನನಗೂ ರಾಜನಾಗುವನು” ಎಂದನು. ಈ ಮಾತನ್ನು ಕೇಳಿ ಆ ಬೆಸ್ತನು ತಿರುಗಿ ಆತನನ್ನು ನೋಡಿ “ಭರತಕುಲತಿಲಕಾ! ರಾಜ್ಯವಿಷಯದಲ್ಲಿ ಯಾರೂ ಮಾಡಿಲ್ಲದ ಕಾರ್ಯವನ್ನು ನೀನು ಮಾಡಲುದ್ದೇಶಿಸಿರುವೆ! ನೀನೇ ಶಂತನುವಿಗೆ ನಾಥನಾಗಿ ಬಂದಿರುವೆ. ಧರ್ಮಾತ್ಮಾ! ಈ ಕನ್ಯಕೆಗೂ ನೀನೇ ಪ್ರಭುವು. ಈಕೆಯನ್ನು ಮದುವೆಮಾಡಿಕೊಡುವುದಕ್ಕೂ ನೀನೇ ಹೊಣೆಗಾರನು. ಆದರೆ ತಿಳಿಸಬೇಕಾದ ವಿಷಯವು ಮತ್ತೊಂದುಂಟು. ಕನ್ಯೆ

ಯ ಕಡೆಗೆ ಸೇರಿದವರ ನ್ಯಾಯಕ್ಕನುಸಾರವಾಗಿ ನಾನೊಂದು ಮಾತನ್ನಾಡು ವೆನು. 'ನೀನೋ ಸತ್ಯಧರ್ಮಪರಾಯಣನು. ನೀನು ಸತ್ಯವತಿಗಾಗಿ ಅಷ್ಟು ರಾಜರ ಮುಂದೆ ಮಾಡಿದ ಪ್ರತಿಜ್ಞೆಯು ನಿನಗೆ ಯೋಗ್ಯವಾದುದೇ. ಅದಕ್ಕೆ ನೀನು ತಪ್ಪಿನಡೆಯುವೆಯೆಂಬ ಸಂಶಯವು ನನಗೆ ಸ್ವಲ್ಪವಾದರೂ ಇಲ್ಲ. ಆದರೂ ನಿನಗಾಗುವ ಸಂತಾನವನ್ನು ಕುರಿತು ನನಗೆ ದೊಡ್ಡ ಸಂದೇಹವುಂಟಾಗಿದೆ" ಎಂದನು. ಆತನ ಅಭಿಪ್ರಾಯವನ್ನು ತಿಳಿದು ಭೀಷ್ಮನು, ಸತ್ಯಧರ್ಮಪರಾಯಣನಾದುದರಿಂದ, ತನ್ನ ತಂದೆಯ ಅಪೇಕ್ಷೆ ಯನ್ನು ನೆರವೇರಿಸುವಂತೆ ಪ್ರತಿಜ್ಞೆಮಾಡಿ 'ಉಚ್ಚೈಶ್ರವಾ! ಈ ರಾಜರ ಸಭೆಯಲ್ಲಿ ನಾನು ಮಾಡುವ ಪ್ರತಿಜ್ಞೆಯನ್ನು ಕೇಳು. ಇಲ್ಲಿರುವ ಋಷಿಗ ಳೂ, ದೇವತೆಗಳೂ, ಕಣ್ಣಿಗೆ ಗೋಚರವಾಗದಿರುವ ಸಮಸ್ತ ಭೂತಗಳೂ ಕೇಳಲಿ. "ರಾಜಶ್ರೇಷ್ಠ! ರಾಜ್ಯವೆಲ್ಲವನ್ನೂ ಹಿಂದೆಯೇ ನಾನು ಬಿಟ್ಟಿ ರುವೆನಷ್ಟೆ! ಸಂತತಿಯ ವಿಷಯದಲ್ಲಿಯೂ ಈಗ ಪ್ರತಿಜ್ಞೆಮಾಡುವೆನು. ಇಂದು ಮೊದಲು ನಾನು ಬ್ರಹ್ಮಚರ್ಯವ್ರತವನ್ನೇ ಅವಲಂಬಿಸುವೆನು. ನನಗೆ ಮಕ್ಕಳಿಲ್ಲದಿದ್ದರೂ, ಶಾಶ್ವತವಾದ ಸ್ವರ್ಗಲೋಕವನ್ನು ಸೇರಬಲ್ಲೆನು. ನಾನು ಈ ಲೋಕದಲ್ಲಿ ಹುಟ್ಟಿದಂದಿನಿಂದ ಒಂದು ಸುಳ್ಳುಮಾತನ್ನೂ ಆಡಿ ದವನಲ್ಲ. ನನಗೆ ಈ ದೇಹದಲ್ಲಿ ಪ್ರಾಣವಿರುವವರೆಗೂ ಮಕ್ಕಳನ್ನು ಪಡೆ ಯುವುದಿಲ್ಲ. ನಿನ್ನ ಮಗಳನ್ನು ನನ್ನ ತಂದೆಗೆ ಕೊಡು. ನಾನು ರಾಜ್ಯ ವನ್ನೂ, ಸ್ತ್ರೀಭೋಗವನ್ನೂ ಪೂರ್ಣವಾಗಿ ಬಿಟ್ಟಿರುವೆನು. ಇದು ಸತ್ಯವು" ಎಂದನು. ಭೀಷ್ಮನ ಪ್ರತಿಜ್ಞೆಯನ್ನು ಕೇಳಿದಮೇಲೆ ಆ ದಾಶರಾಜನಿಗೆ ಸಂತೋಷದಿಂದ ಮೈ ನೆಟ್ಟಗೆ ನಿಲ್ಲಲು 'ನನ್ನ ಮಗಳನ್ನು ಕೊಡುವೆನು' ಎಂದನು. ಒಡನೆಯೇ ಆಕಾಶದಲ್ಲಿ ಅಪ್ಸರಸ್ಸುಗಳ, ದೇವತೆಗಳ, ಮತ್ತು ಋಷಿಗಳ ಸಮೂಹವೆಲ್ಲ ದೇವವ್ರತನಮೇಲೆ ಪುಷ್ಪವರ್ಷವನ್ನು ಸುರಿಸಿ "ಈತನು ಭೀಷ್ಮನು (ವೈರಿಭಯಂಕರನು)" ಎಂದರು. ಆಮೇಲೆ ಭೀಷ್ಮನು, ತನ್ನ ತಂದೆಗಾಗಿ ಆ ಸತ್ಯವತಿಯನ್ನು ನೋಡಿ "ಅಮ್ಮಾ! ರಥವನ್ನೇರು. ನಮ್ಮ ಮನೆಗೆ ಹೋಗುವೆವು" ಎಂದನು. ಹೀಗೆ ಭೀಷ್ಮ ನು ಆ ನಾರೀಮಣಿಯನ್ನು ತನ್ನ ರಥದಮೇಲೆ ಕುಳ್ಳಿರಿಸಿಕೊಂಡು ಹಸ್ತಿನಾ ವತಿಗೆ ಬಂದು, ಆ ವಿಷಯವನ್ನು ಶಂತನುವಿಗೆ ತಿಳಿಸಿದನು. ಅಸಾಧ್ಯ

ವಾದೀಕಾರ್ಯವನ್ನು ನೆರವೇರಿಸಿದ ರಾಜಕುಮಾರನನ್ನು ನೋಡಿ ಆ ರಾಜ ರೆಲ್ಲರೂ ಒಟ್ಟಿಗೂ, ಬೇರೆಬೇರೆಯಾಗಿಯೂ ಆತನನ್ನು ಕೊಂಡಾಡಿ "ಈ ತನು ಭೀಷ್ಮನೇ" ಎಂದು ಶ್ಲಾಘಿಸುತಿದ್ದರು. ಜನಮೇಜಯರಾಜಾ! ಭೀಷ್ಮನು ಈ ಅಸಾಧ್ಯಕಾರ್ಯವನ್ನು ಸಾಧನೆಮಾಡಿಕೊಂಡುಬಂದುದನ್ನು ನೋಡಿ ಶಂತನುಮಹಾರಾಜನು ಹಲವು ದಿನಗಳವರೆಗೆ ಸುಖದಿಂದಿದ್ದನು. ಆಮೇಲೆ ಸಂಪ್ರೀತನಾಗಿ, ಆ ಮಹಾತ್ಮನಿಗೆ ತಾನಾಗಿ ಕೋರಿದಾಗ ಮರಣವುಂಟಾಗುವಂತೆ ವರವನ್ನು ಕೊಟ್ಟು ನೀನು ಬದುಕಿರಬೇಕೆಂದು ಅಪೇಕ್ಷಿಸುವವರೆಗೂ ಮೃತ್ಯುವು ನಿನ್ನ ಪ್ರಾಣವನ್ನು ಸೆಳೆದುಕೊಂಡುಹೋಗಲು ಶಕ್ತನಾಗುವುದಿಲ್ಲ. ನಿನ್ನ ಅನುಮತಿಯನ್ನು ಹೊಂದಿದಮೇಲೆಯೇ ಮೃತ್ಯುವು ನಿನ್ನ ಪ್ರಾಣವನ್ನು ಸೆಳೆಯಲು ಶಕ್ತನಾಗುವನು" ಎಂದನು.

ಇದು ನೂರ ಏಳನೆಯ ಅಧ್ಯಾಯವು.

---

ಶಂತನುವು ಸತ್ಯವತಿಯನ್ನು ಮದುವೆಯಾದುದು. ಚಿತ್ರಾಂಗದ ವಿಚಿತ್ರವೀರ್ಯರ ಉತ್ಪತ್ತಿ. ಶಂತನುವಿನ ಮತ್ತು ಚಿತ್ರಾಂಗದನ ಮರಣವಾದಮೇಲೆ ವಿಚಿತ್ರವೀರ್ಯನಿಗೆ ಪಟ್ಟಾಭಿಷೇಕವು.

ಆ ಸತ್ಯವತಿಯು ಚೇದಿರಾಜನಾದ ಉಪಚರಿವಸುವಿನ ಮಗಳಾಗಿ ಜನಿಸಿ, ಬೆಸ್ತನ ಮನೆಯಲ್ಲಿ ಬೆಳೆದವಳೆಂದು ತಿಳಿದಮೇಲೆ, ಶಾಸ್ತ್ರೋಕ್ತವಾಗಿಯೇ ಆ ರಾಜನು ವಿವಾಹಮಾಡಿಕೊಂಡನು. ರೂಪಸಂಪನ್ನೆಯಾದ ಆ ಸುಂದರೀಮಣಿಯನ್ನು ತನ್ನ ಅಂತಃಪುರದಲ್ಲಿಟ್ಟನು. ಶಂತನುವಿಗೆ ಆ ಸತ್ಯವತಿಯಲ್ಲಿ ಮಹಾಬುದ್ಧಿಶಾಲಿಯೂ, ಪುರುಷಶ್ರೇಷ್ಠನೂ, ವೀರನೂ ಆದ ಚಿತ್ರಾಂಗದನೆಂಬ ಮಗನು ಹುಟ್ಟಿದನು. ಕೆಲವು ಕಾಲಾನಂತರದಲ್ಲಿ ಆಕೆಯಲ್ಲಿ ಧನುರ್ವಿದ್ಯೆಯಲ್ಲಿ ನಿಪುಣನಾದ ವಿಚಿತ್ರವೀರ್ಯನೆಂಬ ಎರಡನೆಯ ಕುಮಾರನೂ ಹುಟ್ಟಿದನು. ಆ ವಿಚಿತ್ರವೀರ್ಯನಿಗೆ ಯೌವನವು ಪ್ರಾಪ್ತವಾಗುವುದಕ್ಕೆ ಮುಂಚೆಯೇ ಶಂತನುವು ಕಾಲವಾದನು.

ಆತನು ಸ್ವರ್ಗಸ್ಥನಾದಮೇಲೆ ಭೀಷ್ಮನು ಸತ್ಯವತಿಯ ಅಪೇಕ್ಷೆಯಮೇರೆಗೆ ವೀರನಾದ ಚಿತ್ರಾಂಗದನಿಗೆ ಪಟ್ಟವನ್ನು ಕಟ್ಟಿದನು. ಆ ಚಿತ್ರಾಂಗದನು ತನ್ನ ಬಾಹುಬಲದಿಂದ ಸಮಸ್ತರಾಜರನ್ನೂ ಸೋಲಿಸಿ ತನಗೆ ಮನುಷ್ಯರಲ್ಲಿ ಯಾರೂ ಸಮಾನರಿಲ್ಲವೆಂದೆನಿಸಿಕೊಂಡನು. ಆತನು ದೇವತೆಗಳನ್ನೂ, ಮನುಷ್ಯರನ್ನೂ, ಅಸುರರನ್ನೂ ಜಯಿಸಿ ಓಡಿಸುತ್ತಿರಲು, ಇವನಂತೆಯೇ ಹೆಸರುಳ್ಳ ಚಿತ್ರಾಂಗದನೆಂಬ ಒಬ್ಬ ಗಂಧರ್ವರಾಜನು ಆತನ ಸಮಿಾಪಕ್ಕೆ ಬಂದು, ಆತನನ್ನು ಕುರಿತು "ರಾಜಕುಮಾರಾ! ನೀನು ನನ್ನ ಹೆಸರನ್ನಿಟ್ಟುಕೊಂಡಿರುವೆ. ನನ್ನೊಡನೆ ಯುದ್ಧಮಾಡು. ಯುದ್ಧಮಾಡದೆ ಹೋದರೆ ಬೇರೆ ಹೆಸರನ್ನು ಇಟ್ಟುಕೊಳ್ಳಬೇಕು. ನನ್ನ ಹೆಸರನ್ನು ಹಿಡಿದೇ ನಿನ್ನನ್ನೂ ಕರೆಯುವುದು ನನಗೆ ಅವಮಾನವಾಗಿದೆ. ಆ ನನ್ನ ಹೆಸರೇ ವ್ಯರ್ಥವಾಗುತ್ತಿರುವುದು. ಹಾಗೆ ವ್ಯರ್ಥವಾಗಕೂಡದು" ಎಂದನು. ಹೀಗೆ ಯುದ್ಧಕ್ಕೆ ಕರೆದಮೇಲೆ ಅವರಿಬ್ಬರೂ ವೀರವಾದಗಳೊಡನೆ ಹಿರಣ್ಯನದೀ ತೀರಕ್ಕೆ ಹೋದರು. ಚಿತ್ರಾಂಗದನು ಆ ಗಂಧರ್ವನೊಡನೆ ಕುರುಕ್ಷೇತ್ರದಲ್ಲಿ ಮಹಾಯುದ್ಧವನ್ನು ಮಾಡಿದನು. ಶೂರರಾದ ಆ ಗಂಧರ್ವರಾಜ ಕುರುರಾಜರಿಬ್ಬರಿಗೂ ಹಿರಣ್ಯನದೀತೀರದಲ್ಲಿ ಮೂರು ಸಂವತ್ಸರಗಳ ವರೆಗೆ ಯುದ್ಧವು ನಡೆಯಿತು. ಬಾಣವರ್ಷವನ್ನು ಎಡೆಬಿಡದೆ ಸುರಿಸುತ್ತಾ ಒಬ್ಬರನ್ನೊಬ್ಬರು ಹೊಡೆಯುತಿದ್ದರು. ಆ ಮಹಾಯುದ್ಧವು ಅತ್ಯಂತ ಭಯಂಕರವಾಗಿದ್ದಿತು. ಆ ಯುದ್ಧದಲ್ಲಿ ಗಂಧರ್ವನು ತನ್ನ ಮಾಯಾಬಲದಿಂದ ಚಿತ್ರಾಂಗದನನ್ನು ಕೊಂದು ತನ್ನ ಲೋಕಕ್ಕೆ ಹೋದನು. ಅಪಾರತೇಜಸ್ವಿಯೂ, ಪುರುಷಸಿಂಹನೂ ಆದ ಚಿತ್ರಾಂಗದನು ಮೃತನಾದಮೇಲೆ, ಶಂತನುವಿನ ಹಿರಿಯ ಮಗನಾದ ಭೀಷ್ಮನೇ ಆತನ ಅಪರಕರ್ಮಗಳೆಲ್ಲವನ್ನೂ ಮಾಡಿ, ಅಮೇಲೆ ಇನ್ನೂ ಚಿಕ್ಕವಯಸ್ಸಿನವನಾಗಿದ್ದ ವಿಚಿತ್ರವೀರ್ಯನಿಗೆ ರಾಜ್ಯದಲ್ಲಿ ಪಟ್ಟವನ್ನು ಕಟ್ಟಿದನು. ಜನಮೇಜಯಾ! ಆಗ ವಿಚಿತ್ರವೀರ್ಯನು ಭೀಷ್ಮನ ಆಜ್ಞೆಯ ಮೇರೆಗೆ ತನ್ನ ಪೈತೃಕರಾಜ್ಯವನ್ನು ಪರಿಪಾಲಿಸುತ್ತಿದ್ದನು. ಆತನು ಧರ್ಮದಲ್ಲಿಯೂ ಮತ್ತು ರಾಜನೀತಿಯಲ್ಲಿಯೂ ನಿಪುಣನಾದ ಭೀಷ್ಮನನ್ನು ಬಹಳ

ವಾಗಿ ಗೌರವಿಸಿ ಪೂಜಿಸುತಿದ್ದನು. ಭೀಷ್ಮನೂ ವಿಚಿತ್ರವೀರ್ಯನನ್ನು ಚೆನ್ನಾಗಿ ಭ್ರಾತೃವಾತ್ಸಲ್ಯದಿಂದ ಕಾಪಾಡುತಿದ್ದನು.

ಇದು ನೂರೆಂಟನೆಯ ಅಧ್ಯಾಯವು.

ಭೀಷ್ಮನು ಕಾಶಿರಾಜನ ಮಗಳನ್ನು ಅಪಹರಿಸಿ, ಅಡ್ಡಬಂದ ಸಾಲ್ವನನ್ನು ಗೆಲ್ಲುವುದು. ಅಂಬೆಯು ವಿಚಿತ್ರವೀರ್ಯನನ್ನು ವಿವಾಹವಾಗಲೊಪ್ಪದೆ ಸಾಲ್ವನಬಳಿಗೆ ಹೋದುದು. ಆತನು ಆಕೆಯನ್ನು ನಿರಾಕರಿಸಲು ಭೀಷ್ಮನ ಬಳಿಗೆ ಬಂದುದು. ಆತನೂ ನಿರಾಕರಿಸಿದುದು. ತಪಸ್ಸುಮಾಡುತ್ತಿರುವ ಅಂಬೆಗೆ ಕುಮಾರಸ್ವಾಮಿಯು ಮಾಲೆಯನ್ನು ಕೊಟ್ಟುದು.

ಜನಮೇಜಯಾ! ಚಿತ್ರಾಂಗದನು ಮೃತನಾದ ಮೇಲೆ ಭೀಷ್ಮನು ತನ್ನ ಸಹೋದರನಾದ ವಿಚಿತ್ರವೀರ್ಯನು ಬಾಲನಾಗಿದ್ದುದರಿಂದ, ಸತ್ಯವತಿಯ ಅಭಿಪ್ರಾಯವನ್ನನುಸರಿಸಿ ತಮ್ಮನ ಹೆಸರಿನಲ್ಲಿ ತಾನೇ ರಾಜ್ಯಕಾರ್ಯಗಳನ್ನು ನೋಡುತಿದ್ದನು. ಮೇಧಾವಿಗಳಲ್ಲಿ ಶ್ರೇಷ್ಠನಾದ ಆ ಭೀಷ್ಮನು ವಿಚಿತ್ರವೀರ್ಯನಿಗೆ ಯೌವನವು ಪ್ರಾಪ್ತವಾದುದನ್ನು ನೋಡಿ ಆತನ ವಿವಾಹವಿಷಯವಾಗಿ ಆಲೋಚಿಸುತಿದ್ದನು. ಈ ಸಮಯಕ್ಕೆ ಸರಿಯಾಗಿ ಕಾಶೀರಾಜನು ಅಪ್ಸರಸಿಯರಿಗೆ ಸಮಾನಸೌಂದರ್ಯವುಳ್ಳ ತನ್ನ ಮೂರು ಮಂದಿ ಹೆಣ್ಣುಮಕ್ಕಳಿಗೂ ಒಟ್ಟಾಗಿ ಸ್ವಯಂವರಮಾಡುವ ಸುದ್ದಿ ಹೊರಟಿತು. ರಥಿಕಾಗ್ರಗಣ್ಯನಾದ ಭೀಷ್ಮನು ತನ್ನ ತಾಯಿಯ ಅಪ್ಪಣೆಯನ್ನು ಪಡೆದು, ರಥಮಾತ್ರಸಹಾಯನಾಗಿ ಕಾಶಿಗೆ ಹೋಗಿ, ಅಲ್ಲಿ ಸಮಸ್ತದೇಶಗಳ ರಾಜರೂ, ಸ್ವಯಂವರಕ್ಕಿರುವ ಮೂರು ಮಂದಿ ರಾಜಕನ್ಯೆಯರೂ, ವಿವಾಹಮಂಟಪದಲ್ಲಿ ನೆರೆದಿರುವುದನ್ನು ಕಂಡನು. ಮೊದಲಿಂದಲೂ ಆ ಕನ್ಯೆಯರಲ್ಲಿ ಕಣ್ಣಿಟ್ಟಿದ್ದ ಕೋಸಲದೇಶದ ರಾಜನೂ, ವಂಗ, ಪುಂಡ್ರ, ಕಳಿಂಗ ದೇಶದ ರಾಜರೂ ಒಟ್ಟುಗೂಡಿ ಅಲ್ಲಿಗೆ ಬಂದಿದ್ದರು. ಸಮಸ್ತ ರಾಜರ ಹೆಸರನ್ನೂ ಹೇಳುವಾಗ ಶಂತನುಪುತ್ರನೂ,

ವಯಸ್ಸು ಮೀರಿದವನೂ ಆದ ಭೀಷ್ಮನು, ಒಂದುಕಡೆ ಪ್ರತ್ಯೇಕವಾಗಿ ಕುಳಿತಿರುವುದನ್ನು ನೋಡಿ, ವಿಶೇಷ ಬುದ್ಧಿಶಾಲಿಗಳಾದ ಆ ಸುಂದರೀಮಣಿಯರು, ಆತನು ಮುದುಕನೆಂಬ ಭಾವದಿಂದ ಬೇಸರಪಟ್ಟವರಂತೆ ನೋಡಿ ಹೊರಟುಹೋದರು. ಅಲ್ಲಿ ಸೇರಿದ್ದ ರಾಜರಲ್ಲಿ ಅಲ್ಪಬುದ್ಧಿಯುಳ್ಳ ಕೆಲವರು ಭೀಷ್ಮನನ್ನು ನೋಡಿ " ಈತನೋ ಮುದುಕನು. ಕೇವಲ ಗೊಡ್ಡು ಬ್ರಹ್ಮಚರ್ಯೆಯ ವೈದಿಕನಂತೆ ಕಾಣುವನು. ಮುಖವೆಲ್ಲ ಸುಕ್ಕುಬಿದ್ದಿದೆ. ತಲೆಯ ಕೂದಲು ನರೆತಿದೆ. ಇವನು ನಾಚಿಕೆಯಿಲ್ಲದೆ ಈ ಸ್ವಯಂವರಕಾಲದಲ್ಲಿ ಇಲ್ಲಿಗೇಕೆ ಬಂದಿರುವನೋ? ಇವನು (ಭೀಷ್ಮನು) ತಾನು ಮಾಡಿರುವ ಪ್ರತಿಜ್ಞೆಯನ್ನು ಸುಳ್ಳುಮಾಡಿರುವನಲ್ಲಾ. ಇತರರು ಕೇಳಿದರೆ ಏನು ಪ್ರತ್ಯುತ್ತರ ಕೊಡಬಲ್ಲನೋ? ಭೀಷ್ಮನು ಬ್ರಹ್ಮಚಾರಿಯೆಂದು ಪ್ರಸಿದ್ಧಿಹೊಂದುದು ವ್ಯರ್ಥವು" ಎಂದು ಗುನುಗುಟ್ಟುತ್ತಾ ಹಾಸ್ಯಮಾಡಿ ನಗುತಿದ್ದರು. ಜನಮೇಜಯಾ! ಆ ಮಾತುಗಳನ್ನು ಕೇಳಿ ಭೀಷ್ಮನಿಗೆ ಆಗಲೇ ಕೋಪವು ಬಂದಿತು. ಮಹಾಸಮರ್ಥನಾದ ಆತನು ಒಡನೆಯೇ ಆ ಕನ್ಯೆಯರನ್ನು ತನ್ನ ರಥದಮೇಲೆ ಕುಳ್ಳಿರಿಸಿಕೊಂಡು, ಮೇಘಗರ್ಜನೆಗೆ ಸಮಾನವಾದ ಧ್ವನಿಯಿಂದ ಆ ರಾಜರನ್ನು ನೋಡಿ " ಎಲೈ ಕ್ಷತ್ರಿಯರೇ! *ವಿವಾಹಗಳಲ್ಲಿ ಅನೇಕವಿಧಗಳುಂಟು. ತಮ್ಮ ಶಕ್ತ್ಯನುಸಾರವಾಗಿ ವರನಿಗೆ ಧನವನ್ನು ಕೊಟ್ಟು, ಕನ್ಯೆಯರನ್ನೂ ಅಲಂಕರಿಸಿ, ಅವರಿಗೆ ಮದುವೆಮಾಡಿಕೊಡಬೇಕೆಂದು ನಮ್ಮ ಋಷಿಗಳು ಧರ್ಮಶಾಸ್ತ್ರದಲ್ಲಿ ವಿಧಿಸಿರುವರು. ಮತ್ತೆ ಕೆಲವರು ಎರಡು ಗೋವುಗಳನ್ನು ತೆಗೆದುಕೊಂಡು ಕನ್ಯೆಯನ್ನು ಕೊಡುವರು. ಇಷ್ಟೇ ಧನವನ್ನು ಕೊಡಬೇಕೆಂದು ನಿರ್ಣಯಮಾಡಿಕೊಂಡು ಕೆಲವರು ಕನ್ಯೆಯನ್ನು ಕೊಡುವರು. ಮತ್ತೆ ಕೆಲವರು ತಮ್ಮ ಪರಾಕ್ರಮವನ್ನು ತೋರಿಸಿ ಕನ್ಯೆಯರನ್ನು ತೃಪ್ತಿಪಡಿಸಿ, ಅವರನ್ನು ವಿವಾಹಮಾಡಿಕೊಳ್ಳುವರು. ಮತ್ತೆ ಕೆಲವರು ನಿದ್ರೆ ಮುಂತಾದುವುಗಳಿಂದ ಮೈಮರೆತಿರುವಾಗ ಕನ್ಯೆಯರನ್ನು ಅಪಹರಿಸಿ ವಿವಾಹಮಾಡಿ

---

* ಇಲ್ಲಿ ಕ್ರಮವಾಗಿ ಇವುಗಳನ್ನು ಬ್ರಾಹ್ಮ, ಆರ್ಷ, ಆಸುರ, ಗಾಂಧರ್ವ, ಪೈಶಾಚ, ಪ್ರಾಜಾಪತ್ಯ, ದೈವ ವಿವಾಹಗಳೆಂದು ತಿಳಿಯಬೇಕು.

ಕೊಳ್ಳುವರು. ಕೆಲವರು ಕನ್ಯೆಯರ ಅನುಮತಿಯಮೇಲೆಯೇ ಅವರನ್ನು ತಾವು ವಿವಾಹಮಾಡಿಕೊಳ್ಳುವರು. ಇನ್ನೂ ಕೆಲವರು ವೇದೋಕ್ತವಾದ ಯಜ್ಞವಿಧಿಗನುಸಾರವಾಗಿ ವಿವಾಹಮಾಡಿಕೊಳ್ಳುವರು. ಎಂಟನೆಯದಾದ ರಾಕ್ಷಸವಿವಾಹವೆಂಬುದು ಸಮರ್ಥರಾದ ವೀರರು ಬಯಸುವ ವಿವಾಹವೆಂದು ತಿಳಿಯಿರಿ. ರಾಜಕುಮಾರರು ಸ್ವಯಂವರವನ್ನು ಕೊಂಡಾಡುವರು. ಅದನ್ನು ಮಾಡುವುದೂ ಉಂಟು. ಆದರೆ, ಬಲಾತ್ಕಾರದಿಂದ ಎತ್ತಿಕೊಂಡುಹೋದ ಕನ್ಯೆಯೇ ಹೆಚ್ಚೆಂದು ಧರ್ಮಶಾಸ್ತ್ರಜ್ಞರು ಹೇಳುವರು. ರಾಜರೇ! ಆದುದರಿಂದ, ಈ ಕನ್ಯೆಯರನ್ನು ಇಲ್ಲಿಂದ ಬಲಾತ್ಕಾರವಾಗಿ ತೆಗೆದುಕೊಂಡು ಹೋಗಬೇಕೆಂದೇ ನಾನು ನಿಶ್ಚಯಿಸಿರುವೆನು. ನೀವು ನಿಮ್ಮ ಶಕ್ತಿಯನ್ನು ಪಯೋಗಿಸಿ ಗೆಲ್ಲುವುದಾದರೆ ಯುದ್ಧಕ್ಕೆ ನಿಲ್ಲಿರಿ! ಇಲ್ಲದಿದ್ದರೆ ಪಲಾಯನ ಮಾಡಿರಿ. ನಾನಾದರೋ ಯುದ್ಧಮಾಡಲು ನಿಶ್ಚಯಿಸಿಕೊಂಡೇ ಸನ್ನದ್ಧನಾಗಿ ನಿಂತಿರುವೆನು" ಎಂದನು.

ವೀರನಾದ ಆ ಭೀಷ್ಮನು ಕಾಶೀರಾಜನನ್ನೂ, ಅಲ್ಲಿ ನೆರೆದಿದ್ದ ಇತರ ರಾಜರನ್ನೂ ನೋಡಿ ಹೀಗೆ ಹೇಳಿ, ಆ ಕನ್ಯೆಯರನ್ನು ತನ್ನ ರಥದಮೇಲೆ ಕುಳ್ಳಿರಿಸಿಕೊಂಡು ವೇಗವಾಗಿ ಹೊರಟನು. ರಾಜರೆಲ್ಲರೂ ಕೋಪಿಸಿ ತಮ್ಮ ಭುಜಗಳನ್ನು ತಟ್ಟುತ್ತ, ತುಟಿಗಳನ್ನು ಕಚ್ಚಿಕೊಂಡು ಯುದ್ಧಕ್ಕೆ ನಿಂತರು. ಬಹುತ್ವರೆಯಿಂದ ತಮ್ಮ ಆಭರಣಗಳನ್ನೆಲ್ಲ ಕಳಚಿ, ಕವಚಗಳನ್ನು ತೊಟ್ಟುಕೊಳ್ಳುವಾಗ, ದೊಡ್ಡ ಕಲಕಲಶಬ್ದವಾಯಿತು. ಅವರ ಆಭರಣಗಳ ಮತ್ತು ಆಯುಧಗಳ ಕಾಂತಿಯೆಲ್ಲ ಸೇರಿ ನಕ್ಷತ್ರಗಳಂತೆ ತೋರುತಿದ್ದಿತು. ಆ ವೀರರೆಲ್ಲರೂ ಉತ್ತಮಾಶ್ವಗಳನ್ನು ಹೂಡಿ, ಸರ್ವಾಯುಧ ಪೂರ್ಣವಾದ ರಥಗಳನ್ನೇರಿದರು. ಕೋಪಮಾತ್ಸರ್ಯಗಳಿಂದ ಅವರ ಕಣ್ಣುರೆಪ್ಪೆಗಳು ಕುಗ್ಗಿದುವು. ಕಣ್ಣುಗಳು ಕೆಂಪಾದುವು. ಮುಂದಾಗಿ ಹೋಗುತಿದ್ದ ಭೀಷ್ಮನನ್ನು ಎಲ್ಲರೂ ಆಯುಧಪಾಣಿಗಳಾಗಿ ಅಟ್ಟಿಕೊಂಡು ಹೋದರು. ಒಟ್ಟಾಗಿ ಸೇರಿಬಂದ ನೂರಾರು ಮಂದಿ ರಾಜರಿಗೂ, ಏಕಾಕಿಯಾದ ಭೀಷ್ಮನಿಗೂ ಭಯಂಕರವಾದ ಯುದ್ಧವು ನಡೆಯಿತು. ಅವರು ಒಂದೇಸಲಕ್ಕೆ ಹತ್ತುಸಾವಿರ ಬಾಣಗಳನ್ನು ಭೀಷ್ಮನ

ಮೇಲೆ ಪ್ರಯೋಗಿಸಿದರು. ಅವರು ಪ್ರಯೋಗಿಸಿದ ಬಾಣಗಳು ತನಗೆ ತಾಗುವುದಕ್ಕೆ ಮೊದಲೇ ಆ ಭೀಷ್ಮನೂ ಎಡೆಬಿಡದೆ ಅವಿಚ್ಛಿನ್ನವಾದಬಾಣ ವರ್ಷಗಳಿಂದ ಅವುಗಳನ್ನು ಖಂಡಿಸುತ್ತಿದ್ದನು. ಆ ರಾಜರೆಲ್ಲರೂ ಭೀಷ್ಮನ ಸುತ್ತಲೂ ಮೇಘವು ಪರ್ವತದಮೇಲೆ ಮಳೆಯನ್ನು ವರ್ಷಿಸುವಂತೆ ಶರವರ್ಷವನ್ನು ಸುರಿಸಿದರು. ಭೀಷ್ಮನು ನಾಲ್ಕು ಕಡೆಗಳಿಂದಲೂ ಬರುವ ಬಾಣವರ್ಷಗಳನ್ನು ಪ್ರತಿಬಾಣಗಳಿಂದ ತಡೆದು, ಪ್ರತಿಯೊಬ್ಬ ರಾಜನ ಮೇಲೆಯೂ ಮೂರುಮೂರು ಬಾಣಗಳನ್ನು ಪ್ರಯೋಗಮಾಡಿದನು. ಆ ರಾಜರಲ್ಲಿ ಪ್ರತಿಯೊಬ್ಬನೂ ಭೀಷ್ಮನನ್ನು ಐದೈದು ಬಾಣಗಳಿಂದ ಹೊಡೆದರು. ಜನಮೇಜಯಾ! ಆ ಭೀಷ್ಮನು ತನ್ನ ಬಾಣಗಳಿಂದ ಅವೆಲ್ಲವನ್ನೂ ತಡೆದು, ಪ್ರತಿಯೊಬ್ಬ ರಾಜನಮೇಲೆಯೂ ಎರಡೆರಡು ಬಾಣಗಳನ್ನು ಪ್ರಯೋಗಿಸಿದನು. ಆ ಘೋರಯುದ್ಧವು ಲೋಕದಲ್ಲಿ ನೋಡುತ್ತಿರುವ ವೀರರಿಗೆಲ್ಲ ದೇವಾಸುರಯುದ್ಧದಂತೆ ಭಯಂಕರವಾಗಿ ತೋರುತ್ತಿದ್ದಿತು. ಭೀಷ್ಮನು ಆ ಯುದ್ಧಭೂಮಿಯಲ್ಲಿ ತನ್ನ ಅಸ್ತ್ರಗಳಿಂದ ಶತ್ರುಗಳ ಬಿಲ್ಲು, ಧ್ವಜಸ್ತಂಭ, ಕಬ್ಬಿಣದ ಕವಚ, ತಲೆಗಳು, ಇವುಗಳನ್ನೆಲ್ಲ ನೂರುಸಾವಿರ ಲೆಖ್ಖದಿಂದ ಕತ್ತರಿಸಿದನು. ಆಗ ಭೀಷ್ಮನು ಯುದ್ಧದಲ್ಲಿ ರಥಚಾರಿಯಾಗಿ ಮಾಡಿದ ಅಮಾನುಷಕೃತ್ಯವನ್ನೂ, ಆತನ ಹಸ್ತಲಾಘವವನ್ನೂ, ಅವನ ಆತ್ಮರಕ್ಷಣೆಯನ್ನೂ ನೋಡಿ ಶತ್ರುಪಕ್ಷದವರೇ ಕೊಂಡಾಡಿದರು. ಇಂತಹ ಪರಾಕ್ರಮವುಳ್ಳ ಆ ಭೀಷ್ಮನು ತಾನು ಪೆಟ್ಟುತಿನ್ನದೆಯೇ ಶತ್ರುರಾಜರನ್ನು ಯುದ್ಧದಲ್ಲಿ ಜಯಿಸಿ, ಆ ಕನ್ಯೆಯರೊಡನೆ ಭರತ ರಾಜಧಾನಿಗೆ ಬಂದನು.

ರಾಜಾ! ಮಹಾರಥನೂ, ಅಧಿಕಪರಾಕ್ರಮವುಳ್ಳವನೂ ಆದ ಸಾಲ್ವನೆಂಬ ರಾಜನು, ಶಂತನುವಿನ ಮಗನಾದ ಭೀಷ್ಮನನ್ನು ಹಿಂದಟ್ಟಿಬಂದು ಯುದ್ಧಕ್ಕೆ ಕರೆದನು. ಒಂದು ಆನೆಗಳ ಗುಂಪಿನ ಸಲಗವು, ಇನ್ನೊಂದು ಗುಂಪಿನಲ್ಲಿರುವ ಒಂದು ಹೆಣ್ಣಾನೆಯನ್ನು ಕಂಡು ಆ ಗುಂಪಿನ ಸಲಗದೊಡನೆ ಹೋರಾಡಿ, ತನ್ನ ಕೊಂಬಿನಿಂದ ಅದರ ಕಾಲುಗಳನ್ನು ಘಾಸಿಪಡಿಸುವಂತೆ ಸಾಲ್ವರಾಜನು ಆ ಕನ್ಯೆಯರನ್ನು ಪಡೆಯುವ ಉದ್ದೇಶದಿಂದ

ಭೀಷ್ಮನನ್ನು ಕುರಿತು "ನಿಲ್ಲು, ನಿಲ್ಲು" ಎಂದು ಕೂಗಿಕೊಂಡನು. ಆಗ ಆ ಭೀಷ್ಮನು, ಉರಿಯುವ ಬೆಂಕಿಯಂತೆ ಕೋಪಾಗ್ನಿಯಿಂದ ಜ್ವಲಿಸುತ್ತ, ಹುಬ್ಬು ಗಂಟುಹಾಕಿಕೊಂಡು, ಕೈಯಲ್ಲಿ ಬಿಲ್ಲನ್ನು ಹಿಡಿದು, ಕ್ಷತ್ರಿಯ ಧರ್ಮಕ್ಕನುಸಾರವಾಗಿ ಶತ್ರುವನ್ನು ನಿರೀಕ್ಷಿಸುತ್ತ ರಥವನ್ನು ನಿಲ್ಲಿಸಿದನು. ಆತನು ನಿಂತುದನ್ನು ಕಂಡು ಸಾಲ್ವನಿಗೂ ಭೀಷ್ಮನಿಗೂ ನಡೆಯುವ ಆ ಯುದ್ಧವನ್ನು ನೋಡುವ ಕುತೂಹಲದಿಂದ ರಾಜರೆಲ್ಲರೂ ಅಲ್ಲಿಯೇ ನಿಂತರು. ಇವರ ಯುದ್ಧವು, ಒಂದು ಹಸುವಿಗಾಗಿ ಹೋರಾಡುವ ಎರಡು ಗೂಳಿಗಳ ಹೋರಾಟದಂತೆ ಇದ್ದಿತು. ಆಗ ಪುರುಷೋತ್ತಮನಾದ ಸಾಲ್ವರಾಜನು ವೇಗವಾದ ಸಾವಿರಾರು ಬಾಣಗಳನ್ನು ಭೀಷ್ಮನಮೇಲೆ ಪ್ರಯೋಗಿಸಿದನು. ಪ್ರಾರಂಭದಲ್ಲಿಯೇ ಸಾಲ್ವನು ಭೀಷ್ಮನನ್ನು ಸಾವಿರಾರು ಬಾಣಗಳಿಂದ ಮುಚ್ಚಿದುದನ್ನು ನೋಡಿ ರಾಜರೆಲ್ಲರೂ ಸಂತೋಷದಿಂದ ಕೈತಟ್ಟಿ ಆತನನ್ನು ಕೊಂಡಾಡಿದರು. ಶತ್ರುರಾಜ್ಯವನ್ನು ಧೂಳಿಪಟಮಾಡುವ ಶಕ್ತಿಯುಳ್ಳ ಭೀಷ್ಮನು, ಕ್ಷತ್ರಿಯರು ಸಾಲ್ವನನ್ನು ಕುರಿತು ಮಾಡುವ ಸ್ತೋತ್ರಗಳನ್ನು ಕೇಳಿ ಕೋಪಿಸಿಕೊಂಡು, "ನಿಲ್ಲು, ನಿಲ್ಲು" ಎಂದು ಗರ್ಜಿಸುತ್ತ ತನ್ನ ಸಾರಥಿಯನ್ನು ನೋಡಿ, "ಆ ರಾಜನಿರುವ ಸ್ಥಳಕ್ಕೆ ನನ್ನ ರಥವನ್ನು ಬಿಡು. ಗರುಡನು ಸರ್ಪವನ್ನು ಕೊಲ್ಲುವಂತೆ ನಾನು ಆತನನ್ನು ಕೊಲ್ಲುವೆನು" ಎಂದನು.

ಆಮೇಲೆ ಭೀಷ್ಮನು ವಾರುಣಾಸ್ತ್ರವನ್ನು ಹೂಡಿದನು. ಇದರಿಂದ ಸಾಲ್ವನ ನಾಲ್ಕು ಅಶ್ವಗಳೂ ಹತವಾದುವು. ರಾಜೋತ್ತಮಾ! ಕುರುವಂಶಸಂಭೂತನಾದ ಆ ಭೀಷ್ಮನು ಸಾಲ್ವರಾಜನ ಅಸ್ತ್ರಗಳನ್ನೂ ತನ್ನ ಅಸ್ತ್ರಗಳಿಂದ ಭೇದಿಸಿ, ಆತನ ಸಾರಥಿಯನ್ನು ಕೊಂದು, ಇಂದ್ರಾಸ್ತ್ರದಿಂದ ಆತನ ಬೇರೆ ಉತ್ತಮಾಶ್ವಗಳನ್ನೂ ಕೊಂದನು. ಕನ್ಯಾರ್ಥಿಯಾದ ಭೀಷ್ಮನು ತನ್ನನ್ನಿದಿರಿಸಿದ ಆ ಸಾಲ್ವನನ್ನು ಜಯಿಸಿ ಅವನನ್ನು ಜೀವಸಹಿತನಾಗಿ ಬಿಟ್ಟುಬಿಟ್ಟನು. ಆಮೇಲೆ ಸಾಲ್ವರಾಜನು ತನ್ನ ಪಟ್ಟಣಕ್ಕೆ ಹೋಗಿ ನಿಶ್ಚಿಂತನಾಗಿ ಕ್ಷತ್ರಿಯಧರ್ಮಕ್ಕನುಸಾರವಾಗಿ ರಾಜ್ಯಪರಿಪಾಲನ ಮಾಡುತ್ತಿದ್ದನು. ಅತ್ತಲಾಗಿ ಸ್ವಯಂವರಕ್ಕೆ ಬಂದಿದ್ದ ರಾಜರೆಲ್ಲರೂ ತಮ್ಮ ತಮ್ಮ ದೇಶಗಳಿಗೆ ಹಿಂತಿರುಗಿದರು.

ಹೀಗೆ ಯುದ್ಧದಲ್ಲಿ ಜಯಶೀಲನಾದ ಭೀಷ್ಮನು ಆ ಕನ್ಯೆಯರನ್ನು ಜಯಿಸಿ ಯುದ್ಧದಲ್ಲಿ ತಾನು ಸ್ವಲ್ಪವೂ ನೋಯದೆ, ಶತ್ರುಗಳನ್ನು ನಿಗ್ರಹಿಸಿ ವೇಗವಾಗಿ ನದಿಗಳನ್ನೂ, ಪರ್ವತಗಳನ್ನೂ ಹಲವು ವೃಕ್ಷಗಳಿಂದ ಕೂಡಿದ ಕಾಡುಗಳನ್ನೂ ದಾಟಿ, ಆ ಕಾಶೀರಾಜನ ಕನ್ಯೆಯರನ್ನು ತನ್ನ ಸೊಸೆಯ ರಂತೆಯೂ, ಒಡಹುಟ್ಟಿದ ಸಹೋದರಿಯರಂತೆಯೂ ಭಾವಿಸುತ್ತ, ತನ್ನ ಸಹೋದರನ ಕೋರಿಕೆಯನ್ನು ನೆರವೇರಿಸುವ ಉದ್ದೇಶದಿಂದ ಅವರನ್ನು ಕುರುರಾಜ್ಯಕ್ಕೆ ಕರೆತಂದು, ಗುಣಸಂಪನ್ನರಾದ ಆ ಕನ್ಯೆಯರನ್ನು ವಿಚಿತ್ರ ವೀರ್ಯನಿಗೆ ಒಪ್ಪಿಸಿದನು. ಧರ್ಮಜ್ಞನೂ, ಶುದ್ಧಾತ್ಮನೂ ಆದ ಭೀಷ್ಮನು, ಹೀಗೆ ಧರ್ಮದಿಂದಲೇ ಈ ಅಮಾನುಷಕೃತ್ಯವನ್ನು ಮಾಡಿ, ಸತ್ಯವತಿ ಯೊಡನೆ ರಹಸ್ಯವಾಗಿ ಆಲೋಚಿಸಿ, ತನ್ನ ಸಹೋದರನಾದ ವಿಚಿತ್ರವೀರ್ಯ ನಿಗೆ ವಿವಾಹಮಾಡುವ ಪ್ರಯತ್ನವನ್ನು ಮಾಡುತಿದ್ದನು. ಆಗ ಆ ಕನ್ಯೆ ಯರಲ್ಲಿ ಹಿರಿಯವಳಾದ ಕಾಶೀರಾಜನ ಮಗಳು, ವಿವಾಹಕ್ಕೆ ಸಿದ್ಧಪಡಿಸು ತ್ತಿರುವ ಭೀಷ್ಮನನ್ನು ನೋಡಿ ನಕ್ಕು “ ನಾನು ಸೌಬಲದೇಶದ ರಾಜನಾದ ಸಾಲ್ವನನ್ನು ನನ್ನ ಪತಿಯನ್ನಾಗಿ ಹಿಂದೆಯೇ ನನ್ನ ಮನಸ್ಸಿನಲ್ಲಿ ವರಿಸಿರು ವೆನು. ನನ್ನ ತಂದೆಯ ಅಭಿಪ್ರಾಯವೂ ಇದೇ! ಆ ಸ್ವಯಂವರದಲ್ಲಿ ಯೂ ನಾನು ಆ ಸಾಲ್ವನನ್ನೇ ವರಿಸಬೇಕೆಂದಿದ್ದೆನು. ನೀನು ಧರ್ಮ ತತ್ವವನ್ನು ತಿಳಿದವನು. ಆದುದರಿಂದ ಇದನ್ನು ನಿನಗೆ ತಿಳಿಸಿರುವೆನು. ಈ ವಿಷಯವನ್ನು ನೀನು ಯೋಚಿಸಿ ಧರ್ಮಯುಕ್ತವಾದುದನ್ನು ನಡೆಸು ” ಎಂದಳು. ಆ ಕನ್ಯೆಯು ಬ್ರಾಹ್ಮಣಸಭೆಯಲ್ಲಿ ಈ ರೀತಿಯಾಗಿ ಹೇಳಲು, ವೀರನಾದ ಆ ಭೀಷ್ಮನು ವಿವಾಹಕಾರ್ಯವನ್ನು ಕುರಿತು ಆಲೋಚಿಸುತ್ತಾ “ ನಾನು ಗೆದ್ದು ತಂದಿರುವ ಕನ್ಯೆಯರಲ್ಲಿ ಹಿರಿಯಳಾದ ಅಂಬೆಯು ಮತ್ತೊ ಬ್ಬ ಪುರುಷನಲ್ಲಿ ಮನಸ್ಸುಳ್ಳವಳಾಗಿರುವಳು. ವಾಗ್ದಾನರೂಪವಾಗಿ ಇತರ ರಿಗೆ ಕೊಡಲ್ಪಟ್ಟರೂ, ಮನಸ್ಸಿನಿಂದ ಇತರರನ್ನು ವರಿಸಿದ್ದರೂ, ಮಂತ್ರ ಪೂರ್ವಕವಾಗಿ ಧಾರೆಯೆರೆಯಲ್ಪಟ್ಟಿದ್ದರೂ, ಇನ್ನೊಬ್ಬನಿಗೆ ಉದ್ದೇಶಿಸಲ್ಪ ಟ್ಟಿದ್ದರೂ, ಪರಪುರುಷನಲ್ಲಿ ಅನುರಕ್ತರಾಗಿದ್ದರೂ ಅಂತಹ ಕನ್ಯೆಯರು ತ್ಯಾಜ್ಯರೇ ” ಎಂದು ಹೇಳಿದನು. ತನ್ನ ತಮ್ಮನು ತನ್ನ ಮಾತಿನಂತೆ ನಡೆಯತಕ್ಕವನಾದುದರಿಂದ, ಆತನ ಅನುಮತಿಯನ್ನು ಪಡೆದು, ವೇದ

ಪಾರಂಗತರಾದ ಬ್ರಾಹ್ಮಣರೊಡನೆಯೂ ಆಲೋಚಿಸಿ, ಅಂಬೆಯ ಮಾತಿಗೆ ಅನುಮತಿಸಿದನು. ಆಮೇಲೆ ಶಾಸ್ತ್ರೋಕ್ತವಾಗಿ ಅಂಬಿಕೆ, ಅಂಬಾಲಿಕೆ ಎಂಬಿಬ್ಬರನ್ನುಮಾತ್ರ ತನ್ನ ಚಿಕ್ಕತಮ್ಮನಾದ ಆ ವಿಚಿತ್ರವೀರ್ಯನಿಗೆ ವಿವಾಹಮಾಡಿದನು. ಸರ್ವಲಕ್ಷಣಸಂಪನ್ನನೂ, ಯುವಕನೂ ಆದ ಆ ವಿಚಿತ್ರವೀರ್ಯನು ಅವರಿಬ್ಬರನ್ನೂ ವಿವಾಹವಾಗಿ, ಅಂಬೆಯ ಚಿಂತೆಯನ್ನೇ ಬಿಟ್ಟನು. ಆ ಅಂಬೆಯು ಸುಂದರೀಮಣಿಯಾಗಿದ್ದರೂ ಮತ್ತೊಬ್ಬ ಪುರುಷನಲ್ಲಿ ಅನುರಕ್ತಳಾಗಿರುವುದನ್ನು ನೋಡಿ ವಿಚಿತ್ರವೀರ್ಯನು ಭೀಷ್ಮನನ್ನು ಕುರಿತು "ಅಣ್ಣಾ! ಅಯೋಗ್ಯವೂ, ನಿರರ್ಥಕವೂ ಆದ ಕಾಮವೆಂಬುದು ಪಾಪಕಾರಿಯು. ಪರಪುರುಷನನ್ನು ಕೋರಿದಾಕೆಯನ್ನು ವರಿಸುವಂತೆ, ನೀನು ನನಗೆ ಆಜ್ಞಾಪಿಸದಿದ್ದುದೇ ಮೇಲು" ಎಂದನು. ಅದಕ್ಕೆ ಭೀಷ್ಮನು "ಅಪ್ಪಾ! ನೀನು ಧರ್ಮಿಷ್ಠನು! ಕಾಮುಕರ್ಗೊಗ್ಗಾಗದ ನಡೆವಳಿಕೆಯುಳ್ಳ ನಿನ್ನನ್ನು ಪುತ್ರನನ್ನಾಗಿ ಪಡೆದ ಶಂತನುವಿನ ವಂಶವೇ ಕೀರ್ತಿಗೊಂಡಂತಾಯಿತು. ನಿನ್ನ ಅಭಿಪ್ರಾಯವನ್ನೇ ನಾನೂ ಅನುಮೋದಿಸುವೆನು" ಎಂದು ಹೇಳಿ, ಅಂಬೆಯನ್ನು ನೋಡಿ "ನಿನಗೆ ಅನುಜ್ಞೆಯನ್ನು ಕೊಟ್ಟಿರುವೆನು. ನಿನ್ನ ಅಪೇಕ್ಷೆಯಿದ್ದಕಡೆಗೆ ಹೋಗಬಹುದು. ನನ್ನ ಪ್ರಿಯ ಸಹೋದರನನ್ನು ಮಾಡಬಾರದ ಕೆಲಸದಲ್ಲಿ ಉದ್ಯುಕ್ತನನ್ನಾಗಿ ಮಾಡಲು ನಾನು ಸಮರ್ಥನಲ್ಲ. ಬೇರೊಬ್ಬನಲ್ಲಿ ಮನಸ್ಸುಳ್ಳ ಕನ್ಯೆಯನ್ನು ಯಾರಾರೂ ಇಟ್ಟುಕೊಳ್ಳಲು ಸಮ್ಮತಿಸರು? ಆದುದರಿಂದ ನಿನ್ನನ್ನು ನಾನು ಇಲ್ಲಿಟ್ಟುಕೊಳ್ಳಲಾರೆನು. ನೀನು ಬೇರೊಬ್ಬನಲ್ಲಿ ಅನುರಕ್ತಳಾಗಿರುವೆ ನೀನು ಹೋಗಬಹುದು. ಅಲ್ಲದೆ, ಊರ್ಧ್ವರೇತಸ್ಸುಳ್ಳವನಾದುದರಿಂದ ನಾನೂ ವಿವಾಹಕ್ಕೆ ಯೋಗ್ಯನಲ್ಲ. ನಮಗಿಬ್ಬರಿಗಾದರೂ ಸಂಬಂಧವು ಏರ್ಪಡುವುದಿಲ್ಲ" ಎಂದನು.

ಜನಮೇಜಯರಾಜಾ! ಆ ಅಂಬೆಯು ಸಾಲ್ವನನ್ನೇ ಮೋಹಿಸಿದವಳಾದುದರಿಂದ, ಭೀಷ್ಮನ ಮಾತುಗಳನ್ನು ಕೇಳಿದೊಡನೆ ತನ್ನ ಸಖಿಯರಿಂದ ಪರಿವೃತಳಾಗಿ ಸಾಲ್ವರಾಜನ ಪಟ್ಟಣಕ್ಕೆ ಹೊರಟಳು. ಸಾಲ್ವನ ಬಳಿಗೆ ಹೋಗಿ ಆತನನ್ನು ಗೌರವಿಸಿ "ಮೊದಲೇ ನಾನು ಮನಸ್ಸಿನಲ್ಲಿ

ಕಡೆಗೆ ಹೋಗು" ಎಂದನು. ಅಂಬೆಯು ತಿರುಗಿ ಸಾಲ್ವನಬಳಿಗೆ ಹೋಗಿ "ರಾಜಾ! ನನ್ನನ್ನು ಪರಿಗ್ರಹಿಸು" ಎಂದು ಬೇಡಿಕೊಂಡಳು. ಆತನು "ಇನ್ನೊಬ್ಬನು ಜಯಿಸಿದಾಕೆಯನ್ನು ನಾನು ಅಂಗೀಕರಿಸಲಾರೆನು" ಎಂದನು. ಭೀಷ್ಮನೂ "ನಾನು ಜಿತೇಂದ್ರಿಯನು" ಎಂದು ಹೇಳಿ ತಿರಸ್ಕರಿಸಿದನು. ಓ ಜನಮೇಜಯರಾಜಾ! ಆ ಅಂಬೆಯಾದರೋ ಪರಮಸುಂದರಿ! ಒಳ್ಳೇ ಯುವತಿ! ಉಬ್ಬಿದ ಸ್ತನಗಳು! ವಿಶಾಲವಾದ ಕಣ್ಣುಗಳು! ಸಣ್ಣ ನಡು! ನಿತಂಬಭಾರದಿಂದ ಜಗ್ಗುವ ನಡೆ! ರಾಕಾಚಂದ್ರನಂತಿರುವ ಮುಖದ ಸೊಬಗು! ಮಿಂಚಿನಂತೆ ದೇಹಕಾಂತಿ! ಇಂತಹ ದಿವ್ಯಸೌಂದರ್ಯವುಳ್ಳ ಆ ಅಂಬೆಯು, ತನ್ನ ಸ್ತ್ರೀಜನ್ಮವೇ ನಿರರ್ಥಕವಾಯಿತೆಂಬುದಕ್ಕಾಗಿ ಧಾರೆಧಾರೆಯಾಗಿ ಕಣ್ಣೀರು ಬಿಟ್ಟು ಅಳುತ್ತಾ, ಭೀಷ್ಮನು ನಿರಾಕರಿಸಿದರೆ, ಸಾಲ್ವನ ಬಳಿಗೂ, ಸಾಲ್ವನು ನಿರಾಕರಿಸಿದಾಗ ಭೀಷ್ಮನ ಬಳಿಗೂ ಹೋಗಿ ಬರುತ್ತಾ ಹೀಗೆಯೇ ಅನೇಕಾವರ್ತಿ ಅವರಲ್ಲಿ ದೈನ್ಯದಿಂದ ಬಾರಿಬಾರಿಗೂ ಬೇಡಿಕೊಂಡರೂ ಯಾರೂ ಸಮ್ಮತಿಸಲಿಲ್ಲ. ಹೀಗೆಯೇ ಆರು ವರ್ಷಗಳ ಕಾಲವು ಕಳೆದುಹೋದುವು. ಆಮೇಲೆ ಆಕೆಯು ಹನ್ನೆರಡು ಸಂವತ್ಸರಗಳವರೆಗೆ ಹಿಮವತ್ಪರ್ವತದ ಪಕ್ಕದಲ್ಲಿರುವ ಬಾಹುದಾನದೀ ತೀರದಲ್ಲಿ ಘೋರವಾದ ತಪಸ್ಸನ್ನು ಹಿಡಿದಳು. ಆಗ ಪಂಚೇಂದ್ರಿಯಗಳನ್ನು ನಿಗ್ರಹಿಸಿ, ದೃಢವ್ರತದಿಂದ ತಪಸ್ಸನ್ನು ಮಾಡುತ್ತಾ, ಒಂದೇ ಕಾಲುಬೆರಳಿನಲ್ಲಿ ನಿಂತಿದ್ದಳು. ಅದನ್ನು ನೋಡಿ ದೇವತೆಗಳೂ ನಡುಗಿದರು. ದೇವಸೈನ್ಯಕ್ಕೆ ಅಧಿಪತಿಯೂ, ವರಪ್ರದನೂ, ಭಗವಂತನೂ ಆದ ಕುಮಾರಸ್ವಾಮಿಯು, ದೇವತೆಗಳೆಲ್ಲರನ್ನೂ ನಡುಗಿಸುತ್ತಿರುವ ಆಕೆಯ ಉಗ್ರತಪಸ್ಸನ್ನು ನೋಡಿ ಆಶ್ಚರ್ಯಪಟ್ಟು, ಸಂತುಷ್ಟಿಹೊಂದಿ ಆಕೆಯನ್ನು ಅನುಗ್ರಹಿಸಬೇಕೆಂಬ ಮನಸ್ಸುಳ್ಳವನಾದನು. ಆ ರಾಜಪುತ್ರಿಯನ್ನು ಗೌರವಿಸುವುದಕ್ಕಾಗಿ ಆಕೆಗೆ ಸೊಗಸಾದ ಒಂದು ಪುಷ್ಪಮಾಲಿಕೆಯನ್ನು ಕೊಟ್ಟು ಅಂಬೆಯನ್ನು ನೋಡಿ "ಅಂಬೇ! ತಾವರೆಹೂಗಳಿಂದ ಅಂದವಾದ ಈ ದಿವ್ಯಮಾಲಿಕೆಯು ನಿನ್ನ ತಪಸ್ಸಿಗೆ ಫಲವಾಗಿರಲಿ! ಇದು ನಿನ್ನ ಶೋಕವನ್ನು ನೀಗಿಸುವುದು. ನಾನು ಕೊಟ್ಟ ಈ ಪುಷ್ಪಮಾಲಿಕೆ

ಯನ್ನು ಯಾವನು ಧರಿಸುವನೋ, ಅವನು ಭೀಷ್ಮನ ಮರಣಕ್ಕೆ ಕಾರಣ ನಾಗುವನು" ಎಂದನು.

ಇದು ನೂರ ಒಂಭತ್ತನೆಯ ಅಧ್ಯಾಯವು.



ಅಂಬೆಯು ದ್ರುಪದನ ನಗರದ ಬಾಗಲಿಗೆ ಮಾಲಿಕೆಯನ್ನು ತಗುಲಿಸಿ ಹೋಗುವುದು. ರಾಜಪುತ್ರಿಯಾದ ಶಿಖಂಡಿಯು ಅದನ್ನು ಧರಿಸಲು ತಂದೆಯು ಕೋಪಿಸಿಕೊಂಡು, ಆಕೆಯನ್ನು ತ್ಯಜಿಸಿ ಬಿಟ್ಟುಬಿಡುವುದು. ಆಕೆಯು ಗಂಗೋತ್ಪತ್ತಿಯ ಸ್ಥಳಕ್ಕೆ ಹೋಗಿ ಗಂಧರ್ವನನ್ನು ಸಂಧಿಸಿ, ಪುರುಷರೂಪವನ್ನು ಹೊಂದಿ ಹಿಂತಿರುಗುವುದು.

ಆಗ ಅಂಬೆಯು "ನಾನು ಕಾಮಿಸಿದ ಸಾಲ್ವನು ಬೇರೊಬ್ಬ ಪುರುಷನಿಂದ ಜಯಿಸಲ್ಪಟ್ಟವಳೆಂದು ನನ್ನನ್ನು ಅಂಗೀಕರಿಸದೆ ಹೋದನು. ಆದುದರಿಂದ ನಾನು ಪತಿಯಿಲ್ಲದೆ ಧರ್ಮವನ್ನು ತ್ಯಜಿಸಿ ದುಃಖಕ್ಕೊಳಗಾದೆನು. ಎಲ್ಲಾ ದಿಕ್ಕುಗಳಲ್ಲಿರುವ ಕ್ಷತ್ರಿಯರೂ ಕೇಳಿರಿ. ನನ್ನ ಪ್ರಾರ್ಥನೆಯನ್ನು ಲಾಲಿಸಿರಿ! ಭೀಷ್ಮನನ್ನು ಕೊಲ್ಲುವುದಕ್ಕೆ ಕಾರಣವಾದ ಈ ಮಾಲಿಕೆಯನ್ನು ನಿಮ್ಮಲ್ಲಿ ಯಾರಾದರೂ ತೆಗೆದುಕೊಳ್ಳಿರಿ. ಯಾವನು ಭೀಷ್ಮನನ್ನು ಕೊಲ್ಲುವನೋ ನಾನು ಆತನಿಗೆ ಭಾರ್ಯೆಯಾಗುವೆನು" ಎಂದು ಕಂಡಕಂಡ ರಾಜರನ್ನೆಲ್ಲಾ ಕೇಳುತಿದ್ದಳು. ಈ ಪ್ರಯತ್ನಕ್ಕಾಗಿ ಓಡಾಡುತ್ತಿರುವಾಗಲೇ ಐದು ಸಂವತ್ಸರಗಳು ಕಳೆದುವು. ಭೀಷ್ಮನಿಗೆ ಎಲ್ಲರೂ ಭಯಪಟ್ಟುದುದರಿಂದ ಕ್ಷತ್ರಿಯರೊಬ್ಬರೂ ಆಕೆಗೆ ಅಭಯವನ್ನು ಕೊಡಲಿಲ್ಲ. ಆ ಅಂಬೆಯು ಸೋಮಕನೆಂಬ ಪಾಂಚಾಲದೇಶದ ರಾಜನ ಬಳಿಗೆ ಹೋದಳು. ಆತನು ಕೀರ್ತಿವಂತನು, ಸತ್ಯಸಂಧನು, ಮತ್ತು ಧನುರ್ವಿದ್ಯೆಯಲ್ಲಿ ನಿಪುಣನು. ಸತ್ಯಧರ್ಮಗಳಲ್ಲೆಲ್ಲಾ ಪ್ರವರ್ತನೆಯುಳ್ಳವನು. ಆ ಸುಂದರೀಮಣಿಯು ಪಾಂಚಾಲದೇಶದವರಿಂದ ರಕ್ಷಿಸಲ್ಪಡುತ್ತಿರುವ ಆ ಪಟ್ಟಣದ ಸಭಾದ್ವಾರಕ್ಕೆ ಹೋಗಿ, ಎರಡು ಕೈಗಳನ್ನೂ ಮೇಲ

ಕ್ಕೆತ್ತಿ, ಪಾಂಚಾಲರಾಜನನ್ನು ನೋಡಿ "ಯಜ್ಞಸೇನಾ! ನಾನು ಕೆಟ್ಟೆನು. ಭೀಷ್ಮನಿಂದ ವಿಪತ್ಸಾಗರದಲ್ಲಿ ಮುಳುಗಿಸಲ್ಪಟ್ಟ ನನ್ನನ್ನು ನೀನಾದರೂ ಕನಿಕರದಿಂದ ಬಂದು ಕೈಹಿಡಿದು ಮೇಲಕ್ಕೆತ್ತು. ಆ ಭೀಷ್ಮನಿಂದ ನನ್ನ ಸಕಲಧರ್ಮಗಳೂ, ಸಮಸ್ತ ಕಾಮಸುಖಗಳೂ, ನನ್ನ ಇಹಪರಗಳೆರಡೂ ಮೂಲಸಹಿತವಾಗಿ ಮತ್ತು ಫಲಸಹಿತವಾಗಿ ನಾಶಮಾಡಲ್ಪಟ್ಟವೆ. ನಾನು ಹೀಗೆ ದುಃಖಕ್ಕೆ ಗುರಿಯಾದರೂ, ಎಲ್ಲಿಯೂ ಒಬ್ಬ ರಾಜಕುಮಾರನೂ ನನಗೆ ಅಭಯವನ್ನು ಕೊಡಲಿಲ್ಲ. ಹೀಗೆ ನಾನು ದಿಕ್ಕುಗೆಟ್ಟು ಅಲೆದಾಡುತ್ತಿರುವುದಕ್ಕೆ ಈ ಲೋಕದಲ್ಲಿ ಕ್ಷತ್ರಿಯರೇ ಇಲ್ಲವೇ? ರಾಜಶ್ರೇಷ್ಠರೇ! ರಾಜರೆಲ್ಲರೂ ಕೂಡಿರುವಾಗ ನಾನು ಹೇಳುತ್ತಿರುವೆನು. ಇಕ್ಷ್ವಾಕುವಂಶದ ವೃದ್ಧರೂ, ಪಾಂಚಾಲದೇಶದ ರಾಜಶ್ರೇಷ್ಠರೂ ಆದ ನೀವೆಲ್ಲರೂ ಕೇಳಿರಿ! ಸೋಮರಾಜಾ! ಯಜ್ಞಸೇನಾ! ಈ ವಿವಾಹವಿಷಯದಲ್ಲಿ ನಿನ್ನ ಅನುಗ್ರಹದಿಂದ ನನ್ನನ್ನು ಧರ್ಮವು ಅಧೋಗತಿಗೆ ತಳ್ಳದಿರಲಿ! (ವಿವಾಹವಿಲ್ಲದಿದ್ದರೆ ಧರ್ಮವನ್ನು ನೆರವೇರಿಸಲು ಆಸ್ಪದವಿಲ್ಲದೆ ಅಧೋಗತಿಗೆ ಹೋಗುವೆನು.) ಆದುದರಿಂದ ದಯೆಯಿಟ್ಟು ಈ ವಿಷಯದಲ್ಲಿ ನೀನಾದರೂ ನನಗೆ ದಿಕ್ಕಾಗು" ಎಂದಳು. ಅದಕ್ಕೆ ಯಜ್ಞಸೇನನು "ರಾಜಪುತ್ರೀ! ನಿನ್ನ ವಿಷಯವು ನನಗೆ ತಿಳಿದಿದೆ. ಮುಖ್ಯವಾಗಿ ನಿನಗೊಂದು ವಿಷಯವನ್ನು ತಿಳಿಸುವೆನು. ನನ್ನ ಶಕ್ತಿಗೆ ತಕ್ಕಂತೆಯೂ, ನನ್ನ ಕ್ಷತ್ರಧರ್ಮಕ್ಕನುಗುಣವಾಗಿಯೂ ನಾನು ನನ್ನಲ್ಲಿ ಮಿತಸೈನ್ಯವನ್ನಿಟ್ಟು ಕೊಂಡಿರುವೆನು. ರಾಜಕುಮಾರೀ! ನಿನಗೆ ಬೇರೆ ಯಾವ ರಾಜರಿಂದ ಭಯವೊದಗಿದರೂ ಅದನ್ನು ಹೋಗಲಾಡಿಸಲು ತಕ್ಕ ಉಪಾಯವನ್ನು ಮಾಡಲು ನಾನು ಶಕ್ತನು. ಮಹಾಸ್ತ್ರನಿಧಿಯಾದ ಆ ಭೀಷ್ಮನುಮಾತ್ರ ಯುದ್ಧಕ್ಕೆ ನಿಂತರೆ, ಆತನಿಂದುಂಟಾದ ಭಯವನ್ನು ತಪ್ಪಿಸಲು ನಾನು ಶಕ್ತನಲ್ಲ. ಯುದ್ಧವು ಕ್ಷತ್ರಿಯಧರ್ಮವೇ ಆದರೂ, ಅದು ಶಕ್ತಿಗನುಸಾರವಾಗಿರಬೇಕು. ಆದುದರಿಂದ ಕಲ್ಯಾಣೀ! ಒಳ್ಳೆಯದು! ಇನ್ನು ನೀನು ಹೋಗು. ಭೀಷ್ಮನು ತನ್ನ ಶೌರ್ಯದಿಂದ ನಮ್ಮಿಬ್ಬರನ್ನೂ ದಹಿಸದಿರಲಿ! ಇತರ ರಾಜರೆಲ್ಲರೂ ಯಾವ ಕಾರಣದಿಂದ ನಿನ್ನ ಮಾತನ್ನು

ಅಂಗೀಕರಿಸಲಿಲ್ಲವೋ ನನಗೆ ತಿಳಿಯದು. ಭೀಷ್ಮನನ್ನು ಗೆದ್ದು ನಿನ್ನ ಧರ್ಮವನ್ನು ರಕ್ಷಿಸಿಕೊಡಲು ನನ್ನಿಂದ ಹೇಗೂ ಸಾಧ್ಯವಿಲ್ಲ" ಎಂದನು.

ಸೋಮಕನು ಹೀಗೆ ಪ್ರತ್ಯುತ್ತರಕೊಡಲು, ಅಂಬೆಯು ಅವನ ರಾಜದ್ವಾರದಲ್ಲಿ ಆ ಮಾಲಿಕೆಯನ್ನು ತಗುಲಿಸಿ ಓಡಿಹೋಗಲಾರಂಭಿಸಿದಳು. ಅಂಬೆಯಾದರೋ ಸಮಸ್ತಜನರಿಂದಲೂ ತಿರಸ್ಕೃತಳಾದವಳು. ನಿಯಮದಿಂದ ತಪಸ್ಸುಮಾಡಿದವಳು. ಅವಳನ್ನು ನೋಡಿ ದ್ರುಪದನು "ಕಲ್ಯಾಣೀ! ಮಾಲಿಕೆಯನ್ನು ನೀನೇ ತೆಗೆದುಕೊಂಡು ಹೋಗು! ನಮಗೆ ದ್ವೇಷವನ್ನು ತಂದಿಡಬೇಡ" ಎಂದು ಅಡಿಗಡಿಗೆ ಬೇಡುತ್ತಾ ಅವಳನ್ನು ಹಿಂಬಾಲಿಸಿದನು. ಆಗ ಅಂಬೆಯು "ನಾನು ಹೇಳಿದಂತೆ ನೀನು ಮಾಡಲೇ ಬೇಕು! ವಿಧಿಯು ಹಾಗೆಯೇ ಇರುವುದು. ಇದು ಮನುಷ್ಯಕೃತವಲ್ಲ. ವಿಧಿಯನ್ನು ಬದಲಾಯಿಸುವುದು ಸಾಧ್ಯವಲ್ಲ ಯಾವನು ಈ ಮಾಲಿಕೆಯನ್ನೆತ್ತಿ ಕೊರಲಿಗೆ ಹಾಕಿಕೊಳ್ಳುವನೋ, ಆತನೇ ನನ್ನ ಬದುಕನ್ನು ಕೆಡಿಸಿದ ಭೀಷ್ಮನನ್ನು ಯುದ್ಧದಲ್ಲಿ ಕೊಲ್ಲಬಲ್ಲನು" ಎಂದಳು. ದ್ರುಪದನು ಕೆಲವು ಕಾಲದವರೆಗೆ ಆ ಮಾಲಿಕೆಯನ್ನು ಯಾರೂ ಎತ್ತದಂತೆ ನೋಡಿಕೊಂಡಿದ್ದು, ಆಮೇಲೆ ನಂಬಿಕೆಯಿಂದ ಅದರ ರಕ್ಷಣೆಯ ವಿಷಯದಲ್ಲಿ ಉಪೇಕ್ಷೆಯಿಂದಿದ್ದನು. ಶಿಖಂಡಿಯೆಂಬ ಅವನ ಬಾಲಿಕೆಯು, ತಂದೆಯ ಮಾತನ್ನು ಲಕ್ಷಿಸದೆ, ಆ ಮಾಲಿಕೆಯನ್ನು ತೆಗೆದು ತನ್ನ ಕಂಠದಲ್ಲಿ ಧರಿಸಿದಳು. ತನ್ನ ಮಗಳು ಭೀಷ್ಮನಲ್ಲಿ ಅಪರಾಧಮಾಡಿದುದನ್ನು ನೋಡಿ ಭಯದಿಂದ ಆಕೆಯ ತಂದೆಯು ಒಡನೆಯೇ ಆಕೆಯನ್ನೇ ತೊರೆದುಬಿಟ್ಟನು. ಆ ಸ್ತ್ರೀಯು ಭಯಪಟ್ಟು ಗಂಗಾದ್ವಾರದಲ್ಲಿ ತಪಸ್ಸು ಮಾಡುತಿದ್ದ ಋಷೀಕನೆಂಬ ಬ್ರಹ್ಮರ್ಷಿಯನ್ನು ಆರಾಧಿಸುವುದಕ್ಕಾಗಿ, ತಾನೂ ತಪೋವೇಷವನ್ನು ಧರಿಸಿ ಆತನಬಳಿಗೆ ಹೋದಳು. ಆ ಋಷಿಶ್ರೇಷ್ಠನು ಆ ಸ್ತ್ರೀಯ ಶುಶ್ರೂಷೆಗೆ ಸಂತುಷ್ಟನಾಗಿ, ಆಕೆಯನ್ನು ನೋಡಿ "ಗಂಗಾದ್ವಾರದಲ್ಲಿ ಸ್ವಲ್ಪ ಕಾಲದೊಳಗಾಗಿ ವಿಭಜನವೆಂಬ ಉತ್ಸವವು ನಡೆಯುವುದು. ಆ ದಿನದಲ್ಲಿ ನೀನು ಸುಂದರರೂಪವುಳ್ಳ ತುಂಬುರುವೆಂಬ ಗಂಧರ್ವರಾಜನನ್ನು ಆರಾಧಿಸು! ಆತನಿಗೆ ಚೆನ್ನಾಗಿ ಪರಿಚರ್ಯೆಮಾಡು. ನಾನೂ

ನಿನ್ನ ವಿಷಯದಲ್ಲಿ ತಕ್ಕ ಸಹಾಯಮಾಡುವೆನು. ಆ ಗಂಧರ್ವರಾಜನಿಗೆ ನಾನು ಹೇಳಿದ ಉಪಚಾರಗಳನ್ನು ಮಾಡು. ನಿನಗೆ ಶುಭವಾಗುವುದು. ಆತನು ನಿನಗೆ ಮೇಲನ್ನುಂಟುಮಾಡುವನು” ಎಂದನು. ಆಮೇಲೆ ಅಲ್ಲಿ ವಿಭಜನವೆಂಬ ಗಂಧರ್ವರ ಉತ್ಸವವು ನಡೆಯಿತು. ವಿಶೇಷ ತೇಜಸ್ವಿಗಳಾದ ಗಂಧರ್ವರಿಬ್ಬರು ಅಲ್ಲಿ ನಿಂತಿದ್ದರು. ಅವರಲ್ಲಿ ಒಬ್ಬನು ಸ್ತ್ರೀಯಾಗಬೇಕೆಂದು ಅಪೇಕ್ಷೆಪಟ್ಟವನಾಗಿ, ಆ ಶಿಖಂಡಿಯನ್ನು ನೋಡಿ “ನೀನು ನನ್ನ ಪುರುಷರೂಪವನ್ನು ತೆಗೆದುಕೋ. ನನಗೆ ನಿನ್ನ ಸ್ತ್ರೀರೂಪದಲ್ಲಿ ಅಭಿಲಾಷೆಯಿದೆ” ಎಂದನು. ಆ ಗಂಧರ್ವನೂ, ಶಿಖಂಡಿಯೂ ಇಬ್ಬರೂ ಕ್ರಮವಾಗಿ ಸ್ತ್ರೀಯಾಗಿಯೂ, ಪುರುಷನಾಗಿಯೂ ರೂಪವನ್ನು ಬದಲಾಯಿಸಲು ನಿರ್ಣಯಮಾಡಿಕೊಂಡರು. ಆ ಶಿಖಂಡಿನಿಯು ವೀರರಾದ ಶತ್ರುಗಳನ್ನು ಸದೆಬಡಿಯುವಂತಹ ಶಕ್ತಿಯುಳ್ಳ ಶಿಖಂಡಿಯೆಂಬ ಪುರುಷನಾದಳು. ಆ ಗಂಧರ್ವರಾಜನೂ ಅಧಿಕಸಂತೋಷದಿಂದ ಹಿಗ್ಗುತ್ತ ಹೋದನು. ಮಹಾತೇಜಸ್ವಿಯಾದ ದ್ರುಪದಕುಮಾರನಾದ ಶಿಖಂಡಿಯೂ ಅಧಿಕ ಸಂತುಷ್ಟನಾಗಿ ಬುದ್ಬುದಕವೆಂಬ ಸ್ಥಳಕ್ಕೆಹೋಗಿ ಹಲವು ವಿಧದ ಅಸ್ತ್ರಗಳನ್ನು ಅಭ್ಯಾಸಮಾಡಿದನು. ಕುರುನಂದನಾ! ಆತನು ಅಲ್ಲಿ ದಿವ್ಯಾಸ್ತ್ರಗಳನ್ನೆಲ್ಲ ಅಭ್ಯಾಸಮಾಡಿ, ವಿಶೇಷಕಾಂತಿಯುಕ್ತನಾಗಿ, ಸ್ವದೇಶವಾದ ಪಾಂಚಾಲದೇಶಕ್ಕೆ ಬಂದು, ತಂದೆಯ ಪಾದಕಮಲಗಳಿಗೆ ವಂದನವನ್ನು ಮಾಡಿ, ಅಂಜಲಿಬದ್ಧನಾಗಿ “ನೀನು ಭೀಷ್ಮನಿಗಾಗಿ ಯಾವ ವಿಧದಲ್ಲಿಯೂ ಭಯಪಡಬೇಕಾದುದಿಲ್ಲ” ಎಂದನು.

ಇದು ನೂರಹತ್ತನೆಯ ಅಧ್ಯಾಯವು.



## { ವಿಚಿತ್ರವೀರ್ಯನು ಅಂಬಿಕೆ, ಮತ್ತು ಅಂಬಾಲಿಕೆಯರನ್ನು ಮದುವೆಯಾದುದು. ಆತನ ಮರಣವು }

ಅಂಬೆಯು ಹೊರಟುಹೋದಮೇಲೆ, ಭೀಷ್ಮನು ಇತ್ತಲಾಗಿ ವಿಚಿತ್ರವೀರ್ಯನಿಗೆ ಧರ್ಮವಿಧಿಗನುಸಾರವಾಗಿ ಅಂಬಿಕೆ, ಅಂಬಾಲಿಕೆಯೆಂಬಿಬ್ಬ

ರನ್ನೂ ಅಗ್ನಿಸಾಕ್ಷಿಕವಾಗಿ ವಿವಾಹಮಾಡಿದನು. ವಿಚಿತ್ರವೀರ್ಯನು ಧರ್ಮ ದಲ್ಲಿಯೇ ನಟ್ಟಮನಸ್ಸುಳ್ಳವನಾದರೂ, ಆ ಸ್ತ್ರೀಯರ ರೂಪಸಂಪತ್ತಿಗೆ ಮ ರುಳಾಗಿ, ಆ ಹೆಂಡತಿಯರೊಡನೆ ಕಾಮೋಪಭೋಗದಲ್ಲಿಯೇ ಮಗ್ನನಾಗಿ ದ್ದನು. ಆ ಸ್ತ್ರೀಯರೋ ಒಳ್ಳೇ ತರುಣಿಯರು. ಅವರಿಗೆ ಕಪ್ಪಾಗಿ ಸುರುಳಿ ಗಟ್ಟಿದ ಮುಂಗುರುಳು! ಕೆಂಪಾದ ನಖಗಳು! ಉಬ್ಬಿದ ಸ್ತನಗಳು! ದೊಡ್ಡದಾದ ನಿತಂಬಗಳು! ಈ ಮುಂತಾದ ಸರ್ವಲಕ್ಷಣಸಂಪನ್ನರಾದ ಆ ಸುಂದರೀಮಣಿಯರಿಬ್ಬರೂ ಈತನು ತಮಗೆ ಅನುರೂಪನಾದ ಪತಿಯಾಗಿ ಲಭಿಸಿರುವನೆಂದು ನಿಶ್ಚಯಿಸಿ, ಅವರೂ ಆತನನ್ನು ಎಡೆಬಿಡದೆ ಸಂತೋಷ ಗೊಳಿಸುತಿದ್ದರು. ಆ ಸ್ತ್ರೀಯರಿಬ್ಬರೂ ಒಬ್ಬರಿಗೊಬ್ಬರು ಸ್ನೇಹವುಳ್ಳವ ರಾಗಿ ಒಂದೇ ಮನಸ್ಸುಳ್ಳವರಂತೆ ಇದ್ದರು. ವಿಚಿತ್ರವೀರ್ಯನೂ ಅಶ್ವಿ ನೀದೇವತೆಗಳಿಗೆ ಸಮಾನವಾದ ರೂಪಸಂಪತ್ತಿಯಿಂದಲೂ, ದೇವತೆಗಳಿಗೆ ಸಮಾನವಾದ ಪರಾಕ್ರಮದಿಂದಲೂ, ತನ್ನನ್ನು ನೋಡಿದ ಹೆಂಗಸರ ಮನಸ್ಸನ್ನು ಅಪಹರಿಸುತಿದ್ದನು. ಹೀಗೆ ಆತನು ಆ ಸುಂದರೀಮಣಿಯ ರೊಡನೆ ಸಕಲಭೋಗಗಳನ್ನೂ ಅನುಭವಿಸಿ, ಅದರಲ್ಲಿ ಮಿತಿಮೀರಿದುದ ರಿಂದ, ಕಡೆಗೆ ಕ್ಷಯರೋಗಕ್ಕೆ ಗುರಿಯಾದನು. ಆತನ ಆಪ್ತರೂ, ಬಂಧು ಗಳೂ ಆಲೋಚಿಸಿ, ಒಳ್ಳೆಯ ವೈದ್ಯರಿಂದ ಚಿಕಿತ್ಸೆಮಾಡಿಸಿದರು. ಆದ ರೇನು? ಕುರುವಂಶತಿಲಕನಾದ ಆತನು ಸೂರ್ಯನು ಅಸ್ತಮಿಸುವಂತೆ ಮೃತನಾದನು. ಆಗ ಧರ್ಮಾತ್ಮನಾದ ಭೀಷ್ಮನು, ದುಃಖಕ್ಕೂ, ಚಿಂತೆ ಗೂ ಗುರಿಯಾಗಿ, ಸತ್ಯವತಿಯೊಡನೆ ಆಲೋಚಿಸಿ, ವಿದ್ವಾಂಸರಾದ ಪುರೋ ಹಿತರೊಡನೆ, ಮತ್ತು ಕುರುವಂಶಶ್ರೇಷ್ಠರೊಡನೆ ಕೂಡಿ ಆ ವಿಚಿತ್ರವೀರ್ಯ ನಿಗೆ ಅಪರಕರ್ಮಗಳೆಲ್ಲವನ್ನೂ ಕ್ರಮವಾಗಿ ನಡೆಸಿದನು.

ಇದು ನೂರ ಹನ್ನೊಂದನೆಯ ಅಧ್ಯಾಯವು.



(ಸತ್ಯವತಿಯು ವಿಚಿತ್ರವೀರ್ಯನ ಭಾರ್ಯೆಯರಲ್ಲಿ ಸಂತಾನೋತ್ಪತ್ತಿಗಾಗಿ ಭೀಷ್ಮನಿಗೆ ನಿಯೋಗಿಸುವುದು. ಆತನು ನಿರಾಕರಿಸಿದುದು.)

ಜನಮೇಜಯಾ! ಸತ್ಯವತೀ ದೇವಿಯು ಮಕ್ಕಳಲ್ಲಿ ವಿಶೇಷ ಪ್ರೀತಿಯುಳ್ಳವಳು. ಪುತ್ರನು ಮೃತನಾಗಲು, ದುಃಖದಿಂದ ಪೀಡಿತಳಾಗಿ, ವ್ಯಸನಸಮುದ್ರದಲ್ಲಿ ಮುಳುಗಿ ಕೃಶಳಾಗುತಿದ್ದಳು. ಸೊಸೆಯರೊಡನೆ ತಾನೂ ಆ ಪುತ್ರನಿಗೆ ಅಪರಕರ್ಮಕ್ರಿಯೆಗಳನ್ನು ಮಾಡಿ, ಪತಿಯು ಹೋದ ದುಃಖದಿಂದ ಕೊರಗುತ್ತಿದ್ದ ತನ್ನ ಸೊಸೆಯರನ್ನು ಸಮಾಧಾನಪಡಿಸಿ, ತನ್ನ ಕುಲಧರ್ಮವನ್ನೂ, ತನ್ನ ಮಗನ ಮಾತೃಪಿತೃವಂಶದ ಅಭಿವೃದ್ಧಿಗಳನ್ನೂ ವಿಮರ್ಶಿಸಿ ನೋಡಿ, ಭೀಷ್ಮನನ್ನು ಕುರಿತು “ಯಾವಾಗಲೂ ಬಿಡದೆ ಧರ್ಮವನ್ನು ಆಚರಿಸುತ್ತ, ಕೀರ್ತಿವಂತನೂ, ಕುರುವಂಶತಿಲಕನೂ ಆದ ಶಂತನುವಿನ ಪಿಂಡಪ್ರದಾನವೂ, ಕೀರ್ತಿಯೂ, ಸಂತಾನವೂ ನಿನ್ನೊಬ್ಬನನ್ನೇ ಈಗ ಆಶ್ರಯಿಸಿರುವುದರಿಂದ, ಅವೆಲ್ಲವೂ ನಿನ್ನಿಂದಲೇ ನಡೆಯಬೇಕಾಗಿದೆ. ನಿನ್ನ ಸಹೋದರನಾದ ವಿಚಿತ್ರವೀರ್ಯನು ಸ್ವರ್ಗಸ್ಥನಾದನು. ಸತ್ಕರ್ಮಾಚರಣೆಯಿಂದ ಸ್ವರ್ಗಪ್ರಾಪ್ತಿಯು ಹೇಗೆ ಸಿದ್ಧವೋ, ಸತ್ಯವಾಡುವುದರಿಂದ ದೀರ್ಘಾಯುಷ್ಯವನ್ನು ಪಡೆಯುವುದು ಹೇಗೆ ನಿಜವೋ, ಹಾಗೆಯೇ ಧರ್ಮವು ನಿನ್ನಲ್ಲಿ ನೆಲೆಗೊಂಡಿರುವುದು. ಧರ್ಮಜ್ಞಾ! ನಿನಗೆ ಧರ್ಮತತ್ವವು ಸಾಕಲ್ಯವಾಗಿಯೂ, ಬೇರೆಬೇರೆಯಾಗಿಯೂ ತಿಳಿದಿರುವುದು. ನಿನಗೆ ಹಲವು ವೇದಾಂಗಗಳೆಲ್ಲ ತಿಳಿದಿರುವುವು. ಧರ್ಮಮಾರ್ಗವನ್ನೇ ಬಿಡದೆ ಅವಲಂಬಿಸಿರುವೆ. ಕುಲಾಚಾರಗಳನ್ನೆಲ್ಲ ನೀನು ಚೆನ್ನಾಗಿ ಬಲ್ಲವನು. ಅನ್ಯೋನ್ಯ ವಿರುದ್ಧಕಾರ್ಯಗಳನ್ನು ಮಾಡಬೇಕಾದಾಗ, ಅವುಗಳಲ್ಲಿ ಉತ್ತಮಕರ್ಮವನ್ನು ನಿಶ್ಚಯಿಸಿಕೊಳ್ಳುವುದರಲ್ಲಿ ನೀನು ಶುಕ್ರನಿಗೂ ಬೃಹಸ್ಪತಿಗೂ ಸಮಾನನಾಗಿರುವೆ ಧರ್ಮರಕ್ಷಕರಲ್ಲಿ ನೀನೇ ಮೇಲಾದವನು. ಆದುದರಿಂದ ನನಗೆ ನಿನ್ನಲ್ಲಿ ದೃಢವಾದ ನಂಬಿಕೆ ಹುಟ್ಟಿದೆ. ನಿನಗೊಂದು ಕಾರ್ಯವನ್ನು ನಿಯಮಿಸುವೆನು. ನೀನು ಅದನ್ನು ಕೇಳಿ ಅದರಂತೆ ಆಚರಿಸಬೇಕು. ಪರಾಕ್ರಮಶಾಲಿಯೂ, ನನ್ನ ಮಗನೂ, ನಿನಗೆ ತಮ್ಮನೂ ಆದ ವಿಚಿತ್ರವೀರ್ಯನು ಸಂತ

ತಿಯಿಲ್ಲದೆ ಸಣ್ಣ ವಯಸ್ಸಿನಲ್ಲಿಯೇ ಸ್ವರ್ಗಸ್ಥನಾದನು. ಅವನ ಪತ್ನಿಯರಾದ ಈ ಕಾಶೀರಾಜಕನ್ಯೆಯರಿಬ್ಬರೂ ಸಂತಾನಕಾಂಕ್ಷಿಗಳಾಗಿರುವರು. ನಮ್ಮ ವಂಶಾಭಿವೃದ್ಧಿಗಾಗಿ ನೀನು ಅವರಲ್ಲಿ ಪುತ್ರಸಂತತಿಯನ್ನುಂಟುಮಾಡು. ಮಹಾಬಾಹೂ! ನಾನಾಗಿ ಅನುಮತಿಸುವುದರಿಂದ ನೀನು ಈ ಕಾರ್ಯವನ್ನು ಮಾಡಬಹುದು. ಸದ್ಯಕ್ಕೆ ಈ ರಾಜ್ಯಕ್ಕೆ ನೀನೇ ಪಟ್ಟವನ್ನು ಕಟ್ಟಿಕೊಂಡು ದೇಶವನ್ನು ಪರಿಪಾಲಿಸು. ನೀನು ಅವರನ್ನು ಧರ್ಮದಿಂದ ಪಾಣಿಗ್ರಹಣಮಾಡಿಕೊಳ್ಳುವವನಾಗು. ನಿನ್ನ ಪಿತೃಗಳನ್ನು ನರಕದಲ್ಲಿ ಮುಳುಗಿಸಬೇಡ! ಅವರನ್ನು ಸ್ವರ್ಗಕ್ಕೇರಿಸು" ಎಂದಳು.

ತಾಯಿಯೂ, ಬಂಧುವರ್ಗಗಳೂ ಹೀಗೆ ಹೇಳುತ್ತಿರಲು, ಧರ್ಮರತನಾದ ಭೀಷ್ಮನು ಧರ್ಮಾನುಸಾರವಾಗಿ ಪ್ರತ್ಯುತ್ತರವನ್ನು ಕೊಡುತ್ತಾ, "ಅಮ್ಮಾ! ನೀನು ಹೇಳುವುದೇನೋ ನ್ಯಾಯವೇ! ಸಂತಾನವಿಷಯವಾಗಿ ನಾನು ಮಾಡಿರುವ ಪ್ರತಿಜ್ಞೆಯೂ ನಿನಗೆ ತಿಳಿದಿರುವುದು. ನಿನ್ನ ಕನ್ಯಾಶುಲ್ಕಕ್ಕಾಗಿ ನಡೆದ ವಿಷಯವೆಲ್ಲವೂ ನಿನಗೂ ತಿಳಿದಿದೆ. ಆದುದರಿಂದ ಈಗಲೂ ನಾನು ನಿನ್ನ ಮುಂದೆ ಮತ್ತೊಮ್ಮೆ ಸತ್ಯವಾಗಿ ಪ್ರತಿಜ್ಞೆಮಾಡುವೆನು. ನಾನು ಮೂರು ಲೋಕವನ್ನಾದರೂ ಬಿಟ್ಟುಬಿಡುವೆನು. ಸ್ವರ್ಗವನ್ನಾದರೂ ಬಿಡುವೆನು. ಇವೆಲ್ಲಕ್ಕಿಂತಲೂ ಅಧಿಕವಾದುದು ಬೇರೆ ಯಾವುದಿದ್ದರೂ ಅದನ್ನೆಲ್ಲ ಬಿಡಲು ಸಿದ್ಧನಾಗಿರುವೆನು. ಸತ್ಯವನ್ನುಮಾತ್ರ ಯಾವ ವಿಧದಲ್ಲಿಯೂ ಬಿಡಲಾರೆನು. ಭೂಮಿಯು ತನ್ನ ಗಂಧವನ್ನೂ, ನೀರು ದ್ರವವನ್ನೂ, ತೇಜಸ್ಸು ತನ್ನ ರೂಪವನ್ನೂ, ವಾಯುವು ತನ್ನ ಗುಣವನ್ನೂ, ಅಗ್ನಿಯು ತನ್ನ ಉಷ್ಣವನ್ನೂ, ಆಕಾಶವು ಶಬ್ದವನ್ನೂ, ಚಂದ್ರನು ತನ್ನ ಕಿರಣಗಳಲ್ಲಿರುವ ಶೀತಲಸ್ವಭಾವವನ್ನೂ, ಇಂದ್ರನು ತನ್ನ ಶಕ್ತಿಯನ್ನೂ, ಧರ್ಮದೇವತೆಯು ಧರ್ಮವನ್ನೂ ಬಿಟ್ಟರೂ ಬಿಡಬಹುದು. ನಾನು ಮಾತ್ರ ಯಾವ ವಿಧದಲ್ಲಿಯೂ ಸತ್ಯಕ್ಕೆ ತಪ್ಪಲಾರೆನು. ಒಂದು ವೇಳೆ ಲೋಕಕ್ಕೆಲ್ಲಾ ಪ್ರಳಯವು ಬಂದರೂ ಅದನ್ನು ತಪ್ಪಿಸುವುದಕ್ಕಾಗಲಿ, ತ್ರಿಲೋಕಾಧಿಪತ್ಯಕ್ಕಾಗಲಿ, ಹಣದಾಸೆಯಿಂದಾಗಲಿ ನಾನುಮಾತ್ರ ಆಡಿದ ಮಾತಿಗೆ ತಪ್ಪುವವನಲ್ಲ" ಎಂದನು.

ಭೀಷ್ಮನು ಹೀಗೆ ಹೇಳಲು, ಸತ್ಯವತಿಯು ಆತನನ್ನು ನೋಡಿ "ಭೀಷ್ಮಾ! ನೀನು ಸತ್ಯಸಂಕಲ್ಪನೆಂಬುದನ್ನು ಬಲ್ಲೆನು. ಇಷ್ಟಪಟ್ಟರೆ ನೀನು ನಿನ್ನ ಶಕ್ತಿಯಿಂದ ಮೂರು ಲೋಕವನ್ನೂ ಸೃಷ್ಟಿಸಬಲ್ಲೆ. ನನ್ನ ವಿಷಯವಾಗಿ ನೀನು ಮಾಡಿದ ಪ್ರತಿಜ್ಞೆಗೆ ಸ್ವಲ್ಪವೂ ವಿರಾರುವುದಿಲ್ಲವೆಂಬುದನ್ನೂ ನಾನು ಚೆನ್ನಾಗಿ ಬಲ್ಲೆನು. ಆದರೂ ಆಪದ್ಧರ್ಮವನ್ನವಲಂಬಿಸಿ ನೀನು ನಿನ್ನ ಪಿತೃಗಳಿಗೆ ಮಾಡಬೇಕಾದ ಕರ್ತವ್ಯವನ್ನು ನೆರವೇರಿಸು. ನಿನ್ನ ವಂಶವು ಮುಂದುವರಿಯುವಂತೆಯೂ, ನಿನ್ನ ಧರ್ಮವು ಕೆಡದಂತೆಯೂ, ನಿನ್ನ ಕುಲದವರೆಲ್ಲರೂ ಸಂತೋಷಿಸುವಂತೆಯೂ, ನಿನಗೂ ಹಿತವಾದ ಈ ಕಾರ್ಯವನ್ನು ನೆರವೇರಿಸು" ಎಂದಳು. ಆಕೆಯು ಧರ್ಮವಿರುದ್ಧವಾದ ಈ ಮಾತುಗಳಿಂದ ತನ್ನನ್ನು ಬಲಾತ್ಕರಿಸುತ್ತಿರುವುದನ್ನು ನೋಡಿ ಭೀಷ್ಮನು ತಿರುಗಿ "ಅಮ್ಮಾ! ಧರ್ಮವನ್ನಾಲೋಚಿಸಿ ನೋಡು. ನಮ್ಮನ್ನೆಲ್ಲ ನಾಶಕ್ಕೆ ಗುರಿಮಾಡಬೇಡ. ಕ್ಷತ್ರಿಯನು ಸತ್ಯಕ್ಕೆ ತಪ್ಪಬಾರದು. ಹಾಗೆ ತಪ್ಪುವುದು ಧರ್ಮಶಾಸ್ತ್ರಕ್ಕನುಸಾರವಲ್ಲ. ಶಂತನುವಿನ ಸಂತಾನವು ಭೂಮಿಯಲ್ಲಿ ನಶಿಸಿಹೋಗದಂತಿರಬೇಕಾದರೆ, ಸನಾತನವಾದ ಕ್ಷತ್ರಿಯ ಧರ್ಮವೊಂದನ್ನು ನಿನಗೆ ತಿಳಿಸುವೆನು. ಪ್ರಾಜ್ಞರೂ, ಆಪದ್ಧರ್ಮಗಳಲ್ಲಿಯೂ, ರಾಜನೀತಿಗಳಲ್ಲಿಯೂ ನಿಪುಣರೂ ಆದ ಪುರೋಹಿತರೊಡನೆ ನೀನೂ ಆಲೋಚಿಸಿ ನೋಡು. ಲೋಕದ ನಡತೆಯನ್ನೂ ತಿಳಿದು ನಡೆ" ಎಂದನು.

ಇದು ನೂರ ಹನ್ನೆರಡನೆಯ ಅಧ್ಯಾಯವು.



### ದೀರ್ಘತಮನೆಂಬ ಋಷಿಯ ಚರಿತ್ರವು.

ಪೂರ್ವದಲ್ಲಿ ಪರಶುರಾಮನು, ಹೈಹಯದೇಶದ ರಾಜನಾದ ಕಾರ್ತವೀರ್ಯಾರ್ಜುನನು ತನ್ನ ತಂದೆಯನ್ನು ಕೊಂದುದಕ್ಕಾಗಿ ಸಹಿಸಲಾರದೆ ಆ ರಾಜನನ್ನು ತನ್ನ ಕೊಡಲಿಯಿಂದ ಕಡಿದು ಕೊಂದನು. ಆ ಅರ್ಜುನನ ಸಹಸ್ರಬಾಹುಗಳೂ ಕತ್ತರಿಸಲ್ಪಟ್ಟುವು. ಆಗ ಪರಶುರಾಮನು ಲೋಕಕ್ಕೆ ಮಾಡಲಸಾಧ್ಯವಾದ ಕಾರ್ಯಗಳೆಲ್ಲವನ್ನೂ ಮಾಡಿದನು. ಆತನು

ಬಿಲ್ಲುಹಿಡಿದು ಭೂಮಿಯೆಲ್ಲವನ್ನೂ ಏಕರಥನಾಗಿ ಸುತ್ತಿ, ಕ್ಷತ್ರಿಯರನ್ನೆಲ್ಲ ಮಹಾಸ್ತ್ರಗಳಿಂದ ಕೊಲ್ಲುತ್ತಾ ಬಂದನು. ಅಸಂಖ್ಯಾತವಾದ ತನ್ನ ಅಸ್ತ್ರಗಳಿಂದ ಭೂಮಿಯಲ್ಲಿ ಕ್ಷತ್ರಿಯಕುಲವೇ ಇಲ್ಲದಂತೆ ಮಾಡಲು, ಅವರನ್ನು ಇಪ್ಪತ್ತೊಂದುಸಾರಿ ಸಂಹರಿಸಿದನು. ಭೂಮಿಯಲ್ಲಿ ಕ್ಷತ್ರಿಯರೇ ಇಲ್ಲದಂತಾಗಲು, ಆಗ ಎಲ್ಲಾ ದೇಶದ ಕ್ಷತ್ರಿಯ ಸ್ತ್ರೀಯರೆಲ್ಲರೂ ಸೇರಿ, ವೇದಪಾರಂಗತರಾದ ಬ್ರಾಹ್ಮಣರಿಂದ ತಮ್ಮಲ್ಲಿ ಸಂತಾನವನ್ನು ಪಡೆದರು. ಪಾಣಿಗ್ರಹಣವಾದವನಿಗೆ ಹುಟ್ಟಿದವನೇ ಪುತ್ರನೆಂದು ವೇದದಲ್ಲಿ ವಿಹಿತವಾಗಿದೆ. ಆ ಕ್ಷತ್ರಿಯಸ್ತ್ರೀಯರು ಕಾಮದಿಂದಿಲ್ಲದೆ ಕೇವಲ ಧರ್ಮಬುದ್ಧಿಯಿಂದ ಬ್ರಾಹ್ಮಣರನ್ನು ಸೇರಿದುದರಿಂದ, ನಶಿಸಿದ ಕ್ಷತ್ರಿಯಕುಲವು ಮತ್ತೆ ಚಿಗುರಿತು. (ಇಂತಹ ನಿದರ್ಶನಗಳು ಇನ್ನೂ ಹಲವುಂಟು. ಕಲ್ಮಾಷಪಾದನ ಭಾರ್ಯೆಯಾದ ಮದಯಂತಿಗೆ ವಸಿಷ್ಠರಿಂದ ಸಂತಾನವಾಯಿತು.) ಇದೇ ವಿಷಯದಲ್ಲಿ ಪುರಾತನವಾದ ಇತಿಹಾಸವೊಂದಿರುವುದು. ಅದನ್ನೂ ನಿನಗೆ ತಿಳಿಸುವೆನು ಕೇಳು. ಉಚಥ್ಯನೆಂಬ ಮಹಾಜ್ಞಾನಿಯಾದ ಋಷಿಯೊಬ್ಬನಿದ್ದನು. ಆತನಿಗೆ ಮಮತೆಯೆಂಬ ಪತ್ನಿಯಿದ್ದಳು. ಆ ಋಷಿಯು ಆಕೆಯಲ್ಲಿ ವಿಶೇಷ ಪ್ರೀತಿಯಿಟ್ಟಿದ್ದನು ಉಚಥ್ಯನ ಕಿರಿಯ ತಮ್ಮನೂ, ದೇವಪುರೋಹಿತನೂ, ಮಹಾತೇಜಸ್ವಿಯೂ ಆದ ಬೃಹಸ್ಪತಿಯು ಒಮ್ಮೆ ಆಕೆಯನ್ನು ಸಂಗಮಿಸಲು ಬಂದನು. ಮಮತೆಯು ಆಗ ತನ್ನ ಮೈದುನನನ್ನು ಕುರಿತು “ ನಾನು ನಿನ್ನ ಜ್ಯೇಷ್ಠಭ್ರಾತೃವಿನಿಂದ ಗರ್ಭವನ್ನು ಧರಿಸಿರುವೆನು. ಈಗ ನಿನ್ನ ಆಶೆಯನ್ನು ಬಿಡು. ಬೃಹಸ್ಪತೀ ! ನೀನು ಮಹಾಮಹಿಮನು. ಈಗ ಉಚಥ್ಯಪುತ್ರನು ನನ್ನ ಹೊಟ್ಟೆಯಲ್ಲಿರುವಾಗಲೇ ಷಡಂಗಗಳಿಂದ ಕೂಡಿದ ವೇದವನ್ನು ಅಧ್ಯಯನಮಾಡಿರುವನು. ನಿನ್ನ ವೀರ್ಯವೂ ವ್ಯರ್ಥವಾಗಬಾರದು. ಈ ಗರ್ಭದಲ್ಲಿ ಒಂದೇ ಸಲಕ್ಕೆ ಇಬ್ಬರಿಗೆ ಸ್ಥಳವಿಲ್ಲ. ಆದುದರಿಂದ ಇಂತಹ ಕಾಲದಲ್ಲಿ ನಿನ್ನ ಉದ್ದೇಶವನ್ನು ನೆರವೇರಿಸಲು ಅಭಿಲಾಷೆಪಡುವುದು ಯೋಗ್ಯವಲ್ಲ ” ಎಂದು ಹೇಳಿದಳು. ಆಕೆಯು ಹೀಗೆ ಒತ್ತಿ ಹೇಳುತ್ತಿರುವಾಗಲೂ, ಬೃಹಸ್ಪತಿಯು ವಿಶೇಷ ಬುದ್ಧಿಸಂಪನ್ನನಾಗಿದ್ದರೂ, ತನ್ನ ಮನಸ್ಸನ್ನು ನಿಗ್ರಹಿಸಲಾರದೆ ಹೋದನು. ಆಗ ಆತನು, ತನ್ನನ್ನು ಪ್ರೀತಿಸದಿದ್ದಾಗಲೂ ತನ್ನ

ಅಣ್ಣನ ಹೆಂಡತಿಯೊಡನೆ ಕಾಮೇಚ್ಛೆಯಿಂದ ಬಲಾತ್ಕರಿಸಿ ಸೇರಿದನು. ಈ ಸಂದರ್ಭದಲ್ಲಿ ಒಳಗಿದ್ದ ಗರ್ಭವು "ಅಪ್ಪಾ! ಈ ರತಿಕ್ರೀಡೆಯನ್ನು ನಿಲ್ಲಿಸು. ಇಲ್ಲಿ ಇಬ್ಬರಿರಲು ಸ್ಥಳವಿಲ್ಲ. ನಾನು ಮೊದಲೇ ಇಲ್ಲಿರುವೆನು. ನಿನ್ನ ವೀರ್ಯವು ವ್ಯರ್ಥವಾಗಬಾರದು. ನೀನು ನನ್ನನ್ನು ಬಾಧೆಪಡಿಸಬೇಡ!" ಎಂದಿತು. ಬೃಹಸ್ಪತಿಯು ಗರ್ಭದಲ್ಲಿರುವ ಆ ಶಿಶುವಿನ ಮಾತುಗಳನ್ನೂ ಗಮನಿಸದೆ, ಆ ಸ್ತ್ರೀಯೊಡನೆ ರತಿಸುಖವನ್ನನುಭವಿಸಲು ಹೋದನು. ಆಗ ಆ ಸ್ತ್ರೀಯ ಗರ್ಭದಲ್ಲಿದ್ದ ಶಿಶುವು ಬೃಹಸ್ಪತಿಯ ವೀರ್ಯವು ಬರುವ ದಾರಿಯನ್ನು ಕಾಲಿನಿಂದ ಮುಚ್ಚಿ ತಡೆಯಿತು. ಮಹಾಮಹಿಮನಾದ ಬೃಹಸ್ಪತಿಯು ಕೆಳಗೆ ಬಿದ್ದ ತನ್ನ ವೀರ್ಯವನ್ನು ನೋಡಿ ಕೋಪಿಸಿಕೊಂಡು, ಗರ್ಭದಲ್ಲಿರುವ ಉಚಥ್ಯಪುತ್ರನನ್ನು ಕುರಿತು "ಸಮಸ್ತ ಪ್ರಾಣಿಗಳೂ ಆಸೆಪಡತಕ್ಕ ಇಂತಹ ಸಮಯವು ಪ್ರಾಪ್ತಿಸಿದಾಗ, ನೀನು ನನ್ನನ್ನು ನೋಡಿ ಹೀಗೆ ಮಾತನಾಡಿದೆ! ಆದುದರಿಂದ ನೀನು ದೀರ್ಘವಾದ ತಮಸ್ಸನ್ನು ಹೊಂದು" ಎಂದು ಶಪಿಸಿದನು. ಆತನು, ಬೃಹಸ್ಪತಿಯ ಶಾಪದಿಂದ ದೀರ್ಘತಮಸ್ಸೆಂಬ ಹೆಸರಿನಿಂದ ಹುಟ್ಟುಕುರುಡನಾದನು. ವೇದಪಾರಂಗತನೂ, ಬುದ್ಧಿಶಾಲಿಯೂ ಆದ ದೀರ್ಘತಮಸ್ಸು ಹುಟ್ಟುಕುರುಡನಾಗಿದ್ದರೂ, ತನ್ನ ವಿದ್ಯಾಪ್ರಭಾವದಿಂದ ಸುಂದರಿಯೂ, ತರುಣಿಯೂ ಆದ ಪ್ರದ್ವೇಷಿಯೆಂಬ ಬ್ರಾಹ್ಮಣಕನ್ಯೆಯನ್ನು ವಿವಾಹವಾದನು. ಉಚಥ್ಯವಂಶಾಭಿವರ್ಧಕರಾದ ಗೌತಮನೇ ಮೊದಲಾದ ಪುತ್ರರನ್ನು ಪಡೆದನು. ಧರ್ಮಾತ್ಮನೂ, ಮಹಾತ್ಮನೂ, ವೇದವೇದಾಂಗಪಾರಂಗತನೂ ಆದ ಆ ಮಹರ್ಷಿಯು, ಕಾಮಧೇನುವಿನ ಕುಮಾರನಿಂದ, ಪಶುಗಳ ಸಂಭೋಗಕ್ರಮವನ್ನು ಸಂಪೂರ್ಣವಾಗಿ ತಿಳಿದು, ನಾಚಿಕೆಯಿಲ್ಲದೆ ಅದರಂತೆ ಅಭ್ಯಾಸಮಾಡಲು ಪ್ರಯತ್ನಿಸಿದನು. ಆತನು ಹಾಗೆ ಮರ್ಯಾದೆಯನ್ನು ಬಿಟ್ಟು ಪ್ರವರ್ತಿಸುತ್ತಿರುವುದನ್ನು ಆ ಆಶ್ರಮದಲ್ಲಿ ವಾಸಮಾಡುವ ಋಷಿಗಳೆಲ್ಲರೂ ನೋಡಿ, ಆತನು ಮಾಡುವುದು ಪಾಪವೆಂಬ ಭ್ರಮೆಗೀಡಾಗಿ "ಅಹಾ! ಏನಿದು! ಈತನು ಆಶ್ರಮದಲ್ಲಿ ವಾಸಮಾಡಲು ಯೋಗ್ಯನಲ್ಲ. ಆದುದರಿಂದ ಪಾಪಚಿತ್ತನಾದ ಈತನ ಸಹವಾಸವನ್ನು ನಾವೆಲ್ಲರೂ ಬಿಟ್ಟುಬಿಡಬೇಕು" ಎಂದು ಒಬ್ಬರೊಡನೊಬ್ಬರು ಮಾತನಾಡಿಕೊಳ್ಳುತ್ತಾ

ಕೋಪಿಸಿಕೊಂಡರು. ದೀರ್ಘತಮನ ಪತ್ನಿಯೂ ಆತನ ಚರ್ಯೆಗೆ ಒಪ್ಪಲಿಲ್ಲ. ಹಾಗೆ ತನ್ನನ್ನು ತಿರಸ್ಕರಿಸುತ್ತಿರುವ ತನ್ನ ಪತ್ನಿಯನ್ನು ನೋಡಿ "ನೀನೂ ನನ್ನನ್ನು ದ್ವೇಷಿಸುತ್ತಿರುವುದೇಕೆ?" ಎಂದು ಕೇಳಿದನು. ಅದಕ್ಕೆ ಆಕೆಯು "ಭಾರ್ಯೆಯನ್ನು ಪೋಷಿಸುವುದರಿಂದ ಭರ್ತನೆಂದೂ, ಪಾಲಿಸುವುದರಿಂದ ಪತಿಯೆಂದೂ ಹೇಳುವರು. ನೀನು ನನಗೆ (ಇವೆರಡರಲ್ಲಿ ಒಂದೂ ಅಲ್ಲ) ಭರ್ತನೂ ಅಲ್ಲ! ಪತಿಯೂ ಅಲ್ಲ. ನೀನೋ, ಹುಟ್ಟಿದಂದಿನಿಂದ ಕುರುಡನಾಗಿರುವೆ. ಆದುದರಿಂದ ನಾನೇ ಇದುವರೆಗೂ ನಿನ್ನನ್ನೂ, ನಿನ್ನ ಮಕ್ಕಳನ್ನೂ ಪೋಷಿಸಿರುವೆನು. ಇನ್ನು ನಾನು ನಿಮ್ಮನ್ನು ಪೋಷಿಸಲಾರೆನು" ಎಂದಳು.

ಈ ಮಾತುಗಳನ್ನು ಕೇಳಿ ಆ ಋಷಿಯು ಕೋಪಿಸಿಕೊಂಡು, ಆಕೆಯನ್ನೂ, ಆಕೆಯ ಮಕ್ಕಳನ್ನೂ ನೋಡಿ "ನೀನು ನನ್ನನ್ನು ರಾಜಗೃಹಕ್ಕೆ ಕರೆದುಕೊಂಡು ಹೋದರೆ ನಿನಗೆ ಹಣವು ದೊರೆಯುವುದು" ಎಂದನು. ಪ್ರದ್ವೇಷಿಯು ಮತ್ತೆ ಆತನನ್ನು ಕುರಿತು "ನಿನ್ನಿಂದ ಒದಗುವ ಧನವೂ ದುಃಖಕಾರಣವಾದುದರಿಂದ, ಅದೂ ನನಗೆ ಬೇಡ. ಬ್ರಾಹ್ಮಣೋತ್ತಮಾ! ನಿನ್ನ ಇಷ್ಟಾನುಸಾರವಾಗಿ ಹೋಗು. ಹಿಂದಿನಂತೆ ನಾನು ನಿನ್ನನ್ನು ಪೋಷಿಸಲಾರೆನು" ಎಂದಳು. ಆಗ ದೀರ್ಘತಮಸ್ಸು "ಇದು ಮೊದಲು ಲೋಕದಲ್ಲಿ ಒಬ್ಬ ಸ್ತ್ರೀಗೆ ಆಕೆಯ ಪ್ರಾಣವಿರುವವರೆಗೂ ಒಬ್ಬ ಪತಿಯೇ ಗತಿ"ಯೆಂಬ ನಿಯಮವನ್ನು ಮಾಡಿಟ್ಟನು. "ಪತಿಯು ಮೃತನಾದರೂ, ಬದುಕಿದ್ದರೂ ಆ ಸ್ತ್ರೀಯು ಮತ್ತೊಬ್ಬ ಪುರುಷನನ್ನು ವಿವಾಹವಾಗಕೂಡದು. ಇನ್ನೊಬ್ಬ ಪತಿಯನ್ನು ವರಿಸಿದಲ್ಲಿ ಆಕೆಯು ಪತಿತಳಾಗುವಳು. ಇದು ನಿಶ್ಚಯವು. ಇದುಮೊದಲು ಪುರುಷರನ್ನು ಬಿಟ್ಟ ಸ್ತ್ರೀಯರು ಅವರಿಗೆ ಸಮಸ್ತ ಧನಸಂಪತ್ತಿಯಿದ್ದರೂ ಅವರು ವಾಸ್ತವದಲ್ಲಿ ಅದನ್ನು ಅನುಭವಿಸಲಾರರು. ಅವರು ರತಿಭೋಗದಿಂದ ಅಪಕೀರ್ತಿಗೂ, ಲೋಕನಿಂದೆಗೂ ಗುರಿಯಾಗುವರು" ಎಂದು ಶಪಿಸಿದನು. ಪತಿಯ ಶಾಪವನ್ನು ಕೇಳಿದಮೇಲೆ ಪ್ರದ್ವೇಷಿಗೆ ಕೋಪವು ಬಂದು "ಪುತ್ರರೇ! ಈತನನ್ನು ಗಂಗೆಯಲ್ಲಿ ತಳ್ಳಿರಿ" ಎಂದಳು. ತಾಯಿಯ ಅಪ್ಪಣೆಯು ಮೇರೆಗೆ ಲೋ

ಭಕ್ಕೂ, ಅಜ್ಞಾನಕ್ಕೂ ಒಳಗಾದ ಗೌತಮನೇ ಮುಂತಾದ ಆಕೆಯ ಮಕ್ಕಳು "ನಾವೇಕೆ ಈ ಮುದುಕನನ್ನು ಕಾಪಾಡಬೇಕು ?" ಎಂದು ಹೇಳುತ್ತಾ ಆತನನ್ನು ಕಟ್ಟಿ, ಒಂದು ತೆಪ್ಪದಲ್ಲಿ ಹಾಕಿ, ಅದನ್ನು ಗಂಗೆಯಲ್ಲಿ ಬಿಟ್ಟು ಮನೆಗೆ ಬಂದರು. ಕುರುಡನಾದ ಆ ಋಷಿಯು ಆ ತೆಪ್ಪದೊಡನೆಯೇ ಪ್ರವಾಹಮಾರ್ಗದಲ್ಲಿ ಸಿಕ್ಕಿ ತೇಲುತ್ತಾ, ಅನೇಕ ರಾಜ್ಯಗಳನ್ನು ದಾಟಿ ಹೋದನು. ಧಾರ್ಮಿಕರಲ್ಲಿ ಶ್ರೇಷ್ಠನಾದ ಬಲಿಯೆಂಬ ರಾಜನೊಬ್ಬನು ಸ್ನಾನಕ್ಕಾಗಿ ಗಂಗಾನದಿಗೆ ಹೋಗಿರಲು, ಆಗ ಪ್ರವಾಹಮಾರ್ಗದಲ್ಲಿ ತನ್ನ ಸಮೀಪಕ್ಕೆ ಕೊಚ್ಚಿಕೊಂಡು ಬಂದ ಆ ಋಷಿಯನ್ನು ನೋಡಿ ಆ ರಾಜನು ಅವನನ್ನು ಮೇಲಕ್ಕೆತ್ತಿದನು. ಆತನು ಯಾರೆಂದು ತಿಳಿದಮೇಲೆ ಆ ರಾಜಋಷಿಯು ಮುನಿವರನನ್ನು ಪೂಜಿಸಿ, "ಮಹಾತ್ಮಾ! ನನಗೆ ಸಂತಾನಪ್ರಾಪ್ತಿಗಾಗಿ ಧರ್ಮಾರ್ಥಕುಶಲರಾದ ಪುತ್ರರನ್ನು ಹುಟ್ಟಿಸಲು ನೀನು ಅರ್ಹನು" ಎಂದನು. ಆ ಋಷಿಯೂ ಅದಕ್ಕೆ ಒಪ್ಪಿದನು. ಆಗ ರಾಜನು ಸುಧೇಷ್ಣೆಯೆಂಬ ತನ್ನ ಪತ್ನಿಯನ್ನು ಆ ಋಷಿಯ ಬಳಿಗೆ ಕಳುಹಿಸಿದನು. ಆ ಋಷಿಯು ಕುರುಡನೆಂದೂ, ಮುದುಕನೆಂದೂ ತಿಳಿದು, ರಾಣಿಯು ಆತನೊಡನೆ ಸೇರಲು ಸಮ್ಮತಿಸಲಿಲ್ಲ. ತನಗೆ ಪ್ರತಿಯಾಗಿ ತನ್ನ ದಾದಿಯ ಮಗಳನ್ನು ಆತನ ಬಳಿಗೆ ಕಳುಹಿಸಿದಳು. ಋಷಿಯು ಆ ಶೂದ್ರಸ್ತ್ರೀಯ ಗರ್ಭದಲ್ಲಿ ಕಕ್ಷೀವಂತನೇ ಮೊದಲಾದ ಹನ್ನೊಂದುಮಂದಿ ಮಕ್ಕಳನ್ನು ಪಡೆದನು. ಆ ಮಕ್ಕಳೆಲ್ಲರೂ ವೇದಾಧ್ಯಯನಮಾಡುವುದನ್ನು ಕೇಳಿ, ಬಲಿರಾಜನು ಆ ಋಷಿಯನ್ನು ನೋಡಿ 'ಇವರು ನನ್ನ ಮಕ್ಕಳು ತಾನೇ ?' ಎಂದನು. ಮಹರ್ಷಿಯು "ಅಲ್ಲ! ನನ್ನ ಮಕ್ಕಳು! ನಿನ್ನ ಪಟ್ಟದ ರಾಣಿಯಾದ ಸುಧೇಷ್ಣೆಯು ಅಜ್ಞತೆಯಿಂದ, ಅಂಧನೂ, ವೃದ್ಧನೂ ಆದ ನನ್ನನ್ನು ನೋಡಿ ಅಸಹ್ಯಪಟ್ಟವಳಾಗಿ, ತನ್ನ ದಾದಿಯ ಮಗಳಾದ ಶೂದ್ರಕನ್ಯೆಯನ್ನು ನನ್ನ ಬಳಿಗೆ ಕಳುಹಿಸಿದಳು. ಕಕ್ಷಿವಂತನೇ ಮೊದಲಾದ ಈ ಮಕ್ಕಳು ಶೂದ್ರಸ್ತ್ರೀಯ ಗರ್ಭದಲ್ಲಿ ನನಗೆ ಹುಟ್ಟಿದವರಾದುದರಿಂದ, ಅವರು ನನ್ನ ಮಕ್ಕಳೇಹೊರತು ನಿನ್ನ ಮಕ್ಕಳಲ್ಲ" ಎಂದನು. ಆಗ ರಾಜನಾದ ಆ ಬಲಿಯು, ಆ ಋಷಿಶ್ರೇಷ್ಠನನ್ನು ಬಹಳವಾಗಿ ಬೇಡಿಕೊಂಡು, ಮತ್ತೆ ತನ್ನ ಭಾರ್ಯೆಯಾದ ಸುಧೇಷ್ಣೆಯನ್ನು ಆತನ ಬಳಿಗೆ

ಕಳುಹಿಸಿದನು. ಆ ಋಷಿಯು ರಾಣಿಯ ದೇಹವನ್ನು ಮುಟ್ಟಿ “ ನಿನಗೆ ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳ ಅಂಗ, ವಂಗ, ಕಳಿಂಗ, ಪುಂಡ್ರ, ಸುಹ್ಮರೆಂಬ ಐದುಮಂದಿ ಮಕ್ಕಳು ಹುಟ್ಟುವರು. ಅವರ ಹೆಸರಿನಿಂದಲೇ ಭೂಮಿಯಲ್ಲಿ ಐದು ರಾಜ್ಯಗಳೂ ಪ್ರಸಿದ್ಧವಾಗುವುವು ” ಎಂದನು ಅದ ರಂತೆ ಆ ಕುಮಾರರ ಹೆಸರಿನಿಂದ ಐದು ರಾಜ್ಯಗಳು ಪ್ರಖ್ಯಾತಿಗೊಂಡುವು. ಪರಮಧರ್ಮಜ್ಞರೂ, ವೀರ್ಯವಂತರೂ, ಮಹಾಬಲಶಾಲಿಗಳೂ ಆದ ರಾಜ ರನೇಕರು ಹೀಗೆ ಭೂಮಿಯಲ್ಲಿ ಬ್ರಾಹ್ಮಣರಿಂದ ಹುಟ್ಟಿರುವರು. ಅಮ್ಮಾ! ಇದನ್ನು ನೀನು ಕೇಳಿದೆಯಲ್ಲವೆ? ಇನ್ನು ಈ ವಿಷಯದಲ್ಲಿ ನಿನ್ನ ಅಪೇಕ್ಷೆ ಯಿದ್ದಂತೆ ಮಾಡಬಹುದು ” ಎಂದನು.

ಇದು ನೂರ ಹದಿಮೂರನೆಯ ಅಧ್ಯಾಯವು

---

(ಸತ್ಯವತಿಯು ವ್ಯಾಸಮುನಿಯನ್ನು ಸ್ಮರಿಸಿ, ಅವನೊಡನೆ ಅಂಬಿಕೆ, ಮತ್ತು ಅಂಬಾಲಿಕೆಯರಲ್ಲಿ ಪುತ್ರೋತ್ಪತ್ತಿ ಮಾಡುವಂತೆ ನಿಯಮಿಸಲು, ಆ ಮಹಾಮುನಿಯು ಅದಕ್ಕೆ ಅಂಗೀಕರಿಸಿದುದು)

ಭೀಷ್ಮನು ಸತ್ಯವತಿಯೊಡನೆ “ ಅಮ್ಮಾ! ಭರತವಂಶವು ಬೆಳೆ ಯುತಕ್ಕ ಒಳ್ಳೇ ಮಾರ್ಗವನ್ನು ನಾನು ತಿಳಿಸುವೆನು. ವಿಚಿತ್ರವೀರ್ಯನ ಭಾರ್ಯೆಯರಲ್ಲಿ ಪುತ್ರೋತ್ಪತ್ತಿಯನ್ನುಂಟುಮಾಡಲು ಗುಣವಂತನಾದ ಒಬ್ಬ ಬ್ರಾಹ್ಮಣನಿಗೆ ಧನವನ್ನು ಕೊಟ್ಟು ಪ್ರಾರ್ಥಿಸು ” ಎಂದನು. ಭೀ ಷ್ಮನು ಹೀಗೆ ಧರ್ಮಯುಕ್ತವಾಗಿಯೂ, ಸಹೇತುಕವಾಗಿಯೂ ಇರುವ ಈ ವಾಕ್ಯಗಳನ್ನು ಹೇಳಿದಮೇಲೆ, ಸತ್ಯವತಿಯು ಪುನಃ ಆತನೊಡನೆ “ ಉಚ ಥ್ಯನ ಮಗನಾದ ದೀರ್ಘತಮನನ್ನೂ, ಆತನ ಮಗನಾದ ಅಂಗನನ್ನೂ ಕುರಿತು ನೀನು ಹೇಳಿದುದು ಪುರಾಣಕಥೆ! ಈ ಕಾಲಕ್ಕೆ ತಕ್ಕಂತೆ ಆಚರಿಸ ಬೇಕಲ್ಲವೆ? ಭರತಕುಲೋದ್ದೀಪಕಾ! ನೀನೇ ನಮ್ಮ ಕುಲಕ್ಕೆ ಜ್ಯೇಷ್ಠನೂ, ಶ್ರೇಷ್ಠನೂ ಆಗಿರುವೆ. ತಂದೆಯ ಮಾತನ್ನು ನೆರವೇರಿಸಿದಂತೆ ತಾಯಿಯಾ ದ ನನ್ನ ಮಾತನ್ನೂ ನೀನು ಪಾಲಿಸಬೇಕು. ಇದು ಧರ್ಮವೆಂದೇ ತಿಳಿದು

ನಮ್ಮ ವಂಶಾಭಿವೃದ್ಧಿಗಾಗಿ ಆ ಕನ್ಯೆಯರೊಡನೆ ಸೇರು" ಎಂದಳು. ಅದಕ್ಕೆ ಭೀಷ್ಮನು "ಅಮ್ಮಾ! ನೀನು ಹೇಳಿದುದು ಧರ್ಮಯುಕ್ತವೆಂಬುದರಲ್ಲಿ ಸಂದೇಹವಿಲ್ಲ. ಆದರೆ, ನನ್ನ ಪ್ರತಿಜ್ಞೆಯು ನಿನಗೆ ತಿಳಿದಿಲ್ಲವೆ? ನಾನು ಪ್ರಾಣವನ್ನಾದರೂ ಬಿಡುವೆನು. ದೇವತ್ವಕ್ಕಾಗಲಿ, ತ್ರಿಲೋಕಾಧಿಪತ್ಯಕ್ಕಾಗಲಿ ನಾನು ಮಾಡಿದ ಪ್ರತಿಜ್ಞೆಯನ್ನು ತಪ್ಪುವವನಲ್ಲ" ಎಂದನು. ಸತ್ಯವತಿಯು ಆತನೊಡನೆ "ನಿನಗೆ ಧರ್ಮಗಳೆಲ್ಲವೂ ತಿಳಿದಿರುವುವು. ನಿನ್ನ ಪರಾಕ್ರಮವೂ ಅಸಾಧಾರಣವಾದುದು! ನಿನ್ನಲ್ಲಿ ಸತ್ಯವಿರುವುದನ್ನೂ ನಾನು ಬಲ್ಲೆನು. ನೀನು ಸಂಕಲ್ಪಿಸಿದರೆ ಈಗಲೇ ಬೇರೆ ಮೂರು ಲೋಕಗಳನ್ನೂ ಸೃಜಿಸಬಲ್ಲೆ. ಆದುದರಿಂದ ನಮ್ಮ ಕುಲವೂ, ಕುಲಧರ್ಮವೂ ಕೆಟ್ಟುಹೋಗದಂತೆಯೂ, ನಮಗೆ ಬೇಕಾದವರು ಸಂತುಷ್ಟಿಹೊಂದುವಂತೆಯೂ ನೀನು ಯತ್ನಿಸಬೇಕಲ್ಲವೆ?" ಎಂದಳು. ಅದಕ್ಕೆ ಭೀಷ್ಮನು "ನಮ್ಮ ಕುಲಕ್ಕೆಲ್ಲ ನೀನಲ್ಲವೇ ದೊಡ್ಡವಳು! ನಿನ್ನಲ್ಲಿ ಎಲ್ಲರಿಗೂ ವಿಶೇಷ ಗೌರವವುಂಟು. ನಮ್ಮ ಕುಲಾಭಿವೃದ್ಧಿಗೆ ಉತ್ತಮವಾದ ಉಪಾಯವನ್ನು ನೀನೇ ತಿಳಿಸಬಲ್ಲೆ. ಸ್ತ್ರೀಯರೇ ಕುಲಕ್ಕೆ ಮುಖ್ಯವಾದ ರಹಸ್ಯವನ್ನು ಜಾಗ್ರತೆಯಾಗಿ ಕಾಪಾಡುವರು. ಹಲವು ಮಾಯೆಗಳಿಂದ ಪುರುಷರನ್ನೂ ವಶಪಡಿಸಿಕೊಳ್ಳುವರು. ಸತ್ಯವತೀ! ನೀನು ಸತ್ಯವ್ರತವುಳ್ಳವಳು. ಆದುದರಿಂದ ನಾನು ನನ್ನ ವ್ರತವನ್ನು ಬಿಡದಂತೆಯೂ, ನಮ್ಮ ಕುಲವು ಕೆಟ್ಟುಹೋಗದಂತೆಯೂ, ನೀನೇ ಧರ್ಮಸೂಕ್ಷ್ಮವನ್ನು ಆಲೋಚಿಸಿ ನೋಡು" ಎಂದನು.

ಆಗ ಸತ್ಯವತಿಗೆ ನಾಚಿಕೆಯಿಂದ ಮಾತುಗಳು ತಡವರಿಸುತ್ತಿರಲು, ನಗುತ್ತ ಭೀಷ್ಮನನ್ನು ಕುರಿತು "ಮಹಾಬಾಹೂ! ನೀನು ಹೇಳುವುದೆಲ್ಲ ನಿಜವೇ! ನಿನ್ನಲ್ಲಿ ಸಲಿಗೆಯಿಂದ ನಿನಗೆ ನಾನೊಂದು ರಹಸ್ಯವನ್ನು ತಿಳಿಯಪಡಿಸುವೆನು. ಅಂತಹ ಆಪತ್ಕಾಲಧರ್ಮವನ್ನು ನಿನಗೆ ತಿಳಿಸದಿರುವುದು ಯೋಗ್ಯವಲ್ಲ. ನಮ್ಮ ಕುಲದಲ್ಲಿ ನೀನೇ ಧರ್ಮಮೂರ್ತಿ! ನೀನೇ ಸತ್ಯವು! ನೀನೇ ಮುಖ್ಯ ಗತಿ! ನೀನು ಹೇಳಿದಂತೆ ನಾವೆಲ್ಲರೂ ಕೇಳಬೇಕೆಂಬುದು ನನ್ನ ಮತವು. ಆದರೆ, ಈಗ ನಾನು ತಿಳಿಸುವುದನ್ನು ಕೇಳು! ಅವರ

ಮೇಲೆ ನಿನಗೆ ಹೇಗೆ ಮಾಡಬೇಕೆಂದು ತೋರುವುದೋ ಹಾಗೆ ಮಾಡು. ಭೀಷ್ಮಾ! ಧರ್ಮಾರ್ಥಯುಕ್ತವೂ, ಹಿತವೂ ಆದ ನನ್ನ ಮಾತನ್ನು ಕೇಳು. ನಿನ್ನನ್ನು ನಂಬಿ ನಾನು ನಿನಗೆ ತಿಳಿಸುವ ಈ ರಹಸ್ಯವನ್ನು ಬಹಿರಂಗಪಡಿಸ ಬಾರದು. ಭರತಕುಲತಿಲಕಾ! ಹಿಂದೆ ವಸುವೆಂಬ ರಾಜನೊಬ್ಬನಿದ್ದನೆಂದು ನೀನು ಕೇಳಿರಬಹುದು. ಆತನ ವೀರ್ಯದಿಂದ ಒಂದು ಮೀನಿನಲ್ಲಿ ಗರ್ಭ ವುಂಟಾಗಿ ನಾನು ಹುಟ್ಟಿದೆನಂತೆ! ಪರಮಧರ್ಮಿಷ್ಠನಾದ ಬೆಸ್ತನೊಬ್ಬನು ನನ್ನ ತಾಯಿಯಾದ ಆ ಮತ್ಸ್ಯವನ್ನು ನೀರಿನಿಂದ ಮೇಲಕ್ಕೆತ್ತಿ, ನನ್ನನ್ನು ತನ್ನ ಮನೆಗೆ ಕರೆದುಕೊಂಡುಹೋಗಿ ಮಗಳಂತೆ ಸಾಕಿದನು. ಇದರಿಂದ ಆತನೇ ನನಗೆ ಧರ್ಮರೀತಿಯಿಂದ ಸಾಕುತಂದೆಯಾದನು. ನನ್ನ ತಂದೆ ಯ ಬಳಿಯಲ್ಲಿ ಧರ್ಮಕಾರ್ಯಕ್ಕಾಗಿ ಒಂದು ದೋಣಿಯಿದ್ದಿತು. ನನ್ನ ಪ್ರಾಯಕಾಲದಲ್ಲಿ ಒಮ್ಮೆ ನಾನೊಬ್ಬಳೇ ಆ ದೋಣಿಯಲ್ಲಿದ್ದೆನು. ಆಗ ಧರ್ಮವಿದರಲ್ಲೆಲ್ಲ ಉತ್ತಮನೂ, ಧೀಮಂತನೂ ಆದ ಪರಾಶರಮಹರ್ಷಿ ಯು ಯಮುನಾನದಿಯನ್ನು ದಾಟಲು ಆ ದೋಣಿಯಬಳಿಗೆ ಬಂದನು. ನಾನೇ ಆತನನ್ನು ಆ ನದಿಯನ್ನು ದಾಟಿಸುತ್ತಿರುವಾಗ, ಆ ಋಷಿಯು ನನ್ನಲ್ಲಿ ಕಾಮಾರ್ತನಾಗಿ, ನನ್ನನ್ನು ಬಲಾತ್ಕರಿಸಿದನು. ನನ್ನ ಹುಟ್ಟನ್ನೂ, ನನ್ನ ಕುಲವನ್ನೂ ಅವನೇ ನನಗೆ ತಿಳಿಸುತ್ತ ಮಧುರವಾಕ್ಯಗಳಿಂದ 'ನೀನು ಬೆಸ್ತನ ಮಗಳಲ್ಲ' ಎಂದನು. ನಾನು ಆತನ ಶಾಪಕ್ಕೂ, ನನ್ನ ತಂದೆಯ ಕೋಪಕ್ಕೂ ಭಯಪಟ್ಟವಳಾಗಿ, ಅವನು ಕೊಡಬಾರದ ಒಂದು ವರವನ್ನು ಕೇಳಿದೆನು. ಆತನು ಆ ವರವನ್ನೂ ಕೊಟ್ಟುದರಿಂದ ಆತನನ್ನು ನಿರಾಕ ರಿಸಲು ಸಾಧ್ಯವಾಗಲಿಲ್ಲ. ಮತ್ತೆ ಆತನನ್ನು ಕುರಿತು "ಯಮುನಾನದಿ ಯ ಉಭಯತೀರಗಳಲ್ಲಿಯೂ, ಅಲ್ಲಲ್ಲಿನ ಸ್ನಾನಘಟ್ಟಗಳಲ್ಲಿ ಮಹಾಮಹಿಮ ರಾದ ಋಷಿಗಳು ಅಗ್ನಿಹೋತ್ರಗಳಂತೆ ಬೆಳಗುತ್ತ ನಿಂತಿರುವರು ನೋಡು. ಮುಂಭಾಗದಲ್ಲಿ ಬಾಲಸೂರ್ಯನು ಪ್ರಕಾಶಿಸುತ್ತಿರುವನು. ಆಕಾಶವೇ ತಾನು ಕೆಂಪುಸೀರೆಯನ್ನುಟ್ಟಂತಿರುವುದು ನೋಡು!" ಎಂದು ನಾನು ಲ ಜ್ಜೆಯಿಂದ ಹಿಂಜರಿಯಲು, ಒಡನೆಯೇ ಸರ್ವಸಮರ್ಥನಾದ ಪರಾಶರನು ಆ ಯಮುನಾದ್ವೀಪದ ಮೇಲೆಲ್ಲ ಮಂಜುಮುಚ್ಚಿಕೊಳ್ಳುವಂತೆ ಮಾ ಡಿದನು. ಹೀಗೆ ಆತನು ತನ್ನ ತಪಃಪ್ರಭಾವದಿಂದ ಲೋಕದಲ್ಲಿ ಕತ್ತಲೆ

ಯನ್ನು ಶಮಿಯಿಸಿ, ಯೌವನವತಿಯಾದ ನನ್ನನ್ನು ಆ ದೋಣಿಯಲ್ಲಿಯೇ ವಶೀಕರಿಸಿಕೊಂಡು, ತನ್ನ ಇಷ್ಟಾರ್ಥವನ್ನು ಕೈಗೂಡಿಸಿಕೊಂಡನು. ಅದಕ್ಕೆ ಮೊದಲು ನನ್ನ ದೇಹದಲ್ಲಿ ಮೀನಿನ ದುರ್ಗಂಧವಿದ್ದಿತು. ಆ ಋಷಿಯೇ ಅದನ್ನೂ ನೀಗಿಸಿ, ನನ್ನ ದೇಹದಲ್ಲಿ ಈ ಸುವಾಸನೆಯನ್ನುಂಟುಮಾಡಿದನು. ಆ ಮುನಿಯು ನನ್ನೊಡನೆ ಈ ದ್ವೀಪದಲ್ಲಿಯೇ ನನ್ನ ಗರ್ಭದಿಂದ ಪುತ್ರನೊಬ್ಬನನ್ನು ಪಡೆದನು. ಆಮೇಲೆ ನನ್ನನ್ನು ನೋಡಿ "ನೀನು ಕನ್ಯೆಯಾಗಿಯೇ ಇರುವೆ" ಎಂದು ನನ್ನಲ್ಲಿ ಪ್ರೀತಿಯಿಟ್ಟು ತಿರುಗಿ ನನಗೆ ಕನ್ಯಾತ್ವವನ್ನೇ ಕೊಟ್ಟನು. ಆ ಪರಾಶರನ ಮಗನು ಮಹಾಯೋಗಶಕ್ತಿಯುಳ್ಳ ಮಹರ್ಷಿಯಾದನು. ನಾನು ಹಿಂದೆ ಕನ್ಯೆಯಾಗಿದ್ದಾಗ ಹುಟ್ಟಿದ ಆ ಮಗನು ದ್ವೀಪದಲ್ಲಿ ಹುಟ್ಟಿದುದರಿಂದ, ದ್ವೈಪಾಯನನೆಂದು ಪ್ರಸಿದ್ಧನಾಗಿರುವನು. ಭಗವಂತನಾದ ಆ ಋಷಿಯು ತನ್ನ ತಪೋಬಲದಿಂದ ವೇದವನ್ನು ನಾಲ್ಕು ಶಾಖೆಗಳಾಗಿ ವಿಭಾಗಿಸಿ, ವ್ಯಾಸನೆಂಬ ಹೆಸರಿನಿಂದ ಲೋಕಪ್ರಸಿದ್ಧನಾಗಿರುವನು. ಕೃಷ್ಣವರ್ಣವುಳ್ಳವನಾದುದರಿಂದ ಕೃಷ್ಣನೆಂದೂ ಹೆಸರುಗೊಂಡಿರುವನು. ಸತ್ಯವಾದಿಯೂ, ಶಾಂತಿಪರನೂ, ಮಹಾತಪಸ್ವಿಯೂ ಪಾಪಗಳನ್ನೆಲ್ಲ ದಹಿಸತಕ್ಕವನೂ ಆದ ಆ ಮಹನೀಯನು ಹುಟ್ಟಿದೊಡನೆಯೇ ತನ್ನ ತಂದೆಯೊಡನೆ ಅಲ್ಲಿಂದ ಹೊರಟುಹೋದನು. ಅಪೂರ್ವತೇಜಸ್ಸುಳ್ಳ ಆ ನನ್ನ ಕುಮಾರನು, ನಾನೂ, ನೀನೂ, ಹೇಳಿದರೆ, ತನ್ನ ಸಹೋದರನ ಭಾರ್ಯೆಯರಲ್ಲಿ ಉತ್ತಮಪುತ್ರರನ್ನು ಪಡೆಯುವುದು ನಿಶ್ಚಯವು. ಆತನು ಅಲ್ಲಿಯೇ ನನ್ನೊಡನೆ 'ನಿನ್ನ ಕಷ್ಟಕಾಲದಲ್ಲಿ ನನ್ನನ್ನು ನೆನೆಸು' ಎಂದು ಹೇಳಿರುವನು. ಭೀಷ್ಮಾ! ಮಹಾತಪಸ್ವಿಯಾದ ಆ ನನ್ನ ಮಗನು, ವಿಚಿತ್ರವೀರ್ಯನ ಪತ್ನಿಯರಲ್ಲಿ ನಿಶ್ಚಯವಾಗಿಯೂ ಪುತ್ರರನ್ನು ಹುಟ್ಟಿಸಬಲ್ಲನು" ಎಂದಳು.

ಸತ್ಯವತಿಯು ವ್ಯಾಸಮಹರ್ಷಿಯ ಹೆಸರನ್ನು ಹೇಳಿದೊಡನೆಯೇ ಭೀಷ್ಮನು ಕೈಗಳನ್ನು ಜೋಡಿಸಿಕೊಂಡು ಆಕೆಯೊಡನೆ "ನಿನಗೆ ದೇಶಕಾಲಗಳು ತಿಳಿದಿರುವುವು. ಕಾರ್ಯಸಿದ್ಧಿಗಾಗಿ ನೀನು ಹೇಳಿದಂತೆ ಮಾಡಬಹುದು. ಯಾವನು ಧರ್ಮ, ಅರ್ಥ, ಕಾಮಗಳಲ್ಲಿ ಮನಸ್ಸಿಟ್ಟು,

ಇವು ಮೂರನ್ನೂ ತಾಳ್ಮೆಯಿಂದ ವಿಮರ್ಶಿಸಿ, ಮುಂದೆ ಧರ್ಮವು ಧರ್ಮಕ್ಕೂ, ಅರ್ಥವು ಅರ್ಥಕ್ಕೂ, ಕಾಮವು ಕಾಮಕ್ಕೂ ದಾರಿಗೊಡುವಂತೆ ಆಚರಿಸುವನೋ ಆತನೇ ಬುದ್ಧಿವಂತನು. ಆದುದರಿಂದ ಧರ್ಮಯುಕ್ತವೂ, ನಮ್ಮ ಕುಲಕ್ಕೆ ಹಿತವೂ ಆಗಿರುವ ನಿನ್ನ ಅಭಿಪ್ರಾಯವು ನನಗೂ ಸಮ್ಮತವಾಗಿರುವುದು" ಎಂದನು. ಭೀಷ್ಮನು ಹೀಗೆ ಹೇಳಿದೊಡನೆಯೇ ಸತ್ಯವತಿಯು ಕೃಷ್ಣದ್ವೈಪಾಯನ ಮುನಿಯನ್ನು ಸ್ಮರಿಸಿದಳು. ಜನಮೇಜಯರಾಜಾ! ಬುದ್ಧಿಸಂಪನ್ನನಾದ ಆ ವ್ಯಾಸನು ಆಕ್ಷಣವೇ ಯಾರಿಗೂ ತಿಳಿಯದಂತೆ ಆಕೆಯ ಬಳಿಗೆ ಬಂದು ನಿಂತನು. ಆಮೇಲೆ ಸತ್ಯವತಿಯು ಮಗನಾದ ವ್ಯಾಸನನ್ನು ಶಾಸ್ತ್ರೋಕ್ತವಾಗಿ ಪೂಜಿಸಿ ಆತನನ್ನಪ್ಪಿಕೊಂಡಳು. ಆಕೆಯು ಬಹುಕಾಲಕ್ಕೆಮೇಲೆ ಮಗನನ್ನು ನೋಡಿದುದರಿಂದ, ಕಣ್ಣೀರು ಸುರಿಸುತ್ತ ಆ ನೀರಿನಲ್ಲಿ ಆತನನ್ನು ನೆನಸಿದಳು. ವ್ಯಾಸಮಹರ್ಷಿಯೂ ದುಃಖಿಸುತ್ತ ತನ್ನ ತಾಯಿಯಮೇಲೆ ಜಲವನ್ನು ಪ್ರೋಕ್ಷಿಸಿ ಅಭಿವಾದನಮಾಡಿ "ನಿನಗೆ ಅಪೇಕ್ಷಿತವಾದುದನ್ನು ಮಾಡಲು ನಾನು ಬಂದಿರುವೆನು. ನಿನಗೆ ಧರ್ಮವನ್ನು ತಿಳಿಸಬೇಕಾದುದಿಲ್ಲ. ಒಡನೆಯೇ ನನಗೆ ಅಪ್ಪಣೆ ಕೊಡು. ನಿನ್ನ ಕೋರಿಕೆಯನ್ನು ನೆರವೇರಿಸುವೆನು" ಎಂದನು. ಆಮೇಲೆ ಪುರೋಹಿತನು ಆ ಮಹರ್ಷಿಗೆ ಪೂಜೆಮಾಡಿದನು. ಆತನೂ ಶಾಸ್ತ್ರೋಕ್ತವಾದ ಮಂತ್ರೋಚ್ಚಾರಣೆಮಾಡಿ ಆ ಪೂಜೆಯನ್ನು ಕೈಕೊಂಡನು. ವ್ಯಾಸನು ಆ ಪೂಜೆಗಳಿಗೆ ಸಂತುಷ್ಟನಾಗಿ ಕುಳಿತುಕೊಂಡಮೇಲೆ ಆತನ ತಾಯಿಯಾದ ಸತ್ಯವತಿಯು ಯೋಗಕ್ಷೇಮವನ್ನು ವಿಚಾರಿಸಿ ಆತನನ್ನು ನೋಡಿ "ಪುತ್ರರು ತಾಯಿಗೂ, ತಂದೆಗೂ ಇಬ್ಬರಿಗೂ ಸಮಾನರೇ! ಆದುದರಿಂದ ಪುತ್ರರು ತಾಯಿತಂದೆಗಳಿಬ್ಬರಿಗೂ ಸೇರಿದವರು. ಆ ಮಕ್ಕಳಮೇಲೆ ತಂದೆಗೆಷ್ಟು ಅಧಿಕಾರವೋ, ತಾಯಿಗೂ ಅಷ್ಟೇ ಅಧಿಕಾರವಿರುವುದೆಂಬುದರಲ್ಲಿ ಸಂದೇಹವಿಲ್ಲ. ಬ್ರಹ್ಮರ್ಷೀ! ವಿಧಿವಶದಿಂದ ನೀನು ನನ್ನ ಜ್ಯೇಷ್ಠಪುತ್ರನಾಗಿ ಹುಟ್ಟಿದೆ. ಹಾಗೆಯೇ ವಿಚಿತ್ರವೀರ್ಯನು ನನಗೆ ಕನಿಷ್ಠಪುತ್ರನು. ತಂದೆಯಿಂದ ಭೀಷ್ಮನು ಹೇಗೋ ಹಾಗೆಯೇ, ತಾಯಿಯಿಂದ ನೀನು ಆ ವಿಚಿತ್ರವೀರ್ಯನಿಗೆ ಸಹೋದರನು. ನೀನು ಏನೆಂದು ತಿಳಿದುಕೊಳ್ಳುವೆಯೋ ಕಾಣೆನು. ಆದರೆ ನನ್ನ ಯೋಚನೆಯನ್ನು ತಿಳಿಸುವೆನು.

ಕೇಳು. “ ಶಂತನುಪುತ್ರನಾದ ಈ ಭೀಷ್ಮನು ಸತ್ಯವ್ರತನು. ಸತ್ಯಪರಿಪಾಲನೆಗಾಗಿ ಸಂತತಿಯನ್ನು ಪಡೆಯುವುದರಲ್ಲಿಯೂ, ರಾಜ್ಯಪರಿಪಾಲನೆಯಲ್ಲಿಯೂ ಆಶೆಯನ್ನು ತೊರೆದಿರುವನು. ಆದುದರಿಂದ ನೀನು ನಿನ್ನ ಸಹೋದರನಿಗಾಗಿಯೂ, ನಮ್ಮ ವಂಶಾಭಿವೃದ್ಧಿಗಾಗಿಯೂ, ಭೀಷ್ಮನ ಪ್ರಾರ್ಥನೆಯನ್ನೂ, ನನ್ನ ಆಜ್ಞೆಯನ್ನೂ ನೆರವೇರಿಸುವುದಕ್ಕಾಗಿಯೂ, ಭೂತದಯೆಗಾಗಿಯೂ, ಜನರಕ್ಷಣೆಗಾಗಿಯೂ ನಾನು ಹೇಳುವಂತೆ ನಡೆಸಬೇಕು. ನಿನ್ನ ಚಿಕ್ಕ ತಮ್ಮನು ದೇವಕನ್ಯೆಯರಿಗೆ ಸಮಾನರಾದ ಇಬ್ಬರು ಪತ್ನಿಯರನ್ನೂ ಬಿಟ್ಟು ಸತ್ತಿರುವನು. ಅವರಿಬ್ಬರೂ ರೂಪಯೌವನಸಂಪನ್ನೆಯರು. ಧರ್ಮರಕ್ಷಣೆಗಾಗಿ ಮಕ್ಕಳನ್ನು ಪಡೆಯುವ ಅಭಿಲಾಷೆಯುಳ್ಳವರಾಗಿರುವರು. ಪುತ್ರಾ! ಅವರಲ್ಲಿ ಸಂತಾನೋತ್ಪತ್ತಿಯನ್ನು ಮಾಡು. ನಮ್ಮ ಕುಲಕ್ಕೆ ತಕ್ಕ ಸಂತತಿಯನ್ನು ಹುಟ್ಟಿಸಲು ನೀನು ಅರ್ಹನಾಗಿರುವೆ” ಎಂದಳು. ಅದಕ್ಕೆ ವ್ಯಾಸನು “ ಸತ್ಯವತೀ! ಅಮ್ಮಾ! ನೀನು ವಿಶೇಷ ಪ್ರಾಜ್ಞಳು. ವಿಶೇಷಧರ್ಮಗಳೆಲ್ಲ ನಿನಗೆ ತಿಳಿದಿರುವುವು. ಆದುದರಿಂದ ನಿನ್ನ ಬುದ್ಧಿಯು ಧರ್ಮದಲ್ಲಿಯೇ ಆಸಕ್ತವಾಗಿರುವುದು. ನಿನ್ನ ಅಪ್ಪಣೆಯಂತೆ ಧರ್ಮವನ್ನೇ ಕಾರಣವಾಗಿ ತಿಳಿದು, ನೀನು ಕೋರಿದಂತೆ ಮಾಡುವೆನು. ಈ ರೀತಿಯಲ್ಲಿ ಪುತ್ರೋತ್ಪತ್ತಿ ಮಾಡುವುದು ಶಾಶ್ವತ ಧರ್ಮವೆಂದು ಶಾಸ್ತ್ರಗಳಲ್ಲಿ ವಿಧಿಸಿದೆ. ಸೂರ್ಯನಿಗೂ, ವರುಣನಿಗೂ ಸಮಾನರಾದ ಕುಮಾರರನ್ನು ನನ್ನ ಸಹೋದರನಿಗಾಗಿ ಹುಟ್ಟಿಸುವೆನು ಆತನ ರಾಣಿಯರಿಬ್ಬರೂ ಒಂದು ಸಂವತ್ಸರಕಾಲದವರೆಗೆ ನಾನು ಹೇಳುವ ವ್ರತವನ್ನು ನಾನು ಹೇಳಿದ ಕ್ರಮದಲ್ಲಿ ಮಾಡಬೇಕು. ಆಮೇಲೆ ಅವರು ಶುಚಿಯಾಗುವರು. ಯಾವ ಸ್ತ್ರೀಯರಾಗಲಿ ವ್ರತಾಚರಣೆಮಾಡದೆ ನನ್ನನ್ನು ಸೇರಕೂಡದು” ಎಂದನು. ಅದಕ್ಕೆ ಸತ್ಯವತಿಯು “ ರಾಜಪತ್ನಿಯರು ಒಡನೆಯೇ ಗರ್ಭವನ್ನು ಧರಿಸುವಂತೆ ಮಾಡು. ರಾಜನಿಲ್ಲದ ರಾಜ್ಯದಲ್ಲಿ ಪ್ರಜೆಗಳನ್ನು ಕಾಪಾಡುವವರು ಯಾರೂ ಇಲ್ಲದುದರಿಂದ, ಅವರು ಕ್ಷೀಣಿಸುವರು. ಸಮಸ್ತ ಕರ್ಮಾನುಷ್ಠಾನಗಳೂ ಕೆಟ್ಟುಹೋಗುವುವು. ಆ ರಾಜ್ಯದಲ್ಲಿ ಮಳೆಯಾಗುವುದಿಲ್ಲ. ದೇವತೆಗಳೂ ವಾಸಮಾಡುವುದಿಲ್ಲ.

ರಾಜನಿಲ್ಲದೆ ರಾಜ್ಯವನ್ನು ಕಾಪಾಡುವುದು ಹೇಗೆ? ಆದುದರಿಂದ ನೀನು ಗರ್ಭೋತ್ಪತ್ತಿ ಮಾಡು. ಭೀಷ್ಮನು ಅದನ್ನು ಕಾಪಾಡಬಲ್ಲನು" ಎಂದಳು. ವ್ಯಾಸನು ಸತ್ಯವತಿಯೊಡನೆ "ನನ್ನ ಸಹೋದರನಿಗೆ ಅಕಾಲದಲ್ಲಿ ನಾನು ಪುತ್ರೋತ್ಪತ್ತಿಮಾಡಬೇಕಾಗಿದ್ದರೆ, ಆ ಅಂಬಿಕೆ ಅಂಬಾಲಿಕೆಯರು ನನ್ನ ವಿಕಾರರೂಪವನ್ನು ಸಹಿಸಬೇಕು. ಅವರಿಗೆ ಇದೇ ಒಂದು ದೊಡ್ಡ ವ್ರತವು. ನನ್ನ ಗಂಧವನ್ನೂ, ರೂಪವನ್ನೂ, ವೇಷವನ್ನೂ, ದೇಹವನ್ನೂ ಸಹಿಸಲು ಸಿದ್ಧರಾಗಿದ್ದರೆ, ಕೌಸಲ್ಯೆಯು ಉತ್ತಮವಾದ ಗರ್ಭವನ್ನು ಧರಿಸಬಹುದು. ಆ ಮಗನಿಗೆ ಕುರುವಂಶವನ್ನು ಕಾಪಾಡತಕ್ಕವರೂ, ನಿನ್ನ ದುಃಖವನ್ನು ನೀಗಿಸುವವರೂ ಆದ ನೂರುಮಂದಿ ಮಕ್ಕಳು ಹುಟ್ಟುವರು. ಇದರಲ್ಲಿ ಸಂದೇಹವಿಲ್ಲ" ಎಂದನು. ಮಹಾತೇಜಸ್ವಿಯಾದ ಆ ವ್ಯಾಸನು ಹೀಗೆ ಹೇಳಿ 'ಅಮ್ಮಾ! ಕೌಸಲ್ಯೆಯು ಶುಭ್ರವಾದ ಸೀರೆಯನ್ನುಟ್ಟು, ಚೆನ್ನಾಗಿ ಅಲಂಕರಿಸಿಕೊಂಡು, ತನ್ನ ಶಯ್ಯಾಗೃಹದಲ್ಲಿ ನನ್ನ ಆಗಮನವನ್ನು ಇದಿರುನೋಡುತ್ತಿರಲಿ' ಎಂದು ಹೇಳಿ, ಒಡನೆಯೇ ಅಂತರ್ಹಿತನಾದನು. ಆಮೇಲೆ ಸತ್ಯವತಿಯು ತನ್ನ ಸೊಸೆಯಬಳಿಗೆ ಹೋಗಿ ಆಕೆಯೊಡನೆ ಏಕಾಂತದಲ್ಲಿ ಧರ್ಮಾರ್ಥಯುಕ್ತವಾದ ಹಿತವಚನಗಳಿಂದ "ಕೌಸಲ್ಯೆ! ಕೇವಲಧರ್ಮಕ್ಕೆ ಕಟ್ಟುಬಿದ್ದು ನಿನಗೆ ನಾನು ತಿಳಿಸುವುದನ್ನು ಕೇಳು. ನನ್ನ ದುರದೃಷ್ಟವಶದಿಂದ ಭರತವಂಶವು ನಿಂತುಹೋಗುತ್ತಿರುವುದು ನಿನಗೂ ತಿಳಿದೇ ಇದೆ. ನಾನು ಕೊರಗುತ್ತಿರುವುದನ್ನೂ, ತನ್ನ ತಂದೆಯ ವಂಶವು ಸಂತಾನವಿಲ್ಲದೆ ಹೋಗುತ್ತಿರುವುದನ್ನೂ ನೋಡಿ ಭೀಷ್ಮನು, ಈ ಕುಲದ ಅಭಿವೃದ್ಧಿಗಾಗಿ ನನಗೆ ಒಂದು ಆಲೋಚನೆಯನ್ನು ತಿಳಿಸಿರುವನು. ಅದನ್ನು ನೆರವೇರಿಸುವುದು ನಿನ್ನಲ್ಲಿರುವುದು. ಭೀಷ್ಮನು ತಿಳಿಸಿದ ಆ ಇಷ್ಟಾರ್ಥವು ನೆರವೇರುವಂತೆ ಮಾಡು. ಕ್ಷೀಣಿಸಿಹೋಗಿರುವ ಭರತವಂಶವನ್ನು ಉದ್ಧರಿಸು. ದೇವೇಂದ್ರನಿಗೆ ಸಮಾನವಾದ ದೇಹಕಾಂತಿಯಿಂದ ಕೂಡಿದ ಪುತ್ರನನ್ನು ಪಡೆಯುವವಳಾಗು. ಆತನೇ ನಮ್ಮ ಕುಲಕ್ರಮಾಗತವಾದ ರಾಜ್ಯಭಾರವನ್ನು ವಹಿಸಬಲ್ಲನು" ಎಂದಳು. ಆ ಸತ್ಯವತಿಯು ಈ ರೀತಿಯಲ್ಲಿ ಧರ್ಮವಿರುದ್ಧವಲ್ಲದ ತನ್ನ

ಆಲೋಚನೆಗೆ, ಧರ್ಮಶೀಲಳಾದ ತನ್ನ ಸೊಸೆಯ ಸಮ್ಮತಿಯನ್ನು ಪಡೆದು, ಬ್ರಾಹ್ಮಣರಿಗೂ, ಋಷಿಗಳಿಗೂ, ಅತಿಥಿಗಳಿಗೂ ಸಂತರ್ಪಣೆಮಾಡಿದಳು.

ಇದು ನೂರ ಹದಿನಾಲ್ಕನೆಯ ಅಧ್ಯಾಯವು.

{ ಅಂಬಿಕೆಯಲ್ಲಿ ಧೃತರಾಷ್ಟ್ರನೂ, ಅಂಬಾಲಿಕೆಯಲ್ಲಿ ಪಾಂಡುವೂ, ಅಂಬಿಕೆಯ ದಾದಿಯಲ್ಲಿ ವಿದುರನೂ ಹುಟ್ಟಿದುದು. }

ಜನಮೇಜಯರಾಜಾ! ಋತುಸ್ನಾನಮಾಡಿದ ತನ್ನ ಸೊಸೆಯನ್ನು ಸತ್ಯವತಿಯು ಆಕೆಯ ಶಯ್ಯಾಗೃಹಕ್ಕೆ ಕರೆದುಕೊಂಡುಹೋಗಿ, ಹಾಸಿಗೆಯ ಮೇಲೆ ಕುಳ್ಳಿರಿಸಿ "ಕೌಸಲ್ಯೆ! ನಿನ್ನ ಪತಿಗೆ ಹಿರಿಯಣ್ಣನೊಬ್ಬನಿರುವನು. ಆ ಮಹಾತ್ಮನು ಈ ದಿನದಲ್ಲಿ ನಿನ್ನ ಗರ್ಭದಲ್ಲಿ ಮಗನಾಗಿ ಪ್ರವೇಶಿಸಿ, ನಿನ್ನ ಪುತ್ರನಾಗಿ ಹುಟ್ಟುವನು. ನಿದ್ರೆಮಾಡದೆ ಈರಾತ್ರಿ ಅವನಿಗಾಗಿ ನೀನು ಕಾದಿರು" ಎಂದಳು. ಅತ್ತೆಯು ಹೇಳಿದುದನ್ನು ಕೇಳಿ ಕೌಸಲ್ಯೆಯು ಹಾಸಿಗೆಯಮೇಲೆ ಮಲಗಿದ್ದು, ಆ ಕಾಲದಲ್ಲಿ ಭೀಷ್ಮನನ್ನೂ, ಇತರ ಕುರುಶ್ರೇಷ್ಠರನ್ನೂ ನೆನೆಸಿಕೊಂಡಳು. ಜನರೆಲ್ಲರೂ ನಿದ್ರೆಹೋಗಿರುವ ಅರ್ಧರಾತ್ರಿಯಸಮಯದಲ್ಲಿ ದೀಪವು ಉರಿಯುತ್ತಿರಲು, ಸತ್ಯಸಂಕಲ್ಪನೂ, ಮಹಾತಪಸ್ವಿಯೂ ಆದ ವ್ಯಾಸಮಹರ್ಷಿಯು, ತನ್ನ ತಾಯಿಯು ತನಗೆ ಆಜ್ಞಾಪಿಸಿದ್ದಂತೆ, ಮೊದಲು ಅಂಬಿಕೆಯ ಶಯ್ಯಾಗೃಹವನ್ನು ಪ್ರವೇಶಿಸಿದನು. ಕೌಸಲ್ಯೆಯು ನೋಡುವುದಕ್ಕೆ ಅಸಹ್ಯವಾಗಿರುವ ಆತನ ರೂಪವನ್ನು ನೋಡಿ, ಅಂತಹ ರೂಪವು ತನ್ನ ರೂಪಕ್ಕೆ ಅರ್ಹವಲ್ಲದಿದ್ದುದರಿಂದ, ಇದೇನೋ ವಿಕೃತಾಕಾರವೆಂದು ಹೆದರಿ, ಮೈಯನ್ನುಡುಗಿಸಿಕೊಂಡು, ಕಣ್ಣುಗಳನ್ನು ಮುಚ್ಚಿಬಿಟ್ಟಳು. ಆ ಋಷಿಯೋ ವಿಕಾರರೂಪವುಳ್ಳವನು! ತಲೆಯೆಲ್ಲಾ ಜಡೆ! ವಿಕಾರವಾದ ಕಪ್ಪು ಮೈ! ಬಡವಾಗಿಯೂ, ಒರಟಾಗಿಯೂ ಇರುವ ದೇಹಪ್ರಕೃತಿ! ಸುಗಂಧವಿಲ್ಲದ ಮೈ! ಹೀಗೆ ಅಸಹ್ಯನಾಗಿದ್ದರೂ, ಸರ್ವವಿಧದಲ್ಲಿಯೂ ತನಗೆ ನಿರಾಕರಿಸುವುದಕ್ಕೂ ಸಾಧ್ಯವಿಲ್ಲದಿದ್ದನು. ಕಪ್ಪಾದ ಮೈಮೇಲೆ ಹಳದೀಬಣ್ಣದ ಜಡೆಯ ಗಂಟು! ಕೆಂಪಾಗಿ ಉರಿಯುವ

ಕಣ್ಣುಗಳು! ಭಯಂಕವಾದ ಗಡ್ಡ ಮೀಸೆಗಳು! ಇವುಗಳನ್ನೆಲ್ಲ ನೋಡಲಾರದೆ ಅವಳು ತಟ್ಟನೆ ಕಣ್ಣುಗಳನ್ನು ಮುಚ್ಚಿಬಿಟ್ಟಳು ಆದರೂ ವ್ಯಾಸನು ತನ್ನ ತಾಯಿಯ ಕೋರಿಕೆಯನ್ನು ನೆರವೇರಿಸಲು ಆ ಸುಂದರೀ ಮಣಿಯನ್ನು ಸ್ಪರ್ಶಿಸಿದನು. ಅಂಬಿಕೆಯಾದರೋ, ಭಯದಿಂದ ಆತನನ್ನು ಕಣ್ಣೆತ್ತಿನೋಡಲಾರದೆ ಹಾಗೆಯೇ ಇದ್ದಳು. ಆಮೇಲೆ ಸತ್ಯವತಿಯು ಶಯ್ಯಾಗೃಹದಿಂದ ಹೊರಗೆ ಬಂದ ಮಗನನ್ನು ನೋಡಿ "ಪುತ್ರಾ! ಈಕೆಗೆ ಗುಣವಂತನಾದ ರಾಜಕುಮಾರನು ಹುಟ್ಟುವನಷ್ಟೆ?" ಎಂದು ಕೇಳಿದಳು. ಆಗ ಇಂದ್ರಿಯಗಳಿಗೆ ಗೋಚರಿಸದ ವಿಷಯಗಳನ್ನೂ ತಿಳಿಯಬಲ್ಲ ಆ ಮಹರ್ಷಿಯು "ಅಮ್ಮಾ! ಹತ್ತುಸಾವಿರ ಆನೆಯ ಬಲವುಳ್ಳವನೂ, ಸರ್ವಜ್ಞನೂ, ಮಹಾಭಾಗ್ಯವಂತನೂ, ಮಹಾವೀರ್ಯವಂತನೂ, ಮಹಾಬುದ್ಧಿವಂತನೂ, ಉತ್ತಮನೂ ಆದ ಒಬ್ಬ ರಾಜರ್ಷಿಯೇನೋ ಹುಟ್ಟುವನು. ಆ ಮಹಾತ್ಮನು ನೂರುಮಂದಿ ಮಕ್ಕಳಿಗೆ ತಂದೆಯಾಗುವನು. ಆದರೂ ಅವನ ತಾಯಿಯ ದೋಷದಿಂದ ಆತನು ಕುರುಡನಾಗಿಯೇ ಹುಟ್ಟುವನು" ಎಂದನು. ಆಗ ಸತ್ಯವತಿಯು "ತಪೋಧನಾ! ಕುರುವಂಶದವರಿಗೆ ಕುರುಡನು ರಾಜನೆಂದರೇನು? ಇದು ನಮ್ಮ ಕುಲಕ್ಕೆ ತಕ್ಕುದಲ್ಲ. ಜ್ಞಾತಿವಂಶಗಳನ್ನು ಕಾಪಾಡತಕ್ಕವನೂ, ಪಿತೃವಂಶವನ್ನು ಅಭಿವೃದ್ಧಿಗೊಳಿಸತಕ್ಕವನೂ, ನಮ್ಮೆಲ್ಲರ ದುಃಖವನ್ನೂ ಹೋಗಲಾಡಿಸತಕ್ಕವನೂ, ರಾಜ್ಯಕ್ಕೆ ಯೋಗ್ಯನಾದವನೂ ಆದ ಮತ್ತೊಬ್ಬ ಪುತ್ರನನ್ನು ಇನ್ನೊಬ್ಬಳಲ್ಲಿಯಾದರೂ ಅವನಿಗೆ ತಮ್ಮನಾಗಿ ಹುಟ್ಟಿಸು. ಆಕೆಯೂ ನಿನ್ನ ಸಹೋದರನ ಚಿಕ್ಕ ಹೆಂಡತಿ. ಸೌಂದರ್ಯವತಿ! ಇನ್ನೂ ಯುವತಿ! ಆಕೆಯಲ್ಲಿ ಗುಣಾಧಿಕನಾದ ಪುತ್ರನನ್ನು ಹುಟ್ಟಿಸಬೇಕು. ಕುರುವಂಶಕ್ಕೆ ರಾಜನಾಗತಕ್ಕ ಎರಡನೆಯ ಮಗನನ್ನು ಹುಟ್ಟಿಸು" ಎಂದಳು. ಮಹಾಯಶಸ್ವಿಯಾದ ಆ ವ್ಯಾಸನು ಹಾಗೆಯೇ ಆಗಲೆಂದು ಪ್ರತಿಜ್ಞೆಮಾಡಿ ಹೊರಟುಹೋದನು. ಆಮೇಲೆ ಕೌಸಲ್ಯೆಯು ಕೆಲವು ದಿನಗಳಿಗೆಮೇಲೆ ಆ ಮುನಿಯು ಹೇಳಿದಂತೆ ಅಂಧನಾದ ಮಗನೊಬ್ಬನನ್ನು ಹೆತ್ತಳು. ಮತ್ತೆ ಸತ್ಯವತಿಯು ಕುಲವೃದ್ಧಿಗಾಗಿ ಅಂಬಾಲಿಕೆಯನ್ನು ಸಮಾಧಾನಗೊಳಿಸಿ, ವ್ಯಾಸನನ್ನು ಕರೆಸಿದಳು. ಪತಿವ್ರತೆಯಾದ ಅಂಬಾಲಿಕೆಯೂ ಕೂಡ

ಹಾಸಿಗೆಯಲ್ಲಿ ಕುಳಿತು ತನ್ನಲ್ಲಿಗೆ ಬರುವವರಾರೆಂದು ಚಿಂತಿಸುತ್ತ, ಜಾಗರೂಕತೆಯಿಂದ ಇದಿರುನೋಡುತ್ತಿದ್ದಳು. ಆಗಲೂ ಹಿಂದಿನಂತೆ ವ್ಯಾಸನೇ ಅಂಬಾಲಿಕೆಯ ಬಳಿಗೆ ಬಂದನು. ಆ ಸ್ತ್ರೀಯು ಋಷಿಯನ್ನು ನೋಡಿದೊಡನೆಯೇ ಭಯದಿಂದ ಬಣ್ಣಗುಂದಿದಳು. ಅದನ್ನು ನೋಡಿ ಸತ್ಯವತೀಪುತ್ರನಾದ ವ್ಯಾಸನು 'ನನ್ನ ವಿಕೃತಾಕಾರವನ್ನು ನೋಡಿ ನೀನು ಭಯಪಟ್ಟು ಬಣ್ಣಗೆಟ್ಟಿರುವುದರಿಂದ, ನಿನ್ನ ಮಗನೂ ಹಾಗೆಯೇ ಪಾಂಡು (ಬಿಳುಪು) ವಾಗುವನು. ಶುಭಾನನೇ! ಆತನು ಪಾಂಡುವೆಂಬ ಹೆಸರಿನಿಂದಲೇ ಪ್ರಸಿದ್ಧನಾಗುವನು' ಎಂದನು. ಹೀಗೆ ಹೇಳಿ ಮಹಾತ್ಮನಾದ ಆ ಋಷಿಶ್ರೇಷ್ಠನು ಹೊರಗೆ ಬಂದನು. ಆಗ ಸತ್ಯವತಿಯು ತನ್ನ ಪುತ್ರನನ್ನು ನೋಡಿ "ಪುತ್ರಾ! ಈಕೆಯ ಹೊಟ್ಟೆಯಲ್ಲಿ ಒಳ್ಳೆಯ ರಾಜಕುಮಾರನು ಹುಟ್ಟುವನೇ?" ಎಂದಳು. ವ್ಯಾಸನು ತಾಯಿಯೊಡನೆ 'ಆ ಮಗನು ಬಿಳುಪಾಗಿರುವನು. ವಿಶೇಷ ಪರಾಕ್ರಮಶಾಲಿಯೂ, ಎಲ್ಲರ ಹೊಗಳಿಕೆಗೂ ಪಾತ್ರನೂ ಆದ ಮಗನು ಹುಟ್ಟುವನು. ಆದರೂ ತಾಯಿಯ ಅಪರಾಧದಿಂದ ಆತನ ಮೈ ಬಣ್ಣವು ಪಾಂಡುವಾಗಿರುವುದು. ಆತನಿಗೆ ಬಿಲ್ಲುವಿದ್ಯೆಯಲ್ಲಿ ನಿಸ್ಸೀಮರಾದ ಐದುಮಂದಿ ಮಕ್ಕಳು ಹುಟ್ಟುವರು' ಎಂದು ಹೇಳಿ, ತಾಯಿಯನ್ನು ನಮಸ್ಕರಿಸಿ ಹೊರಟುಹೋದನು. ಆಮೇಲೆ ಪ್ರಸವಕಾಲವು ಬರಲು, ಅಂಬಾಲಿಕೆಯು ರಾಜಲಕ್ಷಣಸಂಪನ್ನನಾಗಿ ತೇಜಸ್ಸಿನಿಂದ ಜ್ವಲಿಸುವಂತೆ ಕಾಣುವ ಬಿಳಿಯಬಣ್ಣವುಳ್ಳ ಮಗನೊಬ್ಬನನ್ನು ಹೆತ್ತಳು. ಆತನಿಂದ ಅಸ್ತ್ರವಿದ್ಯಾನಿಪುಣರಾದ ಪಂಚಪಾಂಡವರು ಹುಟ್ಟಿದರು. ಧೃತರಾಷ್ಟ್ರ, ಪಾಂಡುಗಳೆಂಬ ಆ ಇಬ್ಬರು ಕುಮಾರರಿಗೂ ಕ್ರಮವಾಗಿ ಭೀಷ್ಮನು, ವೇದಪಾರಂಗತರಾದ ಬ್ರಾಹ್ಮಣರಿಂದ ಜಾತಕರ್ಮ ಮೊದಲಾದ ಕ್ರಿಯೆಗಳೆಲ್ಲವನ್ನೂ ಶಾಸ್ತ್ರೋಕ್ತವಾಗಿ ಮಾಡಿಸಿದನು. ಅಂಬಿಕೆಗೆ ಹುಟ್ಟಿದ ಮಗನು ಕುರುಡನಾಗಿರುವುದನ್ನು ನೋಡಿ, ಸತ್ಯವತಿಯು ತನ್ನ ಮಗನಾದ ವ್ಯಾಸನನ್ನು ಕುರಿತು 'ಈತನು ಅಂಧನು. ಅಂಬಿಕೆಗೆ ಮತ್ತೊಬ್ಬ ಸುಪುತ್ರನು ಹುಟ್ಟಬೇಕೆಂಬುದು ನನ್ನ ಅಪೇಕ್ಷೆ' ಎಂದು ಪ್ರಾರ್ಥಿಸಿದಳು. ವ್ಯಾಸನು ತನ್ನ ತಾಯಿಯನ್ನು ಕುರಿತು 'ಕೌಸಲ್ಯೆಯು ಮತ್ತೊಮ್ಮೆ ಸರಿಯಾಗಿದ್ದರೆ, ಆಕೆಗೆ ಧರ್ಮಶಾಸ್ತ್ರವನ್ನೂ, ರಾಜನೀತಿತತ್ವ

ಗಳನ್ನೂ ಚೆನ್ನಾಗಿ ತಿಳಿದ ಕುಮಾರನೊಬ್ಬನು ಹುಟ್ಟುವನು' ಎಂದನು. ಸತ್ಯವತಿಯು ತನ್ನ ಹಿರಿಯ ಸೊಸೆಯಾದ ಅಂಬಿಕೆಯು ಋತುಸ್ನಾನ ಮಾಡಿದಮೇಲೆ, ಆ ಸುಂದರೀಮಣಿಯನ್ನು ನಿರ್ಬಂಧಿಸಿ ವ್ಯಾಸನಬಳಿಗೆ ಕಳುಹಿಸಿದಳು. ದೇವಕನ್ಯೆಗೆ ಸಮಾನಳಾದ ಅಂಬಿಕೆಯು, ಆ ಮಹರ್ಷಿಯ ಭಯಂಕರಾಕಾರವನ್ನೂ, ದೇಹಗಂಧವನ್ನೂ ನೆನೆಸಿಕೊಂಡು, ಭಯದಿಂದ ಸತ್ಯವತಿಯ ಅಪ್ಪಣೆಯಂತೆ ನಡೆಯದೆ, ತನ್ನ ದಾದಿಯನ್ನು ಆಭರಣಗಳಿಂದಲಂಕರಿಸಿ ವ್ಯಾಸನಬಳಿಗೆ ಕಳುಹಿಸಿಬಿಟ್ಟಳು. ಆ ದಾದಿಯಾದರೋ, ಆ ಋಷೀಶ್ವರನು ಬಂದೊಡನೆ ಆತನನ್ನಿದಿರುಗೊಂಡು ನಮಸ್ಕರಿಸಿ, ಆತನ ಅನುಜ್ಞೆಯಿಂದ ಆತನ ಪಕ್ಕದಲ್ಲಿ ಕುಳಿತುಕೊಂಡಳು. ಆತನನ್ನು ಸತ್ಕರಿಸಿ ಉಪಚರಿಸಿದಳು. ವ್ಯಾಸನು ಆಕೆಯನ್ನು ಸಂಸ್ಪರ್ಶ ಸಂಭಾಷಣಾದಿಗಳಿಂದ ಆದರಿಸಿ ತಾನೂ ತೃಪ್ತನಾದನು. ಆತನು ನಿದ್ರೆಯಿಂದೆದ್ದುಹೋಗುವಾಗ ಆ ಲಲನಾಮಣಿಯನ್ನು ನೋಡಿ "ನನ್ನ ವರದಿಂದ ಇನ್ನುಮೇಲೆ ನಿನಗೆ ದಾಸೀತ್ವವಿಲ್ಲ! ಅತ್ಯುತ್ತಮವಾದ ಗರ್ಭವು ನಿನ್ನ ಹೊಟ್ಟೆಯಲ್ಲಿರುವುದು. ಈ ನಿನ್ನ ಮಗನು ಧರ್ಮಾತ್ಮನೂ, ಲೋಕದಲ್ಲಿರುವ ಬುದ್ಧಿವಂತರುಗಳಲ್ಲೆಲ್ಲಾ ಶ್ರೇಷ್ಠನೂ ಆಗುವನು" ಎಂದನು. ಕೃಷ್ಣದ್ವೈಪಾಯನನಿಂದ ಆಕೆಯಲ್ಲಿ ಹುಟ್ಟಿದ ಈ ಮಗನೇ ಆಮೇಲೆ ವಿದುರನೆಂಬ ಹೆಸರಿನಿಂದ ಪ್ರಸಿದ್ಧನಾಗಿ, ಧೃತರಾಷ್ಟ್ರನಿಗೂ, ಮಹಾತ್ಮನಾದ ಪಾಂಡುವಿಗೂ ಸಹೋದರನಾದನು. ಆತನು ನೀತಿಶಾಸ್ತ್ರದ ಮರ್ಮಗಳನ್ನು ತಿಳಿದವನಾಗಿ, ಕಾಮಕ್ರೋಧಗಳನ್ನು ಬಿಟ್ಟಿದ್ದನು. ಮಹಾತ್ಮನಾದ ಅಣಿಮಾಂಡವ್ಯನ ಶಾಪದಿಂದ ಈ ಭೂಲೋಕದಲ್ಲಿ ಹುಟ್ಟಿದ ಧರ್ಮದೇವತೆಯೇ ಈ ವಿದುರನೆಂದು ತಿಳಿ. ವ್ಯಾಸನು ತನ್ನ ತಾಯಿಯನ್ನು ನೋಡಿದಾಗ, ಹಿರಿಯ ರಾಜಕುಮಾರಿಯು ತನ್ನನ್ನು ವಂಚಿಸಿದುದನ್ನೂ, ಶೂದ್ರಸ್ತ್ರೀಯು ಗರ್ಭಧಾರಣೆಮಾಡಿದುದನ್ನೂ ತಿಳಿಸಿದನು. ಹೀಗೆ ಆ ಋಷಿಯು ತನ್ನ ಧರ್ಮಋಣವನ್ನು ತೀರಿಸಿಕೊಂಡು, ಗರ್ಭವಿಷಯವನ್ನು ತನ್ನ ತಾಯಿಗೆ ತಿಳಿಸಿ ಅಂತರ್ಧಾನಹೊಂದಿದನು. ಈ ರೀತಿಯಲ್ಲಿ ವ್ಯಾಸಮಹರ್ಷಿಗೆ ವಿಚಿತ್ರವೀರ್ಯನ ಪತ್ನಿ

ಯರಲ್ಲಿ ಕುರುವಂಶವರ್ಧಕರೂ, ದೇವಕುಮಾರರಿಗೆ ಸಮಾನರೂ ಆದ ಬಾಲಕರು ಹುಟ್ಟಿದರು.

ಇದು ನೂರಹದಿನೈದನೆಯ ಅಧ್ಯಾಯವು.

{ ಅಣಿಮಾಂಡವ್ಯ ಚರಿತ್ರೆ. ರಾಜಾಜ್ಞೆಯಿಂದ ಮಾಂಡವ್ಯನನ್ನು ಶೂಲಕ್ಕೇರಿಸುವುದು. }

ಆಗ ಜನಮೇಜಯನು ವೈಶಂಪಾಯನನನ್ನು ಕುರಿತು "ವಿಪ್ರೋತ್ತಮಾ! ಧರ್ಮದೇವತೆಯು ಶಾಪವನ್ನು ಹೊಂದಿದುದೇಕೆ? ಅಂತಹ ಶಾಪವನ್ನು ಹೊಂದಲು ಆತನು ಮಾಡಿದುದೇನು? ಯಾವ ಬ್ರಹ್ಮರ್ಷಿಯ ಶಾಪದಿಂದ ಆತನು ಶೂದ್ರಯೋನಿಯಲ್ಲಿ ಹುಟ್ಟಿದನು?" ಎಂದು ಕೇಳಿದನು. ಆಗ ವೈಶಂಪಾಯನನು "ರಾಜಾ! ಮಾಂಡವ್ಯನೆಂಬ ಹೆಸರುಳ್ಳ ಒಬ್ಬ ಬ್ರಾಹ್ಮಣನಿದ್ದನು. ಆತನು ದೃಢಚಿತ್ತನು. ಸಮಸ್ತ ಧರ್ಮಗಳನ್ನೂ ತಿಳಿದವನು. ಸತ್ಯಸಂಧನು. ತಪಸ್ವಿ! ಆತನು ತೀರ್ಥಯಾತ್ರೆಗೆ ಹೊರಟು, ತನ್ನ ಗ್ರಾಮಕ್ಕೆ ಸಮೀಪದಲ್ಲಿದ್ದ ತೀರ್ಥಗಳನ್ನೆಲ್ಲ ತನ್ನ ಇಷ್ಟಾನುಸಾರವಾಗಿ ಸಂಚರಿಸುತಿದ್ದನು. ಮತ್ತು ಆ ಮಹರ್ಷಿಯು ಅಲ್ಲಿಯೇ ಒಂದು ಆಶ್ರಮವನ್ನು ಕಟ್ಟಿಕೊಂಡು ವಾಸಮಾಡುತಿದ್ದನು. ಒಮ್ಮೆ ಆ ತಾಪಸೋತ್ತಮನು ತನ್ನ ಆಶ್ರಮದ್ವಾರದಲ್ಲಿ ಒಂದು ಮರದ ಕೆಳಗೆ ಕೈಗಳನ್ನು ಮೇಲಕ್ಕೆತ್ತಿಕೊಂಡು ಮೌನವ್ರತವನ್ನು ತಾಳಿ ನಿಂತಿದ್ದನು. ಆತನು ಹಾಗೆ ತಪಸ್ಸುಮಾಡುತ್ತಿರುವಾಗ, ಬಹುಕಾಲಕ್ಕೆ ಮೇಲೆ ಕೆಲವು ಕಳ್ಳರು, ಎಲ್ಲಿಯೋ ಧನವನ್ನು ಅಪಹರಿಸಿ, ರಾಜಸೇವಕರು ತಮ್ಮನ್ನು ಹಿಡಿಯುವುದಕ್ಕಾಗಿ ಹಿಂಬಾಲಿಸಲು, ಓಡಿಬಂದು ಅದೇ ಆಶ್ರಮವನ್ನು ಹೊಕ್ಕರು. ತಾವು ಕದ್ದುತಂದ ಧನವನ್ನು ಅಲ್ಲಿಯೇ ಬಚ್ಚಿಟ್ಟು ತಾವೂ ಅಲ್ಲಿಯೇ ಅವಿತುಕೊಂಡರು. ಅವರು ಅವಿತುಕೊಂಡಮೇಲೆ ತಳವಾರರ ದಂಡೂ ಅತಿಶೀಘ್ರವಾಗ ಅಲ್ಲಿಗೆ ಬಂದು ಸೇರಿತು. ಆ ತಳವಾರರು ಮರದಕೆಳಗೆ ಮೌನವ್ರತದಿಂದ ಕುಳಿತಿದ್ದ ಆ ಮುನಿಯನ್ನು ನೋ

ಡಿ "ಬ್ರಾಹ್ಮಣೋತ್ತಮಾ! ಕಳ್ಳರು ಯಾವ ದಾರಿಯಲ್ಲಿ ಹೋದರು? ನಾವು ಆ ದಾರಿಯಲ್ಲಿಯೇ ಹೋಗಿ ಅವರನ್ನು ಹಿಡಿಯಬೇಕು" ಎಂದು ಕೇಳಿದರು. ತಳವಾರರು ಕೇಳುತ್ತಿದ್ದರೂ, ಆ ಋಷಿಯು ಅವರಿಗೆ ಅನುಕೂಲವಾಗಿಯಾಗಲಿ, ಪ್ರತಿಕೂಲವಾಗಿಯಾಗಲಿ, ಯಾವ ಮಾತನ್ನೂ ಆಡಲಿಲ್ಲ. ಆಮೇಲೆ ತಳವಾರರು ಆಶ್ರಮದಲ್ಲೆಲ್ಲಾ ಹುಡುಕಿನೋಡಿ, ಅಲ್ಲಿ ತಂಗಿದ್ದ ಕಳ್ಳರನ್ನೆಲ್ಲ ಅವರು ಕದ್ದು ತಂದ ಧನದೊಡನೆ ಹಿಡಿದುಬಿಟ್ಟರು. ಆಗ ಆ ಸೇವಕರಿಗೆ ಋಷಿಯಲ್ಲಿಯೂ ಸಂದೇಹವುಂಟಾಗಿ, ಆತನನ್ನೂ ಕಳ್ಳರೊಡನೆ ರಾಜನಬಳಿಗೆ ಕರೆದುಕೊಂಡು ಹೋದರು. ರಾಜನು ಕಳ್ಳರೊಡನೆ ಆತನನ್ನೂ ವಧಿಸುವಂತೆ ಅಪ್ಪಣೆಮಾಡಿದನು. ಸೇವಕರೂ ಅಜ್ಞಾನದಿಂದ ಆ ಮಹಾತಪಸ್ವಿಯನ್ನು ಶೂಲಕ್ಕೆ ಪೋಣಿಸಿಟ್ಟು ಕಳುವಾದ ಧನವನ್ನೆಲ್ಲ ಎತ್ತಿಕೊಂಡು ರಾಜನಬಳಿಗೆ ಹೋದರು. ಧರ್ಮಾತ್ಮನಾದ ಆ ಮಹರ್ಷಿಯು ಶೂಲಕ್ಕೇರಿಸಲ್ಪಟ್ಟು ಬಹುಕಾಲಕ್ಕೆ ಆಹಾರವಿಲ್ಲದಿದ್ದರೂ ಮರಣಹೊಂದಲಿಲ್ಲ. ಆತನು ಪ್ರಾಣವನ್ನು ನಿಲ್ಲಿಸಿಕೊಂಡಿದ್ದು ಬೇರೆ ಋಷಿಗಳನ್ನೂ ಅಲ್ಲಿಗೆ ಕರೆಸಿಕೊಂಡನು. ಆ ಮುನಿಯು ಶೂಲದಮೇಲಿರುವಾಗಲೂ ತಪಸ್ಸುಮಾಡುತ್ತಿರುವುದನ್ನು ನೋಡಿ ಋಷಿಗಳೆಲ್ಲರೂ ಸಂಕಟಪಟ್ಟು ಕೊರಗಿದರು. ಆ ಮುನಿಗಳು ರಾತ್ರಿಯ ವೇಳೆಯಲ್ಲಿ ರಹಸ್ಯವಾಗಿ ಪಕ್ಷಿಯ ರೂಪದಿಂದ ಹಾರಿಬಂದು, ಆ ಬ್ರಾಹ್ಮಣಶ್ರೇಷ್ಠನನ್ನು ಕುರಿತು "ಬ್ರಾಹ್ಮಣಾ! ನೀನು ಈ ಶೂಲದಲ್ಲಿ ಭಯಂಕರವಾದ ಇಂತಹ ಅಪಾರ ದುಃಖವನ್ನನುಭವಿಸಲು ನೀನು ಮಾಡಿದ ಅಂತಹ ಘೋರ ಪಾಪವೇನು?" ಎಂದು ಕೇಳಿದರು.

ಇದು ನೂರಹದಿನಾರನೆಯ ಅಧ್ಯಾಯವು



ತನ್ನಿಂದ ಶೂಲಕ್ಕೇರಿಸಲ್ಪಟ್ಟವನು ಅಣಿಮಾಂಡವ್ಯಋಷಿ
ಯೆಂದು ತಿಳಿದು, ರಾಜನು ಭಯಪಟ್ಟು ಆತನನ್ನು ಶೂ
ಲದಿಂದ ಬಿಡಿಸಿದುದು. ಮಾಂಡವ್ಯನು ಯಮ
ನನ್ನು ಶಪಿಸಿದುದು.

ಆಗ ಋಷಿಶ್ರೇಷ್ಠನು ಅವರನ್ನು ಕುರಿತು "ಎಲೈ ಪಕ್ಷಿಗಳಿರಾ! ನಾನು ಯಾರಿಗೂ ತಪ್ಪುಮಾಡಿದುದಿಲ್ಲ. ಬೇರೆ ಯಾರೂ ನನ್ನಲ್ಲಿ ತಪ್ಪು ಮಾಡಲಿಲ್ಲ" ಎಂದು ಋಷಿಗಳಿಗೆ ಹೇಳಿದನು. ರಾಜಾ! ಬಹುಕಾಲಕ್ಕೆ ಮೇಲೆ ಒಮ್ಮೆ ತಳವಾರರು, ಬಂದು, ಆ ಶೂಲದ ಮೊನೆಯಲ್ಲಿ ತಪಸ್ಸುಮಾಡುತ್ತಿರುವ ಋಷಿಯನ್ನು ನೋಡಿ ಆಶ್ಚರ್ಯಪಟ್ಟು ಅದನ್ನು ರಾಜನಿಗೆ ಅರಿಕೆಮಾಡಿದರು. ರಾಜನು ಆತನನ್ನು ಮಹರ್ಷಿಯೆಂದು ತಿಳಿದು, ಒಡನೆಯೇ ಮಂತ್ರಿಗಳೊಡನೆ ಹೊರಟುಬಂದು ಶೂಲದಮೇಲೆ ನಾಟಿದ್ದ ಆ ಋಷಿಶ್ರೇಷ್ಠನನ್ನು ನೋಡಿ "ಋಷಿತಿಲಕಾ! ಅಜ್ಞಾನದಿಂದ ನಿನ್ನನ್ನು ಕಳ್ಳನೆಂದು ಭ್ರಮಿಸಿ ನಾನು ಮಾಡಿದ ಅಪಚಾರವನ್ನು ಮನ್ನಿಸು! ನಿನ್ನನ್ನು ಬೇಡಿಕೊಳ್ಳುವೆನು. ನೀನು ನನ್ನಮೇಲೆ ಕೋಪಿಸದೆ ಮನ್ನಿಸು" ಎಂದು ಪ್ರಾರ್ಥಿಸಿಕೊಂಡನು.

ರಾಜನು ಕೇಳಿಕೊಂಡಮೇಲೆ, ಮಾಂಡವ್ಯನು ಆತನನ್ನು ಮನ್ನಿಸಿದನು. ಆ ಋಷಿಯನ್ನು ರಾಜನು ಶೂಲದಿಂದ ಬಿಡಿಸಿದನು. ಶೂಲದಿಂದ ಇಳಿಸಿದಮೇಲೆಯೂ ಆ ಶೂಲವನ್ನು ದೇಹದಿಂದ ಕಿತ್ತುಹಾಕಲು ಸಾಧ್ಯವಾಗಲಿಲ್ಲ. ಆದುದರಿಂದ ದೇಹದ ಹೊರಗೆ ಕಾಣುತಿದ್ದ ಆ ಶೂಲಭಾಗವನ್ನು ಕತ್ತರಿಸಿ ತೆಗೆಸಿದನು. ಆ ಶೂಲವು ತನ್ನ ದೇಹದೊಳಗೆ ನಾಟಿಕೊಂಡಿದ್ದಹಾಗೆಯೇ ಆ ಮುನಿಯು ಸಂಚರಿಸುತಿದ್ದನು. ಆತನ ಕುತ್ತಿಗೆಗೂ ಎರಡು ಪಕ್ಕೆಗಳಿಗೂ ನಡುವೆ ನೀಡಿರುವ ಆ ಶೂಲದ ಬೆಣೆಯೊಡನೆ ಓಡಾಡುತ್ತಾ, ಅದರಲ್ಲಿ ಹೂಬುಟ್ಟಿಯನ್ನು ತಗಲಿಸಿಕೊಳ್ಳಬಹುದೆಂದು ತಿಳಿದುಕೊಂಡನು. ಈ ಸ್ಥಿತಿಯಲ್ಲಿಯೇ ಆತನು ಉಗ್ರವಾದ ತಪಸ್ಸುಗಳನ್ನು ಮಾಡಿ, ಇತರರಿಂದ ಪಡೆಯಲಸಾಧ್ಯವಾದ ಪುಣ್ಯಲೋಕಗಳನ್ನು ಗೆದ್ದನು. ಆ ಶೂಲಸಂಬಂಧದಿಂದಲೇ ಆತನು ಲೋಕದಲ್ಲಿ

ಅಣಿಮಾಂಡವ್ಯನೆಂದು ಪ್ರಸಿದ್ಧನಾಗಿರುವನು. ಬ್ರಹ್ಮಜ್ಞಾನಿಯಾದ ಆ ಬ್ರಾಹ್ಮಣನು, ಧರ್ಮದೇವತೆಯ ಮನೆಗೆ ಹೋಗಿ, ಅಲ್ಲಿ ಆಸನದಲ್ಲಿ ಕುಳಿತುಕೊಂಡಿದ್ದ ಪ್ರಭುವಾದ ಧರ್ಮದೇವತೆಯನ್ನು ನೋಡಿ "ಅಂತಹ ಶಿಕ್ಷೆಯನ್ನು ಅನುಭವಿಸಲು ನಾನು ತಿಳಿಯದೆಯಾಗಲಿ ಏನಾದರೂ ಪಾಪವನ್ನು ಮಾಡಿದ್ದರೆ ಅದನ್ನು ನನಗೆ ತಿಳಿಸು" ಎಂದು ಆಕ್ಷೇಪಿಸಿದನು. ಅದಕ್ಕೆ ಧರ್ಮದೇವತೆಯು "ತಪೋಧನಾ! ನೀನು ಒಂದಾನೊಂದು ಕಾಲದಲ್ಲಿ ಕ್ರಿಮಿ (ನೊಣ) ಯೊಂದನ್ನು ಒಂದು ಹುಲ್ಲುಕಡ್ಡಿಯಿಂದ ಚುಚ್ಚಿದೆ. ಆ ಪಾಪಕ್ಕಾಗಿ ನೀನು ಈ ಫಲವನ್ನು ಅನುಭವಿಸುತ್ತಿರುವೆ. ಬ್ರಹ್ಮರ್ಷೀ! ಸ್ವಲ್ಪ ದಾನಮಾಡಿದರೂ ಅದು ಅಮಿತವಾದ ಪುಣ್ಯವನ್ನು ತರುವಂತೆ, ಸ್ವಲ್ಪ ಪಾಪವೂ ಅಧಿಕ ದುಃಖಕರವಾದ ಫಲವನ್ನು ಕೊಡುವುದು" ಎಂದನು. ಅದಕ್ಕೆ ಅಣಿಮಾಂಡವ್ಯನು "ನಾನು ಆ ಅಪರಾಧವನ್ನು ಯಾವ ಪ್ರಾಯದಲ್ಲಿ ಮಾಡಿದೆನು? ಯಥಾರ್ಥವಾಗಿ ಹೇಳು" ಎಂದನು. ಆಗ ಆತನು "ನೀನು ಸಣ್ಣ ಬಾಲಕನಾಗಿದ್ದಾಗ ಮಾಡಿದೆ" ಎಂದನು. ಅದಕ್ಕೆ ಆ ಮುನಿಯು "ಹುಟ್ಟಿದುದು ಮೊದಲು ಹನ್ನೆರಡು ವಯಸ್ಸಿನವರೆಗೂ ಯಾವ ಪಾಪ ಮಾಡಿದರೂ ಅದರಿಂದ ಪಾಪವು ಬರುವುದಿಲ್ಲ. ಏಕೆಂದರೆ, ಆತನಿಗೆ ಆ ಕಾಲದಲ್ಲಿ ಶಾಸ್ತ್ರೋಪದೇಶವು ಲಭಿಸದು. ಚಿಕ್ಕ ತಪ್ಪಿಗಾಗಿ ನೀನು ನನಗೆ ಈ ದೊಡ್ಡ ಶಿಕ್ಷೆಯನ್ನು ವಿಧಿಸಿರುವೆ. ಸಮಸ್ತ ಪ್ರಾಣಿಗಳನ್ನು ವಧಿಸುವುದಕ್ಕಿಂತ, ಬ್ರಾಹ್ಮಣನನ್ನು ವಧಿಸುವುದು ವಿಶೇಷಪಾಪಕಾರಿಯು. ಧರ್ಮಪುರುಷಾ! ಆದುದರಿಂದ ನೀನು ಮನುಷ್ಯಲೋಕದಲ್ಲಿ ಶೂದ್ರಯೋನಿಯಲ್ಲಿ ಜನಿಸು. ಈಗ ನಾನು ಇದೇ ವಿಚಾರದಲ್ಲಿ ಒಂದು ವ್ಯವಸ್ಥೆಯನ್ನು ಮಾಡಿರುವೆನು. ಹದಿನಾಲ್ಕು ವಯಸ್ಸಿನವರೆಗೆ ತಪ್ಪು ಮಾಡಿದರೂ ಪಾಪವು ಬರುವುದಿಲ್ಲ. ಆ ವಯಸ್ಸು ಕಳೆದಮೇಲೆಯೇ ತಪ್ಪು ಮಾಡುವವರಿಗೆ ಪಾಪವು ತಟ್ಟುವುದು" ಎಂದನು. ಧರ್ಮದೇವತೆಯು ಈ ಅಪರಾಧವನ್ನು ಮಾಡಿದುದರಿಂದ, ಆ ಮಹಾತ್ಮನಿಂದ ಶಾಪವನ್ನು ಹೊಂದಿ, ವಿದುರನ ರೂಪದಿಂದ ಶೂದ್ರಯೋನಿಯಲ್ಲಿ ಹುಟ್ಟಿದನು. ಆ ವಿದುರನು ಧರ್ಮಶಾಸ್ತ್ರದಲ್ಲಿ ಅತ್ಯಂತನಿಪುಣನು. ಲೋಭ ಕ್ರೋಧ

ಗಳಿಲ್ಲದವನು. ಶಾಂತಿಗುಣವೇ ಪ್ರಧಾನವಾಗಿ ಉಳ್ಳವನು. ದೀರ್ಘದರ್ಶಿ! ಮತ್ತು ಯಾವಾಗಲೂ ಕೌರವರಿಗೆ ಹಿತವನ್ನು ಕೋರುವುದರಲ್ಲಿಯೇ ಆಸಕ್ತನು.

ಇದು ನೂರಹದಿನೇಳನೆಯ ಅಧ್ಯಾಯವು.



{ ಪಾಂಡುವಿಗೆ ರಾಜ್ಯಾಭಿಷೇಕವು. ಭೀಷ್ಮನು ರಾಜಕುಮಾರರ ವಿವಾಹವನ್ನು ಕುರಿತು ಆಲೋಚಿಸುವುದು. }

ಧೃತರಾಷ್ಟ್ರನೂ, ಪಾಂಡುವೂ, ಮಹಾತ್ಮನಾದ ವಿದುರನೂ ಈ ಮೂರು ಮಂದಿಯೂ ಹುಟ್ಟಿದಮೇಲೆ, ಕುರುಜಾಂಗಲ, ಕುರುದೇಶ, ಕುರುಕ್ಷೇತ್ರಗಳೆಂಬ ಮೂರು ದೇಶಗಳೂ ಅಭಿವೃದ್ಧಿಹೊಂದಿದುವು. ಭೂಮಿಯು ಫಲಸಮೃದ್ಧವಾಯಿತು. ಬೆಳೆಗಳೆಲ್ಲ ಉತ್ತಮವಾದುವು. ಗಿಡಗಳಲ್ಲಿ ಹೂಕಾಯಿಗಳು ಸದಾ ತುಂಬಿದ್ದುವು. ಕುದುರೆ, ಆನೆ ಮುಂತಾದ ವಾಹನಗಳೆಲ್ಲ ಉತ್ಸಾಹವುಳ್ಳವುಗಳಾಗಿದ್ದುವು. ಮೃಗಗಳೂ, ಪಕ್ಷಿಗಳೂ ಬಹಳ ಸಂತೋಷದಿಂದಿದ್ದುವು. ಹೂಗಳು ವಿಶೇಷ ವಾಸನೆಯಿಂದ ಕೂಡಿದ್ದುವು. ಹಣ್ಣುಗಳು ಅತಿ ಮಧುರವಾಗಿದ್ದುವು. ನಗರಗಳೆಲ್ಲ ವರ್ತಕರಿಂದಲೂ, ಶಿಲ್ಪಿಗಳಿಂದಲೂ ತುಂಬಿದ್ದುವು. ಶೂರರೂ, ವಿದ್ಯಾಪಾರೀಣರೂ, ಸಾಧುಗಳೂ ಸುಖವಾಗಿದ್ದರು. ದೇಶದಲ್ಲಿ ಯಾವ ಕಡೆಯಲ್ಲಿಯೂ ಕಳ್ಳತನವಿಲ್ಲ! ಅಧರ್ಮದಲ್ಲಿ ಯಾರಿಗೂ ಆಸಕ್ತಿಯಿಲ್ಲ. ಆಗ ಕೃತಯುಗವೇ ನೆಲೆಗೊಂಡಂತೆ ತೋರುತಿದ್ದಿತು. ಪ್ರಜೆಗಳು ತಮ್ಮತಮ್ಮ ಧರ್ಮಗಳನ್ನು ಆಚರಿಸುತ್ತಾ ಯಾಗಗಳನ್ನು ಬಿಡದೆ, ಸತ್ಯವ್ರತವನ್ನೇ ಮುಖ್ಯವಾಗಿ ಹಿಡಿದು, ಅನ್ಯೋನ್ಯಪ್ರೀತಿಯನ್ನು ತೋರಿಸುತ್ತಾ ಇದ್ದರು. ಜನರು ಅಹಂಕಾರವನ್ನೂ, ಕೋಪವನ್ನೂ, ಲೋಭವನ್ನೂ ಬಿಟ್ಟು ಒಬ್ಬರನ್ನೊಬ್ಬರು ಅಭಿನಂದಿಸುತಿದ್ದರು. ಧರ್ಮವೇ ಮೇಲಾಗಿದ್ದಿತು. ಮಹಾಸಮುದ್ರದಂತೆ ಜನಗಳಿಂದ ತುಂಬಿದ್ದ ಆ ಹಸ್ತಿನಾವತಿಯು ತೋರಣ ದ್ವಾರಗಳು, ಅರಮನೆಗಳು, ನೂರಾರು ಪ್ರಾಸಾದಗಳು, ಇವುಗಳಿಂದ ಕಿಕ್ಕಿರಿಸಿ, ದೇವೇಂದ್ರನ ಅಮರಾವತಿಗೆ ಸಮಾನವಾಗಿದ್ದಿತು. ಜನರು ನದಿ

ಗಳಲ್ಲಿಯೂ, ಅರಣ್ಯಗಳಲ್ಲಿಯೂ, ಕೆರೆಗಳಲ್ಲಿಯೂ, ಸರೋವರಗಳಲ್ಲಿಯೂ ತೋಟಗಳಲ್ಲಿಯೂ, ಉದ್ಯಾನವನಗಳಲ್ಲಿಯೂ ಸಂತೋಷದಿಂದ ಕ್ರೀಡಿಸುತ್ತಿದ್ದರು. ಉತ್ತರ ಕುರುದೇಶದವರೂ, ದಕ್ಷಿಣ ಕುರುದೇಶದವರೂ ದೇವತೆಗಳು, ಋಷಿಗಳು, ಚಾರಣರು ಮುಂತಾದವರೊಡಗೂಡಿ ಆನಂದದಲ್ಲಿ ಮುಳುಗಿ ತೇಲುತ್ತಿದ್ದರು. ಆ ಕೌರವದೇಶದಲ್ಲಿ ಒಬ್ಬನಾದರೂ ಬಡವನಿಲ್ಲ. ಒಬ್ಬ ಸ್ತ್ರೀಯಾದರೂ ವಿಧವೆಯಿಲ್ಲ. ರಾಜಾ! ಭೀಷ್ಮನು ಧರ್ಮದಿಂದ ಕಾಪಾಡುತ್ತಿದ್ದ ಆ ರಾಜ್ಯದಲ್ಲಿ ಬಾವಿಗಳೂ, ಸರೋವರಗಳೂ, ಯಾವಾಗಲೂ ಜಲಪೂರ್ಣವಾಗಿ, ತೋಟಗಳಲ್ಲಿ ಗಿಡಗಳು ತುಂಬಿದ್ದುವು. ಹಾಗೆಯೇ ಬ್ರಾಹ್ಮಣರ ಗೃಹಗಳು ಸಕಲ ಸಂಪತ್ತುಗಳಿಂದ ಕೂಡಿದ್ದುವು. ದೇಶಗಳಲ್ಲೆಲ್ಲ ಆನಂದ ಕೋಲಾಹಲವು ತುಂಬಿ ತುಳುಕಾಡುತ್ತಿತ್ತು. ಭೀಷ್ಮನು ಪರರಾಷ್ಟ್ರಗಳನ್ನು ಗೆದ್ದು, ಧನವನ್ನು ತಂದು, ಅದರಿಂದ ಕುರುದೇಶವನ್ನೆಲ್ಲ ನೂರಾರು ದೇವಾಲಯಗಳಿಂದಲೂ, ಯೂಪಸ್ತಂಭಗಳಿಂದಲೂ ಅಲಂಕರಿಸಿದನು. ಆ ರಾಜ್ಯದಲ್ಲಿ ಭೀಷ್ಮನು ಏರ್ಪಡಿಸಿದ ಧರ್ಮಚಕ್ರವು ಸುತ್ತುತ್ತಲೇ ಇದ್ದಿತು. ಮಹಾತ್ಮರಾದ ಆ ರಾಜಕುಮಾರರಿಗೆ ಜಾತಕರ್ಮ ಮೊದಲಾದ ಸಂಸ್ಕಾರಗಳು ನಡೆಯುವಾಗ, ನಗರದಲ್ಲಿಯೂ, ದೇಶದಲ್ಲಿಯೂ ಜನರೆಲ್ಲರೂ ಅಧಿಕಸಂತೋಷದಿಂದಿದ್ದರು. ರಾಜಾ! ಕೌರವರಾಜರ ಗೃಹಗಳಲ್ಲಿಯೂ, ಆ ನಗರದ ಜನರೆಲ್ಲರ ಗೃಹಗಳಲ್ಲಿಯೂ "ಕೊಡು, ಭುಜಿಸು!" ಎಂಬ ಮಾತುಗಳೇ ಎಲ್ಲಾ ಕಡೆಗಳಲ್ಲಿಯೂ ಕೇಳಿಬರುತ್ತಿದ್ದಿತು. ಧೃತರಾಷ್ಟ್ರನೂ, ಪಾಂಡುವೂ, ಮಹಾಬುದ್ಧಿಶಾಲಿಯಾದ ವಿದುರನೂ ಹುಟ್ಟಿದುದು ಮೊದಲು ಭೀಷ್ಮನು ಅವರನ್ನು ತನ್ನ ಮಕ್ಕಳಂತೆ ಪಾಲಿಸುತ್ತಿದ್ದನು.

ಅವರಿಗೆ ಜಾತಕರ್ಮಾದಿಸಂಸ್ಕಾರಗಳು ನಡೆದಮೇಲೆ, ಅವರು ಬ್ರಹ್ಮಚರ್ಯಾಶ್ರಮದಲ್ಲಿ ವೇದಾಧ್ಯಯನವನ್ನು ಮಾಡಿ, ಶಾಸ್ತ್ರಪರಿಚಯದಲ್ಲಿಯೂ, ಅಂಗಸಾಧನೆಯಲ್ಲಿಯೂ ಪ್ರವೀಣರಾಗಿ ಯೌವನವಯಸ್ಕರಾದರು. ಅವರು ಧನುರ್ವಿದ್ಯೆಯಲ್ಲಿಯೂ, ಗದಾಯುದ್ಧದಲ್ಲಿಯೂ, ಕತ್ತಿಸಾಧನೆಯಲ್ಲಿಯೂ, ಗಜಾರೋಹಣದಲ್ಲಿಯೂ, ರಾಜನೀತಿ ಶಾಸ್ತ್ರದಲ್ಲಿಯೂ,

ಪಾರಂಗತರಾದರು. ಇತಿಹಾಸ ಪುರಾಣಗಳನ್ನೂ, ಸ್ವರಲಕ್ಷಣಗಳನ್ನೂ ಕಲಿತು, ವೇದಗಳಲ್ಲಿಯೂ, ವೇದಾಂಗಗಳಲ್ಲಿಯೂ ಯಥಾರ್ಥ ಜ್ಞಾನವನ್ನು ಪಡೆದು, ಸಮಸ್ತ ವಿಷಯಗಳಲ್ಲಿಯೂ ಪಾಂಡಿತ್ಯವನ್ನು ಹೊಂದಿದರು. ಆಮೇಲೆ ಭೀಷ್ಮನು ವೇದಾಧ್ಯಯನದಲ್ಲಿ ನಿರತನಾಗಿ, ರಾಜನೀತಿಶಾಸ್ತ್ರದಲ್ಲಿ ನಿಪುಣನಾಗಿದ್ದ ಕೌರವಕುಲಶ್ರೇಷ್ಠನಾದ ಧೃತರಾಷ್ಟ್ರನಿಗೆ ಪಟ್ಟಗಟ್ಟಿದನು. ಧನುರ್ವಿದ್ಯೆಯಲ್ಲಿಯೂ, ಅಶ್ವಾರೋಹಣದಲ್ಲಿಯೂ, ಗದಾಯುದ್ಧದಲ್ಲಿಯೂ, ಕತ್ತಿವರಸೆಯಲ್ಲಿಯೂ, ಆನೆಯ ಸವಾರಿಯಲ್ಲಿಯೂ, ಹಲವುವಿಧದ ಅಸ್ತ್ರವಿದ್ಯೆಯಲ್ಲಿಯೂ, ಅಸ್ತ್ರಶಾಸ್ತ್ರದಲ್ಲಿಯೂ, ಧರ್ಮಶಾಸ್ತ್ರದಲ್ಲಿಯೂ ಪಾಂಡುರಾಜನು ವೃದ್ಧಿಗೆ ಬಂದಮೇಲೆ, ಆತನನ್ನು ಭೀಷ್ಮನು ರಾಜ್ಯಕ್ಕೆ ಸೇನಾಧಿಪತಿಯನ್ನಾಗಿ ನಿಯಮಿಸಿದನು. ಪರಾಕ್ರಮಶಾಲಿಯಾದ ಪಾಂಡುವು ಧನುರ್ವಿದ್ಯೆಯಲ್ಲಿ ಅಸಮಾನನು. ಧೃತರಾಷ್ಟ್ರರಾಜನೂ ಇತರರಿಗಿಂತ ವಿಶೇಷ ಬಲಶಾಲಿಯಾಗಿದ್ದನು. ವಿದುರನು ಬಾಲನಾಗಿರುವಾಗಲೇ ಆತನನ್ನು ಧೃತರಾಷ್ಟ್ರನಿಗೆ ಸಕಲ ಧರ್ಮವನ್ನೂ ಉಪದೇಶಿಸುವ ಮಂತ್ರಿಯನ್ನಾಗಿ ಏರ್ಪಡಿಸಿದನು. ವಿದುರನು ಸಮಸ್ತಶಾಸ್ತ್ರವಿಷಯಗಳ ಮರ್ಮಗಳನ್ನು ಗ್ರಹಿಸುವುದರಲ್ಲಿಯೂ, ಊಹಿಸುವುದರಲ್ಲಿಯೂ ಸಮರ್ಥನಾಗಿ, ಚಿಕ್ಕ ವಯಸ್ಸಿನಲ್ಲಿಯೇ ನೀತಿವಿಷಯಗಳಲ್ಲಿ ಆಸಕ್ತವಾದ ಮನಸ್ಸಿನಿಂದ ಜಗತ್ತಿನ ತತ್ವವೆಲ್ಲವನ್ನೂ ತಿಳಿದಿದ್ದನು. ರಾಜಾ! ವಿದುರನಿಗೆ ಸಮಾನನಾದ ಧರ್ಮನಿಷ್ಠನೂ, ಅವನಂತೆ ಉತ್ತಮ ಧರ್ಮಜ್ಞನೂ ಮೂರು ಲೋಕದಲ್ಲಿ ಬೇರೆ ಯಾರೂ ಇಲ್ಲದಂತಾಯಿತು. ನಶಿಸಿಹೋದ ಶಂತನುವಂಶವು ಪುನಃಉದ್ಧರಿಸಲ್ಪಟ್ಟುದನ್ನು ನೋಡಿದಮೇಲೆ, ಭೂಲೋಕದಲ್ಲಿರುವ ಸಮಸ್ತದೇಶದಲ್ಲಿಯೂ, "ವೀರಮಾತೆಯರಲ್ಲಿ ಕಾಶಿರಾಜಪುತ್ರಿಯರಿಬ್ಬರೂ, ದೇಶಗಳಲ್ಲಿ ಕುರುಜಾಂಗಲ ದೇಶವೂ, ಧರ್ಮಜ್ಞರಲ್ಲಿ ಭೀಷ್ಮನೂ, ನಗರಗಳಲ್ಲಿ ಹಸ್ತಿನಾಪುರವೂ ಮೇಲೆನಿಸಿವೆ" ಎಂಬ ಸ್ತುತಿವಾಕ್ಯಗಳೇ ಎಲ್ಲೆಲ್ಲಿಯೂ ಹರಡಿದುವು. ಆದರೂ ಧೃತರಾಷ್ಟ್ರನಿಗೆ ಕಣ್ಣು ಕಾಣಿಸದಿದ್ದುದರಿಂದಲೂ, ವಿದುರನು ದಾಸೀಪುತ್ರನಾದುದರಿಂದಲೂ, ರಾಜ್ಯವನ್ನು ನಡೆಸಲು ಅನರ್ಹರಾದರು. ಆದುದರಿಂದ ಪಾಂಡುವೇ ರಾಜನಾದನು. ಆಮೇಲೆ ಭೀ

ಷ್ಮನು ಕುಂತಿಭೋಜನಿಗೆ ರೂಪಯೌವನ ಸಂಪನ್ನೆಯಾದ ಕುಮಾರಿಯೊಬ್ಬಳಿರುವುದನ್ನು ಕೇಳಿದನು. ಹಾಗೆಯೇ ಗಾಂಧಾರರಾಜನಾದ ಸುಬಲನಿಗೆ ಉತ್ತಮಳಾದ ಕನ್ಯೆಯೊಬ್ಬಳಿರುವಳೆಂದೂ, ಮದ್ರದೇಶದ ರಾಜನಿಗೆ ಎಣೆಯಿಲ್ಲದ ಸೌಂದರ್ಯವುಳ್ಳ ಕುಮಾರಿಯೊಬ್ಬಳಿರುವಳೆಂದೂ ಕೇಳಿ ವಿದುರನನ್ನು ನೋಡಿ ಹೀಗೆಂದು ಹೇಳಿದನು.

ಇದು ನೂರಹದಿನೆಂಟನೆಯ ಅಧ್ಯಾಯವು.



{ ಧೃತರಾಷ್ಟ್ರನ ವಿವಾಹ ವಿಷಯವಾಗಿ ಭೀಷ್ಮವಿದುರರ ಸಂವಾದವು. ಧೃತರಾಷ್ಟ್ರನಿಗೂ, ಗಾಂಧಾರಿಗೂ ವಿವಾಹವು. }

ವಿದುರಾ! “ ನಮ್ಮ ಕುಲವು ಸಮಸ್ತ ಗುಣಗಳಿಂದಲೂ ಪ್ರಕಾಶಿಸುತ್ತಿರುವುದು. ವಿಶೇಷಪ್ರಖ್ಯಾತವಾಗಿ ಭೂಮಿಯಲ್ಲಿ ಸಮಸ್ತರಾಜರನ್ನೂ ಆಳತಕ್ಕ ಅಧಿಕಾರವುಳ್ಳುದಾಗಿರುವುದು. ಮಹಾತ್ಮರೂ, ಧರ್ಮಜ್ಞರೂ ಆದ ರಾಜರಿಂದ ಚೆನ್ನಾಗಿ ರಕ್ಷಿಸಲ್ಪಡುತ್ತಿರುವ ಈ ನಮ್ಮ ಕುಲವು, ಯಾವಾಗಲೂ ತನ್ನ ಯಶಸ್ಸನ್ನು ಕೆಡಿಸಿಕೊಂಡುದಿಲ್ಲ. ನಾನೂ, ಸತ್ಯವತಿಯೂ, ಮಹಾತ್ಮನಾದ ವ್ಯಾಸನೂ ಆಲೋಚಿಸಿ, ನಮ್ಮ ಕುಲವು ನಷ್ಟವಾಗದಿರುವುದಕ್ಕಾಗಿ ನಿಮ್ಮನ್ನು ಪುತ್ರರನ್ನಾಗಿ ಪಡೆದೆವು. ಸಮುದ್ರದಂತೆ ನಮ್ಮ ವಂಶವು ಮುಂದೆ ಅಭಿವೃದ್ಧಿಗೆ ಬರಲು ನಾನೂ, ನೀವೂ ಪ್ರಯತ್ನಿಸಬೇಕಾಗಿದೆ. ಯದುವಂಶದಲ್ಲಿ ಕನ್ಯೆಯಿರುವಂತೆ ಕೇಳಿರುವೆನು. ಆ ಬಾಲಿಕೆಯು ನಮ್ಮ ವಂಶಕ್ಕೆ ತಕ್ಕವಳು. ಗಾಂಧಾರದೇಶದ ಸುಬಲನ ಮಗಳೂ, ಮದ್ರದೇಶದ ರಾಜನ ಮಗಳೂ ಇಬ್ಬರೂ ಅದೇ ರೀತಿಯಲ್ಲಿ ತಕ್ಕ ಕನ್ಯೆಯರಾಗಿರುವರು. ಪುತ್ರಾ! ಆ ಕನ್ಯೆಯರೆಲ್ಲರೂ ಒಳ್ಳೆಯ ವಂಶದಲ್ಲಿ ಹುಟ್ಟಿದವರು. ಸುಂದರಿಯರು. ಆ ಕ್ಷತ್ರಿಯಶ್ರೇಷ್ಠರೂ ನಮ್ಮ ಸಂಬಂಧಕ್ಕೆ ತಕ್ಕವರೇ! ನಮ್ಮ ಕುಲದಲ್ಲಿ ಸಂತಾನವು ವೃದ್ಧಿಯಾಗಲು, ಆ ಕನ್ಯೆಯರನ್ನು ನಿನಗೆ ಮದುವೆಮಾಡಬೇಕೆಂದು ನನಗೆ ತೋರಿದೆ. ನಿನ್ನ ಆಲೋಚನೆಯೇನು? ” ಎಂದು ಕೇಳಿದನು. ಅದಕ್ಕೆ ವಿದುರನು “ ನಮಗೆ ತಂದೆಯೂ ನೀನೇ! ತಾಯಿಯೂ ನೀನೇ! ಪರಮಾಚಾರ್ಯ

ನೂ ನೀನೇ ಆಗಿರುವೆ. ಆದುದರಿಂದ ಈ ನಮ್ಮ ಕುಲಕ್ಕೆ ಹಿತವಾವುದೋ ಅದನ್ನು ನೀನೇ ಆಲೋಚಿಸಿ ಮಾಡಬೇಕು" ಎಂದನು ಆಗ ಭೀಷ್ಮನು ಸುಬಲನ ಮಗಳಾದ ಗಾಂಧಾರಿಯ ವೃತ್ತಾಂತವನ್ನು ಕುರಿತು ಬ್ರಾಹ್ಮಣರನ್ನು ಕೇಳಿದನು. ಪುಣ್ಯವತಿಯಾದ ಗಾಂಧಾರಿಯು ಭೃಗುನೇತ್ರಹರನೂ, ವರಪ್ರದನೂ ಆದ ಶಿವನನ್ನು ಆರಾಧಿಸಿ, ನೂರುಮಂದಿ ಪುತ್ರರನ್ನು ಪಡೆಯುವಂತೆ ವರವನ್ನು ಹೊಂದಿರುವಳೆಂದು ಆ ಬ್ರಾಹ್ಮಣರು ತಿಳಿಸಲು, ಆಮೇಲೆ ಭೀಷ್ಮನು ಗಾಂಧಾರರಾಜನ ಬಳಿಗೆ ದೂತರನ್ನು ಕಳುಹಿಸಿದನು ಧೃತರಾಷ್ಟ್ರನು ಅಂಧನಾದುದರಿಂದ ಸುಬಲನು ಆತನಿಗೆ ಕನ್ಯೆಯನ್ನು ಕೊಡಲು ಅಸಮಾಧಾನಪಟ್ಟನು. ಆದರೆ, ಕುರುಕುಲದ ಶ್ರೇಷ್ಠತೆಯನ್ನೂ, ಖ್ಯಾತಿಯನ್ನೂ, ಗುಣವನ್ನೂ ಆಲೋಚಿಸಿ, ಧೃತರಾಷ್ಟ್ರನಿಗೆ ಗಾಂಧಾರಿಯನ್ನು ಧರ್ಮಪತ್ನಿಯನ್ನಾಗಿ ವಿವಾಹಮಾಡಲು ಒಪ್ಪಿದನು. ಧೃತರಾಷ್ಟ್ರನು ಅಂಧನೆಂದೂ, ಆತನಿಗೆ ತನ್ನನ್ನು ವಿವಾಹಮಾಡಿಕೊಡುವಂತೆ ತಂದೆತಾಯಿಗಳು ನಿಶ್ಚಯಿಸಿರುವರೆಂದೂ, ಗಾಂಧಾರಿಗೆ ತಿಳಿಯು ಬಂದಿತು. ಗಾಂಧಾರಿಯು ಪತಿವ್ರತಾ ಶಿರೋಮಣಿಯಾದುದರಿಂದ "ನನ್ನ ಪತಿಗೆ ಕಣ್ಣಿಲ್ಲದಮೇಲೆ ನನಗೇಕೆ ಈ ಕಣ್ಣುಗಳು? ನಾನೂ ಈ ಕಣ್ಣುಗಳಿಂದ ಬೇರೆ ಪುರುಷರಾರನ್ನೂ ನೋಡಲಾರೆನು" ಎಂದು ನಿಶ್ಚಯಿಸಿ, ಒಂದು ವಸ್ತ್ರವನ್ನು ತೆಗೆದು, ಅದನ್ನು ಹಲವು ಮಡಿಕೆಗಳಾಗಿ ಮಡಿಸಿ, ತನ್ನ ಕಣ್ಣುಗಳೆರಡೂ ಕಾಣದಂತೆ ಅವುಗಳಮೇಲೆ ಕಟ್ಟಿಕೊಂಡಳು. ಆಮೇಲೆ ಗಾಂಧಾರ ರಾಜಕುಮಾರನಾದ ಶಕುನಿಯು, ತನ್ನ ಸಹೋದರಿಯನ್ನು ಅಧಿಕ ವೈಭವದೊಡನೆ ಕರೆದುಕೊಂಡು, ಕೌರವರ ಬಳಿಗೆ ಬಂದು, ಆ ಸುಂದರೀಮಣಿಯನ್ನು ಅಲಂಕರಿಸಿ, ಧೃತರಾಷ್ಟ್ರನಿಗೆ ಕೊಡಲು, ಭೀಷ್ಮನು ಸಂಭ್ರಮವಾಗಿ ವಿವಾಹವನ್ನು ಮಾಡಿದನು. ಆ ವೀರನು ತನ್ನ ಸಹೋದರಿಯನ್ನೂ, ಆಕೆಯೊಡನೆ ತನ್ನ ಗೌರವಕ್ಕೆ ತಕ್ಕಂತೆ ವಸ್ತ್ರಭೂಷಣಾದಿಗಳನ್ನೂ ಕೊಟ್ಟನು. ಅದಕ್ಕೆ ತಕ್ಕಂತೆ ಭೀಷ್ಮನು ತನಗೆ ಮಾಡಿದ ಮರ್ಯಾದೆಗಳನ್ನೂ ಸ್ವೀಕರಿಸಿ ತನ್ನ ನಗರಕ್ಕೆ ಹಿಂತಿರುಗಿದನು.

ಓ ಜನಮೇಜಯಾ! ಕಾಂತಾರತ್ನವಾದ ಆ ಗಾಂಧಾರಿಯು ತನ್ನ ಕುಲ, ಶೀಲ, ಆಚಾರ, ನಡೆವಳಿಕೆ ಇವುಗಳಿಂದ ಕೌರವರೆಲ್ಲರನ್ನೂ ತೃಪ್ತಿಪ

ಡಿಸಿ, ಜ್ಞಾನಚಕ್ಷುವೆನಿಸಿದ (ಹೊರಗಿನ ಕಣ್ಣಿಲ್ಲದ) ತನ್ನ ಪತಿಗೆ ಭಯಪಟ್ಟು ನಡೆಯುತಿದ್ದಳು. ಕಣ್ಣುಕಟ್ಟಿಕೊಂಡಿದ್ದುದರಿಂದ ಅಂಧತ್ವದಲ್ಲಿ ಪತಿಗೆ ಸಮಾನಳಾಗಿದ್ದಳು. ಪತಿಯ ಮಾತಿಗೆ ಸ್ವಲ್ಪವೂ ವಿರೋಧಿ ನಡೆಯುತ್ತಿರಲಿಲ್ಲ. ಪತಿಯೇ ಮುಖ್ಯವೆಂದು ಭಾವಿಸಿದ ಪತಿವ್ರತಾಶಿರೋಮಣಿಯಾದುದರಿಂದ, ತನ್ನ ನಡೆವಳಿಕೆಯಿಂದ ಹಿರಿಯರೆಲ್ಲರನ್ನೂ ಸಂತೋಷಪಡಿಸಿ, ಬಾಯಿಂದಾದರೂ ಪರಪುರುಷರ ಹೆಸರನ್ನೇ ಉಚ್ಚರಿಸದಿದ್ದಳು. ಗಾಂಧಾರರಾಜನಾದ ಸುಬಲನು ಗಾಂಧಾರಿಯ ಸಹೋದರಿಯರಾದ ಮಿಕ್ಕ ಹತ್ತುಮಂದಿ ಕನ್ಯೆಯರನ್ನೂ ಧೃತರಾಷ್ಟ್ರನಿಗೇ ವಿವಾಹಮಾಡಿದನು. ಸತ್ಯವ್ರತೆ, ಸತ್ಯಸೇನೆ, ಸುಧೇಷ್ಣೆ, ಸಂಹಿತೆ, ತೇಜಶ್ಶ್ರವೆ, ಸುಶ್ರವೆ, ನಿಕೃತಿ, ಶುಂಭೆ, ಶಂಬರೆ, ದಶಾರ್ಣೆ ಎಂಬೀಹೆಸರುಳ್ಳ ಹತ್ತುಮಂದಿ ಗಾಂಧಾರ ರಾಜಕುಮಾರಿಯರನ್ನೂ ಧೃತರಾಷ್ಟ್ರನು ಒಂದೇ ದಿನದಲ್ಲಿ ಪಾಣಿಗ್ರಹಣಮಾಡಿಕೊಂಡನು. ಆಮೇಲೆ ಮಹಾಧನ್ವಿಯೂ, ಶಂತನುಪುತ್ರನೂ ಆದ ಭೀಷ್ಮನು, ನೂರಕ್ಕಿಂತ ಹೆಚ್ಚಾಗಿ ಅಲ್ಲಲ್ಲಿಂದ ರಾಜಕುಮಾರಿಯರನ್ನು ತರಿಸಿ ಧೃತರಾಷ್ಟ್ರನಿಗೆ ಮದುವೆ ಮಾಡಿಸಿದನು.

ಇದು ನೂರಹತ್ತೊಂಭತ್ತನೆಯ ಅಧ್ಯಾಯವು



ಕುಂತಿಯು ದೂರ್ವಾಸನಿಂದ ಮಂತ್ರವನ್ನು ಪಡೆದ ಕಥೆ.
ಸೂರ್ಯನಿಂದ ಕುಂತಿಯು ಕರ್ಣನನ್ನು ಪಡೆದು, ಆತನನ್ನು
ಯಮುನಾ ನದಿಯಲ್ಲಿ ತೇಲಿಸಿಬಿಡಲು, ದಾಶರಾಜನು
ಎತ್ತಿಕೊಂಡು ಹೋಗಿ ವಸುಷೇಣನೆಂಬ ಹೆಸರಿನಿಂ
ದ ಸಾಕಿದುದು. ಕರ್ಣಚರಿತ್ರವು.

ವಸುದೇವನಿಗೆ ತಂದೆಯಾದ ಶೂರಸೇನನೆಂಬ ರಾಜಶ್ರೇಷ್ಠನಿದ್ದನು. ಆತನಿಗೆ ಪೃಥೆಯೆಂಬ ಮಗಳಿದ್ದಳು. ಸೌಂದರ್ಯದಲ್ಲಿ ಆಕೆಗೆ ಸಮಾನಳು ಭೂಲೋಕದಲ್ಲಿಯೇ ಇಲ್ಲವೆನಬಹುದು. ಆ ಶೂರನಿಗೆ ಪ್ರಿಯಮಿತ್ರನೂ, ಅತ್ತೆಯ ಮಗನೂ ಆದ ಕುಂತಿಭೋಜನಿಗೆ ಸಂತತಿಯಿಲ್ಲ

ದಿದ್ದಿತು. ಅದಕ್ಕಾಗಿ ಅವನು ತನ್ನನ್ನು ಕೇಳಿದುದರಿಂದ ತನಗೆ ಮೊದಲು ಹುಟ್ಟಿದ ಮಗುವನ್ನು ಆತನಿಗೆ ಕೊಡುವಂತೆ ಈ ಮಗು ಹುಟ್ಟುವುದಕ್ಕೆ ಮೊದಲೇ ಅವನು ಪ್ರತಿಜ್ಞೆ ಮಾಡಿದ್ದನು. ಸತ್ಯಸಂಧನಾದ ಆತನು ಆಡಿದ ಮಾತಿಗೆ ತಪ್ಪಲಾರದೆ, ತನಗೆ ಮೊದಲು ಹುಟ್ಟಿದ ಕನ್ಯೆಯನ್ನು ಆ ಮಹಾತ್ಮನಿಗೆ ದತ್ತಮಾಡಿದನು. ಆಕೆಯು ಮನೆಗೆ ಬಂದ ಬ್ರಾಹ್ಮಣರನ್ನೂ, ಋಷಿಶ್ರೇಷ್ಠರನ್ನೂ ಪೂಜಿಸುವ ಕಾರ್ಯಕ್ಕೆ ನಿಯಮಿತಳಾಗಿ, ತನ್ನ ತಂದೆಯ ಮನೆಯಲ್ಲಿದ್ದಳು. ಹೀಗಿರುವಾಗ ಒಮ್ಮೆ ದೃಢವ್ರತನೂ, ಇತರರ ಧರ್ಮವನ್ನು ಪರೀಕ್ಷಿಸಬೇಕೆಂಬ ಅಭಿಪ್ರಾಯವನ್ನು ತನ್ನಲ್ಲಿ ರಹಸ್ಯವಾಗಿಟ್ಟುಕೊಂಡಿರತಕ್ಕವನೂ, ಉಗ್ರನೂ ಆದ ದೂರ್ವಾಸನೆಂಬ ಬ್ರಾಹ್ಮಣನು ಅಲ್ಲಿಗೆ ಬರಲು, ಆತನಿಗೆ ತಕ್ಕ ಉಪಚಾರಗಳನ್ನು ಮಾಡಿದಳು. ಹಾಗೆ ಒಂದು ಸಂವತ್ಸರಕಾಲವು ಕಳೆದಮೇಲೆ, ಆ ದೂರ್ವಾಸನು ಕೀರ್ತಿವಂತಳಾದ ಆ ಪೃಥೆಗೆ ಮುಂದೆ ಸಂಭವಿಸುವ ಆಪತ್ತನ್ನು ತನ್ನ ಜ್ಞಾನದೃಷ್ಟಿಯಿಂದ ತಿಳಿದು, ಆಕೆಗೆ ಒಂದು ದಿವ್ಯಮಂತ್ರವನ್ನು ಉಪದೇಶಿಸಿ "ಈ ಮಂತ್ರದಿಂದ ನೀನು ಯಾವ ದೇವತೆಯನ್ನು ಕರೆದರೆ, ಆಯಾ ದೇವತೆಯಿಂದ ಅದೇ ಮಹಿಮೆಯುಳ್ಳ ಪುತ್ರನು ಹುಟ್ಟುವನು" ಎಂದನು.

ಕುಂತಿಯು ಆ ಬ್ರಾಹ್ಮಣನ ಮಾತನ್ನು ಪರೀಕ್ಷಿಸುವ ಉದ್ದೇಶದಿಂದ ಕನ್ಯೆಯಾಗಿರುವಾಗಲೇ ಸೂರ್ಯನನ್ನು ಸ್ಮರಿಸಿದಳು. ಒಡನೆಯೇ ಸೂರ್ಯನು ಮೇಘಮಂಡಲದಿಂದ ತನ್ನ ಮಾರ್ಗವನ್ನು ಬಿಡಿಸಿಕೊಂಡು, ಆ ಪೃಥೆಯಬಳಿಗೆ ಬಂದನು. ಆ ಸೂರ್ಯನು ಪ್ರತ್ಯಕ್ಷನಾದಾಗ ಲೋಕವನ್ನೆಲ್ಲ ಬೆಳಗುವ ಆ ಅದ್ಭುತದೃಶ್ಯಕ್ಕೆ ಬೆರಗಾಗಿ ಕುಂತಿಯು ವೈಮರೆತು "ಮಹಾತ್ಮಾ! ನನ್ನ ಮುಂದೆ ಕಾಣಿಸುತ್ತಿರುವ ನೀನು ಯಾರು?" ಎಂದು ಕೇಳಿದಳು. ಆಗ ಸೂರ್ಯನು "ಶುಚಿಸ್ಮಿತೇ! ಮಂತ್ರದಿಂದ ನೀನು ನನ್ನನ್ನು ಕರೆದೆಯಲ್ಲವೆ? ನಿನಗೆ ಪುತ್ರಲಾಭವನ್ನುಂಟುಮಾಡುವುದಕ್ಕಾಗಿ ಬಂದಿರುವ ಸೂರ್ಯದೇವತೆಯೇ ನಾನೆಂದು ತಿಳಿ. ಸುಂದರೀಮಣೀ! ಕೇಳು. ನಿನ್ನಲ್ಲಿ ನನ್ನಂತಹ ಪುತ್ರನು ಉತ್ಪನ್ನನಾಗುವನು. ನನ್ನ ಕುಂಡಲವನ್ನೂ, ನನ್ನ ಕವಚವನ್ನೂ ತೊಟ್ಟವನಾಗಿ

ಬಾಣಗಳಿಂದಲೂ, ಅಸ್ತ್ರಗಳಿಂದಲೂ ಅಭೇದ್ಯನಾದ ಪುತ್ರನು ಹುಟ್ಟು ವನು. ಅವನು ಮಹೋದಾರಸ್ವಭಾವವುಳ್ಳವನಾಗುವನು. ಆತನು ಬ್ರಾಹ್ಮಣರಿಗೆ ಕೊಡದಿರುವುದು ಒಂದೂ ಇಲ್ಲ. ಆ ಸಮಯದಲ್ಲಿ ನಾನೇ ಅಡ್ಡಬಂದರೂ ಆತನು ನನ್ನ ಮಾತನ್ನೂ ಲಕ್ಷಿಸುವುದಿಲ್ಲ. ಕೊಟ್ಟೇ ತೀ ರುವನು. ಅವನು ಬಹಳ ಮಾನಿಷ್ಠನು" ಎಂದನು. ಆಗ ಕುಂತಿಯು ಆತ ನೊಡನೆ "ದೇವಾ! ನಾನು ಇನ್ನೂ ತಂದೆಯ ಅಧೀನದಲ್ಲಿರುವ ಕನ್ಯೆ. ಈಗ ನನಗೆ ನಿನ್ನಿಂದಾಗಬೇಕಾದ ಪುರುಷಾರ್ಥವೊಂದೂ ಇಲ್ಲ. ನನಗೆ ಬ್ರಾಹ್ಮಣನೊಬ್ಬನು ಒಂದು ವಿದ್ಯೆಯನ್ನು ಉಪದೇಶಿಸಿ ವರವನ್ನು ಅನು ಗ್ರಹಿಸಿದನು. ಪ್ರಭೂ! ಅದನ್ನು ಪರೀಕ್ಷಿಸುವುದಕ್ಕಾಗಿ ನಿನ್ನನ್ನು ಕರೆದು ಬಿಟ್ಟೆನು. ಆ ಅಪರಾಧಕ್ಕಾಗಿ ನಾನು ನಿನ್ನನ್ನು ತಲೆಬಗ್ಗಿ ವಂದಿಸಿ ಪ್ರಾರ್ಥಿ ಸುವೆನು. ನನ್ನನ್ನು ಕ್ಷಮಿಸಬೇಕು. ತಪ್ಪಿತವಿದ್ದರೂ ಸ್ತ್ರೀಯರನ್ನು ಯಾವಾಗಲೂ ರಕ್ಷಿಸಬೇಕಲ್ಲವೆ?" ಎಂದಳು. ಅದಕ್ಕೆ ಸೂರ್ಯನು "ದೂರ್ವಾಸನು ನಿನಗೆ ವರವನ್ನು ಕೊಟ್ಟ ವಿಷಯವೆಲ್ಲವೂ ನನಗೂ ತಿಳಿ ಯುವುದು. ನೀನು ನನ್ನನ್ನು ಸಂಧಿಸಿದುದೇನೂ ತಪ್ಪಲ್ಲ. ಸುಂದರೀ! ನೀನು ನನ್ನನ್ನು ನೋಡಿದಮೇಲೆ ಅದು ವ್ಯರ್ಥವಾಗದು. ನೀನು ನನ್ನ ನ್ನು ಕರೆದುದಾಯಿತು. ಇನ್ನು ಭಯಪಡುತ್ತಿರುವೆಯೇಕೆ? ನಿರರ್ಥಕವಾಗಿ ನನ್ನನ್ನೇಕೆ ಕರೆದೆ? ಇದರಿಂದ ನಿನಗೆ ಪಾಪವು ಬರುವುದರಲ್ಲಿ ಸಂದೇಹ ವಿಲ್ಲ. ನೀನು ಅಸ್ವತಂತ್ರಳೆಂಬುದನ್ನು ಮೊದಲೇ ನೀನು ತಿಳಿದಿದ್ದರೆ, ನನ್ನ ನ್ನು ಕರೆದೆಯೇಕೆ? ಈಗ ನೀನು ನನ್ನನ್ನು ಅವಮಾನಪಡಿಸಿದರೆ, ನೀನು ಯಾರಿಂದ ವರವನ್ನು ಪಡೆದು ಗರ್ವಾಂಧಳಾದೆಯೋ, ಆ ಋಷಿಯೇ ಉಳಿಯಲಾರನೆಂದು ತಿಳಿ! ನಿನ್ನ ಕುಲವನ್ನೂ ಈಗಲೇ ನನ್ನ ಕೆರಳಿದ ಕಣ್ಣುಗಳಿಂದ ದಹಿಸಿಬಿಡುವೆನು" ಎಂದನು. ಸೂರ್ಯನು ಹೀಗೆ ಹಲ ವು ಬಗೆಯಲ್ಲಿ ನಯಭಯಗಳಿಂದ ಹೇಳಿದರೂ, ಕುಂತಿಯು ಬಂಧುವರ್ಗ ಗಳಲ್ಲಿ ತನಗಿದ್ದ ಭಯದಿಂದಲೂ, ಲಜ್ಜೆಯಿಂದಲೂ ಕಳೆಗುಂದಿ "ಇನ್ನೂ ನಾನು ಕನ್ಯೆಯಲ್ಲವೆ?" ಎಂದು ಹೇಳಿ, ಸೂರ್ಯನ ಮಾತಿಗೆ ಒಪ್ಪದಿದ್ದಳು. ಆಗ ಸೂರ್ಯನು ತಿರುಗಿ ಆಕೆಯನ್ನು ನೋಡಿ "ರಾಜಕುಮಾರೀ! ನನ್ನ ಅನುಗ್ರಹದಿಂದ ನಿನಗೆ ದೋಷವೊಂದೂ ಬರುವುದಿಲ್ಲ" ಎಂದನು. ಆಗ

ಕುಂತಿಯು ಮಹಾತ್ಮಾ! ನನ್ನಲ್ಲಿ ದಯೆಯಿಡು. ನನಗೆ ಗರ್ವವಿಲ್ಲ. ನನ್ನ ಕನ್ಯಾಧರ್ಮವನ್ನು ಕೆಡಿಸುವುದು ನಿನಗೆ ಸರ್ವಥಾ ಯೋಗ್ಯವಲ್ಲ. ನನ್ನ ಮಾತಿರಲಿ! ನೀನೇ ಯೋಚಿಸು!" ಎಂದಳು. ಆಗ ಸೂರ್ಯನು "ನೀನು ಭಯಪಡಬೇಡ. ನಿನಗೆ ಕುಮಾರನು ಹುಟ್ಟುವನು. ನೀನು ನನ್ನ ಅನುಮತಿಯಮೇರೆಗೆ ತಿರುಗಿ ಕನ್ಯೆಯಾಗುವೆ" ಎಂದನು. ಸೂರ್ಯನು ಹೀಗೆ ಹೇಳಿದಮೇಲೆ ಕುಂತಿಯು ಆ ಸೂರ್ಯನ ಮಾತಿಗೆ ಸಮ್ಮತಿಸಿದಳು. ಆಗ ಸೂರ್ಯನು ಕುಂತಿಗೆ ಕನ್ಯಾವಸ್ಥೆಯಲ್ಲಿಯೇ ಗರ್ಭವನ್ನುಂಟು ಮಾಡಿದನು. ಆ ಗರ್ಭದಿಂದ ವೀರನೂ, ಆಯುಧಪಾಣಿಗಳಲ್ಲಿ ಶ್ರೇಷ್ಠನೂ ಆದ ಕುಮಾರನೊಬ್ಬನು ಹುಟ್ಟಿದನು. ಆತನು ಹುಟ್ಟುವಾಗಲೇ ಕಾಂತಿಯುಕ್ತನಾಗಿಯೂ, ಸರ್ವಸೌಭಾಗ್ಯಲಕ್ಷಣವಿಶಿಷ್ಟನಾಗಿಯೂ ಇದ್ದುದಲ್ಲದೆ, ಶರೀರದೊಡನೆ ಹುಟ್ಟಿದ ಕವಚದಿಂದಲೂ, ಕರ್ಣಕುಂಡಲಗಳಿಂದಲೂ ದೇವಶಿಶುವಿಗೆ ಸಮಾನನಾಗಿ ಪ್ರಕಾಶಿಸುತಿದ್ದನು. ಜನಮೇಜಯ ರಾಜಾ! ಆತನೇ ಕರ್ಣನು. ಆತನು ಸರ್ವಲೋಕಗಳಲ್ಲಿಯೂ ಪ್ರಸಿದ್ಧನು. ಮಹಾಕಾಂತಿಸಂಪನ್ನನಾದ ಸೂರ್ಯನು ಆ ಕುಂತಿಗೆ ತಿರುಗಿ ಕನ್ಯಾತ್ವವನ್ನು ಕೊಟ್ಟು, ಒಡನೆಯೇ ಅಂತರ್ಧಾನ ಹೊಂದಿದನು. ಕುಂತಿಯು ಆ ಮಗುವನ್ನು ನೋಡಿ ಮನಸ್ಸಿನಲ್ಲಿ ವ್ಯಾಕುಲಗೊಂಡು "ಈಗ ಏನುಪಾಯವನ್ನು ಮಾಡಲಿ? ಯಾವ ಮಾರ್ಗವು ಒಳ್ಳೆಯದು?" ಎಂದು ತನ್ನ ಮನಸ್ಸಿನಲ್ಲಿಯೇ ಆಲೋಚಿಸಿದಳು. ಆಕೆಯು ತನ್ನ ಬಂಧುಗಳಿಗೆ ಭಯಪಟ್ಟು, ತನ್ನ ಅಪವಾದವನ್ನು ಮುಚ್ಚುವುದಕ್ಕಾಗಿ ಒಂದು ಪೆಟ್ಟಿಗೆಯಲ್ಲಿ ರತ್ನಗಳನ್ನಿಟ್ಟು, ಅದರಲ್ಲಿ ಮಹಾಬಲಶಾಲಿಯಾದ ಆ ಕೂಸನ್ನಿಟ್ಟು, ಆ ಪೆಟ್ಟಿಗೆಯನ್ನೇ ನೀರಿನಲ್ಲಿ ತೇಲಿಸಿಬಿಟ್ಟಳು. ಪ್ರವಾಹದಲ್ಲಿ ತೇಲಿಬರುತಿದ್ದ ಅದನ್ನು ಸೂತಕುಲದವನಾದವನೊಬ್ಬನು ಎತ್ತಿ ನೋಡಿ, ಆ ಶಿಶುವನ್ನು ಮನೆಗೆ ಎತ್ತಿಕೊಂಡು ಹೋಗಿ ತನ್ನ ಮಗನಂತೆ ಸಾಕಿದನು. ಆತನೂ, ಆತನ ಪತ್ನಿಯಾದ ರಾಧೆಯೂ "ಕವಚ ಕುಂಡಲಾದಿ ರೂಪವಾದ ವಸು (ಧನ) ಸಹಿತನಾಗಿ ಹುಟ್ಟಿರುವುದರಿಂದ ಇವನು ವಸುಷೇಣನೆಂದು ಪ್ರಖ್ಯಾತಿ ಹೊಂದಲಿ" ಎಂದು ಆತನಿಗೆ ನಾಮಕರಣಮಾಡಿದರು. ಸಹಜವಾಗಿಯೇ ಬಲಶಾಲಿಯಾದ ಆತನು, ವಯ

ಸ್ಸಬಂದಮೇಲೆ ಎಲ್ಲಾ ಅಸ್ತ್ರವಿದ್ಯೆಗಳಲ್ಲಿಯೂ ನಿಪುಣನಾದನು. ಸೂರ್ಯ ಕಾಂತಿಯು ತನ್ನ ಬೆನ್ನನ್ನು ಸುಡುವವರೆಗೆ ಎಂದರೆ, ಪ್ರಾತಃಕಾಲದಿಂದ ಮಧ್ಯಾಹ್ನದವರೆಗೂ ಆ ವೀರನು ಸೂರ್ಯೋಪಾಸನೆ ಮಾಡುತಿದ್ದನು. ವೀರನೂ, ಮೇಧಾವಿಯೂ ಆದ ಆ ಕರ್ಣನು, ಹಾಗೆ ಜಪಮಾಡುತ್ತಿರು ವಾಗ, ಈ ಭೂಲೋಕದಲ್ಲಿ ಬ್ರಾಹ್ಮಣರಿಗೆ ದಾನಮಾಡದ ಪದಾರ್ಥವೊಂ ದೂ ಇಲ್ಲ. ಆ ಕಾಲದಲ್ಲಿ ಬ್ರಾಹ್ಮಣರು ಬಂದು ಏನನ್ನು ಯಾಚಿಸಿ ದರೂ ಅದನ್ನು ಕೊಡುತಿದ್ದನು. ಆಮೇಲೆ ಒಮ್ಮೆ ಆತನ ಸ್ವಪ್ನದಲ್ಲಿ, ಸೂರ್ಯನು ಬ್ರಾಹ್ಮಣರೂಪದಿಂದ ಬಂದು “ ವೀರಾ! ನನ್ನ ಮಾತನ್ನು ಕೇಳು. ಈ ದಿನದ ಬೆಳಗಿನ ಜಾವದಲ್ಲಿ ಇಂದ್ರನು ನಿನ್ನ ಬಳಿಗೆ ಬರು ವನು. ಆತನು ಬ್ರಾಹ್ಮಣವೇಷವನ್ನು ಧರಿಸಿ ಬರುವನು. ಆತನಿಗೆ ನೀನು ಭಿಕ್ಷೆಯಿಕ್ಕಬೇಡ. ಆತನು ನಿನ್ನ ಕವಚವನ್ನೂ, ಕುಂಡಲವನ್ನೂ ತೆಗೆದು ಕೊಂಡು ಹೋಗಬೇಕೆಂದು ನಿಶ್ಚಯಿಸಿಕೊಂಡಿರುವನು. ಆದುದರಿಂದ ನಾನು ಇದನ್ನು ನಿನಗೆ ತಿಳಿಸುತ್ತಿರುವೆನು. ನನ್ನ ಮಾತನ್ನು ನೀನು ನೆನಪಿನಲ್ಲಿಡು ” ಎಂದನು. ಅದಕ್ಕೆ ಕರ್ಣನು “ ಬ್ರಾಹ್ಮಣೋತ್ತಮಾ! ಇಂದ್ರನೇ ಬ್ರಾಹ್ಮಣರೂಪವನ್ನು ಧರಿಸಿ ನನ್ನ ಬಳಿಗೆ ಬಂದು ಯಾಚಿಸಿದರೆ ನಾನು ಹೇಗೆತಾನೇ ಕೊಡದಿರಲಿ? ದೇವತೆಗಳೂ ತಮ್ಮ ಶ್ರೇಯಸ್ಸಿಗಾಗಿ ಬ್ರಾಹ್ಮಣರನ್ನು ಪೂಜಿಸುವರಲ್ಲವೆ? ಆತನು ದೇವತೆಗಳಿಗೂ ದೇವತೆ ಯೆಂಬುದನ್ನು ತಿಳಿದು ಆತನನ್ನು ನಿರಾಕರಿಸಲು ನಾನು ಶಕ್ತನಲ್ಲ ” ಎಂ ದನು. ಅದಕ್ಕೆ ಸೂರ್ಯನು “ ವೀರಾ! ಹಾಗಾದರೆ ನಾನು ಹೇಳುವು ದನ್ನು ಕೇಳು. ಆಗ ಇಂದ್ರನು ನಿನಗೆ ಒಂದು ವರವನ್ನು ಕೊಡುವು ದಾಗಿ ಹೇಳುವನು. ಆಗ ನೀನು ಶತ್ರುಗಳನ್ನು ವಧಿಸುವ ಶಕ್ತ್ಯಾಯುಧ ವೊಂದನ್ನು ಕೇಳು ” ಎಂದನು. ಹೀಗೆ ಹೇಳಿ ಬ್ರಾಹ್ಮಣರೂಪದಿಂದ ಕಾಣಿಸಿಕೊಂಡಿದ್ದ ಸೂರ್ಯನು ಸ್ವಪ್ನದಲ್ಲಿಯೇ ಮರೆಯಾದನು. ಕರ್ಣ ನು ಎದ್ದಮೇಲೆ, ಆ ಸ್ವಪ್ನವಿಷಯವನ್ನೇ ಆಲೋಚಿಸುತಿದ್ದನು. ಆಮೇಲೆ ಪ್ರಾಣಿಗಳಿಗೆಲ್ಲ ರಕ್ಷಕನೂ, ತೇಜಸ್ವಿಯೂ ಆದ ಇಂದ್ರನು, ತನ್ನ ಪುತ್ರ ನಿಗಾಗಿ ಬ್ರಾಹ್ಮಣರೂಪವನ್ನು ಧರಿಸಿ ಬಂದು, ಕರ್ಣನ ಕವಚವನ್ನೂ, ಕುಂಡಲಗಳನ್ನೂ ಕೊಡುವಂತೆ ಆತನನ್ನು ಕೇಳಿದನು. ಆಗಲೂ ಅವನು

ಮನಸ್ಸಿನಲ್ಲಿ ಸ್ವಲ್ಪವೂ ಚಿಂತೆಯಿಲ್ಲದೆ, ತನ್ನ ಕಿವಿಗಳನ್ನೂ, ದೇಹವನ್ನೂ ಸುಲಿದು, ರಕ್ತಸಹಿತಗಳಾದ ಕವಚಕುಂಡಲಗಳೆರಡನ್ನೂ ಬದ್ಧಾಂಜಲಿಯಾಗಿ ಆ ಬ್ರಾಹ್ಮಣನಿಗೆ ದಾನಮಾಡಿದನು. ಇಂದ್ರನು ಅವುಗಳನ್ನು ತೆಗೆದುಕೊಂಡು, ಆತನು ಮಾಡಿದ ದಾನಕ್ಕೆ ಸಂತುಷ್ಟನಾಗಿ ನಗುತ್ತ ಆತನೊಡನೆ "ಆಹಾ! ಅಸಾಧ್ಯಕಾರ್ಯವು? ದೇವತೆಗಳು, ಅಸುರರು, ಯಕ್ಷರು, ಗಂಧರ್ವರು, ನಾಗರು, ರಾಕ್ಷಸರು ಮೊದಲಾದವರಲ್ಲಿ ಯಾರಲ್ಲಿಯೂ ಇಂತಹ ದಾನಿಯಿರುವನೆಂದು ನನಗೆ ತೋರಲಿಲ್ಲ. ಈ ನಿನ್ನ ಕಾರ್ಯದಿಂದ ತಾನು ತೃಪ್ತನಾದೆನು. ನಿನಗೆ ಯಾವ ವರವು ಬೇಕೋ ಕೇಳು" ಎಂದನು. ಅದಕ್ಕೆ ಕರ್ಣನು "ಶತ್ರುಗಳನ್ನು ಸಂಹಾರಮಾಡತಕ್ಕ ಶಕ್ತ್ಯಾಯುಧವೊಂದನ್ನು ನೀನು ಕೃಪೆಮಾಡಬೇಕೆಂದು ಕೋರುವೆನು" ಎಂದನು. ಇಂದ್ರನು ಆಶ್ಚರ್ಯಪಟ್ಟು ಆತನಿಗೆ ಶಕ್ತ್ಯಾಯುಧವೊಂದನ್ನು ಕೊಟ್ಟು "ದೇವತೆಗಳು, ಅಸುರರು, ಯಕ್ಷರು, ಗಂಧರ್ವರು, ನಾಗರು, ರಾಕ್ಷಸರು ಮೊದಲಾದರಲ್ಲಿ ಯಾರಮೇಲೆ ಕೋಪಿಸಿ ನೀನು ಇವನ್ನು ಪ್ರಯೋಗಿಸುವೆಯೋ, ಆತನು ಇದರಿಂದ ನಾಶವಾಗುವನು. ಯುದ್ಧದಲ್ಲಿ ಯಾವನಾದರೊಬ್ಬ ಶತ್ರುವನ್ನು ಕೊಂದಮೇಲೆಯೇ ಈ ಶಕ್ತಿಯು ನನ್ನ ಬಳಿಗೆ ಬರುವುದು" ಎಂದು ಹೇಳಿ, ಒಡನೆಯೇ ಅಂತರ್ಧಾನವನ್ನು ಹೊಂದಿದನು. ಕರ್ಣನಿಗೆ ವಸುಷೇಣನೆಂಬ ಹೆಸರಾದುದಕ್ಕೆ ಕಾರಣವನ್ನು ಹಿಂದೆಯೇ ತಿಳಿಸಿದೆನಷ್ಟೆ? ತನ್ನ ಕವಚಕುಂಡಲಗಳನ್ನು ಕತ್ತರಿಸಿಕೊಟ್ಟುದರಿಂದ ಆತನಿಗೆ **ಕರ್ಣ**ನೆಂದೂ **ವಿಕರ್ತನ**ನೆಂದೂ ಹೆಸರುಗಳಾದುವು.

ಇದು ನೂರಿಪ್ಪತ್ತನೆಯ ಅಧ್ಯಾಯವು.



## ಕುಂತಿಗೂ, ಪಾಂಡುಮಹಾರಾಜನಿಗೂ ವಿವಾಹವಾದ ಕಥೆ.

ಓ ಜನಮೇಜಯರಾಜಾ! ಕೇಳು! ಕುಂತಿಭೋಜನ ಮಗಳಾದ ಪೃಥೆಯೆಂಬ ಕನ್ಯೆಯಿದ್ದಳಷ್ಟೆ? ಅವಳು ಒಳ್ಳೇ ರೂಪದಿಂದಲೂ, ಸದ್ಗುಣದಿಂದಲೂ ಕೂಡಿದವಳು. ಧರ್ಮನಿರತಳು. ಮತ್ತು ಮಹಾವ್ರತನಿಷ್ಠಳು.

ವಿಶಾಲನೇತ್ರೆಯಾಗಿ ತೇಜಸ್ಸಿನಿಂದಲೂ, ರೂಪಯೌವನಗಳಿಂದಲೂ, ಲೋಕಮೋಹನೆಯಾಗಿದ್ದ ಆ ರಾಜಕನ್ಯೆಯನ್ನು ವರಿಸಬೇಕೆಂದು ಅನೇಕರಾಜಕುಮಾರರು ಆಶಿಪಡುತ್ತಿದ್ದರು. ಆಗ ಕುಂತಿಭೋಜನು ಅವಳನ್ನು ಕಾಮಿಸಿದ ಎಲ್ಲಾ ರಾಜಕುಮಾರರನ್ನೂ ಕರೆಯಿಸಿ, ಸ್ವಯಂವರದಲ್ಲಿ ಅವಳು ತಾನಾಗಿ ಇಷ್ಟಪಟ್ಟವರಿಗೆ ಅವಳನ್ನು ವಿವಾಹಮಾಡಿಕೊಡುವುದಾಗಿ ನಿರ್ಣಯಿಸಿದನು. ಸ್ವಯಂವರಮಂಟಪಕ್ಕೆ ಎಲ್ಲರೂ ಬಂದು ಸೇರಿದ್ದಾಗ, ಆ ರಾಜಕುಮಾರಿಯು, ಸಭಾಮಧ್ಯದಲ್ಲಿದ್ದ ರಾಜಶ್ರೇಷ್ಠನಾದ ಪಾಂಡುವಿನ ರೂಪವನ್ನೇ ಮೆಚ್ಚಿದಳು. ಅವನಾದರೋ ಸಿಂಹದಂತೆ ದರ್ಪವುಳ್ಳವನು. ವಿಶಾಲವಾದ ಎದೆಯಿಂದಲೂ, ವೃಷಭದ ಕಣ್ಣುಗಳಂತಿರುವ ವಿಶಾಲವಾದ ಕಣ್ಣುಗಳಿಂದಲೂ, ಅಸಾಧಾರಣ ಬಲದಿಂದಲೂ ಕೂಡಿದವನು. ಬೇರೆ ಎಲ್ಲಾ ಕಾಂತಿಯನ್ನೂ ಅಡಗಿಸುವ ಸೂರ್ಯನಂತೆ, ಅಲ್ಲಿದ್ದ ಎಲ್ಲಾ ರಾಜರ ತೇಜಸ್ಸನ್ನೂ ತನ್ನ ತೇಜಸ್ಸಿನಿಂದ ಅಡಗಿಸುತ್ತ, ಬೇರೊಬ್ಬ ದೇವೇಂದ್ರನಂತೆ ಆ ರಾಜಸಭೆಯಲ್ಲಿ ಕುಳಿತಿದ್ದನು. ಕುಂತಿಭೋಜನ ಮಗಳಿಗೆ ಅವನನ್ನು ಕಂಡು ಮನಸ್ಸು ಕಲಗಿತು. ಅವನಲ್ಲಿ ಆಗಲೇ ಅವಳಿಗೆ ತನ್ನ ಪತಿಯೆಂಬ ಭಾವವೂ ಹುಟ್ಟಿತು. ಆಶೆಯಿಂದಲೂ, ಲಜ್ಜೆಯಿಂದಲೂ ಕೂಡಿ ಅವಳು ಮೆಲ್ಲಗೆ ಪುಷ್ಪಮಾಲಿಕೆಯನ್ನು ತಂದು ಅವನ ಕಂಠಕ್ಕೆ ಹಾಕಿದಳು. ಅಲ್ಲಿಗೆ ಕನ್ಯಾರ್ಥಿಗಳಾಗಿ ಬಂದಿದ್ದ ರಾಜರೆಲ್ಲರೂ ಅದನ್ನು ನೋಡಿ ನಿರಾಶರಾಗಿ, ತಮ್ಮ ರಥ ಗಜಾದಿ ವಾಹನಗಳೊಡನೆ ಹಿಂತಿರುಗಿ ಹೊರಟುಹೋದರು. ಆಮೇಲೆ ಕುಂತಿಭೋಜನು ಆ ವಧೂವರರಿಗೆ ಬಹಳ ವೈಭವದಿಂದ ಶಾಸ್ತ್ರೋಕ್ತವಾಗಿ ವಿವಾಹವನ್ನು ನಡೆಸಿದನು. ಶಚಿಯೊಡಗೂಡಿದ ದೇವೇಂದ್ರನಂತೆ ಅವಳೊಡನೆ ಪಾಂಡುವು ಅತ್ಯಂತ ಸೌಭಾಗ್ಯವಿಶಿಷ್ಟನಾಗಿ ಶೋಭಿಸುತಿದ್ದನು. ಕುಂತಿಭೋಜನುಕೂಡ ಅಳಿಯನಾದ ಪಾಂಡುವಿಗೆ ಬೇಕಾದಷ್ಟು ವಸ್ತ್ರಾಭರಣಗಳನ್ನು ಕೊಟ್ಟು ಸತ್ಕರಿಸಿ, ಆ ದಂಪತಿಗಳಿಬ್ಬರನ್ನೂ ಅವರ ಪಟ್ಟಣಕ್ಕೆ ಕಳುಹಿಸಿಕೊಡಲು, ವಿವಾಹಿತನಾದ ಪಾಂಡುವು ಬಹಳ ಸಂಭ್ರಮದೊಡನೆ ತನ್ನ ಪುರವನ್ನು ಪ್ರವೇಶಿಸಿದನು. ಪತ್ನೀಸಮೇತನಾಗಿ ಅವನು ಪುರಪ್ರವೇಶಮಾಡುವಾಗ, ಧ್ವಜಪತಾಕೆಗಳಿಂದ ಕೂಡಿದ ದೊಡ್ಡ ಸೈನ್ಯವು ಅವನನ್ನು ಹಿಂಬಾಲಿಸಿತು. ವಂದಿಮಾ

ಗಧರು ಸ್ತುತಿಸುತಿದ್ದರು. ಬ್ರಾಹ್ಮಣರು ಸ್ವಸ್ತಿವಾಚನಗಳನ್ನು ಮಾಡುತಿದ್ದರು. ಇಂತಹ ವೈಭವದೊಡನೆ ಪಾಂಡುವು ಪುರಪ್ರವೇಶಮಾಡಿದಮೇಲೆ ಕುಂತಿಗಾಗಿ ಅರಮನೆಯೊಂದನ್ನು ಕಟ್ಟಿಸಿ ಅವಳನ್ನು ಅಲ್ಲಿರಿಸಿದನು.

ಇದು ನೂರ ಇಪ್ಪತ್ತೊಂದನೆಯ ಅಧ್ಯಾಯವು.



{ ಪಾಂಡುವಿಗೆ ಮಾದ್ರಿಯೊಡನೆ ವಿವಾಹವು. ಅವನ ದಿಗ್ವಿಜಯ ಕಾರ್ಯಗಳು. }

ಓ ಜನಮೇಜಯರಾಜಾ! ಮಹಾತ್ಮನಾದ ಭೀಷ್ಮನು ಬಹಳ ದೂರದೃಷ್ಟಿಯುಳ್ಳವನಾದುದರಿಂದ, ಪಾಂಡುವಿಗೆ ಬೇರೊಂದು ವಿವಾಹವನ್ನು ಮಾಡಬೇಕೆಂದು ಆಲೋಚಿಸಿದನು. ಇದಕ್ಕಾಗಿ ಅವನು ವಯೋವೃದ್ಧರಾದ ಕೆಲವು ಮಂತ್ರಿಗಳನ್ನೂ, ಬ್ರಾಹ್ಮಣರನ್ನೂ, ಮಹರ್ಷಿಗಳನ್ನೂ, ಕೆಲವು ಚತುರಂಗಸೈನ್ಯಗಳನ್ನೂ ತೆಗೆದುಕೊಂಡು, ಮದ್ರದೇಶಕ್ಕೆ ಪ್ರಯಾಣ ಮಾಡಿದನು. ಬಾಹ್ಲೀಕರಾಜರಲ್ಲಿ ಶ್ರೇಷ್ಠನೆನಿಸಿದ ಮದ್ರರಾಜನು ಭೀಷ್ಮನು ಬಂದುದನ್ನು ಕೇಳಿದೊಡನೆ ಸಂತೋಷದಿಂದ ಅವನನ್ನು ಇದಿರುಗೊಂಡು ಸತ್ಕರಿಸಿ, ತನ್ನ ಪಟ್ಟಣಕ್ಕೆ ಕರೆದುಕೊಂಡುಹೋದನು. ಅಲ್ಲಿ ಅವನಿಗೆ ಅರ್ಘ್ಯಪಾದ್ಯಗಳನ್ನೂ, ಆಸನಗಳನ್ನೂ, ಮಧುಪರ್ಕವನ್ನೂ ಕೊಟ್ಟು ಪೂಜಿಸಿ, ವಿಶ್ರಾಂತಿಗೊಳಿಸಿದಮೇಲೆ, ಅವನು ಬಂದ ಕಾರ್ಯವೇನೆಂದು ಪ್ರಶ್ನೆಮಾಡಿದನು. ಆಗ ಭೀಷ್ಮನು “ ಓ ಮದ್ರರಾಜಾ! ನಾನು ನಿನ್ನಲ್ಲಿಗೆ ಕನ್ಯಾರ್ಥಿಯಾಗಿ ಬಂದವನು. ನಿನ್ನ ಸಹೋದರಿಯಾದ ಮಾದ್ರಿಯು ಬಹಳ ಶೀಲವತಿಯೂ, ಗುಣವತಿಯೂ ಆಗಿರುವಳೆಂದು ಲೋಕಪ್ರಸಿದ್ಧಿಯುಂಟು. ಅವಳನ್ನು ನಮ್ಮ ಕುಮಾರನಾದ ಪಾಂಡುವಿಗೆ ವಿವಾಹಮಾಡಿಕೊಡಬೇಕು. ನಮ್ಮಿಬ್ಬರ ಬಾಂಧವ್ಯಸಂಬಂಧವು ಅನುರೂಪವಾದುದು. ಆದುದರಿಂದ ಈ ನಮ್ಮ ಸಂಬಂಧಕ್ಕೆ ನೀನು ಸಮ್ಮತಿಸಬೇಕು” ಎಂದನು. ಅದಕ್ಕಾ ಮದ್ರರಾಜನು “ ಎಲೆ ಮಹಾತ್ಮನೆ! ನಿಮಗಿಂತಲೂ ಉತ್ತಮವಾದ ಸಂಬಂಧಿಗಳು ನಮಗೆ ಬೇರೆ ಯಾರುಂಟು? ಯಾರೂ ಇಲ್ಲವೆಂಬುದು ನಿಶ್ಚಯವು. ಆದರೆ, ನಮ್ಮಲ್ಲಿ ಪೂರ್ವರಾಜರಿಂದ ಅನುಸರಿಸಿ

ಬಂದ ಒಂದು ಪದ್ಧತಿಯುಂಟು. ಅದು ತಪ್ಪಾಗಲಿ, ಒಪ್ಪಾಗಲಿ, ಈಗ ನಾನು ಆ ಪದ್ಧತಿಯನ್ನು ಅನುಸರಿಸದೆ ತೀರದು. (ಧನವನ್ನು ತೆಗೆದು ಕೊಂಡೇ ಕನ್ಯೆಯನ್ನು ಕೊಡುವುದು ಮದ್ರರಾಜರ ಪದ್ಧತಿ) ಈ ಅಂಶವು ನಿನಗೂ ತಿಳಿದುದೇ! ಆದರೆ, ಕನ್ಯೆಗಾಗಿ ಧನವನ್ನು ಕೊಡೆಂದು ಕೇಳುವು ದಕ್ಕೆ ನಾಚಿಕೆಯಿಂದ ನನ್ನ ಬಾಯಿಯು ತಡೆಯುತ್ತಿದೆ. ಬಾಯಿಬಿಟ್ಟು ಕನ್ಯಾಶುಲ್ಕವನ್ನು ಕೇಳುವುದು ಯುಕ್ತವಲ್ಲವಾದರೂ, ಅದು ನಮ್ಮ ಕುಲ ಧರ್ಮವು. ನಮಗೆ ಅದೇ ಮುಖ್ಯ ಪ್ರಮಾಣವು. ಆದುದರಿಂದ ಈ ವಿವಾ ಹವನ್ನು ಕುರಿತು ನಿನ್ನ ಅಭಿಪ್ರಾಯವನ್ನು ತಿಳಿಯುವುದಕ್ಕೆ ಮೊದಲು, ಯಾವ ನಿರ್ಧರವನ್ನೂ ಹೇಳಲಾರೆನು'' ಎಂದನು. ಆಗ ಭೀಷ್ಮನು ''ಮದ್ರರಾಜಾ! ಇದಕ್ಕಾಗಿ ನೀನೇಕೆ ಚಿಂತಿಸುವೆ? ಈ ಧರ್ಮವು ಕೆಲವ ರಿಗೆ ಮುಖ್ಯವೆಂಬುದನ್ನು ಬ್ರಹ್ಮನೇ ಹೇಳಿರುವನು. ಇದರಲ್ಲಿ ದೋಷ ವೇನೂ ಇಲ್ಲ ಅಲ್ಲದೆ ಇದು ನಿಮ್ಮ ವಂಶಪರಂಪರೆಯಾಗಿ ಬಂದ ಧರ್ಮವಾ ದುದರಿಂದ, ನೀನು ಸಂಕೋಚಪಡಬೇಕಾದುದಿಲ್ಲ. ಇದು ಸಜ್ಜನಸಮ್ಮತ ವಾದುದೆಂದೇ ತಿಳಿ'' ಎಂದು ಹೇಳಿ, ಆಗಲೇ ಅಪರಿಮಿತವಾದ ರತ್ನಗಳ ನ್ನೂ, ಸುವರ್ಣದ ನಾಣ್ಯಗಳನ್ನೂ ಸಾವಿರಾರುಲೆಕ್ಕದಿಂದ ತರಿಸಿ, ಆ ರಾಜ ನಿಗೆ ಕೊಟ್ಟನು. ಮತ್ತು ಆನೆಗಳು, ಕುದುರೆಗಳು, ರಥಗಳು, ವಸ್ತ್ರಾಭರ ಣಗಳು, ಮುತ್ತು, ಹವಳಗಳು, ಮುಂತಾದುವನ್ನೆಲ್ಲ ಆ ಶಲ್ಯನ ಮನಸ್ಸಿಗೆ ತೃಪ್ತಿಯಾಗುವವರೆಗೆ ಕೊಟ್ಟನು. ಶಲ್ಯನು ಅವನ್ನೆಲ್ಲ ಸ್ವೀಕರಿಸಿ ಬಹಳ ಸಂತೋಷದೊಡನೆ ತನ್ನ ತಂಗಿಯಾದ ಮಾದ್ರಿಯನ್ನು ಸರ್ವಾಭರಣಗ ಳಿಂದಲಂಕರಿಸಿ ಆ ಭೀಷ್ಮನ ವಶಕ್ಕೆ ಒಪ್ಪಿಸಿಬಿಟ್ಟನು. ಮತ್ತು ಮದು ಮಗಳಾದ ಮಾದ್ರಿಯನ್ನು ಬಹಳ ವೈಭವದೊಡನೆ ಹಸ್ತಿನಾವತಿಗೆ ಕರೆ ತಂದು, ವಿದ್ವಾಂಸರಿಂದ ನಿರ್ಣಯಿಸಲ್ಪಟ್ಟ ಒಂದು ಶುಭದಿನದಲ್ಲಿ, ಒಳ್ಳೇ ಮುಹೂರ್ತದಲ್ಲಿ, ಅವಳನ್ನು ಪಾಂಡುವಿಗೆ ಕೊಟ್ಟು ವಿವಾಹಕಾರ್ಯವನ್ನು ನಡೆಸಿದನು. ಈ ವಿವಾಹವು ನಡೆದಮೇಲೆ ಪಾಂಡುವು ಆ ಮಾದ್ರಿಗಾಗಿ ಪ್ರತ್ಯೇಕವಾದ ಅರಮನೆಯೊಂದನ್ನು ನಿರ್ಮಿಸಿ ಅವಳನ್ನು ಅಲ್ಲಿರಿಸಿದನು. ರಾಜಶ್ರೇಷ್ಠನಾದ ಪಾಂಡುವು ಹೀಗೆ ಉಭಯಪತ್ನಿಯರನ್ನೂ ವಿವಾಹವಾಗಿ ಅವರಿಬ್ಬರೊಡನೆ ಸುಖವಾಗಿರುತಿದ್ದನು. ಒಂದು ತಿಂಗಳವರೆಗೆ ಪಾಂಡು

ವು ಆ ಪತ್ನಿಯರೊಡನೆ ಸುಖಿಸುತಿದ್ದು, ಆಮೇಲೆ ದಿಗ್ವಿಜಯಕ್ಕಾಗಿ ಸನ್ನದ್ಧನಾದನು. ಹೊರಡುವವೊದಲು ತನ್ನ ವಂಶವೃದ್ಧರಾದ ಭೀಷ್ಮನಿಗೂ, ಧೃತರಾಷ್ಟ್ರನಿಗೂ, ಇನ್ನೂ ಬೇರೆ ಹಿರಿಯರಿಗೂ ನಮಸ್ಕರಿಸಿ, ಪ್ರಯಾಣಕ್ಕಾಗಿ ಅವರ ಅನುಮತಿಯನ್ನು ಕೇಳಿ, ಅವರ ಆಶೀರ್ವಾದಗಳನ್ನೂ, ಅವರು ನಡೆಸಿದ ಪ್ರಯಾಣಮಂಗಳಕಾರ್ಯಗಳನ್ನೂ ಕೈಕೊಂಡು, ದೇವಕುಮಾರನಂತೆ ದೊಡ್ಡ ಸೈನ್ಯದೊಡನೆ ಹೊರಟನು. ಆಗ ಅವನಿಗೆ ಭೂಮಂಡಲವನ್ನೆಲ್ಲ ಜಯಿಸಿಬರಬೇಕೆಂಬ ಉತ್ಸಾಹವುಂಟಾಯಿತು. ತುಷ್ಟಿಯಿಂದಲೂ, ಪುಷ್ಟಿಯಿಂದಲೂ ಕೂಡಿದ ಅವನ ಸೈನ್ಯಗಳು ಕೂಡ, ಮಹೋತ್ಸಾಹದಿಂದ ಹೊರಟುವು. ಹೀಗೆ ಸೇನಾಸಮೇತನಾದ ಪಾಂಡುವು ವೊದಲಿಂದಲೂ ತನಗೆ ವಿರೋಧಿಯಾಗಿದ್ದ ದಶಾರ್ಣರಾಜನಮೇಲೆ ದಂಡೆತ್ತಿ ಹೋಗಿ, ವೊದಲನೇ ಯುದ್ಧದಲ್ಲಿ ಅವನನ್ನು ಜಯಿಸಿದನು. ಅಲ್ಲಿಂದ ಮತ್ತಷ್ಟು ಸೈನ್ಯವನ್ನು ಸೇರಿಸಿಕೊಂಡು, ರಾಜಗೃಹವೆಂಬ ನಗರಕ್ಕೆ ಹೋಗಿ ಅಲ್ಲಿನ ಅನೇಕ ರಾಜರನ್ನು ಸೆರೆಹಿಡಿದು ಬಲಗರ್ವಿತನಾಗಿದ್ದ ದೀರ್ಘನೆಂಬ ಮಗಧರಾಜನನ್ನು ಕೊಂದನು. ಆ ರಾಜ್ಯದಿಂದಲೂ, ವಿಶೇಷ ಧನವನ್ನೂ, ವಾಹನಗಳನ್ನೂ ಸಂಗ್ರಹಿಸಿಕೊಂಡು, ಮಿಥಿಲೆಗೆ ದಂಡೆತ್ತಿ, ಅಲ್ಲಿನ ವಿದೇಹರಾಜರನ್ನು ಜಯಿಸಿದನು. ಹಾಗೆಯೇ ಅವನು ಮುಂದೆ ಮುಂದೆ, ಕಾಶಿ, ಸುಹ್ಮ, ಪುಂಡ್ರ, ಮುಂತಾದ ದೇಶಗಳಿಗೆ ದಂಡೆತ್ತಿ, ಅಲ್ಲಲ್ಲಿನ ರಾಜರೊಡನೆ ಯುದ್ಧಮಾಡಿ ಜಯಿಸಿ, ಕುರುವಂಶಕ್ಕೆ ಅಪಾರಕೀರ್ತಿಯನ್ನು ತಂದನು. ಬಾಣಗಳೆಂಬ ಮಹಾಜ್ವಾಲೆಗಳಿಂದಲೂ, ಆಯುಧಗಳೆಂಬ ಕಿರಣಗಳಿಂದಲೂ ಕೂಡಿದ ಪಾಂಡುವೆಂಬ ಮಹಾಗ್ನಿಜ್ವಾಲೆಯಲ್ಲಿ ಅನೇಕರಾಜರು ಶಲಭಗಳಂತೆ ಬಿದ್ದು ದಗ್ಧರಾದರು. ಅವರ ಸೈನ್ಯಗಳೆಲ್ಲವೂ ಪಾಂಡುವಿನ ಸೈನ್ಯದಿಂದ ನಷ್ಟವಾದುವು. ಅನೇಕರು ಅವನಲ್ಲಿ ಶರಣಾಗತರಾದರು. ಆ ರಾಜರನ್ನೆಲ್ಲ ಪಾಂಡುವು ಕೌರವರಿಗೆ ವಶವರ್ತಿಯಾಗಿ ಕೆಲಸಮಾಡುವಂತೆ ನಿಯಮಿಸಿದನು. ಆಗ ಭೂಮಂಡಲದಲ್ಲಿರುವ ಎಲ್ಲಾ ರಾಜರುಗಳಿಗೂ ಭೀತಿಹುಟ್ಟಿ ಅವರೆಲ್ಲರೂ ಪಾಂಡುವು ಅಸಮಾನವೀರನೆಂದು ನಿಶ್ಚಯಿಸಿಬಿಟ್ಟರು. ಆ ರಾಜರೆಲ್ಲರೂ ಪಾಂಡುವಿಗೆ ತಮ್ಮ ತಮ್ಮ ದೇಶಗಳಲ್ಲಿ ದೊರೆಯುವ ಉತ್ತಮವಸ್ತುಗಳನ್ನೆಲ್ಲ ಸಂಗ್ರಹಿಸಿ ತಂದು, ಅವನಿಗೆ ಕಾಣಿಕೆ

ಯಾಗಿ ಒಪ್ಪಿಸಿದರು. ಅವರವರು ಮುತ್ತು, ಹವಳ ಮುಂತಾದ ವಿವಿಧ ರತ್ನಗಳನ್ನೂ, ಬೆಳ್ಳಿ ಬಂಗಾರಗಳನ್ನೂ, ಗೋವುಗಳನ್ನೂ, ಆನೆ, ಕುದುರೆ, ರಥಪದಾತಿಗಳೆಂಬ ಚತುರಂಗ ಸೈನ್ಯಗಳನ್ನೂ, ಹೇಸರಕತ್ತೆ, ಒಂಟೆ, ಎಮ್ಮೆ ಮುಂತಾದ ಮೃಗಗಳನ್ನೂ, ಕುರಿಗಳು, ಮೇಕೆಗಳು, ಕಂಬಳಿಗಳು, ಚರ್ಮಗಳು, ಮೃಗರೋಮಗಳಿಂದ ಮಾಡಿದ ಸುಪ್ಪತ್ತಿಗೆಗಳು, ಮುಂತಾದ ವಿವಿಧವಸ್ತುಗಳನ್ನೂ ತಂದು ಒಪ್ಪಿಸಿದರು. ಹೀಗೆ ಅಪಾರಧನಕನಕಾದಿ ವಸ್ತುಗಳನ್ನು ಮುಂದೆ ತಂದಿಟ್ಟು, ಬದ್ಧಾಂಜಲಿಗಳಾಗಿ ನಿಂತಿದ್ದ ಆ ರಾಜ ರನ್ನೆಲ್ಲ ಪಾಂಡುವು ಪ್ರೀತಿಯಿಂದಾದರಿಸಿ, ಅವರು ಕೊಟ್ಟುದನ್ನೆಲ್ಲ ಸಾಗಿಸಿ ಕೊಂಡು ಹಿಂತಿರುಗಿದನು. ತಾನು ತಂದ ಧನರಾಶಿಯಿಂದ ತನ್ನ ಸೈನ್ಯ ಗಳನ್ನೂ, ಪುರಜನರನ್ನೂ, ದೇಶಜನರನ್ನೂ ಸಂತೋಷಗೊಳಿಸಿದನು. ಹಸ್ತಿನಾಪುರವೇ ಮೊತ್ತಕ್ಕೆ ಈ ಪಾಂಡುವಿನ ದಿಗ್ವಿಜಯದಿಂದ ಸಂತೋಷ ಪರವಶವಾಗಿದ್ದಿತು. ಹಿಂದೆ ಶಂತನುವಿನಿಂದಲೂ, ಭರತನಿಂದಲೂ ಆ ಕುರುವಂಶಕ್ಕೆ ಬಂದಿದ್ದ ಕೀರ್ತಿಯು ನಡುವೆ ಕೆಟ್ಟುಹೋಗಿದ್ದು, ಈಗ ಪಾಂಡುವಿನಿಂದ ತಿರುಗಿ ಪ್ರಕಾಶಕ್ಕೆ ಬರುವಂತಾಯಿತು. ಶಂತನುವಿನ ಕಾಲಾನಂತರದಲ್ಲಿ ಕುರುರಾಜ್ಯದಮೇಲೆ ಬಿದ್ದು ಇಲ್ಲಿನ ಧನವನ್ನೆಲ್ಲ ಯಾ ವಯಾವ ಶತ್ರುರಾಜರು ಕೊಳ್ಳೆಹೊಡೆದಿದ್ದರೋ, ಅವರೆಲ್ಲರೂ ಈಗ ಪಾಂ ಡುರಾಜನಲ್ಲಿ ಶರಣಾಗತರಾಗಿ, ಅದಕ್ಕೆ ದ್ವಿಗುಣವಾದ ಕಪ್ಪವನ್ನು ತಂದು ಕೊಡುತಿದ್ದರು. ಈ ಅಂಶಗಳನ್ನು ಅಲ್ಲಿರತಕ್ಕ ಅನೇಕರಾಜರೂ, ಮಂತ್ರಿ ಗಳೂ ಬಾರಿಬಾರಿಗೂ ಬಾಯಿಂದ ಹೇಳುತ್ತ, ಈ ಪಾಂಡುವು ಬರುವಾಗ ಅವನನ್ನು ಸಂತೋಷದಿಂದ ಇದಿರುಗೊಂಡುಬಂದರು. ಹೀಗೆ ಭೀಷ್ಮನೇ ಮೊದಲಾದವರೆಲ್ಲರೂ ಇದಿರುಗೊಂಡು ಬಂದು ಪಾಂಡುವನ್ನು ಪಟ್ಟಣಕ್ಕೆ ಕರೆದುಕೊಂಡುಹೋಗುವಾಗ, ಅವನು ತಂದಿದ್ದ ಅಪರಿಮಿತವಾದ ಧನರತ್ನ ಗಳೂ, ಚತುರಂಗಸ್ಯೆನ್ಯಗಳೂ, ಒಂಟೆ, ಎಮ್ಮೆ, ಕುರಿ, ಹಸು, ಮೊದಲಾದ ಮೃಗಗಳೂ, ಭೂಮಿಯನ್ನೆಲ್ಲ ವ್ಯಾಪಿಸಿದಂತೆ ಅಪಾರವಾಗಿ ಬರುತ್ತಿರುವು ದನ್ನು ಕಂಡು ಸಂತೋಷಭರಿತರಾದರು. ತಾಯಿಯಾದ ಕೌಸಲ್ಯೆಗೆ ಆನಂ ದವರ್ಧಕನಾದ ಆ ಪಾಂಡುವು, ಭೀಷ್ಮನ ಪಾದಗಳಿಗೆ ಮೊದಲು ನಮಸ್ಕರಿ ಸಿದನು. ಆಮೇಲೆ ಅವರವರ ಯೋಗ್ಯತೆಗೆ ತಕ್ಕಂತೆ ಎಲ್ಲರನ್ನೂ ಆದರಿಸಿ

ದನು. ಜಯಶಾಲಿಯಾಗಿ ಬಂದ ಪಾಂಡುವನ್ನು ಭೀಷ್ಮನೂ ಆಲಿಂಗಿಸಿ, ತನ್ನ ಕಣ್ಣುಗಳಿಂದ ಆನಂದಬಾಷ್ಪಗಳನ್ನು ಸುರಿಸಿದನು. ಹೀಗೆ ಪಾಂಡುವು ಶಂಖ, ಭೇರಿ, ಮೃದಂಗ ಮೊದಲಾದ ಮಂಗಳವಾದ್ಯಧ್ವನಿಗಳೊಡನೆ ಪುರಪ್ರವೇಶವನ್ನು ಮಾಡುತ್ತ, ಆ ನಗರದ ಜನರಿಗೆಲ್ಲರಿಗೂ ಅತ್ಯಂತ ಸಂತೋಷವನ್ನುಂಟುಮಾಡಿದನು.

ಇದು ನೂರ ಇಪ್ಪತ್ತೆರಡನೆಯ ಅಧ್ಯಾಯವು.

ಪಾಂಡುಮಹಾರಾಜನು ಪತ್ನಿಯರೊಡನೆ ಬೇಟೆಗಾಗಿ ಹೊರಟುದು. ಅಲ್ಲಿ ಜಿಂಕೆಯ ರೂಪದಿಂದ ರತಿಕ್ರೀಡೆಯಲ್ಲಿದ್ದ ಕಿಂದಮನೆಂಬ ಋಷಿಯನ್ನು ಕೊಂದುದು. ಕಿಂದಮನು ಪಾಂಡುವಿಗೆ ಶಾಪವನ್ನು ಕೊಟ್ಟುದು.

ಓ ಜನಮೇಜಯರಾಜಾ! ಕೇಳು. ಪಾಂಡುವು ದಿಗ್ವಿಜಯಮಾಡಿ ತಂದ ವಿಶೇಷ ಧನವನ್ನೆಲ್ಲ ಮೊದಲು ಅಣ್ಣನಾದ ಧೃತರಾಷ್ಟ್ರನ ಮುಂದಿಟ್ಟನು. ಆಮೇಲೆ ಅವನ ಅನುಮತಿಯಿಂದ ಅದನ್ನು ಭೀಷ್ಮನಿಗೂ, ಸತ್ಯವತಿಗೂ, ವಿದುರನಿಗೂ ಬೇರೆಬೇರೆಯಾಗಿ ಹಂಚಿ ಕಳುಹಿಸಿಕೊಟ್ಟನು. ತನ್ನ ಮಿತ್ರರನ್ನೆಲ್ಲ ಆ ಧನದಿಂದ ತೃಪ್ತಿಗೊಳಿಸಿದನು. ಸತ್ಯವತಿಯೂ, ಭೀಷ್ಮನೂ, ತಾಯಿಯಾದ ಕೌಸಲ್ಯೆಯೂ, ಆ ಪಾಂಡುವು ತಂದ ಧನ್ನದಿಂದ ಅತ್ಯಂತ ಸಂತೋಷಗೊಂಡರು. ಎಣೆಯಿಲ್ಲವ ಪರಾಕ್ರಮವುಳ ತನ್ನ ಮಗನನ್ನು ನೋಡಿ ಪಾಂಡುವಿನ ತಾಯಿಯು ಅತ್ಯಾನಂದ ಭರಿತಳಾದಳು. ಶಚೀದೇವಿಯು ತನ್ನ ಮಗನಾದ ಜಯಂತನನ್ನು ಕಂಡರೆ ಹೇಗೋ ಹಾಗೆ ಆ ಮಗನನ್ನು ಪ್ರೀತಿಯಿಂದ ಅಪ್ಪಿ ಆದರಿಸಿದಳು. ಪಾಂಡುವು ದಿಗ್ವಿಜಯಮಾಡಿ ತಂದ ಧನರಾಶಿಯಿಂದಲೇ ಧೃತರಾಷ್ಟ್ರನು ನೂರು ಸಾವಿರ ಲೆಕ್ಕದಿಂದ ದಕ್ಷಿಣೆಗಳನ್ನು ಕೊಟ್ಟು, ಅಶ್ವಮೇಧವೇ ಮೊದಲಾದ ಅನೇಕ ಮಹಾಯಾಗಗಳನ್ನು ನಡೆಸಿದನು. ಆಮೇಲೆ ಒಮ್ಮೆ ಪಾಂಡುವು ತನ್ನ ಪತ್ನಿಯರಾದ ಕುಂತಿ ಮತ್ತು ಮಾದ್ರಿ ಇವರಿಬ್ಬರನ್ನೂ ತನ್ನೊಡನೆ ಕರೆದುಕೊಂಡು, ತನ್ನ ಬೇಸರವನ್ನು ಕಳೆಯುವುದಕ್ಕಾಗಿ ಬೇಟೆಗಾಗಿ

ಕಾಡಿಗೆ ಹೊರಟನು. ಅವನು ಬಹುದಿನಗಳವರೆಗೆ ತನ್ನ ಅರಮನೆಯ ವಾಸವನ್ನೂ, ಉತ್ತಮ ಶಯ್ಯೆಗಳನ್ನೂ ಬಿಟ್ಟು ಅರಣ್ಯದಲ್ಲಿಯೇ ಬೇಟೆಯಾಡುತ್ತಾ ಕಾಲವನ್ನು ಕಳೆಯುತ್ತಿದ್ದನು. ಹಿಮವತ್ಪರ್ವತದ ದಕ್ಷಿಣ ಪಾರ್ಶ್ವದಲ್ಲಿರುವ ರಮಣೀಯವಾದ ತಪ್ಪಲುಗಳಲ್ಲಿಯೂ, ದಟ್ಟವಾದ ತೋಪುಗಳಲ್ಲಿಯೂ, ಸುತ್ತಿಸುತ್ತಿ ಬೇಟೆಯಾಡಿಕೊಂಡು ಅಲ್ಲಿಯೇ ವಾಸಿಸುತ್ತಿದ್ದನು. ಎರಡು ಹೆಣ್ಣಾನೆಗಳೊಡನೆ ಕಾಡಿನಲ್ಲಿ ಸಂಚರಿಸುವ ಐರಾವತದಂತೆ ಅವನು ಕುಂತೀಮಾದ್ರಿಯರೊಡನೆ ಆ ವನವನ್ನೆಲ್ಲ ಸುತ್ತುತ್ತಿದ್ದನು. ಆಗ ಪಾಂಡುವು ವಿಚಿತ್ರಕವಚವನ್ನು ಧರಿಸಿ, ಧನುರ್ಬಾಣಗಳನ್ನೂ, ಕತ್ತಿಯನ್ನೂ ಕೈಯಲ್ಲಿ ಹಿಡಿದು, ಆ ವನದಲ್ಲಿ ಸುತ್ತುತ್ತಿರುವಾಗ, ಇವನನ್ನು ನೋಡಿದವರೆಲ್ಲರೂ ಇವನಾವನೋ ದೇವತೆಯೆಂದೇ ತಿಳಿಯುತ್ತಿದ್ದರು. ಅವನು ಕಾಡಿನಲ್ಲಿರುವಾಗಲೂ, ಧೃತರಾಷ್ಟ್ರನು ಪ್ರತಿದಿನವೂ ಅವನಿಗೆ ತನ್ನ ಸೇವಕರ ಮೂಲಕವಾಗಿ ರಾಜಭೋಗ್ಯವಾದ ವಸ್ತುಗಳನ್ನು ಕಳುಹಿಕೊಡುತ್ತಿದ್ದುದರಿಂದ, ಅವನಿಗೆ ಆ ವನವಾಸದ ಕಷ್ಟವೇ ತಿಳಿಯದಂತಾಯಿತು. ಹೀಗೆ ಪಾಂಡುವು ಅನೇಕಮೃಗಗಳಿಂದಲೂ, ದುಷ್ಟ ಸರ್ಪಗಳಿಂದಲೂ ತುಂಬಿದ ಆ ಕಾಡಿನಲ್ಲಿ ಬೇಟೆಯಾಡುತ್ತ ಹೋಗುತ್ತಿರುವಾಗ, ಅಲ್ಲಿ ಗಂಡು ಹೆಣ್ಣು ಜಿಂಕೆಗಳೆರಡೂ ಸೇರಿ ಭೋಗಿಸುತ್ತಿದ್ದುದನ್ನು ಕಂಡನು. ಒಡನೆಯೇ ತನ್ನ ಬತ್ತಳಿಕೆಯಿಂದ ಐದು ಬಾಣಗಳನ್ನು ತೆಗೆದು, ಆ ಎರಡು ಮೃಗಗಳ ಮೇಲೆಯೂ ಪ್ರಯೋಗಿಸಿದನು. ಓ ಜನಮೇಜಯರಾಜಾ! ಆ ಮೃಗಗಳೆರಡೂ ನಿಜವಾದ ಜಿಂಕೆಯಲ್ಲ. ಮಹಾತೇಜಸ್ವಿಯೂ, ತಪಸ್ವಿಯೂ ಆದ ಕಿಂದಮನೆಂಬ ಋಷಿಯೊಬ್ಬನು ಮೃಗರೂಪವನ್ನು ತಾಳಿ, ತನ್ನ ಭಾರ್ಯೆಯೊಡನೆ ರಮಿಸುತ್ತಿದ್ದನು. ಈ ಬಾಣವು ತಗುಲಿದೊಡನೆ ಅವನು ಮನುಷ್ಯನಂತೆ ಅರಚುತ್ತ, ಮೃಗರೂಪದಿಂದಿದ್ದ ತನ್ನ ಪತ್ನಿಯೊಡನೆ ಕೆಳಗೆ ಬಿದ್ದುಬಿಟ್ಟನು. ಭೂಮಿಯಲ್ಲಿ ಬಿದ್ದು ಅತ್ಯಂತ ದೈನ್ಯದಿಂದ ವಿಲಪಿಸತೊಡಗಿದನು. ಆಗ ಮೃಗವು ಮನುಷ್ಯಾಕಾರದಿಂದ ಹೀಗೆಂದು ಹೇಳತೊಡಗಿತು. “ಅಯ್ಯೋ! ಕಾಮಕ್ರೋಧಗಳಿಗೆ ವಶನಾಗಿ, ಬುದ್ಧಿಗೆಟ್ಟು, ಪಾಪಕಾರ್ಯದಲ್ಲಿಯೇ ಪ್ರವರ್ತಿಸತಕ್ಕ ಕೊಲೆಗಾರರು ಕೂಡ ಇಂತಹ ಮಹಾಪಾಪ ಕಾರ್ಯವನ್ನು ಮಾಡಲು ಪ್ರವ

ರ್ತಿಸರು. ಆಹಾ! ವಿವೇಕವೆಂಬುದು ವಿಧಿಯನ್ನು ವಿಾರಲಾರದು. ವಿಧಿಯು ವಿವೇಕವನ್ನು ಕೆಡಿಸಬಲ್ಲುದು. ಒಳ್ಳೇ ಪ್ರಜ್ಞಾವಂತನಿಗೂಕೂಡ ಬುದ್ಧಿಯು ದೈವಾನುಸಾರವಾಗಿ ಮಾರ್ಪಟ್ಟು ಕೆಟ್ಟುಹೋಗುವುದು. ದೈವಿಕವಾಗಿ ಬಂದ ದುಷ್ಫಲಗಳನ್ನು ವಿವೇಕಿಯಾದರೂ ಅನುಭವಿಸಿ ತೀರಬೇಕು. ಓ ಭರತಾಗ್ರಣೀ! ನೀನಾದರೋ ಧರ್ಮಾತ್ಮರಾದ ಉತ್ತಮರ ವಂಶದಲ್ಲಿ ಹುಟ್ಟಿದವನು. ಇಂತಹ ನಿನಗೆ ಹೀಗೇಕೆ ಬುದ್ಧಿಯು ಕದಲಿತು? ಕಾಮುಲೋಭಗಳಿಂದ ನಿನ್ನ ವಿವೇಕವು ಹೀಗೆ ತಪ್ಪಿಹೋಗಬಹುದೇ?'' ಎಂದನು. ಆಗ ಪಾಂಡುವು ''ಎಲೆ ಮೃಗವೇ! ಕ್ಷತ್ರಿಯರಿಗೆ ಶತ್ರುಗಳನ್ನು ಕೊಲ್ಲುವುದು ಹೇಗೋ ಹಾಗೆ ಮೃಗಗಳನ್ನು ವಧಿಸುವುದೂ ಕರ್ತವ್ಯವಾಗಿ ವಿಧಿಸಲ್ಪಟ್ಟಿದೆ. ನೀನು ಈ ಧರ್ಮವನ್ನು ತಿಳಿಯದೆ ನನ್ನನ್ನು ನಿಂದಿಸಬಾರದು. ಕಪಟವಾಗಲಿ, ಮೋಸಗಳಾಗಲಿ ಇಲ್ಲದೆ, ಬೇಟೆಯಲ್ಲಿ ಸಿಕ್ಕಿದ ಮೃಗಗಳನ್ನು ಧೈರ್ಯದಿಂದಿರಿಸಿ ಕೊಲ್ಲುವುದು ಶಾಸ್ತ್ರಸಮ್ಮತವೇ. ಇದು ರಾಜರಿಗೆ ಧರ್ಮವು. ಹೀಗಿರುವಾಗ ನೀನು ನನ್ನನ್ನು ನಿಂದಿಸುವುದೇಕೆ? ಹಿಂದೊಮ್ಮೆ ಮಹಾತ್ಮನಾದ ಅಗಸ್ತ್ಯಮುನಿಯು ಕೂಡ ಸತ್ರಯಾಗವನ್ನು ನಡೆಸುತಿದ್ದಾಗ, ದೇವತೆಗಳ ಪ್ರೀತಿಗಾಗಿ ಅರಣ್ಯದಲ್ಲಿದ್ದ ಮೃಗಗಳನ್ನೆಲ್ಲ ಮಂತ್ರಜಲ ಪ್ರೋಕ್ಷಣದಿಂದ ಬೇಟೆಯಾಡಿರುವನು. ಆದುದರಿಂದ ನಾವು ಪ್ರಮಾಣಸಿದ್ಧವಾದ ಧರ್ಮದಲ್ಲಿಯೇ ನಡೆಯತಕ್ಕವರು. ಅಗಸ್ತ್ಯನ ಆ ಆಭಿಚಾರಿಕಮಂತ್ರಪ್ರಯೋಗದಿಂದ ನಿಮ್ಮನ್ನು ಕೊಲ್ಲುವುದು ಶಾಸ್ತ್ರೋಕ್ತವಾಗಿದೆ. ಯುದ್ಧಮಾಡತಕ್ಕವರಿಗೆ ಶತ್ರುಗಳನ್ನಿದಿರಿಸಿ, ಅವರಿಗೆ ಗುರಿಯಿಟ್ಟು ಬಾಣಗಳನ್ನು ಬಿಡಬೇಕೆಂಬುದೇನೂ ಇಲ್ಲ. ಆ ಶತ್ರುಗಳು ಎಚ್ಚರತಪ್ಪಿದ ಕಾಲದಲ್ಲಿ ಕೂಡ ಅವರನ್ನು ವಧಿಸುವುದು ಶಾಸ್ತ್ರಸಮ್ಮತವೇ! ಶತ್ರುವು ಎಚ್ಚರತಪ್ಪಿರಲಿ, ಎಚ್ಚರಗೊಂಡಿರಲಿ, ಇದಿರಾಗಿ ಬಂದವನನ್ನು ಕೊಲ್ಲುವುದು ಸಹಜವು. ಸಮಯೋಚಿತವಾದ ನಾನಾಬಗೆಯ ಉಪಾಯಗಳಿಂದ ಶತ್ರುವನ್ನು ಕೊಲ್ಲಬೇಕಾದುದು ಕರ್ತವ್ಯವೇ! ಎಲೆ ಮೃಗವೇ? ಹೀಗಿರುವಾಗ ನನ್ನನ್ನೇಕೆ ನಿಂದಿಸುವೆ?'' ಎಂದನು.

ಅದಕ್ಕಾ ಮೃಗವು “ ಎಲೈ ರಾಜನೇ ! ನೀನು ಮೃಗವನ್ನು ಕೊಂದಿದ್ದರೆ ನಾನು ನಿನ್ನನ್ನು ನಿಂದಿಸುತ್ತಿರಲಿಲ್ಲ, ಈಗ ನಾನು ಮೃಗವಾಗಿರುವುದರಿಂದ, ನನ್ನನ್ನು ಹೊಡೆದುದಕ್ಕೂ ನಾನು ನಿನ್ನನ್ನು ನಿಂದಿಸುವ ಹಾಗಿಲ್ಲ. ಆದರೆ, ಈಗ ನೀನು ಇಂತಹ ಭೋಗಸಮಯದಲ್ಲಿ ನನ್ನನ್ನು ಕೊಂದುದು ಮಾತ್ರ ಮಹಾದೋಷವು. ನೀನು ನನ್ನ ರತಿತೃಪ್ತಿಯು ಮುಗಿಯುವ ವರೆಗಾದರೂ ನಿರೀಕ್ಷಿಸಿದ್ದರೆ, ಆಗ ನೀನು ಕ್ರೂರನೆನಿಸಿಕೊಳ್ಳುತ್ತಿರಲಿಲ್ಲ. ಸಮಸ್ತ ಪ್ರಾಣಿಗಳಿಗೂ ಪ್ರಿಯವೂ, ಹಿತವೂ ಆದ ಒಳ್ಳೇ ಕಾಲದಲ್ಲಿ, ರತಿಸುಖದಲ್ಲಿ ಪ್ರವರ್ತಿಸುತಿದ್ದ ಪ್ರಾಣಿಯನ್ನು ಯಾವನಾದರೂ ಕೊಲ್ಲುವನೆ? ಓ ರಾಜಾ ! ಕಾಮಪುರುಷಾರ್ಥಕ್ಕೆ ಮುಖ್ಯಫಲವಾದ ಸಂತಾನವನ್ನಪೇಕ್ಷಿಸಿ ಈ ಹೆಣ್ಣುಜಿಂಕೆಯೊಡನೆ ನಾನು ರತಿಯಲ್ಲಿದ್ದೆನು. ಆ ಸಮಯದಲ್ಲಿ ನೀನು ನನ್ನನ್ನು ಹೀಗೆ ಬಾಣಗಳಿಂದ ಭೇದಿಸಿದೆ. ಪೂರುವಂಶದವರಾರೂ ಇಂತಹ ಪರಹಿಂಸಾತ್ಮಕವಾದ ಕಾರ್ಯವನ್ನು ಮಾಡಿದುದಿಲ್ಲ. ಆದೇ ವಂಶದವನಾದ ನಿನಗೆ ಇದು ಯುಕ್ತವೇ? ಇದು ಅತಿಕ್ರೂರಕಾರ್ಯವು. ಕೇವಲ ಲೋಕನಿಂದಿತವಾದ ಈ ಕಾರ್ಯವು ಸದ್ಗತಿಯನ್ನೂ, ಕೀರ್ತಿಯನ್ನೂ ಕೆಡಿಸತಕ್ಕುದು. ಇದು ಕೇವಲಅಧರ್ಮಕಾರಣವು. ರಾಜೇಂದ್ರಾ! ನೀನಾದರೋ ದೇವಸಮಾನನು. ಧರ್ಮಗಳನ್ನೂ, ಶಾಸ್ತ್ರಗಳನ್ನೂ, ಪುರುಷಾರ್ಥಗಳ ಸ್ವರೂಪಗಳನ್ನೂ, ಸಂಭೋಗ ಸುಖದಲ್ಲಿರುವ ಅತಿಶಯಗಳನ್ನೂ ಚೆನ್ನಾಗಿ ತಿಳಿದ ನೀನೇ ಸದ್ಗತಿಗೆ ಹಾನಿಕರವಾದ ಇಂತಹ ಕೆಟ್ಟ ಕಾರ್ಯವನ್ನು ಮಾಡಿದೆ. ಎಲೆ ರಾಜನೆ! ಅಪರಾಧಿಗಳನ್ನೂ, ಹಿಂಸಕರನ್ನೂ, ಧರ್ಮಾರ್ಥಕಾಮಗಳಿಗೆ ವಿರೋಧಿಸುವವರನ್ನೂ ದಂಡಿಸಬೇಕಾದುದು ನಿನ್ನ ಧರ್ಮವು. ಇಂತಹ ನೀನು ನನ್ನಂತಹ ನಿರಪರಾಧಿಗಳಾದವರನ್ನು ಕೊಲ್ಲಬಹುದೆ? ಇದಲ್ಲದೆ ನಾನು ಯಾರೆಂಬುದನ್ನೂ ನೀನು ಕಾಣೆ. ನಾವು ಮಹರ್ಷಿಗಳು. ಶಾಂತಿಯೇ ಮುಖ್ಯವಾಗಿ ಉಳ್ಳವರು. ಫಲಮೂಲಗಳನ್ನೇ ಭುಜಿಸುತ್ತ ಮೃಗರೂಪದಿಂದ ಅಡವಿಯಲ್ಲಿ ಸಂಚರಿಸುತ್ತಿರುವೆವು. ಅಯ್ಯೋ! ನಮ್ಮಿಬ್ಬರನ್ನೂ ಏಕಕಾಲದಲ್ಲಿ ಕೊಂದೆಯಲ್ಲಾ. ಇದಕ್ಕೆ ನಿನಗೆ ಪ್ರತೀಕಾರವನ್ನು ಮಾಡದೆ ತೀರದು. ನೀನು ನಿರಪರಾಧಿಗಳಾದ ನಮ್ಮನ್ನು ರತಿಸುಖದಲ್ಲಿರು

ವಾಗ ಕೊಂದೆಯಲ್ಲವೆ ? ನಿನಗೂ ಹಾಗೆಯೇ ಕಾಮಸುಖದಲ್ಲಿರುವಾಗ ಮರಣವುಂಟಾಗಲಿ ! ನಾನು ತಪಶ್ಶುದ್ಧನಾದ ಒಬ್ಬ ಋಷಿ ! ನನಗೆ ಕಿಂದಮನೆಂದು ಹೆಸರು. ಮನುಷ್ಯರೂಪದಿಂದ ರತಿಯನ್ನು ನಡೆಸುವುದಕ್ಕೆ ಲಜ್ಜಿಸಿ, ಜಿಂಕೆಯ ರೂಪವನ್ನು ತಾಳಿ ನನ್ನ ಪತ್ನಿಯೊಡಗೂಡಿ ಈ ಅರಣ್ಯದಲ್ಲಿ ಮೃಗಗಳೊಡನೆ ಸಂಚರಿಸುತ್ತಿರುವೆನು. ಆದರೆ ನನ್ನ ನಿಜಸ್ಥಿತಿಯನ್ನು ತಿಳಿಯದೆ ನೀನು ಮೃಗವೆಂದು ಭ್ರಮಿಸಿ ನನ್ನನ್ನು ಕೊಂದುದರಿಂದ ನಿನಗೆ ಬ್ರಹ್ಮಹತ್ಯಾದೋಷವು ಬಾರದು. ಆದರೂ ನಿನ್ನ ಅಕೃತ್ಯಕ್ಕೆ ತಕ್ಕ ಫಲವು ಆಗದೆ ತೀರದು. ನೀನು ನಿನ್ನ ಭಾರ್ಯೆಯೊಡನೆ ಶಯ್ಯೆಯಲ್ಲಿ ಮಲಗಿ ಭೋಗದಲ್ಲಿ ಮೈಮರೆತಿರುವ ಸಮಯದಲ್ಲಿಯೇ ನಿನಗೂ ಮರಣವುಂಟಾಗುವುದು. ನಿನ್ನ ಅಂತ್ಯಕಾಲದಲ್ಲಿ ಯಾವ ಸ್ತ್ರೀಯೊಡನೆ ನೀನು ಮಲಗುವೆಯೋ, ಅವಳು ನಿನ್ನನ್ನು ಪತಿಭಕ್ತಿಯಿಂದ ಅನುಗಮಿಸುವಳು. ನೀನು ನನ್ನ ಸುಖಕಾಲದಲ್ಲಿ ದುಃಖವನ್ನು ತಂದಿಟ್ಟಂತೆ, ನಿನಗೂ ಸುಖಕಾಲದಲ್ಲಿ ಈ ದುಃಖವು ಬಂದೇ ತೀರುವುದು " ಎಂದು ಹೇಳಿ ಆ ಮೃಗವು ಪ್ರಾಣವನ್ನು ಬಿಟ್ಟಿತು. ಆ ಶಾಪವಾಕ್ಯವನ್ನು ಕೇಳಿ ಪಾಂಡುವು ಬಹಳ ಭಯದಿಂದಲೂ, ವ್ಯಸನದಿಂದಲೂ ತತ್ತಳಿಸಿದನು.

ಇದು ನೂರ ಇಪ್ಪತ್ತುಮೂರನೆಯ ಅಧ್ಯಾಯವು.

---

{ ಕಿಂದಮನ ಶಾಪದಿಂದ ದುಃಖಿತನಾದ ಪಾಂಡುವು ತನ್ನ ಪತ್ನಿಯರೊಡನೆ ಶತಶೃಂಗ ಪರ್ವತಕ್ಕೆ ತಪಸ್ಸಿಗೆ ಹೋದುದು. }

ಓ ಜನಮೇಜಯರಾಜಾ ! ಪಾಂಡುವು ಮೃಗರೂಪದಿಂದಿದ್ದ ಕಿಂದಮ ಮುನಿಯನ್ನು ತಾನು ಕೊಂದುದಕ್ಕಾಗಿ ಬಹಳ ಪರಿತಪಿಸಿದನು. ಅವನಿಗೆ ತನ್ನ ಕೈಯಿಂದಲೇ ಸಂಸ್ಕಾರಮಾಡಿದನು. ಆ ಮಹರ್ಷಿಯನ್ನು ತಾನು ಕೊಂದ ಪಾಪವೊಂದು, ಅವನ ಶಾಪವೊಂದು, ಇವೆರಡರಿಂದ ಬಹಳ ದುಃಖಿತನಾಗಿ, ಸ್ವಂತ ಬಂಧುವನ್ನು ಕಳೆದುಕೊಂಡಂತೆ ಬಹಳ ವ್ಯಸನದಿಂದ ತನ್ನ ಪತ್ನಿಯರೊಡನೆ ವಿಧವಿಧವಾಗಿ ವಿಲಪಿಸತೊಡಗಿದನು. " ಅಯ್ಯೋ ! ನಾನು ಎಂತಹ ಪಾಪಕೃತ್ಯವನ್ನು ಮಾಡಿದೆನು ? ನನ್ನ ಕುಲ

ವೆಂತದು? ನಾನು ಮಾಡಿದ ಪಾಪಕಾರ್ಯವೆಂತದು? ಮಾಡುವುದೇನು? ಸತ್ಕುಲದಲ್ಲಿ ಹುಟ್ಟಿಯೂ ವಿವೇಕವಿಲ್ಲದೆ ಕಾಮಪಾಶಕ್ಕೆ ಸಿಕ್ಕಿ ಮರುಳಾದವರು ತಮ್ಮ ಸ್ವಕರ್ಮದಿಂದ ಇಂತಹ ಪಾಪಕ್ಕೊಳಗಾಗಿ ಇಂತಹ ದುರ್ಗತಿಯನ್ನು ಹೊಂದುವರು. ಯಾವಾಗಲೂ ಧರ್ಮಾತ್ಮನೆನಿಸಿಕೊಂಡು, ಲೋಕಪ್ರಖ್ಯಾತನಾದ ಶಂತನುವಿನ ಗರ್ಭದಲ್ಲಿ ಹುಟ್ಟಿದ ನನ್ನ ತಂದೆಯು, ಕಾಮದಲ್ಲಿ ಮನಸ್ಸಿಟ್ಟುದರಿಂದಲೇ ಅಲ್ಪಕಾಲದಲ್ಲಿ ಪ್ರಾಣಯಾತ್ರೆಯನ್ನು ಮುಗಿಸಿಕೊಂಡನೆಂದು ನಾನು ಕೇಳಿರುವೆನು. ಕಾಮಾತುರನಾದ ಆ ರಾಜಪತ್ನಿಯಲ್ಲಿ ಸಂಯಮಿಯೆನಿಸಿಕೊಂಡ ಮಹಾತ್ಮನಾದ ವ್ಯಾಸನಲ್ಲವೇ ನನ್ನನ್ನು ಪಡೆದವನು? ಅಂತಹ ಮಹರ್ಷಿಯ ಪುತ್ರನಾದ ನಾನು ಈಗ ಧರ್ಮವನ್ನು ಬಿಟ್ಟು ಬೇಟೆಯಲ್ಲಿಯೇ ಆಸಕ್ತನಾದುದರಿಂದ, ದೇವತೆಗಳ ನಿಗ್ರಹಕ್ಕೆ ಪಾತ್ರನಾದೆನು. ಅದರಿಂದಲೇ ನನಗೆ ಈ ಪಾಪಬುದ್ಧಿಯೂ ಹುಟ್ಟಿತು. ಛೀ! ಇನ್ನುಮೇಲೆ ನನಗೆ ಈ ರಾಜ್ಯವೂ ಬೇಡ! ನನಗೆ ಇಹಲೋಕದ ಸುಖಗಳೇನೂ ಬೇಡ! ಇನ್ನು ನಾನು ಮೋಕ್ಷಕ್ಕಾಗಿಯೇ ಪ್ರಯತ್ನಪಡುವೆನು. ಮೃಗಯಾದಿ ವ್ಯಸನಗಳೆಂಬಿವು ಮನುಷ್ಯನಿಗೆ ದೊಡ್ಡದೊಂದು ಬಂಧವು. ನನ್ನ ತಂದೆಯಾದ ವ್ಯಾಸನು ನಡೆಸುತಿದ್ದ ಅಕ್ಷಯವಾದ ತಪೋವೃತ್ತಿಯನ್ನೇ ನಾನೂ ಅನುವರ್ತಿಸುವೆನು. ಇನ್ನುಮೇಲೆ ನನ್ನ ಮನಸ್ಸನ್ನು ತಪಸ್ಸಿನಲ್ಲಿಯೇ ನೆಲೆಗೊಳಿಸುವೆನು. ಈ ವನದಲ್ಲಿಯೇ ಪ್ರತಿದಿನವೂ ಒಂದೊಂದು ಮರದಲ್ಲಿ ಭಿಕ್ಷೆಯನ್ನು ಬೇಡುತ್ತಾ, ಆ ಹಣ್ಣುಗಳನ್ನೇ ಭುಜಿಸಿ ಪ್ರಾಣಧಾರಣೆಯನ್ನು ಮಾಡುವೆನು. ಮುನಿಯಾಗಿ ತಲೆಯನ್ನು ಮುಂಡನಮಾಡಿಸಿಕೊಂಡು ಈ ಆಶ್ರಮದಲ್ಲಿಯೇ ತಿರುಗುತ್ತಿರುವೆನು. ನನಗೆ ಅರಮನೆಯೂ ಬೇಡ! ಅಲ್ಲಿನ ಪ್ರಿಯವಸ್ತುಗಳೊಂದೂ ಬೇಕಾದುದಿಲ್ಲ. ಮನೆಯಿಲ್ಲದ ಬಯಲಿನಲ್ಲಿಯೋ, ಮರದೆಡೆಯಲ್ಲಿಯೋ, ನೆಲದ ಧೂಳಿನಲ್ಲಿಯೋ ಮಲಗುವೆನು. ಇನ್ನು ಪ್ರಿಯಾಪ್ರಿಯಗಳೊಂದನ್ನೂ ನಾನು ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲ. ಪ್ರಿಯಾಪ್ರಿಯಗಳು, ಶೋಕಹರ್ಷಗಳು, ನಿಂದಾಸ್ತುತಿಗಳು, ಆಶೀರ್ವಚನ ನಮಸ್ಕಾರಗಳು, ಈ ದ್ವಂದ್ವಗಳಲ್ಲಿ ಭೇದಭಾವವನ್ನೇ ಬಿಟ್ಟುಬಿಡುವೆನು. ಎಲ್ಲವನ್ನೂ ಸಮವಾಗಿ ಭಾವಿಸುವೆನು. ಇನ್ನುಮೇಲೆ ನಾನು ಶೀತೋಷ್ಣಗಳನ್ನೂ ಗಮನಿಸುವವ

ನಲ್ಲ. ಮತ್ತೊಬ್ಬರ ಆಶೀರ್ವಾದವನ್ನೂ ನಾನು ಬಯಸುವುದಿಲ್ಲ. ಇತರರು ನನಗೆ ನಮಸ್ಕರಿಸಬೇಕೆಂದೂ ನಾನು ಕೋರುವುದಿಲ್ಲ. ನನಗೆ ಯಾವ ಪರಿಗ್ರಹವೂ ಬೇಡ! ನನಗೆ ಯಾರ ಸಂಗವೂ ಬೇಡ! ಇನ್ನುಮೇಲೆ ನಾನು ಬೇರೆಯವರನ್ನು ಪರಿಹಸಿಸುವುದಿಲ್ಲ. ಇತರರಲ್ಲಿ ಕೋಪಪ್ರಸಾದಗಳನ್ನೂ ತೋರಿಸುವುದಿಲ್ಲ. ಯಾವಾಗಲೂ, ಎಲ್ಲರಲ್ಲಿಯೂ ಪ್ರಸನ್ನಮುಖನಾಗಿ, ಸಮಸ್ತಭೂತಗಳ ಹಿತದಲ್ಲಿಯೇ ನಿರತನಾಗುವೆನು. ಜರಾಯುಜ, ಅಂಡಜ, ಉದ್ಭಿಜ್ಜ, ಸ್ವೇದಜಗಳೆಂಬೀ ನಾಲ್ಕುಬಗೆಯ ಸ್ಥಾವರಜಂಗಮಾತ್ಮಕಗಳಾದ ಪ್ರಾಣಿಗಳೊಂದಕ್ಕೂ ಯಾವ ಉಪದ್ರವವನ್ನೂ ಕೊಡದೆ, ಎಲ್ಲಾ ಪ್ರಾಣಿಗಳನ್ನೂ ಯಾವಾಗಲೂ, ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆ ಕಾಣುವೆನು. ಐದು ಅಥವಾ ಹತ್ತು ಮನೆಗಳಲ್ಲಿ ಭಿಕ್ಷೆಯನ್ನೆತ್ತಿ ನನ್ನ ಜೀವನವನ್ನು ಹೊರೆಯುವೆನು. ಭಿಕ್ಷೆಯೇ ದೊರೆಯದಿದ್ದರೆ ಉಪವಾಸವನ್ನು ಮಾಡುವೆನು. ಭಿಕ್ಷೆಯಲ್ಲಿ ಸಿಕ್ಕಿದಷ್ಟನ್ನೇ ಭುಜಿಸುವೆನು. ಮೊದಲಿನ ಭಿಕ್ಷೆಯು ದೊರೆಯದಿದ್ದರೆ, ತಿರುಗಿ ನಾನು ಇತರರನ್ನು ನಿರ್ಬಂಧಿಸುವುದಕ್ಕಾಗಿ ಹೋಗುವವನಲ್ಲ. ಭಿಕ್ಷೆಯು ಸಿಕ್ಕಿದರೂ, ಸಿಕ್ಕದಿದ್ದರೂ ಏಳು ಮನೆಗಳಲ್ಲಿ ಭಿಕ್ಷೆಯನ್ನು ಬೇಡಿ ನಿಲ್ಲಿಸಿಬಿಡುವೆನು. ಭಿಕ್ಷೆಯು ಸಿಕ್ಕಿದರೂ, ಸಿಕ್ಕದಿದ್ದರೂ ಹರ್ಷವಿಷಾದಗಳಿಲ್ಲದೆ ಅವೆರಡನ್ನೂ ಸಮವಾಗಿ ಭಾವಿಸುತ್ತಾ ದೃಢತಪಸ್ಸಿನಲ್ಲಿ ನಿಲ್ಲುವೆನು. ಕೊಡಲಿಯಿಂದ ನನ್ನ ಒಂದು ತೋಳನ್ನು ಕಡಿಯುವವನಿಗೂ, ಗಂಧವನ್ನು ಅರೆದು ಮತ್ತೊಂದು ತೋಳಿಗೆ ಲೇಪನಮಾಡಿ ಅಲಂಕರಿಸುವವನಿಗೂ ನಾನು ಹಾನಿಯನ್ನಾಗಲಿ ಕ್ಷೇಮವನ್ನಾಗಲಿ ಯೋಚಿಸದೆ, ಇಬ್ಬರನ್ನೂ ಸಮವಾಗಿಯೇ ಭಾವಿಸುವೆನು. ಇನ್ನುಮೇಲೆ ನಾನು ಜೀವದಾಶೆ, ಮರಣಭೀತಿ ಇವೆರಡನ್ನೂ ಬಿಟ್ಟು, (ಜೀವಿತದಲ್ಲಿ ಆಸೆಯಾಗಲಿ, ಮರಣದಲ್ಲಿ ಬೇಸರವಾಗಲಿ, ಇಲ್ಲದೆ) ಶಾಂತನಾಗಿರುವೆನು. ಜೀವಿಸಿರುವವನು ತನ್ನ ಪುರೋವೃದ್ಧಿಗಾಗಿ ಮಾಡಬಾರದ ಯಾವ ಕಾರ್ಯಗಳಿಗೂ ನಾನು ಯತ್ನಿಸುವುದಿಲ್ಲ. ನಿಮೇಷೋನ್ಮೇಷಗಳು ಮೊದಲಾಗಿ ಮನುಷ್ಯನಿಂದ ಬಿಡುವುದಕ್ಕೆ ಸಾಧ್ಯವಲ್ಲದ ಅನಿರ್ವಾಹಕಾರ್ಯಗಳಲ್ಲಿಮಾತ್ರ ವರ್ತಿಸುತ್ತಿರುವೆನು. ಕೊನೆಯಿಲ್ಲದ ಪ್ರವಾಹರೂಪವಾಗಿ ಸಾಗುತ್ತಾ, ಅನಿತ್ಯವಾಗಿರುವ ಈ ಸಂಸಾರಿಕವ್ಯಾಪಾ

ರಗಳಲ್ಲಿ ಮನಸ್ಸಿಡದೆ, ಇಂದ್ರಿಯ ವ್ಯಾಪಾರಗಳನ್ನೆಲ್ಲ ಅಡಗಿಸಿ, ಧರ್ಮಾರ್ಥಗಳನ್ನೂ ಬಿಟ್ಟು ಮನಸ್ಸಿನಲ್ಲಿ ಕಲ್ಮಷವನ್ನೆಲ್ಲ ತೊರೆದು ಪಾಪವಿಮುಕ್ತನಾಗಿ ಎಲ್ಲಾ ವಿಷಯಗಳನ್ನೂ ತೊರೆದು, ಯಾರಿಗೂ ಅಧೀನನಲ್ಲದೆ ವಾಯುವಿಗೆ ಸಮಾನನಾಗಿರುವೆನು. ಇನ್ನು ಮೇಲೆ ನಾನು ಕಠಿನವಾದ ಈ ತಪೋವೃತ್ತಿಯನ್ನೇ ಹಿಡಿದು, ಮೋಕ್ಷಮಾರ್ಗದಲ್ಲಿ ನಿರತನಾಗಿ ನನ್ನ ದೇಹಾವಸಾನವನ್ನು ನಿರೀಕ್ಷಿಸುತಿದ್ದು ಈ ದೇಹವನ್ನು ಕೊನೆಗಾಣಿಸುವೆನು. ಶಕ್ತಿಯು ತಗ್ಗಿದಮೇಲೆ ದುಃಖಾಸ್ಪದವೂ, ಸ್ವಧರ್ಮಗಳಿಗೆ ಯಾವಾಗಲೂ ವಿಘಾತವೂ ಆದ ಕೇವಲಕೃಪಣವಾದ ಮಾರ್ಗದಲ್ಲಿ ನಾನಿರಲಾರೆನು ಯಾವನು ಕಾಮಸುಖದಲ್ಲಿ ಮನಸ್ಸು ತಗುಲಿ, ಅದರಲ್ಲಿ ತನಗೆ ಮಾನವುಂಟಾದರೂ, ಅವಮಾನವುಂಟಾದರೂ ಲಕ್ಷ್ಯವಿಲ್ಲದೆ, ಕೇವಲ ಕೃಪಣದೃಷ್ಟಿಯಿಂದ ಆ ದಾರಿಯನ್ನೇ ಹಿಡಿದುಹೋಗುವನೋ, ಅಂತವನು ನಾಯಿಯ ವೃತ್ತಿಯನ್ನು ಹಿಡಿದವನಾಗುವನು ” ಎಂದನು.

ಹೀಗೆ ಆ ಪಾಂಡುವು ಮಹಾವ್ಯಸನದಿಂದ ಕೊರಗಿ, ಆಗಾಗ ನಿಟ್ಟುಸಿರು ಬಿಡುತ್ತಾ, ತನ್ನ ಪತ್ನಿಯರಾದ ಕುಂತೀಮಾದ್ರಿಯರಿಬ್ಬರನ್ನೂ ನೋಡಿ “ ನೀವು ಈಗಲೇ ಹೋಗಿ, ತಾಯಿ ಕೌಸಲ್ಯೆ, ವಿದುರನು, ಧೃತರಾಷ್ಟ್ರನು, ಸತ್ಯವತಿ, ಪಿತಾಮಹನಾದ ಭೀಷ್ಮನು, ಮತ್ತು ಇತರಬಂಧುಗಳು, ಸೋಮಪಾನಮಾಡಿದವರೂ, ಮಹಾತ್ಮರೂ, ಧೃಢವ್ರತರೂ ಆದ ಬ್ರಾಹ್ಮಣರು, ಪುರೋಹಿತರು ಮತ್ತು ನಮ್ಮ ನಗರಿಯಲ್ಲಿ ನಮ್ಮನ್ನು ಆಶ್ರಯಿಸಿ ಜೀವಿಸುತ್ತಿದ್ದ ಪರಿಜನರು, ಮತ್ತು ವೃದ್ಧರಾದ ಪುರಜನರು, ಇವರಿಗೆಲ್ಲ ನನ್ನ ನಮಸ್ಕಾರವನ್ನು ತಿಳಿಸಿ, ‘ ಪಾಂಡುವು ಅರಣ್ಯದಲ್ಲಿ ಸನ್ಯಾಸವನ್ನು ಸ್ವೀಕರಿಸಿದ ’ನೆಂದು ತಿಳಿಸಿಬಿಡಿರಿ ” ಎಂದನು.

ಆಗ ತಮ್ಮ ಪತಿಯು ಸನ್ಯಾಸಧರ್ಮವನ್ನು ಹಿಡಿಯುವ ಅಭಿಪ್ರಾಯದಿಂದಿರುವುದನ್ನು ಕೇಳಿ, ಆ ಪತ್ನಿಯರಿಬ್ಬರೂ ಭಯಗ್ರಸ್ತರಾಗಿ ಆತನನ್ನು ಕುರಿತು ಕಾಲೋಚಿತವಾದ ಸಮಾಧಾನವಾಕ್ಯಗಳಿಂದ ಹೀಗೆಂದು ಹೇಳುವರು. “ ನಾಥಾ! ಈಗ ನಿನಗೆ ಸನ್ಯಾಸವೇಕೆ? ಸರ್ವಸಂಗಪರಿತ್ಯಾಗವನ್ನು ಮಾಡಿ ನೀನು ಸನ್ಯಾಸವನ್ನು ಹಿಡಿಯುವುದಾದರೆ, ನಮ್ಮ ಗತಿ

ಯೇನು? ನೀನು ಧರ್ಮಪತ್ನಿಯರಾದ ನಮ್ಮೊಡನೆ ಸೇರಿಯೇ ಧರ್ಮವ ನ್ನಾಚರಿಸುವುದಕ್ಕೆ ತಕ್ಕಬೇರೆ ಆಶ್ರಮಗಳೂ ಇರುವುವಲ್ಲವೆ? ನಮ್ಮೊಡನೆ ಸೇರಿದ್ದೇ ಮಹಾತಪಸ್ಸನ್ನು ನಡೆಸುವುದಕ್ಕೂ, ಉತ್ತಮವಾದ ಮೋಕ್ಷ ಧರ್ಮವನ್ನು ಹಿಡಿದು ಶರೀರತ್ಯಾಗವಮಾಡುವುದಕ್ಕೂ ತಕ್ಕ ಬೇರೆ ಮಾರ್ಗ ವನ್ನಾಲೋಚಿಸು. ನಮಗೆ ನೀನೇ ಸ್ವರ್ಗದಲ್ಲಿಯೂ ಭರ್ತನಾಗಬೇಕು. ನಾವೂ ನಿನ್ನೊಡನೆ ಇಂದ್ರಿಯಗಳನ್ನು ನಿಗ್ರಹಿಸಿ, ಕಾಮಸುಖಗಳನ್ನು ತೊರೆದು, ತಪೋನಿರತರಾಗುವೆವು. ನಾಥಾ! ನೀನು ನಮ್ಮನ್ನು ಬಿಟ್ಟು ಹೋಗುವುದಾದರೆ, ನಾವೂ ಈಗಲೇ ಪ್ರಾಣಗಳನ್ನು ಬಿಡುವುದರಲ್ಲಿ ಸಂ ದೇಹವಿಲ್ಲ'' ಎಂದರು. ಅದಕ್ಕಾ ಪಾಂಡುವು ''ಪ್ರಿಯಪತ್ನಿಯರೇ! ನಿಮಗೆ ಧರ್ಮಯುಕ್ತವಾದ ಈ ಸಂಕಲ್ಪವೇ ಇದ್ದಪಕ್ಷದಲ್ಲಿ, ನನ್ನ ತಂದೆ ಯಾದ ವ್ಯಾಸನಂತೆ ನಾನೂ ತಪೋಮಾರ್ಗವನ್ನೇ ಅನುಸರಿಸುತ್ತಿರುವೆನು. ಇನ್ನುಮೇಲೆ ನಾನು ಗ್ರಾಮ್ಯಸುಖಗಳನ್ನೂ, ಗ್ರಾಮ್ಯಾಹಾರಗಳನ್ನೂ ಬಿಟ್ಟು, ನಾರುಬಟ್ಟೆಯನ್ನುಟ್ಟು ತಪಸ್ಸನ್ನು ನಡೆಸುತ್ತಿರುವೆನು. ಕಾಡಿ ನಲ್ಲಿ ಸಿಕ್ಕುವ ಹಣ್ಣುಗಡ್ಡೆಗಳನ್ನೇ ತಿನ್ನುತ್ತ, ಅರಣ್ಯದಲ್ಲಿಯೇ ವಾಸಿ ಸುವೆನು. ಎರಡು ಹೊತ್ತು ಸ್ನಾನವನ್ನು ಮಾಡುವೆನು. ಅಗ್ನಿಹೋತ್ರಗಳ ನ್ನು ನಡೆಸುವೆನು. ಜಡೆಯನ್ನು ಬೆಳೆಸಿ, ಆಹಾರವನ್ನು ತಗ್ಗಿಸಿ, ದೇಹವ ನ್ನು ದಂಡಿಸಿ, ಶೀತೋಷ್ಣಗಳನ್ನೂ, ಹಸಿವು ಬಾಯಾರಿಕೆಗಳನ್ನೂ ಲಕ್ಷ್ಯ ಮಾಡದೆ, ಬೇರೆಯವರಿಗೆ ದುಸ್ಸಾಧ್ಯವಾದ ತಪಸ್ಸನ್ನು ಹಿಡಿದು, ಈ ದೇಹ ವನ್ನು ಶೋಷಿಸುವೆನು. ನಿರ್ಜನಸ್ಥಳದಲ್ಲಿಯೇ ವಾಸಮಾಡುತ್ತ ಕೇವಲ ಧ್ಯಾನಪರನಾಗಿರುವೆನು ಆಹಾರಗಳಲ್ಲಿ ಪಕ್ವವೋ, ಅಪಕ್ವವೋ ಯಾವು ದಿದ್ದರೂ ಅದರಿಂದಲೇ ಕಾಲವನ್ನು ಕಳೆಯುವೆನು. ಪಿತೃಗಳನ್ನಾದರೂ, ದೇವತೆಗಳನ್ನಾದರೂ, ಕಾಡಿನಲ್ಲಿ ಸಿಕ್ಕುವ ಪದಾರ್ಥಗಳಿಂದಲೂ, ವಾಕ್ಕು ಗಳಿಂದಲೂ, ನೀರಿನಿಂದಲೂ ತೃಪ್ತಿಗೊಳಿಸುವೆನು. ಕುಟುಂಬಿಗಳಾಗಿ ವನದಲ್ಲಿರುವ ವಾನಪ್ರಸ್ಥರನ್ನುಕೂಡ ನಾನು ಇನ್ನುಮೇಲೆ ಕಣ್ಣೆತ್ತಿ ನೋಡುವವನಲ್ಲ. ಅವರಿಗೆ ಅಪ್ರಿಯವಾದುದನ್ನೂ ಮಾಡುವುದಿಲ್ಲ. ಇ ನ್ನು ಗ್ರಾಮದಲ್ಲಿರತಕ್ಕವರ ವಿಚಾರದಲ್ಲಿ ಕೇಳಬೇಕಾದುದೇನು? ಹೀಗೆ ಅರ ಣ್ಯವಾಸಿಗಳ ಆಚರಣೆಯಲ್ಲಿ ಕಠಿನತಮವೆನಿಸಿದ ವಾನಪ್ರಸ್ಥವಿಧಿಗಳನ್ನೇ

ಅನುಸರಿಸಿ, ಈ ದೇಹಾವಸಾನದವರೆಗೆ ಸರ್ವಕಾಮಗಳನ್ನೂ ಬಿಟ್ಟು, ತಪೋಮಾರ್ಗವನ್ನೇ ಅನುಸರಿಸುವೆನು" ಎಂದನು.

ಹೀಗೆ ಪಾಂಡುವು ತನ್ನ ಪತ್ನಿಯರೊಡನೆ ಹೇಳಿ, ತನ್ನ ಮತ್ತು ತನ್ನ ಪತ್ನಿಯರ ಮೈಮೇಲಿದ್ದ ಸರ್ವಾಭರಣಗಳನ್ನೂ ಕಳಚಿಟ್ಟನು. ಎಲ್ಲರ ತಲೆಯಲ್ಲಿದ್ದ ಚೂಡಾಮಣಿ, ಕಂಠಹಾರಗಳು, ತೋಳ್ಬಳೆಗಳು, ಕರ್ಣಕುಂಡಲಗಳು, ಬೆಲೆಯುಳ್ಳ ಇತರ ವಸ್ತುಗಳು, ಸ್ತ್ರೀಯರಿಗೆ ಯೋಗ್ಯವಾದ ಆಭರಣಗಳು, ಉತ್ತಮ ವಾಹನಗಳು, ಆಯುಧಗಳು, ಕವಚಗಳು, ಕುದುರೆಗಳಿಗೆ ಧರಿಸಿದ್ದ ರಾಜಯೋಗ್ಯವಾದ ಸುವರ್ಣಾಭರಣಗಳು, ಸುಪ್ಪತ್ತಿಗೆ, ಮುತ್ತು, ಹವಳ, ಮುಂತಾಗಿ ತನ್ನಲ್ಲಿದ್ದ ಸಕಲರತ್ನಗಳನ್ನೆಲ್ಲ ಸೇರಿಸಿ ಆಗಲೇ ಬ್ರಾಹ್ಮಣರಿಗೆ ದಾನಮಾಡಿಬಿಟ್ಟನು. ಆಮೇಲೆ ಭೃತ್ಯರನ್ನು ಕರೆದು 'ಎಲೈ! ನೀವು ಈಗಲೇ ಹಸ್ತಿನಾಪುರಕ್ಕೆ ಹೋಗಿ, ಪಾಂಡುವು ಅರ್ಥಕಾಮಗಳನ್ನೂ, ಸುಖಗಳನ್ನೂ, ಸಂತಾನಪ್ರಾಪ್ತಿಗೆ ಯೋಗ್ಯವಾದ ರತಿಕ್ರಿಯೆಯನ್ನೂ, ಎಲ್ಲವನ್ನೂ ಪೂರ್ಣವಾಗಿ ಬಿಟ್ಟು, ತನ್ನ ಭಾರ್ಯೆಯರೊಡನೆ ವನದಲ್ಲಿ ಸನ್ಯಾಸವೃತ್ತಿಯಲ್ಲಿರುವನು' ಎಂದು ತಿಳಿಸಿಬಿಡಿರಿ" ಎಂದನು. ಈ ಮಾತನ್ನು ಕೇಳಿದೊಡನೆ ಅವನನ್ನು ಹಿಂಬಾಲಿಸಿ ಬಂದಿದ್ದ ಸಮಸ್ತ ಪರಿವಾರಗಳೂ ಆರ್ತಧ್ವನಿಯಿಂದ ರೋದಿಸುತ್ತಾ, ಕಣ್ಣೀರನ್ನು ಸುರಿಸಿ, ಆ ರಾಜನಲ್ಲಿ ಉಳಿದಿದ್ದ ಇನ್ನೂ ಕೆಲವು ಧನಕನಕಾದಿಗಳನ್ನೆಲ್ಲ ಸಾಗಿಸಿಕೊಂಡು, ವೇಗದಿಂದ ಹಸ್ತಿನಾಪುರಕ್ಕೆ ಬಂದರು. ಅವರು ಪಟ್ಟಣಕ್ಕೆ ಹೋಗಿ, ಮಹಾತ್ಮನಾದ ಪಾಂಡುವಿನ ಸ್ಥಿತಿಯನ್ನು ಧೃತರಾಷ್ಟ್ರನಿಗೆ ತಿಳಿಸಿ, ತಂದಿದ್ದ ಧನವನ್ನೆಲ್ಲ ಅವನ ಮುಂದೆ ಇಟ್ಟರು. ಧೃತರಾಷ್ಟ್ರನು ಅಲ್ಲಿನ ಸಂಗತಿಗಳನ್ನು ಕೇಳಿದೊಡನೆ, ಮಹಾವ್ಯಸನದಿಂದ ನಿದ್ರಾಹಾರಗಳನ್ನೂ ಬಿಟ್ಟು, ನಿಂತಲ್ಲಿ ನಿಲ್ಲದೆ ತತ್ತಳಿಸುತಿದ್ದನು. ಅವನೂ ಆಗ ಎಲ್ಲಾ ಭೋಗಗಳನ್ನೂ ನಿರಾಕರಿಸಿದನು. ಓ ಜನಮೇಜಯರಾಜಾ! ಇತ್ತಲಾಗಿ ಪಾಂಡುವು ತನ್ನ ಸಂಕಲ್ಪದಂತೆಯೇ ಫಲಮೂಲಗಳನ್ನು ತಿನ್ನುತ್ತಾ ಪತ್ನಿಯರೊಡನೆ ಅಲ್ಲಿಂದ ನಾಗಶತವೆಂಬ ಪರ್ವತಕ್ಕೆ ಹೋದನು. ಅಲ್ಲಿ ಚೈತ್ರರಥವೆಂಬ ಕುಬೇರನ ಉದ್ಯಾನವನಕ್ಕೆ ಹೋಗಿ, ಅಲ್ಲಿಂದ ಮುಂದೆ ಕಾಲ

ಕೂಟವೆಂಬ ಪ್ರದೇಶವನ್ನು ದಾಟಿ, ಹಿಮವತ್ಪರ್ವತದ ಆಚೆಯಲ್ಲಿರುವ ಗಂಧಮಾದನ ಪರ್ವತವನ್ನು ಸೇರಿದನು. ಅಲ್ಲಿ ಸಿದ್ಧರಿಂದಲೂ, ಮಹರ್ಷಿಗಳಿಂದಲೂ, ಮಹಾಭೂತಗಳಿಂದಲೂ ರಕ್ಷಿಸಲ್ಪಡುತ್ತ, ಅಲ್ಲಿನ ಮೈದಾನಗಳಲ್ಲಿಯೂ, ಹಳ್ಳತಿಟ್ಟುಗಳಲ್ಲಿಯೂ ವಾಸಮಾಡುತಿದ್ದನು. ಅಲ್ಲಿಂದ ಇಂದ್ರದ್ಯುಮ್ನವೆಂಬ ಸರಸ್ಸಿಗೆ ಹೋಗಿ, ಆಮೇಲೆ ಹಂಸಕೂಟವೆಂಬ ಪ್ರದೇಶವನ್ನು ದಾಟಿ, ಕೊನೆಗೆ ಶತಶೃಂಗಪರ್ವತದಲ್ಲಿ ಋಷಿಯಾಗಿ ತಪಸ್ಸು ಮಾಡುತಿದ್ದನು.

ಇದು ನೂರಿಪ್ಪತ್ತುನಾಲ್ಕನೆಯ ಅಧ್ಯಾಯವು.

{ ಬ್ರಹ್ಮಲೋಕಕ್ಕೆ ಹೋಗುತ್ತಿದ್ದ ಪಾಂಡುವನ್ನು ನೋಡಿ ಋಷಿಗಳು ಅವನಿಗೆ ಸಂತಾನವಾಗುವುದೆಂದು ಸಮಾಧಾನ ಹೇಳಿ ಹಿಂತಿರುಗಿಸಿದುದು. }

ಓ ಜನಮೇಜಯರಾಜಾ! ಕೇಳು! ಆ ಶತಶೃಂಗಪರ್ವತದಲ್ಲಿ ಪಾಂಡುವು ಕಠಿನತಪಸ್ಸನ್ನು ಹಿಡಿದಿದ್ದನು. ಸಿದ್ಧಚಾರಣಸಮೂಹಗಳಿಗೆಲ್ಲ ಇವನು ಪ್ರಿಯದರ್ಶಿಯಾಗಿ, ಎಲ್ಲರ ಮೆಚ್ಚಿಕೆಗೂ ಪಾತ್ರನಾದನು. ತನಗಿಂತಲೂ ದೊಡ್ಡವರಿಗೆ ತಾನೇ ಶುಶ್ರೂಷೆಮಾಡುತಿದ್ದನು. ತಾನೆಂಬ ಅಹಂಕಾರವಿಲ್ಲದೆ ಮನಸ್ಸನ್ನೂ, ಇಂದ್ರಿಯಗಳನ್ನೂ ಅಡಗಿಸಿ, ತನ್ನ ತಪಶ್ಶಕ್ತಿಯಿಂದ ಸದ್ಗತಿಸಾಧನೆಗಾಗಿ ಪ್ರಯತ್ನಪಡುತಿದ್ದನು. ಕೆಲವು ಮಹರ್ಷಿಗಳಿಗೆ ಅವನು ಒಡಹುಟ್ಟಿದ ಸಹೋದರನಂತೆ ಪ್ರೀತಿಪಾತ್ರನಾದನು. ಕೆಲವರಿಗೆ ಇಷ್ಟಸ್ನೇಹಿತನಂತಿದ್ದನು. ಕೆಲವರು ಇವನನ್ನು ಪುತ್ರವಾತ್ಸಲ್ಯದಿಂದ ನೋಡುತಿದ್ದರು. ಹೀಗೆ ಅವನು ಬಹುಕಾಲದವರೆಗೆ ನಿಷ್ಕಲ್ಮಷವಾದ ತಪಸ್ಸನ್ನು ಮಾಡುತ್ತ ಬ್ರಹ್ಮರ್ಷಿಗೆ ಸಮಾನನೆನಿಸಿಕೊಂಡನು. ಹೀಗಿರುವಾಗ ಒಮ್ಮೆ ಅಮಾವಾಸ್ಯೆಯ ದಿನದಲ್ಲಿ, ಅಲ್ಲಿ ತಪಸ್ಸಿದ್ಧರಾದ ಕೆಲವು ಮಹರ್ಷಿಗಳು ಬ್ರಹ್ಮಲೋಕಕ್ಕಾಗಿ ಪ್ರಯಾಣಹೊರಟರು. ಹೀಗೆ ಹೊರಟಿರುವ ಋಷಿಗಳನ್ನು ನೋಡಿ ಪಾಂಡುವು “ ಎಲೈ ಮಹಾತ್ಮರೆ! ನೀವೆಲ್ಲಿಗೆ ಹೊರಟಿರುವಿರಿ? ನನಗೂ ಅದನ್ನು ತಿಳಿಸಬೇಕು ” ಎಂದನು. ಅದಕ್ಕಾ

ಋಷಿಗಳು "ಓ ಮಹಾರಾಜಾ! ಈಗ ಬ್ರಹ್ಮಲೋಕದಲ್ಲಿ ದೊಡ್ಡದೊಂದು ಮಹಾಸಭೆಯು ನಡೆಯುತ್ತಿರುವುದು. ಅಲ್ಲಿ ದೇವತೆಗಳೂ, ಋಷಿಗಳೂ, ಮಹಾತ್ಮರಾದ ಪಿತೃಗಳೂ ಬಂದು ಸೇರುವರು. ಆ ಕಾಲದಲ್ಲಿ ಬ್ರಹ್ಮದರ್ಶನಕ್ಕಾಗಿ ನಾವು ಹೋಗುತ್ತಿರುವೆವು" ಎಂದರು. ಈ ಮಾತನ್ನು ಕೇಳಿದೊಡನೆ ಪಾಂಡುವು ಥಟ್ಟನೆ ಮೇಲೆದ್ದು, ತಾನೂ ಅವರೊಡನೆ ಹೊರಡುವುದಕ್ಕೆ ನಿಶ್ಚಯಿಸಿಬಿಟ್ಟನು. ಒಡನೆಯೇ ತನ್ನ ಪತ್ನಿಯರನ್ನೂ ಕರೆದುಕೊಂಡು, ತಾನೂ ಆ ಸಿದ್ಧರೊಡನೆ ಸ್ವರ್ಗವನ್ನು ದಾಟಿ, ಇನ್ನೂ ಉತ್ತಮಲೋಕಕ್ಕೆ ಹೋಗಬೇಕೆಂದು ನೆನೆಸಿ, ಶತಶೃಂಗಪರ್ವತದಿಂದ ಉತ್ತರಾಭಿಮುಖವಾಗಿ ಹೊರಟನು. ಆಗ ಆ ಮಹರ್ಷಿಗಳು ತಮ್ಮ ಹಿಂದೆ ಬರುತ್ತಿರುವ ಈ ರಾಜನನ್ನು ನೋಡಿ "ಓ ರಾಜಾ! ನೀನೆಲ್ಲಿಗೆ ಬರುತ್ತಿರುವೆ? ಇಲ್ಲಿಂದ ಮೇಲೆಮೇಲೆ ಹೋದಹಾಗೆ, ಎಂತವರಿಗೂ ದಾಟಲಸಾಧ್ಯವಾದ ಎಷ್ಟೋ ಪ್ರದೇಶಗಳಿರುವುವು. ಅಲ್ಲಿ ಸಾವಿರಾರು ದೇವವಿಮಾನಗಳು ಕಿಕ್ಕಿರಿಸಿ ಸಂಚರಿಸುತ್ತಿರುವುವು. ಸಂಗೀತಧ್ವನಿಗಳೊಡನೆ ದೇವತೆಗಳೂ, ಗಂಧರ್ವರೂ, ಅಪ್ಸರಸ್ಸುಗಳೂ ಏಕಾಂತವಾಗಿ ವಿನೋದಿಸತಕ್ಕ ಸ್ಥಾನಗಳುಂಟು. ದೊಡ್ಡ ಮೈದಾನಗಳೂ, ಹಳ್ಳತಿಟ್ಟುಗಳೂ ಉಳ್ಳ ಕುಬೇರನ ಉದ್ಯಾನಗಳುಂಟು. ಮಹಾನದೀತೀರಗಳೂ, ಪರ್ವತಗುಹೆಗಳೂ ಇರುವುವು. ಅಲ್ಲಿನ ಅನೇಕಪ್ರದೇಶಗಳು ಯಾವಾಗಲೂ ಹಿಮಮಯವಾಗಿರುವುವು. ಮರಗಳಾಗಲಿ, ಮೃಗಪಕ್ಷಿಗಳಾಗಲಿ, ಇಲ್ಲದ ಹಲವು ದೇಶಗಳುಂಟು. ಅಲ್ಲಲ್ಲಿ ಮುಂದೆಹೋಗುವುದಕ್ಕೇ ಸಾಧ್ಯವಲ್ಲದ ದರಿಗಳೂ, ಕಂದರಗಳೂ ಅನೇಕವಾಗಿವೆ. ಆಕಾಶದಲ್ಲಿ ಹಾರಬಲ್ಲ ಪಕ್ಷಿಗಳೂಕೂಡ ಆ ದುರ್ಗಮಪ್ರದೇಶಗಳನ್ನು ದಾಟಲಾರವು. ಇನ್ನು ಇತರ ಮೃಗಗಳ ಪಾಡೇನು? ವಾಯುವೊಬ್ಬನುಮಾತ್ರ ಅಲ್ಲಿ ಹೋಗಬಲ್ಲನು. ತಪಸ್ಸಿದ್ಧಿಯನ್ನು ಪಡೆದ ಮಹರ್ಷಿಗಳೂ ಅದನ್ನು ದಾಟಿಹೋಗಬಲ್ಲರು. ಅಂತಹ ಸ್ಥಳಕ್ಕೆ ಈ ಸ್ತ್ರೀಯರನ್ನೂ ಕರೆದುಕೊಂಡು ಹೇಗೆತಾನೇ ನೀನು ಹೋಗಬಲ್ಲೆ? ಕಷ್ಟಾರ್ಹರಲ್ಲದೆ, ಬಹಳ ಕೋಮಲೆಯರಾದ ಈ ರಾಜಕುಮಾರಿಯರಿಗೆ ನೀನು ಇಂತಹ ಕಷ್ಟವನ್ನೇಕೆ ತಂದಿಡುವೆ? ಬೇಡ! ಅವರನ್ನೂ ಕರೆದುಕೊಂಡು ನೀನು ಹಿಂತಿರುಗಿ ಹೋಗು" ಎಂದರು.

ಆದಕ್ಕಾ ಪಾಂಡುವು "ಎಲೈ ಮಹಾತ್ಮರೆ! 'ಸಂತತಿಯಿಲ್ಲದವರಿಗೆ ಸ್ವರ್ಗದ್ವಾರವಿಲ್ಲ'ವೆಂದು ನಾನು ಕೇಳಿರುವೆನು. ನನಗೆ ಸಂತತಿಯಿಲ್ಲದುದರಿಂದ ಸದ್ಗತಿಗೆ ದಾರಿಯಿಲ್ಲ. ಇದಕ್ಕಾಗಿಯೇ ನಾನು ಕೊರಗುತ್ತಿರುವೆನು. ಇದುವರೆಗೆ ನಾನು ಉಗ್ರತಪಸ್ಸನ್ನು ಮಾಡಿದೆನು. ಸಂತಾನವಿಲ್ಲದಿದ್ದರೂ ಈ ಭಾರ್ಯೆಯರೊಡನೆ ನಡೆಸಿದ ಆ ಸತ್ಕರ್ಮಗಳ ಬಲದಿಂದಲೇ ಈ ದೇಹವನ್ನು ನೀಗಿ ಸ್ವರ್ಗಕ್ಕೆ ಹೋಗಬೇಕೆಂಬುದು ನನ್ನ ಉದ್ದೇಶವು" ಎಂದನು. ಆದಕ್ಕಾ ಮಹರ್ಷಿಗಳು "ಎಲೈ ಧರ್ಮಾತ್ಮನೇ! ನೀನು ಸಂತಾನಕ್ಕಾಗಿ ಚಿಂತಿಸಬೇಡ! ನಿನಗೆ ಸಂತಾನವಿಲ್ಲದೆ ಹೋಗಲಾರದು. ದೇವತೆಗಳಿಗೆ ಸಮಾನರೂ, ನಿರ್ದುಷ್ಟರೂ ಆದ ಪುತ್ರರನ್ನು ಪಡೆಯುವೆ. ನಾವು ದಿವ್ಯದೃಷ್ಟಿಯಿಂದ ಇದನ್ನು ತಿಳಿದಿರುವೆವು. ಎಲೈ ರಾಜನೆ! ದೈವಿಕವಾಗಿ ಬರತಕ್ಕ ಫಲವನ್ನು ನಿನ್ನ ಪುರುಷಪ್ರಯತ್ನದಿಂದ ಇಲ್ಲಿಯೇ ಸಂಪಾದಿಸು. ಬುದ್ಧಿಶಾಲಿಯಾದವನು ಎಂತಹ ಕಷ್ಟಕ್ಕೂ ಎದೆಗುಂದದೆ, ಸ್ವಬುದ್ಧಿಯನ್ನು ಉಪಯೋಗಿಸಿ ಫಲವನ್ನು ಪಡೆಯುವನು. ಆದುದರಿಂದ ನಿನಗೆ ಚಿಂತೆಯೇಕೆ? ನಿನಗೆ ಸಂತಾನಫಲವುಂಟೆಂದು ನಮಗೆ ತೋರಿದೆ. ನೀನು ಇಲ್ಲಿಯೇ ಇದ್ದು ಅದನ್ನು ಸಾಧಿಸು. ಗುಣವಿಶಿಷ್ಟವಾದ ಸಂತಾನವನ್ನು ಪಡೆಯುವನಾಗು" ಎಂದರು.

ಓ ಜನಮೇಜಯರಾಜಾ! ಆ ಮಹರ್ಷಿಗಳು ಹೇಳಿದ ಮಾತನ್ನು ಕೇಳಿ ಪಾಂಡುವಿಗೆ ಮನಸ್ಸಿನಲ್ಲಿ ಇನ್ನೂ ಪ್ರಬಲಚಿಂತೆಯುಂಟಾಯಿತು. ಮುನಿಶಾಪದಿಂದ ತನಗೆ ಸಂತಾನಕಾರ್ಯಕ್ಕೇ ಅರ್ಹತೆಯಿಲ್ಲದಿರುವಾಗ, ಇನ್ನು ತನಗೆ ಸಂತಾನವೆಂದರೇನು?" ಎಂದು ತನ್ನ ಮನಸ್ಸಿನಲ್ಲಿ ಕೊರಗುತ್ತ ಚಿಂತಿರುಗಿಬಿಟ್ಟನು.

ಇದು ನೂರಿಪ್ಪತ್ತೈದನೆಯ ಅಧ್ಯಾಯವು.



ವಿದುರನ ವಿವಾಹವು. ಮತ್ತು ಅವನಿಗೆ ಪುತ್ರೋತ್ಪತ್ತಿ. ವ್ಯಾಸಮುನಿಯ ಅನುಗ್ರಹದಿಂದ ಗಾಂಧಾರಿಯಲ್ಲಿ ಧೃತರಾಷ್ಟ್ರನಿಂದ ಗರ್ಭೋತ್ಪತ್ತಿಯಾದುದು. ಸಂತಾನವಿಲ್ಲದುದಕ್ಕಾಗಿ ಪಾಂಡುವಿನ ಚಿಂತೆ.

ಓ ಜನಮೇಜಯರಾಜಾ! ಕೇಳು! ದೇವಕನೆಂಬ ರಾಜನಿಗೆ ಅವನ ಮೋಹದ ಪತ್ನಿಯ ಗರ್ಭದಲ್ಲಿ ಹುಟ್ಟಿ, ರೂಪಯೌವನಗಳಿಂದ ಕೂಡಿದ ಕನ್ಯೆಯೊಬ್ಬಳಿರುವುದಾಗಿ ಕೇಳಿ ಭೀಷ್ಮನು, ಒಡನೆಯೇ ದೇವಕನ ಬಳಿಗೆ ಹೋಗಿ, ಅವನ ಅನುಮತಿಯಿಂದ ಆ ಕನ್ಯೆಯನ್ನು ತಂದು ವಿದುರನಿಗೆ ವಿವಾಹಮಾಡಿದನು. ಆ ವಿದುರನಿಗೆ ಅವಳಲ್ಲಿ ತನಗೆ ಸಮಾನ ಗುಣವುಳ್ಳ ಕೆಲವು ಮಂದಿ ಮಕ್ಕಳಾದರು. ಆಮೇಲೆ ಧೃತರಾಷ್ಟ್ರನಿಗೆ ಗಾಂಧಾರಿಯಲ್ಲಿ ನೂರುಮಂದಿ ಪುತ್ರರೂ, ವೈಶ್ಯಜಾತಿಯ ಬೇರೊಬ್ಬ ಸ್ತ್ರೀಯಲ್ಲಿ ಆ ನೂರ್ವರಿಂದಾಚೆಗೆ ಬೇರೊಬ್ಬ ಪುತ್ರನೂ ಹುಟ್ಟಿದರು. ಪಾಂಡುವಿಗೆ ಕುಂತಿ, ಮಾದ್ರಿ, ಇವರಿಬ್ಬರಲ್ಲಿ ಮಹಾರಥರೆನಿಸಿದ ಐದುಮಂದಿ ಪುತ್ರರು ಸಾಕ್ಷಾದ್ದೇವತೆಗಳ ಅಂಶದಿಂದಲೇ ಜನಿಸಿ, ಆ ಪಾಂಡುವಿನ ವಂಶಕ್ಕೆ ಆಧಾರಭೂತರಾದರು" ಎಂದನು.

ಆಗ ಜನಮೇಜಯನು "ಓ ಮುನೀಂದ್ರಾ! ಧೃತರಾಷ್ಟ್ರನಿಗೆ ನೂರುಮಂದಿ ಮಕ್ಕಳು ಹುಟ್ಟಿದುದು ಹೇಗೆ? ಆ ನೂರುಮಂದಿ ಮಕ್ಕಳೂ ಎಷ್ಟುಕಾಲದಲ್ಲಿ ಹುಟ್ಟಿದರು? ಆ ನೂರ್ವರ ಆಯುಃಪ್ರಮಾಣವೆಷ್ಟು? ವೈಶ್ಯಸ್ತ್ರೀಯಲ್ಲಿ ಒಬ್ಬನೇ ಮಗನು ಹುಟ್ಟಿದುದೇಕೆ? ಗಾಂಧಾರಿಯಾದರೋ ಧೃತರಾಷ್ಟ್ರನಿಗೆ ಅರ್ಧದೇಹದಂತಿದ್ದವಳು. ಮಹಾಪತಿವ್ರತೆ! ಧರ್ಮದಲ್ಲಿಯೇ ನೆಲೆಗೊಂಡವಳು. ಯಾವಾಗಲೂ ಪತಿಯ ಮನಸ್ಸಿಗೆ ಅನುಕೂಲವಾಗಿ ನಡೆಯುತಿದ್ದವಳು. ಅಂತವಳನ್ನು ಮೀರಿ ಧೃತರಾಷ್ಟ್ರನು ಬೇರೆ ವೈಶ್ಯಸ್ತ್ರೀಯಲ್ಲಿ ಪ್ರವರ್ತಿಸಿದುದು ಹೇಗೆ? ಮೃಗಶಾಪದಿಂದ ಪತ್ನೀಸಮಾಗಮವೇ ಇಲ್ಲದ ಪಾಂಡುವಿಗೆ ದೇವತೆಗಳಿಂದ ಮಹಾರಥರಾದ ಐದುಮಂದಿ ಪುತ್ರರು ಹುಟ್ಟಿದ ವೃತ್ತಾಂತವೇನು? ಈ ಕಥೆಗಳನ್ನೆಲ್ಲ ನನಗೆ ಸವಿಸ್ತರವಾಗಿ ತಿಳಿಸಬೇಕು. ನಿನ್ನಿಂದ ಎಷ್ಟೆಷ್ಟು ಕೇಳಿದರೂ ನನಗೆ ತೃಪ್ತಿ

ಯಿಲ್ಲದಂತಿದೆ'' ಎಂದನು. ಅದಕ್ಕಾ ವೈಶಂಪಾಯನನು ಓ ಜನಮೇಜಯರಾಜಾ! ಕೇಳು! ಒಮ್ಮೆ ವ್ಯಾಸಮಹರ್ಷಿಯು ಹಸಿವು ಬಾಯಾರಿಕೆಯಿಂದ ಬಳಲಿ ಧೃತರಾಷ್ಟ್ರನಮನೆಗೆ ಬಂದನು. ಆಗ ಗಾಂಧಾರಿಯು ಅವನನ್ನು ಆತಿಥ್ಯಗಳಿಂದ ಉಪಚರಿಸಿ ಸಂತೋಷಪಡಿಸಿದಳು. ಆಗ ವ್ಯಾಸನು ಅವಳಲ್ಲಿ ಪ್ರಸನ್ನನಾಗಿ, ಬೇಕಾದ ವರವನ್ನು ಕೇಳೆಂದು ಹೇಳಲು, ತನ್ನ ಪತಿಗೆ ಸಮಾನರಾದ ನೂರುಮಂದಿ ಮಕ್ಕಳು ತನ್ನಲ್ಲಿ ಹುಟ್ಟಬೇಕೆಂದು ಕೇಳಿಕೊಂಡಳು. ವ್ಯಾಸಮುನಿಯು ಹಾಗೆಯೇ ಅನುಗ್ರಹಿಸಿದನು. ಕಾಲಕ್ರಮದಿಂದ ಅವಳಲ್ಲಿ ಗರ್ಭವುಂಟಾಯಿತು. ಈ ಸಂಗತಿಯು ಪಾಂಡುವಿನ ಕಿವಿಗೆ ಬೀಳಲು, ತನ್ನ ಸಂತಾನಪ್ರಾಪ್ತಿಗೆ ದಾರಿಯಿಲ್ಲದುದಕ್ಕಾಗಿ ಅವನು ಬಹಳ ಸಂಕಟಪಟ್ಟು ಕೊರಗುತಿದ್ದನು. ಆಗ ಪಾಂಡುವು ಭೂಮಿಯಲ್ಲಿ ವಿಶ್ವಾಮಿತ್ರನಂತೆ ತಪಸ್ಸಿದ್ಧಿಯನ್ನು ಪಡೆದು, ದೇಹತ್ಯಾಗ ಮಾಡುವುದಕ್ಕೆ ಸಿದ್ಧನಾಗಿದ್ದರೂ, ಈ ಸಂತಾನದ ಚಿಂತೆಯು ಅವನನ್ನು ಬಾಧಿಸಿತು. ಆಗ ಭಾರ್ಯೆಯರನ್ನು ಕುರಿತು "ಎಲೈ ಪತ್ನಿಯರೇ! ಮನುಷ್ಯನು ಹುಟ್ಟುವಾಗಲೇ ನಾಲ್ಕು ಸಾಲಗಳನ್ನು ತಲೆಯಮೇಲೆ ಹೊತ್ತುಕೊಂಡೇ ಹುಟ್ಟುವನು. ಪಿತೃಋಣವೊಂದು, ದೇವಋಣವೊಂದು, ಋಷಿಗಳ ಋಣವೊಂದು, ಮನುಷ್ಯಋಣವೊಂದು. ತಾನು ಹುಟ್ಟಿದಮೇಲೆ ಸಾಯುವುದರೊಳಗಾಗಿ ಆ ನಾಲ್ಕು ಋಣಗಳನ್ನೂ ತೀರಿಸಬೇಕಾದುದು ಮನುಷ್ಯನಿಗೆ ಅವಶ್ಯವು. ಈ ಋಣಗಳಿಂದ ಮುಕ್ತನಾದಾಗಲೇ ಉತ್ತಮಲೋಕಗಳುಂಟೆಂದು ಲೋಕಜ್ಞರು ಹೇಳುವರು. ಯಜ್ಞಗಳಿಂದ ದೇವತೆಗಳ ಋಣವನ್ನೂ, ಅಧ್ಯಯನದಿಂದಲೂ, ತಪಸ್ಸಿನಿಂದಲೂ ಋಷಿಗಳ ಋಣವನ್ನೂ ತೀರಿಸಬಹುದು. ಈ ಎಲ್ಲಾ ಋಣಗಳಿಗಿಂತಲೂ ಪಿತೃಋಣವು ಬಹಳ ಪ್ರಬಲವಾದುದು. ನಾನು ದೇವಋಷಿ, ಮನುಷ್ಯ ಋಣಗಳೆಂಬೀ ಮೂರನ್ನೂ ತೀರಿಸಿ ಅದರಿಂದ ಮುಕ್ತನಾದೆನು. ಪಿತೃಋಣದಿಂದ ಮುಕ್ತನಾಗುವುದಕ್ಕೆ ನನಗೆ ದಾರಿಯಿಲ್ಲ. ನನ್ನ ದೇಹವು ಆ ಪಿತೃಋಣದೊಡನೆ ನಷ್ಟವಾದರೆ, ನಮ್ಮ ಪಿತೃಗಳಿಗೂ ನಾಶವುಂಟಾದ ಹಾಗೆಯೇ! ಇದು ನಿಶ್ಚಯವು. ಪಿತೃಋಣವನ್ನು ತೀರಿಸದಿದ್ದರೆ ನಮ್ಮ ಪಿತೃಗಳ ನಾಶಕ್ಕೆ ನಾವೇ ಕಾರಣಭೂತರಾಗುವೆವು. ಬೇರೆ ಮೂರು

ಋಣಗಳನ್ನು ತೀರಿಸದಿದ್ದರೆ ಅದರಿಂದ ಆತ್ಮನಾಶವು ಮಾತ್ರವೇ! ಆದುದರಿಂದ ಎಲ್ಲಾ ಋಣಕ್ಕಿಂತಲೂ ಪಿತೃಋಣವೇ ಅತ್ಯಂತಘೋರವೆನಿಸಿದೆ. ಆದುದರಿಂದಲೇ ಜನರು ಸಂತಾನಲಾಭದಿಂದ ಪಿತೃಋಣವನ್ನು ತೀರಿಸುವುದಕ್ಕಾಗಿ ಪ್ರಯತ್ನಿಸುವರು. ನನ್ನ ತಂದೆಯು ನನ್ನನ್ನು ಪಡೆದಹಾಗೆ ನಾನೂ ನನ್ನ ಕ್ಷೇತ್ರದಲ್ಲಿ ಸಂತಾನವನ್ನು ಪಡೆಯುವುದಕ್ಕೆ ಸಾಧ್ಯವಿಲ್ಲವೆ? ಈಗೇನು ಮಾಡಲಿ?'' ಎಂದನು. ಆಮೇಲೆ ಮಾದ್ರೀಕುಂತಿಯರಿಬ್ಬರನ್ನೂ ಕರೆದು, ಪುತ್ರಲಾಭವನ್ನು ಪೂರ್ತಿಗೊಳಿಸುವುದರ ಅವಶ್ಯಕತೆಯನ್ನೂ, ಎಲ್ಲಾ ಪುಣ್ಯಕರ್ಮಗಳಿಗಿಂತಲೂ ಅದೇ ಮೇಲೆಂಬುದನ್ನೂ ತಿಳಿಸುತ್ತಾ ''ಎಲೈ ಪತ್ನಿಯರೇ! ಸಂತಾನವಿಲ್ಲದ ಈ ಆಪತ್ಕಾಲದಲ್ಲಿ ಕೀಳುವಂಶದ ಸ್ತ್ರೀಯರು, ತಮಗಿಂತಲೂ ಮೇಲಾದ ವಂಶದ ಪುರುಷರಿಂದ ಪುತ್ರೋತ್ಪತ್ತಿಯನ್ನು ಪಡೆಯಬಹುದೆಂದು ಹೇಳುವರು. ಅಂತಹ ಉತ್ತಮಕುಲದಿಂದಾದ ಸಂತಾನವು ಧರ್ಮಫಲಕ್ಕೆ ಕಾರಣವೆಂದೂ ದೊಡ್ಡವರು ಹೇಳಿರುವರು'' ಎಂದು ಅನೇಕ ಮಹಾಬ್ರಾಹ್ಮಣರ ಸಮೂಹದಲ್ಲಿ ತನ್ನ ಪತ್ನಿಯರಿಬ್ಬರಿಗೂ ಸಂತಾನಪ್ರಾಪ್ತಿಯ ಅವಶ್ಯಕತೆಯನ್ನು ತಿಳಿಸಿದನು. ಆಮೇಲೆ ತನ್ನಲ್ಲಿತಾನು ಧರ್ಮಜ್ಞನೂ, ಗುಣವಂತನೂ ಆದ ಬ್ರಾಹ್ಮಣನಾವನೆಂದು ನಿಶ್ಚಯಿಸಿಕೊಂಡು, ಧರ್ಮಪತ್ನಿಯಾದ ಕುಂತಿಯನ್ನು ಏಕಾಂತದಲ್ಲಿ ಕರೆದು ''ದೇವೀ! ನೀನು ಸಂತಾನವನ್ನು ಪಡೆಯುವುದಕ್ಕೆ ಯತ್ನಿಸದೆತೀರದು. ಈಗ ನಾವು ಸಂತಾನವಿಲ್ಲದೆ ಸಾಯಬೇಕಾದ ಸ್ಥಿತಿಯಲ್ಲಿರುವೆವು. ಇಂತಹ ಆಪತ್ಕಾಲದಲ್ಲಿ ಬೇರೆ ಯಾವುದಾದರೂ ಉಪಾಯವನ್ನು ಆಲೋಚಿಸದೆ ತೀರದು. ಸಂತಾನವೇ ಧರ್ಮಕ್ಕೆ ಮೂಲಾಧಾರವೆಂದು ಚಿರಕಾಲದಿಂದ ಧರ್ಮಜ್ಞರು ನಿರ್ಣಯಿಸಿರುವರು. ಸಂತಾನವಿಲ್ಲದರಿಗೆ ಯಜ್ಞ, ದಾನ, ತಪಸ್ಸು, ದೃಢವ್ರತಗಳು, ಇವೆಷ್ಟಿದ್ದರೂ ಫಲಕಾರಿಗಳಾಗವು. ಆದರಿಂದ ಅವನ ಪಾಪಗಳೂ ನೀಗಲಾರವು. ಎಲೆ ದೇವಿ! ಇವನ್ನೆಲ್ಲ ಕೇಳಿದ ನನಗೆ ಸತ್ತಮೇಲೆ ಪುಣ್ಯಲೋಕವಿಲ್ಲವೆಂದು ಚೆನ್ನಾಗಿ ತಿಳಿದಿರುವಾಗ, ಯಾವ ವಿಧದಲ್ಲಿ ತಾನೇ ನನ್ನ ಮನಸ್ಸಿಗೆ ನೆಮ್ಮದಿಯುಂಟು? ಮಕ್ಕಳಿಲ್ಲದೆ ನನ್ನ ಪ್ರಾಣವೂ ನನ್ನ ದೇಹವನ್ನು ಬಿಟ್ಟು ಹೋಗುವುದಕ್ಕೂ ಇಷ್ಟಪಡುವುದಿಲ್ಲ. ಎಲೆ ದೇವಿ! ಹಿಂದೆ ನನಗೆ ಮೃಗ

ದಿಂದ ಬಂದ ಶಾಪವನ್ನು ನೀನೂ ಬಲ್ಲೆ. ಪಾಪಕರ್ಮಿಯಾದ ನಾನು ಅದರಿಂದ ನನ್ನ ಸಮಸ್ತ ಶ್ರೇಯಸ್ಸನ್ನೂ ಕೆಡಿಸಿಕೊಂಡೆನು. ಧರ್ಮಶಾಸ್ತ್ರದಲ್ಲಿ ಆರುಮಂದಿ ಪುತ್ರರು ದಾಯಭಾಗಕ್ಕೆ ಅರ್ಹರೆಂದೂ, ಉಳಿದ ಆರು ಮಂದಿ ಪುತ್ರರು ಅನರ್ಹರೆಂದೂ ಹೇಳಲ್ಪಟ್ಟಿದೆ. * (1) ತನ್ನ ಧರ್ಮಪತ್ನಿಯಲ್ಲಿ ಹುಟ್ಟಿದವನು ಔರಸನು. (2) ಆದೇ ಪತ್ನಿಯಲ್ಲಿ ತನ್ನ ಅನುಮತಿಯಿಂದ ಬೇರೆ ಉತ್ತಮಕುಲದ ಪುರುಷನಿಗೆ ಹುಟ್ಟಿದವನು ಕ್ಷೇತ್ರಜನು. (3) ತಂದೆತಾಯಿಗಳಿಂದ ತೊರೆಯಲ್ಪಟ್ಟು ಲಭಿಸಿದವನು ಅಪವಿದ್ಧನು. (4) ಒಬ್ಬ ಸ್ತ್ರೀಯು ಪುನರ್ವಿವಾಹಮಾಡಿಕೊಂಡಮೇಲೆ ಅವಳಲ್ಲಿ ಹೊಸಪತಿಗೆ ಹುಟ್ಟಿದವನು ಪೌನರ್ಭವನು. (5) ವಿವಾಹವಿಲ್ಲದೆ ಕನ್ಯಾವಸ್ಥೆಯಲ್ಲಿ ಹುಟ್ಟಿದವನು ಕಾನೀನನು. (6) ಇಂತವನಿಗೆಂದು ತಿಳಿಯದೆ ಪರಪುರುಷರಿಗೆ ಹುಟ್ಟಿದವನು ಗೂಢೋತ್ಪನ್ನನು. (7) ಬೇರೊಬ್ಬರಿಂದ ಸ್ವೀಕಾರಮಾಡಲ್ಪಟ್ಟವನು ದತ್ತಪುತ್ರನು. (8) ತಂದೆತಾಯಿಗಳಿಗೆ ಬೆಲೆಯನ್ನು ಕೊಟ್ಟು ಕ್ರಯಕ್ಕೆ ತೆಗೆದುಕೊಂಡವನು ವಿಕ್ರೀತನು. (9) ಪುತ್ರನಂತೆ ಬಳಸಲ್ಪಟ್ಟವನು ಕೃತ್ರಿಮನು. (10) ತಾನಾಗಿ ಬಂದು ನಿನಗೆ ಪುತ್ರನಾಗಿರುವೆನೆಂದು ಹೇಳಿದವನು ಸ್ವಯಂದತ್ತನು. (11) ಗರ್ಭಿಣಿಯಾದಮೇಲೆ ಆ ಗರ್ಭವಲೆಯಲ್ಲ ವಿವಾಹವಾದವಳಿಗೆ ಹುಟ್ಟಿದವನು ಸಹೋಢನು. (12) ಒಬ್ಬ ಪುರುಷನಿಗೆ ಅವನಿಗಿಂತಲೂ ಹೀನವಾದ ಸ್ತ್ರೀಯಲ್ಲಿ ಹುಟ್ಟಿದವನು ಪಾರಸವನು. ಹೀಗೆ ಹನ್ನೆರಡು ಬಗೆಯ ಪುತ್ರರುಂಟು. ಈ ಹನ್ನೆರಡು ಮಂದಿಯಲ್ಲಿ ಕ್ರಮವಾಗಿ ಮೊದಲು ಹೇಳಿದ ಪುತ್ರರಿಲ್ಲದಿದ್ದಾಗ, ಅವರಿಂದಾಚೆಗೆ ಹೇಳಿದ ಪುತ್ರರನ್ನು ಪಡೆಯುವುದಕ್ಕೆ ಯತ್ನಿಸಬೇಕು. ಎಂದರೆ, ಪೂರ್ವತಮಸಂತಾನವಿಲ್ಲದಿದ್ದಾಗ, ಉತ್ತರೋತ್ತರವಾದ ಸಂತಾನವನ್ನು ಪಡೆಯಬೇಕು. ಆಪತ್ಕಾಲದಲ್ಲಿ ಉತ್ತಮಜಾತಿಯ ಪುರುಷರಿಂದಲೂ, ಮತ್ತು ತನ್ನ ಪತಿಯ ಒಡಹುಟ್ಟಿದವ

---

* ಔರಸ, ಕ್ಷೇತ್ರಜ, ದತ್ತ, ಕೃತ್ರಿಮ, ಗೂಢೋತ್ಪನ್ನ, ಅಪವಿದ್ಧರೆಂಬೀ ಆರು ಮಂದಿ ದಾಯಾದ ಬಂಧುಗಳು. ಎಂದರೆ ದಾಯಕ್ಕೆ ಅರ್ಹರು ಕಾನೀನ, ಸಹೋಢ, ಕ್ರೀತ, ಪೌನರ್ಭವ, ಸ್ವಯಂದತ್ತ, ಪಾರಸವರೆಂಬೀ ಆರುಮಂದಿಯೂ ದಾಯಾದರಲ್ಲದ ಬಂಧುಗಳು.

ರಿಂದಲೂ ಎಂದರೆ ಮೈದುನನಿಂದಲೂ, ಸ್ತ್ರೀಯರು ಸಂತಾನವನ್ನು ಪಡೆಯಬಹುದು. ಕುಂತೀ ! ಮನುಷ್ಯನಿಗೆ ತಮ್ಮ ವೀರ್ಯದಿಂದ ಹುಟ್ಟಿದ ಪುತ್ರನಿಗಿಂತಲೂ, ತನಗಿಂತಲೂ ಉತ್ತಮಜಾತಿಯ ಪುರುಷನ ವೀರ್ಯದಿಂದ ಜನಿಸಿದ ಪುತ್ರನು ಅಧಿಕ ಧರ್ಮಫಲವನ್ನು ಕೊಡುವನೆಂದು ಮನುವಾಕ್ಯವುಂಟು. ಎಲೆ ಪ್ರಿಯೆ ! ಈಗ ನನ್ನಿಂದ ಬೇರೆ ನಿನ್ನಲ್ಲಿ ಸಂತಾನವುಂಟಾಗುವುದಕ್ಕೆ ಅವಕಾಶವಿಲ್ಲ. ಆದುದರಿಂದ ಈಗ ನಾನಾಗಿಯೇ ನಿನಗೆ ಅನುಮತಿಯನ್ನು ಕೊಡುವೆನು. ನಮಗೆ ಸಮಾನಕುಲದ ಜ್ಞಾತಿಗಳಿಂದಾಗಲಿ, ಉತ್ತಮಕುಲದ ಬ್ರಾಹ್ಮಣರಿಂದಾಗಲಿ ನೀನು ಸಂತಾನವನ್ನು ಪಡೆಯುವವಳಾಗು. ಕುಂತೀ ! ಇದಕ್ಕಾಗಿ ನಿನಗೆ ಪೂರ್ವಕಥೆಯೊಂದನ್ನು ತಿಳಿಸುವೆನು. ಶಾರದಂಡಾಯಿನಿಯ ಭಾರ್ಯೆಯನ್ನು ಕುರಿತು ನಾನೊಂದು ಕಥೆಯನ್ನು ಕೇಳಿರುವೆನು. ಮಹಾಪತಿವ್ರತೆಯೂ, ಯಶಸ್ವಿನಿಯೂ ಆಗಿದ್ದ ಶ್ರುತಸೇನೆಯೆಂಬವಳನ್ನು ಕೇಕಯದೇಶದ ಶಾರದಂಡಾಯಿನಿಯೆಂಬವನು ವಿವಾಹವಾದನು. ಅವಳು ತನ್ನ ಪತಿಯಿಂದ ಸಂತಾನವನ್ನು ಪಡೆಯುವುದಕ್ಕಾಗಿ ಅನುಮತಿಕೊಡಲ್ಪಟ್ಟು, ಒಮ್ಮೆ ಋತುಸ್ನಾನಮಾಡಿದ ದಿನದಲ್ಲಿ, ಬಹಳ ನಿಯಮದಿಂದಿದ್ದು, ಆ ರಾತ್ರಿಯಲ್ಲಿ ನಾಲ್ಕು ಬೀದಿಗಳು ಕೂಡುವ ಚೌಕದಲ್ಲಿ ತಪಸ್ಸಿದ್ಧನಾದ ಒಬ್ಬ ಬ್ರಾಹ್ಮಣನ ಬಳಿಗೆ ಬಂದು, ಅವನನ್ನು ತನಗೆ ಸಂತಾನೋತ್ಪತ್ತಿಗಾಗಿ ವರಿಸಿ, ಪುಂಸವನ ಕ್ರಿಯೆಯನ್ನು ಅಗ್ನಿಹೋತ್ರಮೂಲಕವಾಗಿ ಮಾಡಿಸಿ, ಆ ಕ್ರಿಯೆಯು ಮುಗಿದಮೇಲೆ ಆ ಬ್ರಾಹ್ಮಣನೊಡನೆ ಕಲೆತಿದ್ದಳು. ಆ ಬ್ರಾಹ್ಮಣನ ವೀರ್ಯದಿಂದ ಅವಳ ಗರ್ಭದಲ್ಲಿ ದುರ್ಜಯನೇ ಮೊದಲಾದ ಮೂವರು ಮಹಾರಥರು ಹುಟ್ಟಿದರು. ನೀನೂ ಅವರಂತೆಯೇ ಉತ್ತಮ ತಪಸ್ವಿಯಾದ ಬ್ರಾಹ್ಮಣನಿಂದ ಸಂತಾನಕ್ಕೆ ಪ್ರಯತ್ನಿಸು. ಈ ವಿಷಯದಲ್ಲಿ ನಿನಗೆ ಪತಿಯಾದ ನಾನೇ ಅನುಮತಿಯನ್ನು ಕೊಟ್ಟಿರುವುದರಿಂದ ದೋಷವಿಲ್ಲ. ನೀನು ಶಂಕಿಸಬಾರದು ” ಎಂದನು.

ಇದು ನೂರಿಪ್ಪತ್ತಾರನೆಯ ಅಧ್ಯಾಯವು.



ಕುಂತಿಯು ಪಾಂಡುವಿಗೆ ವ್ಯುಷಿತಾಶ್ವನ ಕಥೆಯನ್ನು ಹೇಳಿದುದು.

ಓ ಜನಮೇಜಯಾ! ಕೇಳು. ಪತಿಯಾದ ಪಾಂಡುವು ಈ ಮಾತನ್ನು ಹೇಳಿದಮೇಲೆ ಕುಂತಿಯು ಅವನನ್ನು ಕುರಿತು "ಕಾಂತಾ! ಧರ್ಮಜ್ಞನಾದ ನೀನು ನನಗೆ ಈ ಮಾತನ್ನು ಹೇಳುವುದು ಹೇಗೂ ಉಚಿತವಾಗಿ ತೋರಲಿಲ್ಲ. ನಾನು ನಿನ್ನ ಧರ್ಮಪತ್ನಿ! ಯಾವಾಗಲೂ ನಿನ್ನಲ್ಲಿಯೇ ಮನಸ್ಸಿಟ್ಟವಳು. ಓ ಮಹಾಬಾಹೂ! ನಿನ್ನ ವೀರ್ಯದಿಂದಲೇ ನನ್ನಲ್ಲಿ ಸಂತಾನವುಂಟಾಗಬೇಕಲ್ಲದೆ, ನನಗೆ ಬೇರೆಯವರ ಸಂಪರ್ಕವು ಎಂದಾದರೂ ಉಚಿತವೇ? ಈಗಲೂ ನಿನ್ನಿಂದಲೇ ನಾನು ಪುತ್ರರನ್ನು ಪಡೆಯುವೆನು. ಅದರಲ್ಲಿ ಸಂದೇಹವಿಲ್ಲ. ಪ್ರಿಯಾ! ನಿನ್ನೊಡನೆ ನಾನೂ ಈಗಲೇ ಸ್ವರ್ಗಕ್ಕೆ ಬರುವೆನು. ಅಲ್ಲಿಯೇ ನೀನು ನನ್ನಲ್ಲಿ ಪುತ್ರಸಂತಾನವನ್ನುಂಟು ಮಾಡು. ನಿನ್ನನ್ನು ಬಿಟ್ಟು ಬೇರೆ ಮನುಷ್ಯರನ್ನು ನಾನು ಮನಸ್ಸಿನಲ್ಲಿ ಯಾದರೂ ನೆನೆಸುವುದಿಲ್ಲ. ನಿನಗಿಂತಲೂ ಉತ್ತಮನಾದ ಪುರುಷನು ಬೇರೊಬ್ಬನು ಇರುವಂತೆಯೂ ನನಗೆ ತೋರಲಿಲ್ಲ. ಕಾಂತಾ! ಇದೇ ವಿಷಯವಾಗಿ ನಾನು ಹಿಂದೆ ಕೇಳಿದ್ದ ಒಂದು ಪೂರ್ವಕಥೆಯನ್ನು ಹೇಳುವೆನು ಕೇಳು. ಪೂರ್ವದಲ್ಲಿ ಮಹಾಧರ್ಮಿಷ್ಠನೂ, ಪೂರುವಂಶವರ್ಧಕನೂ ಆದ ವ್ಯುಷಿತಾಶ್ವನೆಂಬ ರಾಜನೊಬ್ಬನಿದ್ದನು. ಅವನು ಧರ್ಮಾತ್ಮನು. ಒಮ್ಮೆ ಅವನು ಯಾಗವನ್ನು ನಡೆಸುತಿದ್ದಾಗ, ಅವನ ಯಾಗಕ್ಕೆ ಇಂದ್ರಾದಿ ದೇವತೆಗಳೂ, ದೇವರ್ಷಿಗಳೂ ಪ್ರತ್ಯಕ್ಷವಾಗಿ ಬರುತಿದ್ದರು. ಅವನು ಸೋಮಪಾನದಿಂದ ಇಂದ್ರನನ್ನೂ, ದಕ್ಷಿಣೆಗಳಿಂದ ಬ್ರಾಹ್ಮಣರನ್ನೂ ಸಂತೋಷಗೊಳಿಸುತಿದ್ದನು. ಆ ರಾಜರ್ಷಿಯ ಯಾಗದಲ್ಲಿ ದೇವತೆಗಳೂ, ಬ್ರಹ್ಮರ್ಷಿಗಳೂ ನಿಂತು ಆಯಾ ಕೆಲಸಗಳನ್ನು ಮಾಡುತಿದ್ದರು. ಇದರಿಂದ ವ್ಯುಷಿತಾಶ್ವನು ಮನುಷ್ಯರಿಗಿಂತಲೂ ಮೇಲೆನಿಸಿ, ಸಾಕ್ಷಾತ್ ದೇವಸಮಾನನಾಗಿ ಪ್ರಕಾಶಿಸುತ್ತಿದ್ದನು. ವಸಂತಕಾಲದ ಸೂರ್ಯನಂತೆ ಆದ್ಭುತತೇಜಸ್ಸಿನಿಂದ ಬೆಳಗುತಿದ್ದನು. ಆ ರಾಜಶ್ರೇಷ್ಠನು ಒಮ್ಮೆ ಅಶ್ವಮೇಧವನ್ನು ನಡೆಸುವಾಗ, ಪೂರ್ವ, ದಕ್ಷಿಣ, ಪಶ್ಚಿಮೋತ್ತರ ರಾಜರನ್ನೆಲ್ಲ

ಜಯಿಸಿದನು. ಅವನು ಹತ್ತು ಆನೆಗಳ ಬಲವುಳ್ಳವನು. ಕೀರ್ತಿವರ್ಧನನಾದ ಆತನ ವಿಷಯವಾಗಿ ಪುರಾಣಜ್ಞರು ಹೇಳಿದ ಗಾಥೆಯುಂಟು. "ಈ ವ್ಯುಷಿತಾಶ್ವನು ಸಮುದ್ರವೇ ಮೇರೆಯಾಗಿ ಉಳ್ಳ ಸಮಸ್ತಭೂಮಂಡಲವನ್ನೂ ಜಯಿಸಿ, ಹೆತ್ತ ಮಕ್ಕಳನ್ನು ತಂದೆಯು ಹೇಗೋ ಹಾಗೆ ಸಕಲವರ್ಣದವರನ್ನೂ ಪ್ರೀತಿಯಿಂದ ಕಾಪಾಡಿದನು" ಎಂಬುದೇ ಆ ಗಾಥಾರ್ಥವು. ಅವನು ದಿಗ್ವಿಜಯದಿಂದ ಅಪಾರ ರತ್ನಗಳನ್ನು ಸಂಪಾದಿಸಿ ತಂದು, ಮಹಾಯಜ್ಞಗಳನ್ನು ಮಾಡಿ, ಬ್ರಾಹ್ಮಣರಿಗಾಗಿ ವಿಶೇಷ ಧನಗಳನ್ನು ಹಂಚಿಕೊಡುತಿದ್ದನು. ಇಂತಹ ಯಜ್ಞಗಳಿಂದ ಎಷ್ಟೋ ಸಾರಿ ಸೋಮರಸವನ್ನು ಪಾನಮಾಡಿದ್ದನು. ಅವನ ಕಾಲದಲ್ಲಿ ಸೋಮಲತೆಯನ್ನು ಬೆಳೆಸುವ ಸ್ಥಾನವೇ ಬಹಳವಾಗಿ ವೃದ್ಧಿಹೊಂದಿದ್ದಿತು. ಅವನಿಗೆ ಅತ್ಯಂತ ಪ್ರೀತಿಪಾತ್ರಳೂ, ಎಣೆಯಿಲ್ಲದ ಸೌಂದರ್ಯವತಿಯೂ ಆದ ಭದ್ರೆಯೆಂಬ ಪತ್ನಿಯಿದ್ದಳು ಅವಳು ಕಕ್ಷೀವಂತನೆಂಬ ರಾಜನ ಮಗಳು. ಅವರಿಬ್ಬರೂ ಅನ್ಯೋನ್ಯಾನುರಾಗದಿಂದ ಯಾವಾಗಲೂ ಕಾಮಸುಖದಲ್ಲಿ ಮುಳುಗಿದ್ದರೆಂದು ಕೇಳುವೆನು. ಹೀಗೆ ಕಾಮದಲ್ಲಿ ಮಿತಿಮೀರಿ ಹೋದ ಆ ರಾಜನು, ಕ್ಷಯರೋಗಪೀಡಿತನಾಗಿ, ಅದರಿಂದ ಶೀಘ್ರಕಾಲದಲ್ಲಿಯೇ ಸೂರ್ಯನು ಅಸ್ತಮಿತನಾಗುವಂತೆ ಮೃತಿಹೊಂದಿದನು. ಆತನ ಪತ್ನಿಯು ಪತಿಮರಣಕ್ಕಾಗಿ ಬಹಳವಾಗಿ ದುಃಖಿಸಿ ಕೊರಗುತಿದ್ದಳು. ಅಲ್ಲದೆ, ಅವಳಿಗೆ ಸಂತಾನವಿಲ್ಲದ ದುಃಖವೂ ಸೇರಿ, ಅದಕ್ಕಾಗಿ ಎಡೆಬಿಡದೆ ಸಂಕಟಪಟ್ಟು ಗೋಳಿಡುತಿದ್ದಳೆಂದೂ ನಾನು ಕೇಳಿರುವೆನು. ಈ ವ್ಯಸನದಿಂದ ಅವಳು ತನ್ನ ಪತಿಯ ಮರಣಕಾಲದಲ್ಲಿ ಆತನನ್ನು ಕುರಿತು "ಎಲೈ ಧರ್ಮಜ್ಞಾ! ಪತಿಯನ್ನು ಕಳೆದುಕೊಂಡಮೇಲೆ ಬದುಕಿರುವ ಹೆಂಗಸು ಮೃತಪ್ರಾಯಳೇ ಹೊರತು ಅವಳನ್ನು ಬದುಕಿದವರ ಲೆಕ್ಕದಲ್ಲಿಯೇ ಎಣಿಸಬಾರದು. ಪತಿಯನ್ನು ಕಳೆದುಕೊಂಡ ಸ್ತ್ರೀಗೆ ಮರಣವೇ ಮೇಲು. ನಾಥಾ! ನಾನೂ ನಿನ್ನ ಗತಿಯನ್ನೇ ಕೋರುವೆನು. ನನ್ನಲ್ಲಿ ಕೃಪೆಯಿಟ್ಟು ನಿನ್ನೊಡನೆ ನನ್ನನ್ನೂ ಕರೆದುಕೊಂಡು ಹೋಗು. ನಿನ್ನನ್ನಗಲಿ ನಾನು ಕ್ಷಣಮಾತ್ರವಾದರೂ ಬದುಕಿರಲಾರೆನು. ಸಮಮಾರ್ಗವಾಗಿರಲಿ, ಇಲ್ಲವೇ ವಿಷಮ ಮಾರ್ಗವಾಗಿರಲಿ, ನಾನೂ ಅಲ್ಲಿಗೆ ನಿನ್ನನ್ನೇ ಹಿಂಬಾ

ಲಿಸಿ ಬರುವೆನು. ನಿನ್ನ ವಶವರ್ತಿನಿಯಾಗಿ, ನಿನ್ನ ಹಿತದಲ್ಲಿಯೇ ಆಸಕ್ತ ಳಾಗಿ, ಛಾಯೆಯಂತೆ ನಿನ್ನನ್ನೇ ಹಿಂಬಾಲಿಸುವೆನು. ಓ ರಾಜೇಂದ್ರಾ! ನಿನ್ನನ್ನಗಲಿದಾಕ್ಷಣದಿಂದ, ನನ್ನ ಹೃದಯವನ್ನು ಶೋಷಿಸತಕ್ಕ ಸಂಕಟ ಗಳು ನನ್ನನ್ನು ಬಾಧಿಸುತ್ತಲೇ ಇರುವುವು. ಮಂದಭಾಗಿನಿಯಾದ ನಾನು ಪೂರ್ವಜನ್ಮದಲ್ಲಿ ಯಾವ ದಂಪತಿಗಳನ್ನು ಅಗಲಿಸಿದೆನೋ? ಆ ಪಾಪಕ್ಕೆ ಫಲವಾಗಿಯೇ ಈಗ ನಾನು ನಿನ್ನನ್ನು ಅಗಲುವಂತಾಗಿದೆ. ಪತಿಯು ಹೋದಮೇಲೆ ಭೂಮಿಯಲ್ಲಿ ಕ್ಷಣಮಾತ್ರ ಜೀವಿಸತಕ್ಕ ಹೆಂಗಸಾದರೂ, ಅವಳು ಕೇವಲ ನರಕವಾಸದಲ್ಲಿದ್ದಂತೆಯೇ ಹೊರತು ಬೇರೆಯಲ್ಲ.

ನಾನು ಪೂರ್ವಜನ್ಮದಲ್ಲಿ ಅನುರಕ್ತರಾಗಿ ಒಂದಾಗಿದ್ದ ದಂಪತಿಗ ಳನ್ನು ಅಗಲಿಸಿದುದರಿಂದಲೇ ಆ ಪಾಪಕ್ಕೆ ಫಲವಾಗಿ ಈಗ ನನಗೆ ನಿನ್ನ ವಿಯೋಗವೆಂಬ ಈ ಕಷ್ಟವು ಪ್ರಾಪ್ತವಾಗಿದೆ. ಇನ್ನುಮೇಲೆ ನಾನು ಈ ದೇಹಸುಖವನ್ನು ಅಪೇಕ್ಷಿಸುವವಳಲ್ಲ. ಇನ್ನುಮೇಲೆ ನಾನು ದರ್ಭ ಶಯನದಲ್ಲಿಯೇ ಮಲಗುವೆನು ನನ್ನ ಸುಖವನ್ನೆಲ್ಲ ತೊರೆಯುವೆನು. ನಿನ್ನ ದರ್ಶನವೊಂದರಲ್ಲಿಯೇ ಆತುರವುಳ್ಳವಳಾಗಿರುವೆನು. ಓ ಪುರುಷ ಶ್ರೇಷ್ಠಾ! ನಿನ್ನ ರೂಪವನ್ನು ನನಗೆ ತೋರಿಸು! ದುಃಖಭಾಗಿನಿಯಾದ ನನ್ನನ್ನು ರಕ್ಷಿಸು. ನಿನ್ನೊಡನೆ ಬರುವಂತೆ ಆಜ್ಞಾಪಿಸು!" ಎಂದಳು. ಹೀಗೆ ಭದ್ರೆಯೆಂಬವಳು ಬಾರಿಬಾರಿಗೂ ತನ್ನ ಪತಿಯ ಮೃತದೇಹವನ್ನ ಪ್ಪಿಕೊಂಡು ಮಹಾವ್ಯಸನದಿಂದ ಗೋಳಿಡುತಿದ್ದಳು. ಹೀಗೆ ಅವಳು ವಿಲ ಪಿಸುತ್ತಿರುವಾಗ, ಆ ಶವದೊಳಗಿನಿಂದಲೇ ಕೆಲವು ಮಾತುಗಳು ಕೇಳಿ ಬಂದುವು. "ಎಲೆ ಭದ್ರೇ! ಇಲ್ಲಿ ನೀನು ವಿಲಪಿಸಬೇಡ! ಮೇಲಕ್ಕೆದ್ದು ಹೋಗು. ನಿನಗೊಂದು ವರವನ್ನು ಕೊಡುವೆನು. ನಾನೇ ನಿನ್ನಲ್ಲಿ ಪುತ್ರ ನನ್ನು ಉಂಟುಮಾಡುವೆನು. ಓ ಕಾಂತಾಮಣೀ! ಋತುಸ್ನಾನವಾದ ಮೇಲೆ ನಿನ್ನ ಶಯ್ಯೆಯಲ್ಲಿ ಹದಿನಾಲ್ಕನೆಯ ದಿನದಲ್ಲಿಯೋ, ಅಥವಾ ಎಂಟ ನೆಯ ದಿನದಲ್ಲಿಯೋ ನನ್ನನ್ನು ಸಂಧಿಸುವವಳಾಗು! ಆಗ ನಿನಗೆ ಪುತ್ರೋ ತ್ಪತ್ತಿಯಾಗುವುದು" ಎಂಬೀ ವಾಕ್ಯಗಳು ಕೇಳಿಬಂದುವು. ಈ ಮಾತ ನ್ನು ಕೇಳಿದೊಡನೆ ಆಕೆಯು ಅದರಂತೆಯೇ ನಡೆಸಲು, ಮೃತನಾದ ಪತಿ

ಯಿಂದಲೇ ಅವಳಿಗೆ ಏಳುಮಂದಿ ಮಕ್ಕಳಾದರು. ಸಾಲ್ವದೇಶಾಧಿಪತಿಗಳಾದ ಮೂವರೂ, ಮದ್ರದೇಶಾಧಿಪತಿಗಳಾದ ನಾಲ್ವರೂ ಅವಳ ಮಕ್ಕಳೇ! ಓ ಭರತಶ್ರೇಷ್ಠಾ! ತಪೋಬಲಸಂಪನ್ನನಾದ ನೀನು ಕೂಡ, ಆ ವ್ಯುಷಿತಾಶ್ವನಂತೆ ನಿನ್ನ ಸಂಕಲ್ಪದಿಂದಲೇ ನನ್ನಲ್ಲಿ ಪುತ್ರರನ್ನುಂಟುಮಾಡಲು ಸಮರ್ಥನಾಗಿರುವೆ'' ಎಂದಳು.

ಇದು ನೂರಿಪ್ಪತ್ತೇಳನೆಯ ಅಧ್ಯಾಯವು.



ಉದ್ದಾಲಕನ ಕಥೆ. ಉದ್ದಾಲಕನ ಮಗನಾದ ಶ್ವೇತಕೇತುವು ಸ್ತ್ರೀಪುರುಷರಿಗೆ ಅವರವರ ನಡತೆಯಲ್ಲಿ ಕಟ್ಟುಪಾಡನ್ನು ನಿರ್ಣಯಿಸಿದುದು. ಗುಣವಂತನಾದ ಬ್ರಾಹ್ಮಣೋತ್ತಮನಿಂದ ಪುತ್ರನನ್ನು ಪಡೆಯುವಂತೆ ಪಾಂಡುವು ಕುಂತಿಗೆ ಹೇಳಲು, ಕುಂತಿಯು ದೂರ್ವಾಸನಿಂದ ತನಗೆ ಲಭಿಸಿದ ಮಂತ್ರಗಳನ್ನು ತಿಳಿಸಿದುದು.

ಓ ಜನಮೇಜಯರಾಜಾ! ಕೇಳು. ಕುಂತಿಯು ಹೇಳಿದ ಮಾತನ್ನು ಕೇಳಿದಮೇಲೆ ಧರ್ಮಜ್ಞನಾದ ಪಾಂಡುವು ತಿರುಗಿ ಅವಳನ್ನು ಕುರಿತು "ಎಲೆ ಪ್ರಿಯೆ! ನೀನು ಹೇಳಿದುದು ವಾಸ್ತವವೇ! ವ್ಯುಷಿತಾಶ್ವನು ನೀನು ಹೇಳಿದಂತೆ ನಡೆಸಿದುದೂ ನಿಜವೇ! ಅವನು ಸಾಕ್ಷಾತ್ ದೇವತೆಗಳಿಗೆ ಸಮಾನನಾಗಿದ್ದನು ಆದರೆ, ಈಗ ನಾನು ಮಹಾತ್ಮರೂ, ಧರ್ಮಜ್ಞರೂ ಆದ ಮಹರ್ಷಿಗಳು ನಿಶ್ಚಯಿಸಿ ಹೇಳಿರುವ ಪುರಾತನಧರ್ಮರಹಸ್ಯವೊಂದನ್ನು ನಿನಗೆ ತಿಳಿಸುವೆನು ಕೇಳು. ಬಹಳ ಪೂರ್ವಕಾಲದಲ್ಲಿ ಈಗಿನಂತೆ ಹೆಂಗಸರಿಗೆ ಯಾವ ಕಟ್ಟುಪಾಡೂ ಇರಲಿಲ್ಲ. ಅವರು ತಮಗೆ ಇಷ್ಟಬಂದ ಪುರುಷರೊಡನೆ ತಮ್ಮ ಇಷ್ಟಬಂದಂತೆ ರಮಿಸುವ ಸ್ವಾತಂತ್ರ್ಯವಿದ್ದಿತು. ಅದು ಪೂರ್ವಕಾಲದ ಧರ್ಮವಾಗಿದ್ದುದರಿಂದ, ಆ ಸ್ತ್ರೀಯರು ತಮ್ಮ ಯೌವನದಲ್ಲಿ ಗಂಡಂದಿರನ್ನು ಲಕ್ಷ್ಯಮಾಡದೆ, ಪರಪುರುಷರಲ್ಲಿ ವ್ಯಭಿಚರಿಸಿದರೂ ಅವರು ಪಾಪಕ್ಕೆ ಗುರಿಯಾಗುತ್ತಿರಲಿಲ್ಲ. ಆ ಪುರಾತನ

ಧರ್ಮವೇ ಈಗಲೂ ಮನುಷ್ಯೇತರಗಳಾದ ತಿರ್ಯಗ್ಜಂತುಗಳಲ್ಲಿ ನಡೆದು ಬರುತ್ತಿವೆ. ಆದರೆ, ಕಾಮಕ್ರೋಧಗಳನ್ನು ಮುಂದಿಟ್ಟುಕೊಂಡು ಅವು ಆ ಕಾರ್ಯಗಳನ್ನು ಮಾಡತಕ್ಕವುಗಳಲ್ಲ. ಎಲೆ ಭಾಮಿನಿ! ಇದು ಪ್ರತ್ಯಕ್ಷವಾಗಿ ಕಣ್ಣಾರೆ ಕಂಡ ಧರ್ಮವು. ಋಷಿಗಳಿಂದಲೂ ಅಂಗೀಕರಿಸಲ್ಪಟ್ಟಿದೆ. ಉತ್ತರ ಕುರುದೇಶಗಳಲ್ಲಿ ಈಗಲೂ ಆ ಧರ್ಮವನ್ನೇ ಕೊಂಡಾಡುತ್ತಿರುವರು. ಈ ಸನಾತನಧರ್ಮದಿಂದ ಸ್ತ್ರೀಯರಿಗೆ ಸಂತಾನಾದಿ ವಿಷಯಗಳಲ್ಲಿಯೂ ಅನುಕೂಲ್ಯವಿತ್ತು. ಅಲ್ಲದೆ ಅವರಿಗೆ ಯಥೇಚ್ಛವಾಗಿ ಕಾಮವನ್ನು ತೃಪ್ತಿಗೊಳಿಸುವುದಕ್ಕೂ ಸೌಕರ್ಯವಿದ್ದಿತು. ಆದರೇನು? ಸೌದೆಗಳಿಂದ ಅಗ್ನಿಗೆ ಎಂದಿಗೂ ತೃಪ್ತಿಯಿಲ್ಲ. ನದಿಗಳಿಂದ ಸಮುದ್ರಕ್ಕೆ ತೃಪ್ತಿಯಿಲ್ಲ. ಪ್ರಾಣಿಗಳ ಕೊಲೆಯಿಂದ ಯಮನಿಗೆ ತೃಪ್ತಿಯಿಲ್ಲ. ಎಷ್ಟು ಮಂದಿ ಪುರುಷರಿದ್ದರೂ ಸ್ತ್ರೀಯರ ಕಾಮಕ್ಕೆ ತೃಪ್ತಿಯಿಲ್ಲ. ಹೀಗೆ ಸ್ತ್ರೀಯರ ಕಾಮತೃಷ್ಣೆಯೆಂಬುದು ಮೇಲೆಮೇಲೆ ವರ್ಧಿಸುತ್ತಲೇ ಇರುವುದು. ಎಲೆ ಶುಚಿಸ್ಮಿತೆ! ಸ್ತ್ರೀಯರಿಗೆ ಪುರುಷರಲ್ಲಿ ತಾವು 'ಇಂತವರನ್ನು ಸೇರಬಹುದು ಇಂತವರನ್ನು ಸೇರಬಾರದು' ಎಂಬ ನಿಯಮವೂ ಇಲ್ಲ. ಕೆಲವು ಸ್ತ್ರೀಯರಿಗೆ ಮಗನಾಗಿರಲಿ, ಮಮ್ಮಗನಾಗಿರಲಿ, ಒಡಹುಟ್ಟಿದ ಸಹೋದರನಾಗಿರಲಿ, ಅಂತವರನ್ನು ಏಕಾಂತಸ್ಥಳದಲ್ಲಿ ನೋಡಿದಾಗ, ಅವರಿಗೆ ಮನಸ್ಸಿನಲ್ಲಿ ಕಾಮರಸವು ಸ್ರವಿಸುವುದುಂಟು. ಇದು ಹೆಂಗಸರಿಗೆ ಸ್ವಾಭಾವಿಕವು. ಇದು ಒಂದು ಕಾರಣದಿಂದ ಬರತಕ್ಕುದಲ್ಲ. ಈ ಲೋಕದಲ್ಲಿ ಸ್ತ್ರೀಯರಿಗೆ ಈಗಿರುವ ಪಾತಿವ್ರತ್ಯದ ವ್ಯವಸ್ಥೆಯು, ಈಚೆಗೆ ಕೆಲವು ದಿವಸಗಳಿಂದಲೇ ಏರ್ಪಟ್ಟಿತು. ಈ ವ್ಯವಸ್ಥೆಯನ್ನು ಯಾರು, ಯಾವ ಕಾರಣಕ್ಕಾಗಿ ಮಾಡಿದರೆಂಬುದನ್ನೂ ಈಗ ನಿನಗೆ ತಿಳಿಸುವೆನು ಕೇಳು!

ಪೂರ್ವದಲ್ಲಿ ಉದ್ದಾಲಕನೆಂಬ ಮಹರ್ಷಿಯೊಬ್ಬನು ಇದ್ದುದಾಗಿ ಕೇಳುವೆವು. ಆ ಉದ್ದಾಲಕನಿಗೆ ಶ್ವೇತಕೇತುವೆಂಬ ಮಗನಿದ್ದನು. ಆ ಶ್ವೇತಕೇತುವೇ ಸ್ತ್ರೀಯರಿಗೆ ಧರ್ಮಯುಕ್ತವಾದ ಈ ಮರ್ಯಾದೆಯನ್ನು ನೆಲೆಗೊಳಿಸಿದವನು. ಅವನು ತನ್ನ ಪತ್ನಿಯ ಮೇಲಿನ ಕೋಪದಿಂದ ಸ್ತ್ರೀಯರೆಲ್ಲರಿಗೂ ಈ ನಿರ್ಬಂಧವನ್ನು ಕಲ್ಪಿಸಿಟ್ಟನು. ಅವನ ಕೋಪ

ಕಾರಣಗಳೇನೆಂಬುದನ್ನು ತಿಳಿಸುವೆನು ಕೇಳು ಶ್ವೇತಕೇತುವಿನ ತಂದೆಯಾದ ಉದ್ದಾಲಕನು ಅತಿಕಠಿನವಾದ ಒಂದು ತಪಸ್ಸನ್ನು ಹಿಡಿದಿದ್ದನು. ಅವನು ತನ್ನ ತಪಸ್ಸಿಗಾಗಿ ಬಿಸಿಲುಗಾಲದಲ್ಲಿ ಪಂಚಾಗ್ನಿಮಧ್ಯದಲ್ಲಿ ಕುಳಿತಿರುವನು. ಮಳೆಬೀಳುತ್ತಿರುವಾಗ ಬೈದಾನಗಳಲ್ಲಿ ಕುಳ್ಳಿರುವನು. ಚಳಿಗಾಲದಲ್ಲಿ ನೀರಿನಲ್ಲಿ ಕುಳಿತಿರುವನು. ಹೀಗೆ ಪತ್ನೀಸಮೇತನಾಗಿ ಉಗ್ರತಪಸ್ಸನ್ನು ಮಾಡುತಿದ್ದನು. ಆತನಿಗೆ ಅವನ ಮಗನಾದ ಶ್ವೇತಕೇತುವು ಸಮೀಪದಲ್ಲಿಯೇ ಇದ್ದು, ಶುಶ್ರೂಷೆಮಾಡುತಿದ್ದನು. ಹೀಗಿರುವಲ್ಲಿ ತಲೆಕೂದಲು ನೆರೆತು, ಮೈಯೆಲ್ಲಾ ಸುಕ್ಕುಬಿದ್ದ ಬ್ರಾಹ್ಮಣೋತ್ತಮನೊಬ್ಬನು ಆ ತಂದೆಮಕ್ಕಳಿದ್ದಲ್ಲಿಗೆ ಬಂದನು. ಆ ಬ್ರಾಹ್ಮಣನನ್ನು ಕಂಡೊಡನೆ ಆ ಮುನಿಯು ಸಂತೋಷದಿಂದ ಸುಖಾಗಮನವನ್ನು ಕೇಳಿ, ವಿಧ್ಯುಕ್ತವಾಗಿ ಅರ್ಘ್ಯಪಾದ್ಯಗಳಿಂದಲೂ, ಪ್ರಿಯವಾಕ್ಯಗಳಿಂದಲೂ, ಗಡ್ಡೆ ಗೆಣಸು ಮುಂತಾದ ಉಪಹಾರಗಳಿಂದಲೂ ಅವನನ್ನು ಉಪಚರಿಸಿದನು. ಆಗ ಆ ಬ್ರಾಹ್ಮಣನು ಆ ಸತ್ಕಾರಗಳನ್ನು ಹೊಂದಿ ವಿಶ್ರಾಂತಿಯನ್ನು ತೆಗೆದುಕೊಂಡಮೇಲೆ, ಉದ್ದಾಲಕಮುನಿಯ ಬಳಿಗೆ ಬಂದು ಹೀಗೆಂದು ಪ್ರಶ್ನೆಮಾಡುವನು. "ಓ ಮಹರ್ಷೀ! ಈಗ ನೀನು ನನ್ನಲ್ಲಿ ಸುಳ್ಳಾಡದೆ ನಿಜವನ್ನು ತಿಳಿಸಬೇಕು. ಈ ಋಷಿಕುಮಾರನು ಅತ್ಯಂತ ಸುಂದರನಾಗಿರುವನು. ಇವನು ನಿನ್ನ ಮಗನೆಂದು ತೋರುವುದು. ಇಂತಹ ಮಗನನ್ನು ಪಡೆದ ನೀನಲ್ಲವೇ ಧನ್ಯನು! ಇವನು ನಿನ್ನ ಮಗನಷ್ಟೆ?" ಎಂದನು. ಅದಕ್ಕಾ ಉದ್ದಾಲಕನು "ಓ ಮಹಾಪ್ರಾಜ್ಞಾ! ನನ್ನ ಹೆಂಡತಿಯು ಕುಶಿಕನ ಮಗಳು. ಯಾವಾಗಲೂ ಅವಳು ನನ್ನ ಅನುವರ್ತಿಸಿ ನಡೆಯತಕ್ಕವಳು. ಸ್ತ್ರೀಯರಲ್ಲಿ ಅರುಂಧತಿಯು ಹೇಗೋ ಹಾಗೆ ತಪಸ್ಸಿನಿಂದ ತನ್ನ ದೇಹವನ್ನೆಲ್ಲ ಕಂದಿಸಿರುವಳು. ಮಹಾತಪಸ್ವಿಯಾದ ನನ್ನ ಪುತ್ರನು ಅವಳಲ್ಲಿ ಹುಟ್ಟಿದವನೇ. ಇವನಿಗೆ ಶ್ವೇತಕೇತುವೆಂದು ಹೆಸರು. ಈ ಪುತ್ರನು ವೇದವೇದಾಂಗಗಳನ್ನೆಲ್ಲ ಬಲ್ಲವನು. ನನ್ನ ಅನುಜ್ಞೆಯನ್ನು ಶಿರಸಾವಹಿಸಿ ನಡೆಯತಕ್ಕವನು. ಲೋಕವ್ಯವಹಾರಗಳನ್ನೆಲ್ಲ ತಿಳಿದವನು. ಎಲ್ಲಾ ಲೋಕಗಳಲ್ಲಿಯೂ ಪ್ರಸಿದ್ಧನು. ಸತ್ಯವಾಕ್ಕುಳ್ಳವನು. ದಯಾಶೀಲನು" ಎಂದನು. ಅದಕ್ಕಾ ಬ್ರಾಹ್ಮಣನು

" ಓ ಮಹರ್ಷೀ! ನನಗಾದರೋ ಪುತ್ರರಿಲ್ಲ. ಭಾರ್ಯೆಯೂ ಇಲ್ಲ. ನನಗೆ ಸಂತಾನಕ್ಕಾಗಿ ಭಾರ್ಯೆಯು ಬೇಕಾಗಿರುವಳು. ನಾನೋ ವಯಸ್ಸಿನಲ್ಲಿ ಮುದುಕನು. ನನಗೆ ಮುಪ್ಪಿನಿಂದ ದೃಷ್ಟಿಪಾಟವವೂ ತಪ್ಪಿಹೋಯಿತು. ನನಗೆ ಪಿತೃಋಣವು ತೀರುವ ಮಾರ್ಗವಿಲ್ಲ. ನಾನು ಮೊದಲೇ ವಿವಾಹಮಾಡಿಕೊಳ್ಳದೆ ಹೋದುದು ತಪ್ಪಾಯಿತು. ಸಂತತಿಗೆ ಅರಣಿಯಂತೆ ಪರಿಶುದ್ಧಳೂ, ಒಳ್ಳೇ ಗುಣಶೀಲವತಿಯೂ, ಕುಲೀನಳೂ ಆದ ನಿನ್ನ ಭಾರ್ಯೆಯು ಗೋತ್ರದಲ್ಲಿ ನನಗೆ ತಕ್ಕವಳಾಗಿರುವಳು. ಅವಳನ್ನು ನಾನು ಸಂತಾನಾರ್ಥವಾಗಿ ಕರೆದುಕೊಂಡು ಹೋಗುವೆನು ನೀನು ನನ್ನನ್ನು ಮನ್ನಿಸಬೇಕು " ಎಂದು ಹೇಳುತ್ತ, ಆ ಉದ್ದಾಲಕನ ಭಾರ್ಯೆಯ ಬಳಿಗೆ ಹೋಗಿ, ಅವಳ ಗಂಡನೂ, ಮಗನಾದ ಶ್ವೇತಕೇತುವೂ ಇದಿರಾಗಿ ನಿಂತುನೋಡುತ್ತಿರುವಾಗಲೇ, ಅವಳ ಕೈಯ್ಯನ್ನು ಹಿಡಿದುಕೊಂಡನು. ಅವಳಾದರೋ ವಯಸ್ಸು ಕಳೆದವಳು. ಜಿಂಕೆಯ ಮರಿಯ ಕಣ್ಣಿನಂತೆ ಬೆದರಿ ತತ್ತಳಿಸುವ ಕಣ್ಣುಗಳಿಂದ ನೋಡುತ್ತಿರುವಳು. ಮೈಮೇಲೆ ಅಜಿನವನ್ನೂ, ವಲ್ಕಲವನ್ನೂ ಉಟ್ಟಿರುವಳು. ಸ್ವಕಾರ್ಯವನ್ನೂ ಮಾಡಿಕೊಳ್ಳಲು ಶಕ್ತಿಯಿಲ್ಲದವಳು.. ಮತ್ತು ಆ ಆಗಂತುಕನಾದ ವೃದ್ಧಬ್ರಾಹ್ಮಣನಲ್ಲಿ ಸ್ವಲ್ಪವಾದರೂ ಮನಸ್ಸಿಲ್ಲದವಳು. ಅಂತವಳನ್ನು ಆ ಬ್ರಾಹ್ಮಣನು ಕೈಹಿಡಿದುಕೊಂಡು " ನಡೆ! ನಾವು ಹೋಗುವೆವು " ಎಂದು ಎಳೆಯುತಿದ್ದನು. ಆ ಬ್ರಾಹ್ಮಣ[illegible] ೀ ಮುದುಕನು. ಚೆನ್ನಾಗಿ ಕಣ್ಣುಕಾಣ[illegible]ವನು. ಕೈಯಲ್ಲಿ ಕೋಲೂರಿಕೊಂಡೇ ನಡೆಯತಕ್ಕವನು. ಮುಪ್ಪಿ[illegible]ನ ಅವನ ಮೈಯೆಲ್ಲ ಶಿಥಿಲವಾಗಿರುವುದು. ಅವನಿಗೆ ಬುದ್ಧಿಯೂ ಸರಿಯಾಗಿ ಸ್ವಾಧೀನವಿಲ್ಲ. ಇಂತಹ ಬ್ರಾಹ್ಮಣನೊಬ್ಬನು ಬಂದು ತನ್ನ ತಾಯಿಯ ಕೈಯನ್ನು ಹಿಡಿದು ಬಲಾತ್ಕಾರದಿಂದ ಕರೆದುಕೊಂಡು ಹೋಗಲು ಪ್ರಯತ್ನಿಸುತ್ತಿರುವುದನ್ನು ಕಂಡಾಗ ಆ ಶ್ವೇತಕೇತುವು ಸಹಿಸಲಾರದೆ ಹೋದನು. ಆಗ ಅವನು ತನ್ನ ತಾಯಿಯನ್ನು ಬಿಡದೆ ಅವಳ ಕೈಯನ್ನು ಹಿಡಿದು ತಡೆದು ನಿಲ್ಲಿಸಿಕೊಂಡು " ಎಲಾ ದುಷ್ಟಬ್ರಾಹ್ಮಣಾ! ಕೈ ಬಿಡು! ಮಹಾಪತಿವ್ರತೆಯಾದ ನನ್ನ ತಾಯಿಯನ್ನು ಮುಟ್ಟುವೆಯಾ? ನನ್ನ ತಂದೆಯು ಸ್ವಭಾವದಿಂದಲೇ ಬಹಳ ತಾಳ್ಮೆಯುಳ್ಳವನು. ಮತ್ತು ಬ್ರಹ್ಮ

ಜ್ಞಾನವುಳ್ಳ ಬ್ರಹ್ಮರ್ಷಿ. ಶಾಪದಿಂದ ಎಂತವರನ್ನಾದರೂ ಕೆಡಿಸುವುದಕ್ಕೂ, ಅನುಗ್ರಹದಿಂದ ಬದುಕಿಸುವುದಕ್ಕೂ ಸಮರ್ಥನು. ಅವನು ಉಗ್ರತಪಸ್ಸಿನಲ್ಲಿರುವುದರಿಂದ ಬಾಯಿತ್ತದೆ ಮೌನದಿಂದಿರುವನು. ಇವಳು ಅಂತಹ ಧರ್ಮಾತ್ಮನ ಪತ್ನಿ. ಇಂದ್ರಿಯಗಳನ್ನು ಜಯಿಸಿದವಳು. ಎಲ್ಲಕ್ಕಿಂತಲೂ ಮೇಲೆ ನನ್ನ ತಾಯಿ! ಮಹಾಪತಿವ್ರತೆ! ತಪಸ್ಸಿನಲ್ಲಿ ಮೇಲೆನಿಸಿದವಳು! ಸದಾಚಾರ ಶೀಲಳು! ಅಂತವಳನ್ನು ನೀನು ಕೈ ಹಿಡಿದೆಳೆಯುವೆಯಾ? ಎಲಾ ಬ್ರಾಹ್ಮಣಾ! ಇವಳು ನಿನಗೆ ತಾಯಿಯಂತಿರುವಳು. ಅಂತವಳಲ್ಲಿ ನೀನು ಅತ್ಯಾಚಾರವನ್ನು ನಡೆಸಿ ಪ್ರಮಾದಕ್ಕೆ ಸಿಕ್ಕಬೇಡ! ಬಿಟ್ಟುಬಿಡು!" ಎಂದನು. ಹೀಗೆ ಶ್ವೇತಕೇತುವು ಆ ಬ್ರಾಹ್ಮಣನನ್ನು ಗದರಿಸುತ್ತಲೂ, ಆಗಾಗ ಮೃದುವಾಕ್ಯದಿಂದ ಬೇಡುತ್ತಲೂ "ಬಿಡು! ಬಿಡು!" ಎಂದು ಬಾರಿಬಾರಿಗೂ ನಿರ್ಬಂಧಿಸುತ್ತಿರಲು, ಆ ಬ್ರಾಹ್ಮಣನು ಹೆದರಿಕೆಯೊಡನೆ ಆ ಶ್ವೇತಕೇತುವನ್ನು ಕುರಿತು "ಕುಮಾರಾ! ನಾನು ವೃದ್ಧನು. ಸರಿಯಾಗಿ ಕಣ್ಣು ಕಾಣಿಸುವುದೂ ಇಲ್ಲ. ನಿನ್ನ ತಂದೆಯು ಇವಳಲ್ಲಿ ನಿನ್ನಂತಹ ಕುಮಾರನನ್ನು ಪಡೆದು ಋಣವಿಮುಕ್ತನಾದನು. ನಾನಾದರೋ ಇನ್ನೂ ಪಿತೃಋಣದಿಂದ ಮುಕ್ತನಾಗಲಿಲ್ಲ. ನನಗೆ ವಯಸ್ಸು ಕಳೆದುಹೋಯಿತು. ಲೋಕದಲ್ಲಿ ಯಾವ ವಿಷಯೋಪಭೋಗದಲ್ಲಿಯೂ ನಾನು ಆಶೆಯಿಲ್ಲದವನು. ಈ ವಯಸ್ಸಿನಲ್ಲಿ ನನಗೆ ಮದುವೆಗಾಗಿ ಯುವತಿಯಾದ ತನ್ನ ಕನ್ಯೆಯನ್ನು ದಾನಮಾಡಲು ಯಾವನು ತಾನೇ ಇಷ್ಟಪಡುವನು? ಆದುದರಿಂದ ನನ್ನ ಸಂತಾನಕ್ಕಾಗಿ ಇವಳನ್ನು ನೀ ನನ್ನ ಪತ್ನಿಯಾಗಿರಲು ಬಿಟ್ಟುಕೊಡು. ನನಗೆ ಒಂದು ಸಂತತಿಯು ಸಾಕು. ಅದರಿಂದ ನಾನು ಕೃತಾರ್ಥನಾಗಿ ನಿನ್ನ ತಾಯಿಯನ್ನು ತಿರು ಇಲ್ಲಿಯೇ ತಂದು ಬಿಡುವೆನು. ಪ್ರಜೋತ್ಪತ್ತಿಗೆ ಅರಣಿಯಂತಿರುವ ಈಕೆಯನ್ನು ನನ್ನಲ್ಲಿ ಸ್ವಲ್ಪ ದಿನಗಳಿಗೆ ಬಿಟ್ಟುಕೊಡು" ಎಂದನು. ಈ ಮಾತುಗಳನ್ನು ಕೇಳುತ್ತಿದ್ದಹಾಗೆಲ್ಲ ಶ್ವೇತಕೇತುವು ನಾಚಿಕೆಯಿಂದ ತಲೆತಗ್ಗಿಸುತ್ತ, ಕೋಪವನ್ನು ತಡೆಯಲಾರದೆ ಬುಸುಗುಟ್ಟುತ್ತಿರಲು, ಉದ್ದಾಲಕನು ಆಗ ಪುತ್ರನನ್ನು ನೋಡಿ "ಕುಮಾರಾ! ನೀನು ಹೀಗೆ ಕೋಪಿಸಬಾರದು. ಇದು ಪುರಾತನವಾದ ಧರ್ಮವೇಹೊರತು ತಪ್ಪಿಲ್ಲ. ಭೂ

ಮಿಯಲ್ಲಿ ಯಾವ ವರ್ಣದಲ್ಲಿಯೂ ಸ್ತ್ರೀಯರಿಗೆ ಕಟ್ಟಿಲ್ಲ. ಮೃಗಗಳಂತೆ ಯೇ ಮನುಷ್ಯರೂ ತಮ್ಮತಮ್ಮ ಇಷ್ಟದಂತೆಯೇ ಇರುವರು. ಹಾಗಿದ್ದರೂ ಅವರು ಕುಟುಂಬಗಳಲ್ಲಿ ತಪ್ಪುದಾರಿಗೆ ಹೋದವರಲ್ಲ. ಋತುಕಾಲವು ಬಂದಾಗ ಅವರು ತಮ್ಮ ಪತಿಯನ್ನು ಬಿಟ್ಟವರಲ್ಲ'' ಎಂದನು. ಶ್ವೇತ ಕೇತುವಿಗೆ ಈ ನ್ಯಾಯವೇನೂ ಸರಿಬೀಳಲಿಲ್ಲ ಈ ಧರ್ಮವು ಅವನಿಗೆ ದುಸ್ಸಹವಾಯಿತು. ಆದುಮೊದಲು ಶ್ವೇತಕೇತುವು ಮನುಷ್ಯಜಾತಿಯಲ್ಲಿ ಸ್ತ್ರೀಪುರುಷರ ವಿಷಯವಾಗಿ ಈ ಕೆಳಗೆ ಕಂಡ ಕೆಲವು ವಿಧಿಗಳನ್ನು ನಿರ್ಣ ಯಿಸಿದನು. ಇತರ ಪ್ರಾಣಿಗಳಿಗೂ, ಮನುಷ್ಯರಿಗೂ ಈ ವಿಷಯದಲ್ಲಿ ಭೇದವನ್ನು ಕಲ್ಪಿಸಿ, ತಿರ್ಯಗ್ಜಂತುಗಳನ್ನು ಅವುಗಳ ದಾರಿಗೆ ಬಿಟ್ಟು. ಮನುಷ್ಯರಿಗೆ ಮಾತ್ರ ಈ ವಿಧಿಗಳನ್ನು ನಿರ್ಣಯಿಸಿದನು. ಆ ಶ್ವೇತಕೇ ತುವಿನ ಕಾಲದಿಂದಲೇ ಸ್ತ್ರೀಯರಿಗೆ ಇಂತಹ ಕಟ್ಟುಪಾಡು ಏರ್ಪಟ್ಟಿತೆಂದು ನಾನು ಕೇಳಿರುವೆನು. ಆಮೇಲೆ ಶ್ವೇತಕೇತುವು '' ಇನ್ನುಮೇಲೆ ಯಾವ ಸ್ತ್ರೀಯೇ ಆದರೂ, ತನ್ನ ಪತಿಯನ್ನು ಬಿಟ್ಟು ಇತರ ಪುರುಷನಲ್ಲಿ ವ್ಯಭಿ ಚರಿಸಿದರೆ, ಅವಳಿಗೆ ಗರ್ಭಹತ್ಯಾ ಪಾತಕಕ್ಕೆ ಸಮಾನವಾದ ಘೋರಪಾತ ಕವು ಪ್ರಾಪ್ತವಾಗಲಿ! ಈ ನಿಯಮವು ಸ್ತ್ರೀಯರಿಗೆ ಮಾತ್ರವಲ್ಲ! ಸ್ವಭಾ ರ್ಯೆಯನ್ನು ಬಿಟ್ಟು ಬೇರೆ ಸ್ತ್ರೀಯರಲ್ಲಿ ವ್ಯಭಿಚರಿಸತಕ್ಕ ಪುರುಷನಿಗೂ ಅದೇ ಪಾತಕವುಂಟು. ಮೊದಲಿಂದಲೂ ತನ್ನಲ್ಲಿ ಭಕ್ತಿಯುಳ್ಳವಳಾಗಿ, ನಿಯಮನಿಷ್ಠೆಯಾಗಿರುವ ಭಾರ್ಯೆಯಿರುವಾಗ, ಪರಸ್ತ್ರೀಯರಲ್ಲಿ ಪ್ರವರ್ತಿ ಸುವುದು ಪುರುಷನಿಗೆ ಮಹಾಪಾತಕವು. ಒಂದುವೇಳೆ ಪತಿಯೇ ಸಂತಾನಾ ರ್ಥವಾಗಿ ಪತ್ನಿಗೆ ಆಜ್ಞೆಮಾಡಿದಾಗ, ಅವಳು ಅದರಂತೆ ನಡೆಸದೆ ಹೋದರೆ ಆಗ ಪಾಪಕ್ಕೆ ಗುರಿಯಾಗುವಳು'' ಎಂದೂ ಶ್ವೇತಕೇತುವು ನಿರ್ಣಯಿಸಿದನು. ಇದಲ್ಲದೆ, ಎಲೆ ಪ್ರಿಯೆ! ಸೌದಾಸನೆಂಬ ರಾಜನು ಹಿಂದೆ ತನ್ನ ಪತ್ನಿಯಾದ ಮದಯಂತಿಯೆಂಬವಳನ್ನು ಪುತ್ರೋತ್ಪತ್ತಿಗಾಗಿ ನಿಯಮಿಸಿ ಕಳುಹಿಸಲು, ಅವಳು ವಸಿಷ್ಠನೊಡನೆ ಸೇರಿದುದಾಗಿಯೂ, ಅವ ಳು ವಸಿಷ್ಠನಿಂದ ಅಶ್ಮಕನೆಂಬ ಪುತ್ರನನ್ನು ತನ್ನಲ್ಲಿ ಪಡೆದುಬಂದು, ತನ್ನ ಪತಿಯನ್ನು ಸಂತೋಷಗೊಳಿಸಿದುದಾಗಿಯೂ ಕೇಳಿರುವೆನು. ಕಾಂತೆ! ನಮ್ಮ ವಂಶದ ಪೂರ್ವವೃತ್ತಾಂತವನ್ನೂ ನೀನು ಕೇಳಿರಬಹುದು. ಕುರು

ವಂಶೋದ್ಧಾರಣಕ್ಕಾಗಿ ಕೃಷ್ಣದ್ವೈಪಾಯನನಿಂದ ನಾವು ಹುಟ್ಟಿದವರು. ಈ ಧರ್ಮಸೂಕ್ಷ್ಮವನ್ನೆಲ್ಲ ನೀನು ಚೆನ್ನಾಗಿ ಪರ್ಯಾಲೋಚಿಸಿ ನೋಡು. ನನ್ನ ಮಾತಿನಂತೆ ನೀನು ನಡೆಸುವುದರಲ್ಲಿ ದೋಷವೇನೂ ಇಲ್ಲವು. ಆದುದರಿಂದ ಈ ಎಲ್ಲಾ ಕಾರಣಗಳನ್ನು ನೋಡಿ, ನಾನು ಹೇಳಿದ ಧರ್ಮಯುಕ್ತನಾದ ಕಾರ್ಯವನ್ನು ನೀನು ನಡೆಸಬೇಕು. ಪ್ರತಿಯೊಂದು ಋತುಕಾಲದಲ್ಲಿಯೂ ಪತ್ನಿಯು ತನ್ನ ಭರ್ತನನ್ನು ಅತಿಕ್ರಮಿಸದೆ, ಅವನಲ್ಲಿ ಸೇರಬೇಕು'' ಎಂಬುದೇ ಧರ್ಮವೆಂದು ಧರ್ಮಜ್ಞರು ಹೇಳುವರು. ಆ ಋತುಕಾಲವನ್ನು ಬಿಟ್ಟು ಇತರ ಕಾಲಗಳಲ್ಲಿ ಸ್ತ್ರೀಯರಿಗೆ ಸ್ವಾತಂತ್ರ್ಯವುಂಟು. ಸತ್ಪುರುಷರೂ ಇದನ್ನು ಪುರಾತನಧರ್ಮವೆಂದೇ ಹೇಳುವರು. ಪತಿಯು ಪತ್ನಿಯನ್ನು ಕುರಿತು ಹೇಳಿದುದು ಅವಳಿಗೆ ಧರ್ಮವೆಂದು ತೋರಿದರೂ, ಅಧರ್ಮವೆಂದು ತೋರಿದರೂ ಅವಳು ಅದನ್ನು ನಡೆಸಿಯೇ ತೀರಬೇಕೆಂಬುದು ವೇದಜ್ಞರಾದ ಮಹರ್ಷಿಗಳ ಅಭಿಪ್ರಾಯವು. ಅದರಲ್ಲಿಯೂ ಈಗ ನಾನಾದರೋ ಸಂತಾನವಿಲ್ಲದ ಸಂಕಟದಿಂದ ಬಹಳ ಕೊರಗುತ್ತಿರುವೆನು. ನಾನಾಗಿ ನಿನ್ನಲ್ಲಿ ಸಂತತಿಯನ್ನು ಹುಟ್ಟಿಸಲು ಅಸಮರ್ಥನಾಗಿರುವೆನು. ಪುತ್ರನ ಮುಖವನ್ನು ನೋಡಬೇಕೆಂಬ ಆಸೆಯೋ ನನಗೆ ಬಹಳವಾಗಿರುವುದು. ಎಲೆ ದೇವಿ! ಇದೋ! ಕೆಂಪಾದ ಉಗುರುಗಳಿಂದ ಕೂಡಿ ಕಮಲದಳದಂತೆ ಶೋಭಿಸುವ ಈ ನನ್ನ ಎರಡು ಕೈಗಳನ್ನು ಜೋಡಿಸಿ ತಲೆಯ ಮೇಲಿಟ್ಟು ನಿನ್ನನ್ನು ಪ್ರಾರ್ಥಿಸುವೆನು. ಅಂಜಲಿಯಿಟ್ಟು ಪ್ರಾರ್ಥಿಸುವ ನನ್ನ ಮಾತನ್ನು ನಡೆಸು. ನನ್ನ ಅನುಮತಿಯಮೇಲೆ ತಪಸ್ವಿಯಾದ ಯಾವನಾದರೂ ಒಬ್ಬ ಬ್ರಾಹ್ಮಣನಿಂದ ಗುಣವಂತನಾದ ಪುತ್ರರನ್ನು ಪಡೆಯುವಳಾಗು. ನಿನ್ನಿಂದಾದರೂ ನಾನು ಪುತ್ರವಂತರಿಗೆ ಲಭಿಸತಕ್ಕ ಸದ್ಗತಿಯನ್ನು ಹೊಂದುವೆನು'' ಎಂದನು.

ಎಲೈ ಜನಮೇಜಯರಾಜನೇ! ಈ ಮಾತನ್ನು ಕೇಳಿ ಕುಂತಿಯು ತನ್ನ ಪತಿಯ ಕ್ಷೇಮಚಿಂತೆಯಿಂದ ಅವನನ್ನು ಕುರಿತು ಹೀಗೆನ್ನುವಳು. "ಓ ಭರತಸತ್ತಮಾ! ಪತಿಯು ತಮ್ಮನ್ನು ಸಮಾಧಾನಪಡಿಸುತ್ತಿರುವಾಗಲೂ ಅವನನ್ನು ತಿರುಗಿ ಸಮಾಧಾನಪಡಿಸದೆ ನಿರಾಕರಿಸುವುದು ಪತ್ನಿ

ಯರಿಗೆ ಧರ್ಮವಲ್ಲ. ಪತಿಯ ಮನಸ್ಸನ್ನು ಅನುವರ್ತಿಸಿ, ಅವರನ್ನು ಸಂತೋಷಗೊಳಿಸಬೇಕಾದುದೇ ಪತ್ನಿಯರಿಗೆ ದೊಡ್ಡ ಧರ್ಮವು. ಆದುದರಿಂದ ನಿನ್ನ ಸಂತೋಷಾರ್ಥವಾಗಿ ಹಿಂದೆ ನಡೆದ ಒಂದು ವಿಶೇಷವನ್ನು ನಿನಗೆ ತಿಳಿಸುವೆನು ಕೇಳು! ನಾನು ತಂದೆಯ ಮನೆಯಲ್ಲಿರುವಾಗ ನನ್ನ ತಂದೆಯು ಮನೆಗೆ ಬಂದ ಅತಿಥಿಗಳನ್ನು ಸತ್ಕರಿಸುವ ಕಾರ್ಯಕ್ಕಾಗಿ ನನ್ನನ್ನು ನಿಯಮಿಸಿದ್ದನು. ಈ ಸಂದರ್ಭದಲ್ಲಿ ಒಮ್ಮೆ ದೂರ್ವಾಸಮಹರ್ಷಿಯು ನಮ್ಮ ಮನೆಗೆ ಅತಿಥಿಯಾಗಿ ಬಂದನು. ಆ ಮಹರ್ಷಿಯಾದರೋ ದೃಢವಾದ ವ್ರತವುಳ್ಳವನು. ಆದರೂ ಸುಲಭಕೋಪಿಯಾದುದರಿಂದ ಸಹಜವಾಗಿ ಕ್ರೂರನು. ಧರ್ಮದಲ್ಲಿಯೇ ದೃಢವಾದ ನಿಶ್ಚಯವುಳ್ಳವನು. ಅವನನ್ನು ನಾನು ನನ್ನ ಸರ್ವಪ್ರಯತ್ನಗಳಿಂದಲೂ ಉಪಚರಿಸಿ ಸಂತೋಷಗೊಳಿಸಿದೆನು. ಆಗ ಅವನು ನನ್ನಲ್ಲಿ ಪ್ರಸನ್ನನಾಗಿ ದೇವತೆಗಳನ್ನು ಆಕರ್ಷಿಸತಕ್ಕ ಶಕ್ತಿಯುಳ್ಳ ಮಂತ್ರವೊಂದನ್ನು ಹೇಳಿಕೊಟ್ಟನು. ಆ ಮಂತ್ರವನ್ನು ನನಗೆ ವರವಾಗಿ ಅನುಗ್ರಹಿಸಿ, ನನ್ನನ್ನು ನೋಡಿ “ಎಲೆ ಕುಮಾರಿ! ನೀನು ಈ ಮಂತ್ರವನ್ನು ಹೇಳಿ, ಯಾವಯಾವ ದೇವತೆಗಳನ್ನು ಕರೆಯುವೆಯೋ ಆ ದೇವತೆಯು ಇಷ್ಟಪಟ್ಟಾಗಲಿ, ಇಷ್ಟವಿಲ್ಲದೆ ನಿರ್ಬಂಧದಿಂದಾಗಲಿ, ನಿನ್ನ ಬಳಿಗೆ ಬಂದೇ ಬರುವನು ಆಯಾ ದೇವತೆಗಳ ಅನುಗ್ರಹದಿಂದ ನಿನಗೆ ಅದೇ ದಿವ್ಯಶಕ್ತಿಯುಳ್ಳ ಪುತ್ರರಾಗುವರು. ಕಾಂತಾ! ನನ್ನ ತಂದೆಯ ಮನೆಯಲ್ಲಿ ಆ ಬ್ರಾಹ್ಮಣಾನುಗ್ರಹದಿಂದ ಪಡೆದ ವರವನ್ನು ಸಫಲಗೊಳಿಸುವುದಕ್ಕೆ, ಈಗ ಒಳ್ಳೆಯ ಸಮಯವೆಂದು ತೋರುವುದು. ನೀನು ಅನುಜ್ಞೆಯನ್ನು ಕೊಟ್ಟರೆ, ನಾನು ಆ ದೇವತೆಯನ್ನು ಕರೆಯುವೆನು. ಆಯಾ ದೇವತೆಯಿಂದ ನಾನು ಪುತ್ರರನ್ನು ಪಡೆಯಬಹುದು. ಆಗ ನಿನಗೂ ಸಂತಾನವಿಲ್ಲವೆಂಬ ದುಃಖವು ನೀಗುವುದು” ಎಂದಳು.

ಇದು ನೂರಿಪ್ಪತ್ತೆಂಟನೆಯ ಅಧ್ಯಾಯವು.



ಕುಂತಿಗೆ ಯಮನಿಂದ ಯುಧಿಷ್ಠಿರನು ಹುಟ್ಟಿದುದು. ಇದನ್ನು ಕೇಳಿ ಗಾಂಧಾರಿಯು ಅಸೂಯೆಯಿಂದ ತನ್ನ ಗರ್ಭವನ್ನು ಚಚ್ಚಿಕೊಳ್ಳಲು, ಅವಳ ಹೊಟ್ಟೆಯಿಂದ ಬರೀ ಮಾಂಸದಪಿಂಡವು ಕೆಳಕ್ಕೆ ಬಿದ್ದುದು. ವ್ಯಾಸಮುನಿಯು ಆ ಮಾಂಸಪಿಂಡವನ್ನು ನೂರೊಂದು ವಿಭಾಗವಾಗಿ ಮಾಡಿ ಘೃತಕುಂಡಗಳಲ್ಲಿ ಕಾಪಾಡಿಟ್ಟುದು. ಭೀಮನ ಜನನವು. ದುರ್ಯೋಧನಾದಿಗಳ ಉತ್ಪತ್ತಿ.

ಆಮೇಲೆ ಕುಂತಿಯು ಪಾಂಡುವನ್ನು ಕುರಿತು "ನಾಥಾ! ನಿನ್ನ ಪುತ್ರಾಪೇಕ್ಷೆಯನ್ನು ತೀರಿಸುವುದಕ್ಕೆ ಇದೊಂದು ಮಾರ್ಗವುಂಟು. ಇದು ನಡೆಯದಿದ್ದರಲ್ಲವೇ ಗುಣಾಢ್ಯನಾದ ಬ್ರಾಹ್ಮಣನಿಂದ ನಾನು ಪುತ್ರನನ್ನು ಪಡೆಯಬೇಕು. ಈಗ ನನಗೆ ಯಾವನಾದರೂ ದೇವನನ್ನು ಕರೆಯಲು ಅನುಜ್ಞೆಯನ್ನು ಕೊಡು. ನಿನಗೆ ಕ್ಷೇಮವಾಗಲಿ. ಸ್ತ್ರೀಯರಿಗೆ ಪತಿಯೇ ದೈವವು. ಈಗ ನೀನು ದೇವತೆಯನ್ನಾಗಲಿ, ಬ್ರಾಹ್ಮಣನನ್ನಾಗಲಿ ಯಾರನ್ನು ಕರೆಯುವಂತೆ ಹೇಳಿದರೂ ನಾನು ಸಿದ್ಧಳಾಗಿರುವೆನು. ನಿನ್ನ ಮಾತಿಗೆ ಪ್ರತಿಹೇಳುವವಳಲ್ಲ. ಆದರೆ, ದೇವತೆಗಳ ಸಂಬಂಧದಿಂದ ಆಯಾಕ್ಷಣದಲ್ಲಿಯೇ ಸಂತಾನವನ್ನು ಪಡೆಯಬಹುದು. ಬ್ರಾಹ್ಮಣನಿಂದಲಾದರೋ ಕಾಲವಿಳಂಬದಿಂದ ಸಂತಾನವಾಗುವುದು. ಆದುದರಿಂದ ಈಗ ಮಂತ್ರಪೂರ್ವಕವಾಗಿ ದೇವತೆಗಳನ್ನು ಕರೆಯುವುದೇ ಮೇಲೆಂದು ನನಗೆ ತೋರಿದೆ. ಯಾವ ದೇವತೆಯನ್ನು ಯಾವಾಗ ಕರೆಯಬೇಕೆಂಬುದಕ್ಕಾಗಿ ನಿನ್ನ ಆಜ್ಞೆಯನ್ನು ನಿರೀಕ್ಷಿಸುವೆನು. ನಿನ್ನ ಇಷ್ಟವನ್ನು ಹೇಳು" ಎಂದಳು. ಆಗ ಪಾಂಡುವು ಅತ್ಯಂತ ಸಂತೋಷದಿಂದ "ಎಲೆ ದೇವಿ! ಈಗ ನಾನು ಧನ್ಯನಾದೆನು. (ಅನುಗೃಹೀತನಾದೆನು) ನಮ್ಮ ಕುಲಕ್ಕೆ ನೀನೇ ಉದ್ಧಾರಕಳು. ನಿನಗೆ ವರವನ್ನು ಕೊಟ್ಟ ಆ ಮಹರ್ಷಿಗೆ ನನ್ನ ವಂದನವು. ಎಲೆ ಧರ್ಮಜ್ಞೆ! ಅಧರ್ಮದಿಂದ ಪ್ರಜೆಗಳನ್ನು ಅಡಗಿಸಿ ಆಳುವುದು ಸಾಧ್ಯವಲ್ಲ. ಆದುದರಿಂದ ಧರ್ಮಯುಕ್ತನಾದ ಪುತ್ರನನ್ನು ಪಡೆಯುವುದಕ್ಕೆ ನೀನು ಯತ್ನಿಸು. ರಾಜ್ಯವನ್ನು ಧರ್ಮದಿಂದ ಆಳುವುದಕ್ಕೂ, ನನ್ನ ಸಂತಾನವನ್ನು ಅಭಿವೃದ್ಧಿಗೊಳಿಸುವುದಕ್ಕೂ ತಕ್ಕಂತೆ

ಮೊದಲು ನೀನು ಎಲ್ಲಾ ದೇವತೆಗಳಿಗೂ ಮೇಲೆನಿಸಿದ ಧರ್ಮದೇವತೆಯನ್ನೇ ಪುತ್ರಸಂತಾನಕ್ಕಾಗಿ ಪ್ರಾರ್ಥಿಸು. ವಿಳಂಬಮಾಡದೆ ಧರ್ಮದೇವನನ್ನು ಮಂತ್ರಪೂರ್ವಕವಾಗಿ ಬರಮಾಡು. ಅವನಿಂದ ಕುರುವಂಶದೊಳಗೆಲ್ಲ ಅತಿ ಧರ್ಮಿಷ್ಠನಾದ ಪುತ್ರನುಂಟಾಗುವುದರಲ್ಲಿ ಸಂದೇಹವಿಲ್ಲ. ಧರ್ಮದೇವತೆಯ ಅನುಗ್ರಹದಿಂದ ಉಂಟಾಗುವ ಪುತ್ರನ ಮನಸ್ಸು ಎಂದಿಗೂ ಅಧರ್ಮದಲ್ಲಿ ಪ್ರವರ್ತಿಸಲಾರದು. ಆದಿ ಮಧ್ಯಾಂತಗಳಲ್ಲಿಯೂ ಧರ್ಮವನ್ನೇ ಆಧಾರವಾಗಿ ಉಳ್ಳ ಸಂತಾನವೇ ಎಲ್ಲರಿಗೂ ಇಷ್ಟವಾದುದು. ಆ ಸಂತಾನದಿಂದಲೇ ಕೀರ್ತಿಯೂ, ಪ್ರಖ್ಯಾತಿಯೂ ಉಂಟಾಗುವುದು. ಆದುದರಿಂದ ನೀನು ನಿಯಮವನ್ನು ಹಿಡಿದು, ಒಳ್ಳೇ ರೂಪದಿಂದಲೂ, ಸದಾಚಾರದಿಂದಲೂ ಧರ್ಮವನ್ನೇ ಮುಂದಿಟ್ಟುಕೊಂಡು ಧರ್ಮದೇವತೆಯನ್ನು ಆಮಂತ್ರಿಸು" ಎಂದನು. ಪತಿಯ ಮಾತನ್ನು ಕೇಳಿ ಕುಂತಿಯು ಅವನಿಗೆ ನಮಸ್ಕಾರವನ್ನು ಮಾಡಿ, ಒಂದಾವರ್ತಿ ಅವನನ್ನು ಪ್ರದಕ್ಷಿಣೆಮಾಡಿ ಬಂದು, ಅವನ ಅನುಮತಿಯಿಂದ ಮಂತ್ರವನ್ನು ಹೇಳಿ, ಧರ್ಮದೇವತೆಯನ್ನು ಕರೆಯುವುದಕ್ಕೆ ಸಿದ್ಧಳಾದಳು.

ಓ ಜನಮೇಜಯರಾಜಾ! ಇಷ್ಟರಲ್ಲಿ ಅತ್ತಲಾಗಿ ಗಾಂಧಾರಿಗೆ ಗರ್ಭವು ಕಂಡು ಒಂದುವರ್ಷಕಾಲವಾಯಿತು. ಆದರೂ ಅವಳಿಗೆ ಇನ್ನೂ ಪ್ರಸವವಾಗಲಿಲ್ಲ. ಇತ್ತಲಾಗಿ ಕುಂತಿಯಾದರೋ ಧರ್ಮದೇವತೆಯ ತೃಪ್ತಿಗಾಗಿ ಪೂಜೋಪಹಾರಗಳನ್ನೆಲ್ಲ ಅರ್ಪಿಸಿ, ದೂರ್ವಾಸನಿಂದ ತನಗೆ ಉಪದಿಷ್ಟವಾದ ಮಂತ್ರವನ್ನು ವಿಧ್ಯುಕ್ತವಾಗಿ ಜಪಿಸಿದಳು. ಇವಳು ನಿಯಮದಿಂದ ಮಂತ್ರವನ್ನು ಜಪಿಸಿದೊಡನೆ, ಆ ಕುಂತಿಯು ಕಣ್ಣಮುಂದೆ ಧರ್ಮದೇವನು ಕಾಣಿಸಿಕೊಂಡನು. ಸೂರ್ಯನಂತೆ ತೇಜೋವಿಶಿಷ್ಟನಾಗಿ, ವಿಮಾನದಲ್ಲಿ ಕುಳಿತು ಬಂದ ಆ ಧರ್ಮದೇವನು ಕುಂತಿಯನ್ನು ನೋಡಿ ಮಂದಹಾಸದೊಡನೆ "ಕುಂತೀ! ನಿನಗೆ ನನ್ನಿಂದ ಏನಾಗಬೇಕು ಹೇಳು" ಎಂದನು. ಹೀಗೆ ನಗುಮುಖದೊಡನೆ ಕೇಳುತ್ತಿರುವ ಆ ಯಮಧರ್ಮರಾಜನನ್ನು ನೋಡಿ ಕುಂತಿಯು "ನನಗೆ ಪುತ್ರನನ್ನು ಕರುಣಿಸಬೇಕು" ಎಂದು ಮಾತ್ರವೇ ಕೇಳಿದಳು. ಅವನು ಅನುಮತಿಕೊಟ್ಟಮೇಲೆ ಕುಂತಿ

ಯು ಅದೇ ಶತಶೃಂಗಪರ್ವತದಲ್ಲಿ ತನ್ನ ಪತಿಯ ಆಜ್ಞೆಯಂತೆ ಋತು ಸ್ನಾನವಮಾಡಿ, ಶುಚಿಯಾಗಿ, ಶುದ್ಧವಾದ ದುಕೂಲವನ್ನುಟ್ಟು ಆ ಧರ್ಮ ದೇವನೊಡನೆ ಹಾಸಿಗೆಯನ್ನು ಸೇರಿದಳು. ಯೋಗಶರೀರವನ್ನು ತಾಳಿದ ಧರ್ಮದೇವನು ಅವಳನ್ನು ಸ್ಪರ್ಶಿಸಲು, ಆಗಲೇ ಸಮಸ್ತ ಪ್ರಾಣಿಗಳಲ್ಲಿ ಶ್ರೇಷ್ಠನೂ, ಮಹಾಬಾಹುವೂ ಆದ ಪುತ್ರನೊಬ್ಬನು ಹುಟ್ಟಿದನು. ಸೂರ್ಯನು ತುಲಾರಾಶಿಯಲ್ಲಿರುವಾಗ, ಎಲ್ಲಾ ಶುಭಲಕ್ಷಣಗಳಿಂದ ಕೂಡಿದ ಮತ್ತು ಪೂರ್ಣತಿಥಿಯೆನಿಸಿಕೊಂಡ ಪಂಚಮಿತಿಥಿಯಲ್ಲಿ, ಇಂದ್ರದೇವತಾತ್ಮಕವಾದ ಜ್ಯೇಷ್ಠಾನಕ್ಷತ್ರದೊಡನೆ ಚಂದ್ರನು ಸೇರಿದ್ದಾಗ, 'ಅಭಿಜಿತ್' ಎಂಬ ಎಂಟನೆಯ ಮುಹೂರ್ತದಲ್ಲಿ ಕುಂತಿಯು ಅತ್ಯಂತಯಶಸ್ವಿಯಾದ ಪುತ್ರನನ್ನು ಪಡೆದಳು. ಸೂರ್ಯನು ನಡುಹಗಲಲ್ಲಿರುವಾಗ ಆ ಪುತ್ರನು ಹುಟ್ಟಿದನು. ಇವನು ಹುಟ್ಟಿದೊಡನೆ ಆಕಾಶದಿಂದ ಅಶರೀರವಾಣಿಯೊಂದು "ಈ ಪುತ್ರನು ಧಾರ್ಮಿಕಶ್ರೇಷ್ಠನಾಗಿ, ಮನುಷ್ಯರೊಳಗೆಲ್ಲ ಮೇಲೆನಿಸುವನು. ಇವನು ಭೂಮಿಯಲ್ಲಿ ಮಹಾಪರಾಕ್ರಮಿಯೂ, ಸತ್ಯಸಂಧನೂ ಆದ ಯುಧಿಷ್ಠಿರನೆಂಬ ಹೆಸರಿನಿಂದ ಪ್ರಖ್ಯಾತಿಹೊಂದುವನು ಪಾಂಡುವಿಗೆ ಇವನೇ ಮೊದಲು ಹುಟ್ಟಿದ ಜ್ಯೇಷ್ಠಪುತ್ರನೆಂದು ಪ್ರಸಿದ್ಧನಾಗುವನು. ಯಶಸ್ಸಿನಿಂದಲೂ, ತೇಜಸ್ಸಿನಿಂದಲೂ, ನಡತೆಯಿಂದಲೂ ಇವನು ಲೋಕದಲ್ಲಿ ಎಲ್ಲರಿಗಿಂತಲೂ ಅತಿಶಯಿಸುವನು" ಎಂಬ ಮಾತುಗಳು ಕೇಳಿಸಿದುವು.

ಇದು ಹೀಗಿರಲು, ಅತ್ತಲಾಗಿ ಗಾಂಧಾರಿಗೆ ಗರ್ಭವು ಅಂಕುರಿಸಿ ಒಂದು ವರ್ಷವು ಕಳೆಯಿತು. ಎರಡನೆಯ ವರ್ಷದಲ್ಲಿ ಅವಳ ಹೊಟ್ಟೆಯು ಬಹಳವಾಗಿ ಉಬ್ಬಿ ದೊಡ್ಡದಾಗಿ ಕಾಣಿಸಿತು. ಕಾಲಾತಿಕ್ರಮವಾದಂತೆ ತೋರಿದರೂ ಅವಳಿಗೆ ಪ್ರಸವವಾಗಲಿಲ್ಲ. ಅವಳು ಅದಕ್ಕಾಗಿ ಮನಸ್ಸಿನಲ್ಲಿ ಕೊರಗುತಿದ್ದಾಗ, ಕುಂತಿಗೆ ಬಾಲಸೂರ್ಯನಂತೆ ತೇಜಸ್ವಿಯಾದ ಮಗನು ಹುಟ್ಟಿದನೆಂಬ ವೃತ್ತಾಂತವೂ ಅವಳ ಕಿವಿಗೆ ಬಿದ್ದಿತು. ಆಗ ಅಸೂಯೆಯಿಂದ ಅವಳ ಸಂಕಟವು ಮತ್ತಷ್ಟು ಪ್ರಬಲವಾಯಿತು. ತನ್ನ ಗರ್ಭವು ಒಂದೇವಿಧವಾಗಿರುವುದನ್ನು ನೋಡಿ ಅವಳು "ಈ ಹಾಳುಗರ್ಭವೇಕೋ

ಕಾಣೆನು" ಎಂದು ನಿಂದಿಸುತ್ತ, ಧೃತರಾಷ್ಟ್ರನಿಗೆ ತಿಳಿಯದಹಾಗೆ, ತನ್ನ ಹೊಟ್ಟೆಯನ್ನು ಬಡಿದು ಚಚ್ಚಿಕೊಂಡುಬಿಟ್ಟಳು. ಆಗ ಆಕೆಯ ಗರ್ಭದಿಂದ ಕಬ್ಬಿಣದ ಗುಂಡಿನಂತೆ ಗಟ್ಟಿಯಾಗಿ ಮಾಂಸಮಯವಾದ ಪಿಂಡವೊಂದು ಹೊರಗೆ ಬಿದ್ದಿತು. ಹಿಂದಿನ ಎರಡು ವರ್ಷಗಳಿಂದಲೂ ತಾನು ಹೊಟ್ಟೆಯಲ್ಲಿ ಧರಿಸಿದ್ದ ಆ ಮಾಂಸಪಿಂಡವನ್ನು ಅವಳು ಎತ್ತಿ ಹೊರಗೆ ಬಿಸಾಡಿಬಿಡಲು ಯತ್ನಿಸಿದಳು. ಇಷ್ಟರಲ್ಲಿಯೇ ವ್ಯಾಸಮುನಿಗೆ ಈ ವಿಚಾರವು ಜ್ಞಾನದೃಷ್ಟಿಯಿಂದ ತಿಳಿಯಿತು. ಅವನು ಗಾಂಧಾರಿಯ ಬಳಿಗೆ ಬಂದು, ಗಾಂಧಾರಿಯನ್ನೂ, ಅವಳ ಮುಂದೆ ಬಿದ್ದಿದ್ದ ಮಾಂಸಪಿಂಡವನ್ನೂ ನೋಡಿ "ಅಮ್ಮಾ! ಗಾಂಧಾರೀ! ನೀನು ಉದ್ದೇಶಿಸಿದ ಕಾರ್ಯವೇನು?" ಎಂದು ಕೇಳಲು, ಅದಕ್ಕಾ ಗಾಂಧಾರಿಯು "ಮುನೀಂದ್ರಾ! ಕುಂತಿಗೆ ಸೂರ್ಯತೇಜಸ್ಸುಳ್ಳ ಜ್ಯೇಷ್ಠಕುಮಾರನು ಹುಟ್ಟಿದುದಾಗಿ ಕೇಳಿದೆನು. ಅದನ್ನು ಕೇಳಿ ಸಹಿಸಲಾರದೆ, ದುಃಖದಿಂದ ನಾನು ನನ್ನ ಹೊಟ್ಟೆಯನ್ನು ಚಚ್ಚಿಕೊಂಡೆನು. ನೀನು ನನಗೆ ವೀರರಾದ ನೂರುಮಕ್ಕಳು ಹುಟ್ಟುವರೆಂದು ಹೇಳಿದ್ದವನಲ್ಲವೆ? ಇದೋ! ನೀನು ಹೇಳಿದ ನೂರುಮಕ್ಕಳನ್ನು ನೋಡು! ಈ ಒಂದು ಮಾಂಸದ ಮುದ್ದೆಯೇ ನನಗೆ ನೂರು ಮಂದಿ ವೀರಪುತ್ರರು" ಎಂದು ತೋರಿಸಿದಳು. ಆಗ ವ್ಯಾಸಮುನಿಯು "ಸುಬಲಕುಮಾರೀ! ಇಷ್ಟೇಕೆ ಆತುರಪಡುವೆ? ನನ್ನ ಮಾತು ಎಂದಿಗೂ ಸುಳ್ಳಾಗದೆಂದು ತಿಳಿ. ಇದು ಆಗಬೇಕಾಗಿದ್ದುದೇ ಹೀಗೆ! ನನ್ನ ಬಾಯಿಂದ ಎಂದಿಗೂ ಸುಳ್ಳುಮಾತು ಹೊರಡದು. ವಿನೋದಕ್ಕಾದರೂ ನಾನು ಸುಳ್ಳಾಡುವವನಲ್ಲ. ಇನ್ನು ಇಂತಹ ಸ್ಥಿತಿಯಲ್ಲಿ ಹೇಳಬೇಕಾದುದೇನು? ಈಗಲೇ ನೂರು ಗಡಿಗೆಗಳಲ್ಲಿ ತುಪ್ಪವನ್ನು ತುಂಬಿ ತರಿಸಿಡು. ಒಳ್ಳೇ ಸುರಕ್ಷಿತವಾದ ಪ್ರದೇಶಗಳಲ್ಲಿ ಆ ಕುಂಭಗಳನ್ನಿಟ್ಟು, ಅಲ್ಲಿಗೆ ಒಳ್ಳೇ ಕಾವಲಿರಿಸುವಹಾಗೆ ಮಾಡು. ಮೊದಲು ಈ ಪಿಂಡವನ್ನು ತಣ್ಣೀರಿನಿಂದ ತೊಳೆಯಬೇಕು." ಎಂದನು. ಅದರಂತೆ ಆ ಮಾಂಸಪಿಂಡವನ್ನು ತಣ್ಣೀರಿನಲ್ಲಿ ಅದ್ದಿದೊಡನೆ ಅದು ನೂರು ಭಾಗಗಳಾಗಿ ಒಡೆದುಹೋಯಿತು. ಹೆಬ್ಬೆರಳಿನ ಗಿಣ್ಣಿನ ಪ್ರಮಾಣಕ್ಕಿದ್ದ ಆ ಒಂದೊಂದು ಶಕಲಕ್ಕೂ ಆಯಾ ಅವ

ಯವಚಿಹ್ನಗಳೆಲ್ಲವೂ ಆಗಲೇ ಕಾಣಿಸುವಂತಿದ್ದುವು. ಒಡನೆಯೇ ವ್ಯಾಸ ಮುನಿಯು ತುಪ್ಪದಿಂದ ತುಂಬಿದ ನೂರು ಕಲಶಗಳನ್ನು ಅಲ್ಲಿಗೆ ತರಿಸಿ, ಆ ಒಂದೊಂದು ಶಕಲವನ್ನೂ ಒಂದೊಂದು ಗಡಿಗೆಯಲ್ಲಿಟ್ಟು, ಆ ಚೂರುಗಳು ಚೆನ್ನಾಗಿ ಬಲಿಯುವವರೆಗೆ ಹಾಗೆಯೇ ಇರಬೇಕೆಂದು ಹೇಳಿ ಅವುಗಳನ್ನು ಸುರಕ್ಷಿತವಾದ ಸ್ಥಳದಲ್ಲಿ ಸಾಲಾಗಿ ಇಡಿಸಿದನು. ಅವುಗಳನ್ನು ಚೆನ್ನಾಗಿ ರಕ್ಷಿಸುತ್ತಿರುವಂತೆ ನಿಯಮಿಸಿದನು. ಆಮೇಲೆ ಆ ಮಹರ್ಷಿಯು ಗಾಂಧಾರಿಯನ್ನು ನೋಡಿ "ಎಲೌ ಭಾಗ್ಯಶಾಲಿನಿ! ಈ ಕಲಶಗಳೆಲ್ಲವೂ ಹೀಗೆಯೇ ಇರಲಿ! ಈ ಕಲಶಗಳನ್ನು ಕೆಲವು ಕಾಲದವರೆಗೆ ಇರಿಸಿದ್ದರೆ ಆ ಕಲಶಗಳು ತಾನಾಗಿ ಒಡೆಯುವುವು. ಯಾವಾಗ ಯಾವಯಾವ ಕಲಶವು ಒಡೆಯುವುದೋ ಆಗ ಅದರೊಳಗಿನಿಂದ ಪುತ್ರರು ಹುಟ್ಟಿದಂತೆ ಭಾವಿಸು! ಆಗಲೇ ಆ ಕಲಶಗಳ ಮುಚ್ಚಳವನ್ನು ತೆರೆಯಬೇಕಲ್ಲದೆ ಅದಕ್ಕೆ ಮೊದಲು ಅವನ್ನು ಮುಟ್ಟಬಾರದು" ಎಂದು ಹೇಳಿದನು. ಮಹಾಜ್ಞಾನಿಯಾದ ವ್ಯಾಸಮುನಿಯು ಹೀಗೆಂದು ಹೇಳಿ, ಹಿಮಾಲಯಕ್ಕೆ ತಪಸ್ಸಿಗಾಗಿ ಹೊರಟುಹೋದನು. ಆಮೇಲೆ ವ್ಯಾಸಮುನಿಯು ಹೇಳಿದ ಕಾಲವು ಬಂದೊಡನೆ, ಒಂದೊಂದು ದಿನಕ್ಕೆ ಒಂದೊಂದು ಕಲಶದಿಂದ ಶಿಶುಗಳು ಹೊರಡುತ್ತ ಬಂದುವು. ಅವರೆಲ್ಲರೂ ಒಂದೇ ಪಿಂಡದಿಂದ ಬಂದವರಾದರೂ, ದಿನಭೇದದಿಂದ ಆ ನೂರುಮಂದಿಯಲ್ಲಿ ಜ್ಯೇಷ್ಠಕನಿಷ್ಠರೆಂಬ ವ್ಯತ್ಯಾಸಗಳುಂಟಾದುವು.

ಇದು ಹೀಗಿರಲು, ಅತ್ತಲಾಗಿ ಕುಂತಿಗೆ ಯುಧಿಷ್ಠಿರನೆಂಬ ಪುತ್ರನ ಹುಟ್ಟಿದ್ದನಲ್ಲವೆ? ಗಾಂಧಾರಿಯ ಮಕ್ಕಳಿಗಿಂತಲೂ ಅವನು ಮೊದಲು ಹುಟ್ಟಿದುದಲ್ಲದೆ, ಆಕಾರದಲ್ಲಿಯೂ ಅವನೇ ದೊಡ್ಡವನಾಗಿ, ಇವರೆಲ್ಲರಿಗೂ ಜ್ಯೇಷ್ಠನೆನಿಸಿದ್ದನು. ಪಾಂಡುವು ಧರ್ಮದೇವತೆಯ ಪುತ್ರನಾದ ಆ ಕುಮಾರನನ್ನು ನೋಡಿ ಕುಂತಿಯನ್ನು ಕುರಿತು "ಪ್ರಿಯೆ! ನಾವು ಕ್ಷತ್ರಿಯರು. ಈ ನಮ್ಮ ಕುಮಾರನು ಕೇವಲ ಧರ್ಮಪರಾಯಣನೆನಿಸಿರುವನು. ಕ್ಷತ್ರಿಯರಿಗೆ ಬಲಾಧಿಕನಾದ ಪುತ್ರನಿರಬೇಕು. ಆದುದರಿಂದ ನೀನು ಬಲಾಧಿಕನಾದ ಬೇರೊಬ್ಬ ಪುತ್ರನನ್ನು ಪಡೆಯುವಳಾಗು. ವಾಯುವಿಗೆ ಮಹಾ

ಬಲನೆಂದು ಹೆಸರು. ಆದುದರಿಂದ ನೀನು ವಾಯುವನ್ನು ಮಂತ್ರದಿಂದ ಆಮಂತ್ರಿಸು. ಯಾಗಗಳಲ್ಲಿ ಅಶ್ವಮೇಧವು ಮೇಲಾದುದು. ತೇಜಸ್ವಿಗಳಲ್ಲಿ ಸೂರ್ಯನು ಮೇಲಾದವನು. ಮನುಷ್ಯರಲ್ಲಿ ಶ್ರೋತ್ರಿಯನಾದ ಬ್ರಾಹ್ಮಣನು ಮೇಲೆನಿಸಿದವನು. ಅದರಂತೆಯೇ ದೇವತೆಗಳಲ್ಲಿ ವಾಯುವು ಮೇಲಾದವನು. ಮರುತ್ತುಗಳಲ್ಲಿ ಶ್ರೇಷ್ಠನೂ, ಎಲ್ಲಾ ಪ್ರಾಣಿಗಳಿಂದ ಸ್ತುತಿಸಲ್ಪಟ್ಟವನೂ, ಆದ ವಾಯುವನ್ನು ಪುತ್ರಾರ್ಥವಾಗಿ ನಿಯಮದಿಂದಾರಾಧಿಸಿ ಆಮಂತ್ರಿಸು. ಅವನು ನಿನಗೆ ಒಳ್ಳೇ ಬಲಾಢ್ಯನಾದ ಪುತ್ರನನ್ನು ಕೊಡುವನು. ಅವನು ಅನುಗ್ರಹಿಸಿದ ಪುತ್ರನೂ ಅವನಂತೆಯೇ ಬಲಾಧಿಕನಾಗಿರುವನು. ಕ್ಷತ್ರಿಯರಿಗೆ ಬಲದಿಂದಲೇ ಮೇಲ್ಮೆ" ಎಂದನು.

ಪತಿಯ ಆಜ್ಞೆಯನ್ನು ಕೇಳಿದಮೇಲೆ ಕುಂತಿಯು ಅದರಂತೆ ನಡೆಸಲು ಯತ್ನಿಸಿದಳು. ದೂರ್ವಾಸಮುನಿಯು ತನಗೆ ಹೇಳಿದ ವಿಧಿಯಿಂದ ತಿರುಗಿ ಋತುಕಾಲದಲ್ಲಿ ಎರಡನೆಯಸಾರಿ ಪೂಜಾವಿಧಾನದಿಂದ ಮಂತ್ರವನ್ನು ಜಪಿಸಿ ವಾಯುದೇವನನ್ನು ಆಮಂತ್ರಿಸಿದಳು. ಒಡನೆಯೇ ವಾಯುವು ಪ್ರತ್ಯಕ್ಷನಾಗಿ ಗೋಚರಿಸಿ, "ನನ್ನಿಂದ ನಿನಗೇನಾಗಬೇಕು?" ಎಂದು ಕೇಳಿದನು. ಆಗ ಕುಂತಿಯು ಬಹಳ ಲಜ್ಜೆಯೊಡನೆ ಅವನನ್ನು ಕುರಿತು "ನನಗೆ ಬಲಾಢ್ಯನಾದ ಪುತ್ರನೊಬ್ಬನು ನಿನ್ನಿಂದಾಗಬೇಕು" ಎಂದು ಪ್ರಾರ್ಥಿಸಿದಳು. ಆಗ ವಾಯುದೇವನು "ನಿನಗೆ ಅಂತಹ ಪುತ್ರನೇ ಆಗಲಿ!" ಎಂದು ಹೇಳಿ ಆ ಕುಂತಿಯನ್ನು ಒಮ್ಮೆ ತೋಳುಗಳಿಂದಾಲಿಂಗಿಸಿಕೊಂಡು ತನ್ನ ಲೋಕಕ್ಕೆ ಹಿಂತಿರುಗಬಿಟ್ಟನು. ಕೂಡಲೇ ಆ ಕುಂತಿಯಲ್ಲಿ ಮಹಾವೀರ್ಯನೂ, ಭಯಂಕರಪರಾಕ್ರಮಿಯೂ ಆದ ಕುಮಾರನೊಬ್ಬನು ಜನಿಸಿದನು. ಅತಿಬಲಶಾಲಿಯಾದ ಆ ಪುತ್ರನು ಹುಟ್ಟಿದೊಡನೆ ಆಕಾಶದಿಂದ ಅಶರೀರವಾಣಿಯೊಂದು ಹೊರಟು "ಈ ಕುಮಾರನು ಲೋಕದಲ್ಲಿರುವ ಎಲ್ಲಾ ಬಲಾಢ್ಯರಿಗಿಂತಲೂ ಹೆಚ್ಚು ಬಲಾಢ್ಯನಾಗಿ ಹುಟ್ಟಿರುವನು" ಎಂದು ನುಡಿಯಿತು. ಈ ಕುಮಾರನು ಹುಟ್ಟಿದೊಡನೆ ಎಲ್ಲಾ ದೇಶದ ರಾಜರಿಗೂ ಮನಸ್ಸಿನಲ್ಲಿ ಒಂದು ಭೀತಿಯು ಹುಟ್ಟಿ, ಅದರಿಂದ ಮೂತ್ರಸ್ರಾವವಾಯಿತು. ಎಲ್ಲರ ಮನಸ್ಸಿಗೂ ಕಳವಳವು ಹುಟ್ಟಿತು. ಅವರ

ವಾಹನಗಳೆಲ್ಲವೂ ಇದ್ದಕ್ಕಿದ್ದ ಹಾಗೆ ಚದರಿದುವು. ಅವುಗಳ ಕಣ್ಣುಗಳಲ್ಲಿ ಕಣ್ಣೀರು ಸುರಿದುವು. ಅಷ್ಟೇಕೆ? ಇದ್ದಕ್ಕಿದ್ದ ಹಾಗೆ ಒಂದು ಬಿರುಗಾಳಿಯೆದ್ದರೆ ಭೂಮಿಯನ್ನೆಲ್ಲ ಹೇಗೆ ನಡುಗಿಸಿಬಿಡುವುದೋ, ಹಾಗೆ ವಾಯುಕುಮಾರನು ಹುಟ್ಟಿದಮಾತ್ರಕ್ಕೆ ನೆಲವೆಲ್ಲ ನಡುಗಿತು. ಆಗ ಲೋಕಕ್ಕೆಲ್ಲ ಇನ್ನೊಂದು ಮಹಾಶ್ಚರ್ಯವೇನೆಂದರೆ, ಉಬ್ಬಿದ ಮೈಯುಳ್ಳವನೂ, ಭಯಂಕರಪರಾಕ್ರಮನೂ ಆದ ಆ ಭೀಮನು ಬಿದ್ದಾಗ ಕೆಳಗಿದ್ದ ದೊಡ್ಡದೊಂದು ಕಲ್ಲುಕೂಡ ಪುಡಿಪುಡಿಯಾಯಿತು. ಹೇಗೆಂದರೆ, ಪ್ರಸವವಾದ ಮೇಲೆ ಹತ್ತನೆಯ ದಿನದಲ್ಲಿ ಕುಂತಿಯು ಮಗುವನ್ನೆತ್ತಿಕೊಂಡು ಒಂದು ರಮ್ಯವಾದ ಸರೋವರಕ್ಕೆ ಹೋಗಿ ಅಲ್ಲಿ ಸ್ನಾನಮಾಡಿ, ದೇವತೆಗಳನ್ನು ಪೂಜಿಸುವುದಕ್ಕಾಗಿ ಆಶ್ರಮದಿಂದ ಹೊರಟು ಬರುತ್ತಿದ್ದಳು.

ದಾರಿಯಲ್ಲಿ ಒಂದು ಬೆಟ್ಟದ ಕಿಬ್ಬರಿಯಲ್ಲಿ ಬರುತ್ತಿರುವಾಗ, ಸಮೀಪದಲ್ಲಿದ್ದ ಒಂದು ಗುಹೆಯಿಂದ ಭಯಂಕರವಾದ ದೊಡ್ಡ ಹುಲಿಯೊಂದು ಹೊರಟು, ಮೇಲೆ ಬೀಳುವುದಕ್ಕಾಗಿ ಬಂದಿತು. ಇಷ್ಟರಲ್ಲಿಯೇ ದೇವಸಮಾನಪರಾಕ್ರಮವುಳ್ಳ ಪಾಂಡುವು, ಬಿಲ್ಲನ್ನೆಳೆದು ಮೂರು ಬಾಣಗಳಿಂದ ಹುಲಿಯನ್ನು ಹೊಡೆದನು. ಆ ಹುಲಿಯು ಭಯಂಕರಧ್ವನಿಯಿಂದ ಅರಚಿಕೊಂಡಿತು. ಬೆಟ್ಟದ ಗವಿಗಳಲ್ಲೆಲ್ಲ ಅದರ ಪ್ರತಿಧ್ವನಿಯು ತುಂಬಿತು. ಈ ಹುಲಿಯ ಗರ್ಜನವನ್ನು ಕೇಳಿ ಕುಂತಿಯು ಭಯಪಟ್ಟು ಆತುರದಿಂದ ಮಗುವನ್ನೆತ್ತಿಕೊಂಡು, ಆ ಬೆಟ್ಟದ ಒಂದು ಬಂಡೆಯ ಮೇಲಕ್ಕೇರಲು ಪ್ರಯತ್ನಿಸಿದಳು. ಹೀಗೆ ಭಯಾತುರೆಯಾಗಿ ಓಡುತಿದ್ದ ಆಕೆಯ ಕೈಯಲ್ಲಿದ್ದ ಮಗುವು ಕೈಯಿಂದ ಜಾರಿ, ಆ ಬೆಟ್ಟದಮೇಲಿನ ಬಂಡೆಯಿಂದ ಕೆಳಗೆ ಬಹಳ ಆಳಕ್ಕಿದ್ದ ಒಂದು ಕಲ್ಲಿನಮೇಲೆ ಬಿದ್ದಿತು. ಕುಂತಿಯು ಭಯಪಟ್ಟು ನಡುಗುತಿದ್ದಳು. ಆದರೇನು? ಆ ಮಗುವು ಬಿದ್ದ ವೇಗಕ್ಕೆ ಇಂದ್ರನ ವಜ್ರಾಯುಧದಿಂದ ಹೊಡೆಯಲ್ಪಟ್ಟ ಬೆಟ್ಟದಂತೆ, ಆ ಕಲ್ಲುಬಂಡೆಯೇ ಪುಡಿಪುಡಿಯಾಯಿತು. ಅತ್ತಲಾಗಿ ಪಾಂಡುವು ಕೂಡ ಮಗುವಿಗೆ ಏನಾಯಿತೋ ಎಂಬ ಭಯದಿಂದ, ಆ ಸ್ಥಳಕ್ಕೆ ಓಡಿಬಂದು ನೋಡಿದಾಗ, ಆ ಶಿಲೆಯು ಒಡೆದುಹೋಗಿದ್ದುದನ್ನು ಕಂಡು ಅತ್ಯಾಶ್ಚರ್ಯ

ಪಟ್ಟನು. ಪಾಂಡುರಾಜನು, ಭೀಮನ ಜನ್ಮಕಾಲದಲ್ಲಿ ಒಂದು ಹುಲಿಯು ಭಯಂಕರವಾಗಿ ಕೂಗಿದ ಧ್ವನಿಯನ್ನು ಕೇಳಿ, ಆ ಬೆಟ್ಟದಲ್ಲಿ ತನ್ನ ಪತ್ನೀಪುತ್ರರಿಗೆ ಅಪಾಯವೇನಾಗುವುದೋ ಎಂದು ಹೆದರಿ, ಅದುಮೊದಲು ಕೈಯಲ್ಲಿ ಧನುರ್ಬಾಣಗಳನ್ನು ಹಿಡಿದು, ಬಹಳ ಜಾಗರೂಕತೆಯಿಂದ ಸುತ್ತಲೂ ಕಣ್ಣಿಟ್ಟು ಕಾಯುತ್ತಲೇ ಇದ್ದನು. ಸಿಹ್ಮದಲ್ಲಿ ಗುರುವೂ, ತುಲೆಯಲ್ಲಿ ಸೂರ್ಯನೂ, ಮಖಾನಕ್ಷತ್ರದಲ್ಲಿ ಚಂದ್ರನೂ ಸೇರಿದ್ದಾಗ, ಶುಭವಾದ ತ್ರಯೋದಶೀತಿಥಿಯಲ್ಲಿ, ಪಿತೃದೇವತಾತ್ಮಕವಾದ ಮುಹೂರ್ತದಲ್ಲಿ ಕುಂತಿಯು ಭೀಮನನ್ನು ಹಡೆದಳು. ಯಾವ ಹಗಲಿನಲ್ಲಿ ಭಯಂಕರಪರಾಕ್ರಮವುಳ್ಳ ಭೀಮನು ಹುಟ್ಟಿದನೋ, ಅದೇದಿನದ ರಾತ್ರಿಯಲ್ಲಿ ಅತ್ತಲಾಗಿ ದುರ್ಯೋಧನನೂ ಹುಟ್ಟಿದನು ಆ ದುರ್ಯೋಧನನು ಹುಟ್ಟಿದೊಡನೆ ಕತ್ತೆಯಂತೆ ಒಂದು ದೊಡ್ಡ ಕೂಗನ್ನು ಕೂಗಿದನು. ಆ ಧ್ವನಿಯನ್ನು ಕೇಳಿ ಅಲ್ಲಲ್ಲಿದ್ದ ಕತ್ತೆಗಳೆಲ್ಲವೂ ಕೂಗಲಾರಂಭಿಸಿದುವು. ಕತ್ತೆಗಳೆಲ್ಲವೂ ಹೀಗೆ ಅರಚುವುದನ್ನು ಕೇಳಿ ಹದ್ದು, ನರಿ, ಕಾಗೆ ಮುಂತಾಗಿ ಇನ್ನೂ ಅನೇಕ ಮಾಂಸಾಹಾರಿ ಜಂತುಗಳೆಲ್ಲ ಅಮಂಗಳಧ್ವನಿಯಿಂದ ಅರಚಿಕೊಳ್ಳುವುದಕ್ಕೆ ಆರಂಭಿಸಿದುವು. ದುರ್ಯೋಧನನ ಜನ್ಮಕಾಲದಲ್ಲಿ ಭಯಂಕರವಾದ ಬಿರುಗಾಳಿಯೆದ್ದಿತು. ದಿಕ್ಕುಗಳೆಲ್ಲವೂ ಉರಿಯುವಂತೆ ಕಾಣಿಸಿತು. ಇವನ್ನೆಲ್ಲ ಕೇಳಿ ಧೃತರಾಷ್ಟ್ರನಿಗೆ ಮನಸ್ಸಿನಲ್ಲಿ ಭೀತಿ ಹುಟ್ಟಿತು. ಒಡನೆಯೇ ಅವನು ಅನೇಕಬ್ರಾಹ್ಮಣರನ್ನೂ, ಭೀಷ್ಮನನ್ನೂ, ವಿದುರನನ್ನೂ ಇನ್ನೂ ತನಗೆ ಇಷ್ಟರಾದ ಬೇರೆಯವರನ್ನೂ ಎಲ್ಲಾ ಕುರುಗಳನ್ನೂ ಕರೆಸಿಕೊಂಡು "ಎಲೈ ಮಿತ್ರರೆ! ಯುಧಿಷ್ಠಿರನು ನಮ್ಮ ವಂಶಕ್ಕೆ ಹಿರಿಯ ಮಗನು. ಅವನೇ ನಮ್ಮ ವಂಶಾಭಿವೃದ್ಧಿಗೆ ಆಧಾರವು. ಗುಣಗಳಿಂದಲೂ ಅವನೇ ರಾಜ್ಯಕ್ಕೆ ಅರ್ಹನೆನಿಸಿರುವನು. ಅವನ ವಿಷಯದಲ್ಲಿ ನಾವು ಹೇಳಬಹುದಾದ ದೋಷವೊಂದೂ ಕಾಣಿಸುವುದಿಲ್ಲ. ಅವನಿಂದಾಚೆಗಾದರೂ ನನ್ನ ಪುತ್ರನಾದ ದುರ್ಯೋಧನನು ರಾಜನಾಗುವನೆ? ಈ ವಿಷಯದಲ್ಲಿ ನನ್ನ ಶಂಕೆಯನ್ನು ನೀವು ಪರಿಹರಿಸಬೇಕು. ಮುಂದೆ ಇದು ಹೇಗೆ ನಡೆಯುವುದೋ ಅದರ ವಾಸ್ತವಾಂಶವನ್ನು ನನಗೆ ತಿಳಿಸಿರಿ. ಆದರೆ ಈ ನನ್ನ ಮಗನು ಹುಟ್ಟಿದೊಡನೆ ಇಲ್ಲಿ ಕಾಣಿಸಿದ ದುಶ್ಶಕುನಗಳೆಲ್ಲವೂ

ನಮಗೆ ದೊಡ್ಡ ಅಮಂಗಳವನ್ನು ಸೂಚಿಸುತ್ತಿರುವುವು. ವಿದುರಾ! ನನ್ನ ಮನಸ್ಸಿಗೇನೋ ಭಯವುಂಟಾದುದರಿಂದ ನಾನು ಇದನ್ನು ಕೇಳುತ್ತಿರುವೆನು" ಎಂದನು. ಧೃತರಾಷ್ಟ್ರನು ಈ ಮಾತನ್ನು ಹೇಳಿ ಮುಗಿಸಿದ ಮೇಲೆಕೂಡ, ಅಲ್ಲಲ್ಲಿ ಮಾಂಸಾಹಾರಿ ಪ್ರಾಣಿಗಳು ಭಯಂಕರವಾಗಿ ಕೂಗುತ್ತಿದ್ದುವು. ನರಿಗಳು ಅಮಂಗಳವಾಗಿ ಊಳಿಟ್ಟುವು! ಮೇಲೆಮೇಲೆ ಹೆಚ್ಚುತ್ತಿರುವ ಈ ದುರ್ನಿಮಿತ್ತಗಳನ್ನೆಲ್ಲ ನೋಡಿ ಮಹಾತ್ಮನಾದ ವಿದುರನೂ, ಇತರ ಬ್ರಾಹ್ಮಣರೂ ಆ ಧೃತರಾಷ್ಟ್ರನನ್ನು ಕುರಿತು "ರಾಜೇಂದ್ರಾ! ಭಯಂಕರಗಳಾದ ಈ ದುರ್ನಿಮಿತ್ತಗಳೇನೋ ನಮಗೆ ಹಾನಿಯನ್ನು ಸೂಚಿಸತಕ್ಕವುಗಳೆಂಬುದರಲ್ಲಿ ಸಂದೇಹವಿಲ್ಲ. ಈ ನಿನ್ನ ಜ್ಯೇಷ್ಠಪುತ್ರನು ಹುಟ್ಟಿದೊಡನೆ ಇಂತಹ ಘೋರನಿಮಿತ್ತಗಳೆಲ್ಲ ತಲೆದೋರಿದುದರಿಂದ, ಇವನು ನಮ್ಮ ಕುಲವನ್ನೇ ನಾಶಮಾಡತಕ್ಕವನೆಂಬುದು ನಿಶ್ಚಯವು. ಇದಕ್ಕೆ ಬೇರೆ ಯಾವ ಶಾಂತಿಯೂ ನಮಗೆ ತೋರಲಿಲ್ಲ. ಈ ಮಗನನ್ನು ತೊರೆದುಬಿಡುವುದೊಂದೇ ಇದಕ್ಕೆ ಶಾಂತಿ! ಇವನನ್ನು ಕಾಪಾಡಿಟ್ಟರೆ ನಿನಗೆ ಎಂದಿಗೂ ಅನರ್ಥವು ತಪ್ಪಿದುದಲ್ಲ. ಮದ್ಯರಸದಂತೆ ಹೊಂಬಣ್ಣವಾದ ಕಣ್ಣುಗಳುಳ್ಳ ಈ ಶಿಶುವಿನ ಲಕ್ಷಣವನ್ನು ನೋಡಿದರೆ, ಇವನು ನಮ್ಮ ಕುಲವನ್ನು ಮಾತ್ರವಲ್ಲ! ಲೋಕದಲ್ಲಿರುವ ಕ್ಷತ್ರಿಯಕುಲವನ್ನೆಲ್ಲ ಮೊತ್ತಕ್ಕೇ ಕೊನೆಗಾಣಿಸುವನೆಂದೂ ತೋರುವುದು. ರಾಜಾ! ನಿನಗೆ ಹೇಗಿದ್ದರೂ ನೂರುಮಂದಿ ಮಕ್ಕಳುಂಟು. ಆ ನೂರರಲ್ಲಿ ಒಬ್ಬನು ಕಡಿಮೆಯಾದರೆ ಆಗಲಿ! ನೀನು ಕುರುಕುಲಕ್ಕೆ ಕ್ಷೇಮವನ್ನು ಬಯಸುವುದಾದರೆ ಇವನೊಬ್ಬನನ್ನು ತೊರೆದುಬಿಡು. ಇವನೊಬ್ಬನನ್ನು ಬಿಡುವುದರಿಂದ ಕುಲಕ್ಕೆಲ್ಲ ಕ್ಷೇಮವನ್ನುಂಟುಮಾಡು. ಒಂದು ಕುಲವನ್ನು ರಕ್ಷಿಸುವುದಕ್ಕಾಗಿ ಒಬ್ಬನನ್ನಾದರೂ ತೊರೆಯಬೇಕು. ಒಂದು ಗ್ರಾಮದ ಸಂರಕ್ಷಣಕ್ಕಾಗಿ ಒಂದು ಕುಲವನ್ನಾದರೂ ತೊರೆಯಬೇಕು. ಒಂದು ದೇಶರಕ್ಷಣಕ್ಕಾಗಿ ಒಂದು ಗ್ರಾಮವನ್ನಾದರೂ ತೊರೆಯಬೇಕು. ತನ್ನ ರಕ್ಷಣೆಗಾಗಿ ಸಮಸ್ತ ಭೂಮಿಯನ್ನಾದರೂ ತೊರೆಯಬೇಕೆಂಬ ನೀತಿಯುಂಟು" ಎಂದರು. ವಿದುರನೂ, ಎಲ್ಲಾ ಬ್ರಾಹ್ಮಣೋತ್ತಮರೂ ಹೀಗೆ ಬುದ್ಧಿವಾದವನ್ನು ಹೇಳಿದರೂ, ಪುತ್ರಸ್ನೇಹದಿಂದ ರಾಜನು ಅವರಮಾತಿಗೆ ಕಿವಿಗೊಡದೆಹೋ

ದನು. ಆಮೇಲೆ ಧೃತರಾಷ್ಟ್ರನಿಗೆ ಕ್ರಮವಾಗಿ ಆ ತೈಲಘಟಗಳಿಂದ ದಿನವೊಂದಕ್ಕೆ ಒಬ್ಬೊಬ್ಬ ಮಗನಂತೆ ನೂರು ದಿನಗಳಲ್ಲಿ ನೂರುಮಂದಿ ಪುತ್ರರು ಹುಟ್ಟಿದರು. ಆಮೇಲೆ ನೂರೊಂದನೆಯವಳಾಗಿ ಒಬ್ಬ ಕನ್ಯೆಯೂ ಹುಟ್ಟಿದಳು. ಗಾಂಧಾರಿಗೆ ಗರ್ಭವು ಬೆಳೆದು, ಅವಳಿಗೆ ಹೊಟ್ಟೆಯು ಉಬ್ಬಿ, ಕಷ್ಟಪಡುತ್ತಿರುವ ಕಾಲದಲ್ಲಿ ಕನ್ಯಾವಸ್ಥೆಯಲ್ಲಿದ್ದ ಒಬ್ಬ ವೈಶ್ಯಜಾತಿಯ ಹುಡುಗಿಯು ಧೃತರಾಷ್ಟ್ರನ ಬಳಿಯಲ್ಲಿದ್ದು ಅವನಿಗೆ ಶುಶ್ರೂಷೆಮಾಡುತ್ತಿದ್ದಳು. ಧೃತರಾಷ್ಟ್ರನು ಅವಳಲ್ಲಿ ಸಂಗಮಿಸಿದುದರಿಂದ, ಒಂದುವರ್ಷದಮೇಲೆ ಆ ವೈಶ್ಯಕನ್ಯೆಯಲ್ಲಿ ಮಹಾಯಶಸ್ವಿಯೂ, ಧೀಮಂತನೂ ಆದ ಯುಯುತ್ಸುವೆಂಬ ಮತ್ತೊಬ್ಬ ಪುತ್ರನು ಹುಟ್ಟಿದನು. ಇವನಿಗೆ ಕರಣನೆಂದೂ ಹೆಸರು. (ಕರಣನೆಂದರೆ ವೈಶ್ಯನಿಗೆ ಶೂದ್ರಸ್ತ್ರೀಯಲ್ಲಿ ಹುಟ್ಟಿದ ಮಗನು. ಇಲ್ಲಿ ಉತ್ತಮಜಾತಿಯ ಪುರುಷನಿಗೆ ಕೀಳುಜಾತಿಯ ಸ್ತ್ರೀಯಲ್ಲಿ ಹುಟ್ಟಿದವನಾದುದರಿಂದ ಇವನಿಗೂ ಕರಣನೆಂದೇ ಪ್ರಸಿದ್ಧಿಯಾಯಿತು.)

ಎಲೆ ಜನಮೇಜಯರಾಜಾ! ಹೀಗೆ ಧೃತರಾಷ್ಟ್ರನಿಗೆ ನೂರುಮಕ್ಕಳಾದರು. ಅವರೆಲ್ಲರೂ ಮಹಾರಥರೂ, ವೀರರೂ ಎನಿಸಿಕೊಂಡರು. ಅದರಿಂದಾಚೆಗೆ ಹುಟ್ಟಿದ ಒಬ್ಬ ಕನ್ಯೆಯೂ, ಆಮೇಲೆ ವೈಶ್ಯಸ್ತ್ರೀಯಲ್ಲಿ ಹುಟ್ಟಿದ ಯುಯುತ್ಸುವೂ ಸೇರಿ ನೂರಿಬ್ಬರು ಮಕ್ಕಳಾದರು.

ಇದು ನೂರಿಪ್ಪತ್ತೊಂಭತ್ತನೆಯ ಅಧ್ಯಾಯವು.

### ದುಶ್ಶಲೆಯು ಹುಟ್ಟಿದ ರೀತಿ.

ಆಗ ಜನಮೇಜಯರಾಜನು ವೈಶಂಪಾಯನನನ್ನು ಕುರಿತು “ಓ ಮಹರ್ಷೀ! ವ್ಯಾಸಮಹರ್ಷಿಯ ಅನುಗ್ರಹದಿಂದ ಗಾಂಧಾರಿಯ ಗರ್ಭದಲ್ಲಿ ಹುಟ್ಟಿದ ಒಂದೇ ಪಿಂಡದಿಂದ ಕ್ರಮವಾಗಿ ನೂರು ಮಕ್ಕಳಾದರೆಂದು ನೀನು ಹೇಳಿದೆ. ಆದರೆ ಕನ್ಯೆಯೊಬ್ಬಳು ಹುಟ್ಟಿದ ವಿವರವನ್ನು ನೀನು ಹೇಳಲಿಲ್ಲ. ನೂರಕ್ಕೆ ಮೇಲೆ ಕನ್ಯೆಯೊಬ್ಬಳು ಹುಟ್ಟಿದುದು ಹೇಗೆ? ವ್ಯಾಸಮುನಿಯೋ ಅಮಿತತೇಜಸ್ಸುಳ್ಳವನು. ಅವನು ಗಾಂಧಾರಿಗೆ ನೂರು

ಮಕ್ಕಳಾಗುವರೆಂದು ಹೇಳಿ ಹೋಗಿರುವಾಗ, ನೂರಕ್ಕೆ ಮೇಲೆ ಒಬ್ಬ ಕನ್ಯೆಯೂ, ಅದಕ್ಕೆ ಮೇಲೆ ವೈಶ್ಯಸ್ತ್ರೀಯಲ್ಲಿ ಮತ್ತೊಬ್ಬಪುತ್ರನೂ ಹುಟ್ಟಿದುದು ಹೇಗೆ? ಗಾಂಧಾರಿಯ ಗರ್ಭದಿಂದ ಆ ಒಂದು ಮಾಂಸಪಿಂಡವು ಹೊರತು ತಿರುಗಿ ಅವಳು ಬೇರೆ ಗರ್ಭವನ್ನು ಧರಿಸಿಲ್ಲವಷ್ಟೆ? ಹೀಗಿರುವಾಗ ದುಶ್ಶಲೆಯು ಹುಟ್ಟಿದುದು ಹೇಗೆ? ಇದನ್ನು ತಿಳಿಯಬೇಕೆಂಬ ಕುತೂಹಲವು ನನಗುಂಟಾಗಿದೆ” ಎಂದನು.

ಅದಕ್ಕಾ ವೈಶಂಪಾಯನನು “ರಾಜೇಂದ್ರಾ! ನೀನು ಕೇಳಿದುದು ಸಮಂಜಸವಾದ ಪ್ರಶ್ನೆ! ಅದಕ್ಕೆ ಉತ್ತರವನ್ನು ಹೇಳುವೆನು ಕೇಳು! ಗಾಂಧಾರಿಯು ತನ್ನ ಹೊಟ್ಟೆಯನ್ನು ಚಚ್ಚಿಕೊಂಡಾಗ ಕೆಳಗೆ ಬಿದ್ದುಹೋದ ಮಾಂಸಪಿಂಡವನ್ನು, ಪೂಜ್ಯನಾದ ವ್ಯಾಸನು ತಾನೇ ತಣ್ಣೀರಿನಲ್ಲಿ ನೆನೆಸಿ, ಬೇರೆಬೇರೆ ನೂರುತುಂಡುಗಳನ್ನಾಗಿ ವಿಭಾಗಿಸಿದನು. ಹಾಗೆ ವಿಭಾಗಿಸಿದ ತುಂಡುಗಳನ್ನು ಅದೇ ಕ್ರಮದಲ್ಲಿ ಒಂದೊಂದನ್ನಾಗಿ ತೆಗೆದು ತುಪ್ಪದ ಗಡಿಗೆಗಳಲ್ಲಿ ಒಂದೊಂದನ್ನಾಗಿ ಇಡಿಸುತಿದ್ದನು. ಈ ಸಮಯದಲ್ಲಿ ಗಾಂಧಾರಿಗೆ ಒಂದು ಹೆಣ್ಣುಮಗುವಾದರೂ ಆಗಬೇಕೆಂಬ ಆಸೆ ಹುಟ್ಟಿತು. ಆ ಚಿಂತೆಯು ಅವಳ ಮನಸ್ಸಿನಲ್ಲಿ ನಾಟಿದ್ದರೂ ವ್ಯಾಸಮಹರ್ಷಿಯಲ್ಲಿ ತನಗಿದ್ದ ಗೌರವದಿಂದ, ಯಾವ ಮಾತನ್ನೂ ಆಡದೆ ಸುಮ್ಮನಿದ್ದಳು. ಆದರೆ, ಅವಳು ಆಶೆಯಿಂದ ತನ್ನ ಮನಸ್ಸಿನಲ್ಲಿ “ಈ ಮಾಂಸಪಿಂಡದಿಂದ ನನಗೆ ನೂರುಮಂದಿ ಪುತ್ರರಾಗುವುದರಲ್ಲಿ ಸಂದೇಹವಿಲ್ಲ. ಈ ಮಹರ್ಷಿಯ ಮಾತು ಎಂದಿಗೂ ತಪ್ಪದು! ನನಗೆ ಒಬ್ಬ ಕನ್ಯೆಯಾದರೂ ಹುಟ್ಟಿದರೆ ಎಷ್ಟೋ ಸಂತೋಷವಾಗುತಿತ್ತು. ಒಬ್ಬ ಕನ್ಯೆಯಾದರೂ ಹುಟ್ಟಿದರೆ, ನನ್ನ ಪತಿಯೂ ದೌಹಿತ್ರನಿಂದ ಉಂಟಾಗಬಹುದಾದ ಪುಣ್ಯಲೋಕಗಳಿಗೆ ಹೊರಗಾಗುತ್ತಿರಲಿಲ್ಲ. ಸ್ತ್ರೀಯರಿಗೆ ಮಕ್ಕಳಿಗಿಂತಲೂ ಅಳಿಯನಲ್ಲಿರುವ ಪ್ರೀತಿಯು ಹೆಚ್ಚು. ಈ ನೂರುಮಂದಿ ಮಕ್ಕಳೊಡನೆ ಕೊನೆಗೆ ಒಂದು ಹೆಣ್ಣು ಮಗುವಾದರೂ ಆಗಿದ್ದರೆ, ನಾನು ಕೃತಾರ್ಥಳಾಗುತಿದ್ದೆನು. ಪುತ್ರ ದೌಹಿತ್ರ ಸಂತತಿಗಳೊಡನೆ ನಾನು ಎಷ್ಟೋ ಸಂತೋಷಪಡುತಿದ್ದೆನು. ಈಗಲೂ ನನ್ನಲ್ಲಿ ನಿಜವಾದ ಸತ್ಯವಿದ್ದರೆ, ಮತ್ತು

ಯಜ್ಞ, ದಾನ, ತಪಸ್ಸುಗಳಿಂದ ನನಗೆ ಲಭಿಸಿರುವ ಪುಣ್ಯವೇನಾದರೂ ಇದ್ದರೆ, ನನ್ನಿಂದ ಗುರುಹಿರಿಯರು ಸಂತೋಷಗೊಳಿಸಲ್ಪಟ್ಟಿದ್ದರೆ, ಆ ಪುಣ್ಯ ಫಲದಿಂದ ನನಗೆ ಒಬ್ಬ ಕನ್ಯೆಯಾದರೂ ಆಗಲಿ" ಎಂದಳು. ಓ ಜನಮೇಜಯರಾಜಾ! ಈ ಸಮಯದಲ್ಲಿಯೇ ಇತ್ತಲಾಗ ವ್ಯಾಸಮುನಿಯು ಆ ಮಾಂಸಪಿಂಡವನ್ನು ವಿಭಾಗಿಸುತ್ತಿದ್ದನು. ಆ ಪಿಂಡಗಳನ್ನು ಘೃತಕುಂಭಗಳಲ್ಲಿ ಇಡುತ್ತಾ ಬಂದಾಗ, ನೂರು ಗಡಿಗೆಗಳಿಗೂ ಪೂರ್ಣವಾಗಿ, ಕೊನೆಗೆ ಮತ್ತೊಂದು ತುಂಡು ಅವನ ಎಡಗೈಯಲ್ಲಿ ನಿಂತುಹೋಯಿತು. ಆಗ ವ್ಯಾಸಮುನಿಯು ಆ ತುಂಡನ್ನು ನೋಡಿ, ಗಾಂಧಾರಿಯನ್ನು ಕುರಿತು "ಗಾಂಧಾರೀ! ಇದುವರೆಗೆ ನಿನಗೆ ನೂರು ಮಕ್ಕಳಾದರು. ಆದರೆ ನನ್ನ ಮಾತು ಸುಳ್ಳಾಗದು. ಆ ನೂರಕ್ಕೆ ಮೇಲೆ ಒಂದು ಭಾಗವು ನಿಂತುಹೋಗಿದೆ. ಈ ಭಾಗದಿಂದ ಈಗ ನಿನ್ನ ಮನಸ್ಸಿನಲ್ಲಿರುವಂತೆ ಸುಂದರಿಯಾದ ಕನ್ಯೆಯೊಬ್ಬಳು ನಿನಗೆ ಹುಟ್ಟುವಳು" ಎಂದನು.

ಓ ಜನಮೇಜಯರಾಜಾ! ವ್ಯಾಸನು ಮತ್ತೊಂದು ತುಪ್ಪದ ಕೊಡವನ್ನು ತರಿಸಿ, ಆ ಮಾಂಸದ ತುಂಡನ್ನು ಅದರಲ್ಲಿಡಿಸಿದನು. ನೂರು ಮಕ್ಕಳು ಹುಟ್ಟಿದಮೇಲೆ, ಆ ಕಲಶದಿಂದ ಎಲ್ಲರಿಗಿಂತಲೂ ಕಿರಿಯವಳಾಗಿ ಕನ್ಯೆಯೊಬ್ಬಳು ಹುಟ್ಟಿದಳು. ದುಶ್ಶಲೆಯು ಹುಟ್ಟಿದ ರೀತಿಯು ಇದೇ! ಇನ್ನೇನಾದರೂ ಸಂದೇಹವಿದ್ದರೆ ಕೇಳು" ಎಂದನು.

ಇದು ನೂರಮೂವತ್ತನೆಯ ಅಧ್ಯಾಯವು.



ಧೃತರಾಷ್ಟ್ರಪುತ್ರರ ಹೆಸರುಗಳು. ದುಶ್ಶಲೆಯ ವಿವಾಹವು.

ಜನಮೇಜಯನು ವೈಶಂಪಾಯನನನ್ನು ಕುರಿತು "ಮುನೀಂದ್ರಾ! ಧೃತರಾಷ್ಟ್ರನ ನೂರುಮಂದಿ ಮಕ್ಕಳ ಹೆಸರನ್ನೂ ಜ್ಯೇಷ್ಠಾನುಕ್ರಮವಾಗಿ ನನಗೆ ತಿಳಿಸಬೇಕು" ಎಂದು ಕೇಳಲು, ವೈಶಂಪಾಯನನು "ಜನಮೇಜಯರಾಜಾ! ಕೇಳು! ದುರ್ಯೋಧನನು, ಯುಯುತ್ಸು, ದುಶ್ಶಾಸನನು, ದುಸ್ಸಹನು, ದುಶ್ಶಲನು, ಜಲಸಂಧನು, ಸಮನು, ಸಹನು, ವಿಂದಾನುವಿಂ

ದರಿಬ್ಬರು, ದುರ್ಧರ್ಷನು, ಸುಬಾಹು, ದುಷ್ಪ್ರಧರ್ಷಣನು, ದುರ್ಮರ್ಷಣನು, ದುರ್ಮುಖನು, ದುಷ್ಕರ್ಣನು, ಕರ್ಣನು, ವಿವಿಂಶತಿ, ವಿಕರ್ಣನು, ಶಲನು, ಸತ್ವನು, ಸುಲೋಚನನು, ಚಿತ್ರೋಪಚಿತ್ರರಿಬ್ಬರು, ಚಿತ್ರಾಕ್ಷನು, ಚಾರುಚಿತ್ರನು, ಶರಾಸನನು, ದುರ್ಮದನು, ದುರ್ವಿಗಾಹನು, ವಿವಿತ್ಸು, ವಿಕಟಾನನರು, ಊರ್ಣನಾಭ ಸುನಾಭರೆಂಬಿಬ್ಬರು, ನಂದೋಪನಂದಕರಿಬ್ಬರು, ಚಿತ್ರಬಾಣ ಚಿತ್ರವರ್ಮರಿಬ್ಬರು, ಸುವರ್ಮನು, ದುರ್ವಿಮೋಚನನು, ಅಯೋಬಾಹು, ಮಹಾಬಾಹು, ಚಿತ್ರಾಂಗನು, ಚಿತ್ರಕುಂಡಲನು, ಭೀಮವೇಗನು, ಭೀಮಬಲನು, ಬಲಾಕಿ, ಬಲವರ್ಧನನು, ಉಗ್ರಾಯುಧನು, ಸುಷೇಣನು, ಕುಂಡಧಾರನು, ಮಹೋದರನು, ಚಿತ್ರಾಯುಧನು, ನಿಷಂಗಿ, ಪಾಶಿ, ಬೃಂದಾರಕನು, ದೃಢವರ್ಮನು, ದೃಢಕ್ಷತ್ರನು, ಸೋಮಕೀರ್ತಿ, ಅನೂದರನು, ದೃಢಸಂಧ ಜರಾಸಂಧ ಸತ್ಯಸಂಧರೆಂಬ ಮೂವರು, ಸಹಸ್ರವಾಕ್ಕು, ಉಗ್ರಶ್ರವಸ್ಸು, ಉಗ್ರಸೇನನು, ಸೇನಾನಿ, ದುಷ್ಪರಾಜಯನು, ಅಪರಾಜಿತನು, ಕುಂಡಶಾಯಿ, ವಿಶಾಲಾಕ್ಷನು, ದುರಾಧರನು. ದೃಢಹಸ್ತ ಸುಹಸ್ತರಿಬ್ಬರು, ವಾತವೇಗ ಸುವರ್ಚಸರಿಬ್ಬರು, ಆದಿತ್ಯಕೇತು, ಬಹ್ವಾಶಿ, ನಾಗದತ್ತನು, ಅಗ ಯಾಯಿ, ಕವಚ, ಕ್ರಥನ, ಕುಂಡಿ, ಕುಂಡಧಾರನು, ಧನುರ್ಧರನು, ಉಗ್ರನು, ಭೀಮರಥನು, ವೀರಬಾಹು, ಅಲೋಲುಪನು, ಅಭಯನು, ರೌದ್ರಕರ್ಮನು, ಅನಾಧೃಷ್ಯನು, ಕುಂಡಭೇದಿ, ವಿರಾವಿ, ಪ್ರಮಥನು, ಪ್ರಮಾಥಿ, ದೀರ್ಘರೋಮನು, ದೀರ್ಘಬಾಹು, ಮಹಾಬಾಹು, ವ್ಯೂಢೋರಸ್ಕನು, ಕನಕಧ್ವಜನು, ಕುಂಡಾಶಿ, ವಿರಜಸ್ಸು ಎಂಬೀ ನೂರುಮಂದಿ ಪುತ್ರರಿಗೆಮೇಲೆ ದುಶ್ಯಲೆಯೆಂಬ ಕನ್ಯೆಯೊಬ್ಬಳು, ಇವು ಧೃತರಾಷ್ಟ್ರನ ಮಕ್ಕಳಿಗೆ ಜನ್ಮಕ್ರಮವಾಗಿ ಬಂದ ಹೆಸರು. ಇವರೆಲ್ಲರೂ ಅತಿರಥರು, ಎಲ್ಲರೂ ಶೂರರು, ಯುದ್ಧವಿಶಾರದರು, ವೇದವಿತ್ತುಗಳು, ಸರ್ವಾಸ್ತ್ರವಿಶಾರದರು, ಇವರೆಲ್ಲರಿಗೂ ಧೃತರಾಷ್ಟ್ರನು ಸಕಾಲದಲ್ಲಿ ಅನುರೂಪರಾದ ಕನ್ಯೆಯರನ್ನು ತಂದು ವಿವಾಹಮಾಡಿದನು. ಮತ್ತು ತನ್ನ ಮಗಳಾದ ದುಶ್ಯಲೆಯನ್ನು ಅವಳಿಗೆ ವಿವಾಹಕಾಲದಲ್ಲಿ ಜಯದ್ರಥನಿಗೆ ಕೊಟ್ಟು ವಿಧ್ಯುಕ್ತವಾಗಿ ವಿವಾಹಮಾಡಿದನು. ಧೃತರಾಷ್ಟ್ರ

ನಿಗೆ *ನೂರುಮಂದಿ ಪುತ್ರರಲ್ಲದೆ ಯುಯುತ್ಸುವೆಂಬ ಬೇರೊಬ್ಬ ಮಗನೂ ಆದನು. ದುಶ್ಶಲೆಯೂ ಸೇರಿ ನೂರಿಬ್ಬರು ಮಕ್ಕಳು.

ಇದು ನೂರಮೂವತ್ತೊಂದನೆಯ ಅಧ್ಯಾಯವು.



## ಕುಂತಿಗೆ ಇಂದ್ರನಿಂದ ಅರ್ಜುನನು ಹುಟ್ಟಿದುದು.

ದೇಹಬಲದಲ್ಲಿ ಮೇಲೆನಿಸಿದ ಭೀಮನು ಹುಟ್ಟಿದಮೇಲೆ, ಪಾಂಡುರಾಜನು " ಲೋಕದಲ್ಲಿ ಅತ್ಯಂತ ವೀರ್ಯವುಳ್ಳ ಮತ್ತೊಬ್ಬ ಪುತ್ರನು ನನಗೆ ಹುಟ್ಟಬೇಕು " ಎಂದು ತನ್ನಲ್ಲಿ ತಾನೇ ಆಲೋಚಿಸಿದನು ಆಮೇಲೆ ಆ ರಾಜನು " ಲೋಕವೆಲ್ಲ ಸಮಸ್ತಕ್ಕೂ ದೈವ ಪೌರುಷಗಳೆರಡೂ ಆಧಾರವಾಗಿವೆ. ಇವುಗಳಲ್ಲಿ ದೈವವೆಂಬುದು ಆಯಾ ಕಾಲಕ್ಕೆ ತಕ್ಕ ಕರ್ಮಗಳನ್ನು ಮಾಡುವುದರಿಂದಲೇ ಅನುಕೂಲಿಸುವುದು. ಇಂದ್ರನು ರಾಜನೆಂದೂ, ದೇವತೆಗಳಲ್ಲಿ ಮುಖ್ಯನೆಂದೂ ಕೇಳಿರುವೆನು. ಆತನ ಬಲವೂ, ಉತ್ಸಾಹವೂ ಅಸಮಾನವಾದುವು. ಆತನು ಮಹಾಪರಾಕ್ರಮಶಾಲಿ, ಅಪಾರ ತೇಜಸ್ವಿ. ತಪಸ್ಸಿನಿಂದ ಆತನನ್ನು ಆರಾಧಿಸಿ, ಮಹಾಬಲಶಾಲಿಯಾದ ಪುತ್ರನೊಬ್ಬನನ್ನು ಪಡೆಯುವೆನು. ಆತನು ನನಗೆ ಕೊಡತಕ್ಕ ಮಗನು ವಿಶೇಷ ಪರಾಕ್ರಮಶಾಲಿಯಾಗುವನು. ಆ ಪುತ್ರನು ಯುದ್ಧದಲ್ಲಿ ಮನುಷ್ಯರನ್ನೂ, ದೇವಾಸುರರನ್ನೂ ಸೋಲಿಸುವನು. ಆದುದರಿಂದ ನಾನು ತ್ರಿಕರಣಶುದ್ಧಿಯಿಂದ ಈಗ ದೊಡ್ಡ ತಪಸ್ಸನ್ನು ಮಾಡುವೆನು " ಎಂದು ನೆನೆಸಿ, ಮಹರ್ಷಿಗಳೊಡನೆಯೂ ಆಲೋಚಿಸಿ, ಒಂದು ಸಂವತ್ಸರದವರೆಗೆ ಮಂಗಳಕರವಾದ ವ್ರತವೊಂದನ್ನು ಮಾಡುವಂತೆ ಕುಂತಿಗೂ ಆಜ್ಞಾಪಿಸಿದನು. ಆಗ ದೇವೇಂದ್ರನನ್ನು ತೃಪ್ತಿಪಡಿಸುವುದಕ್ಕಾಗಿ ತಾನೂ ಒಂದೇ ಕಾಲಿನಲ್ಲಿ ನಿಂತು ಮನಸ್ಸಮಾಧಿಯಿಂದ ಉಗ್ರತಪಸ್ಸನ್ನು ಹಿಡಿದು ಪ್ರಾತಃ

* ಈ ನೂರುಮಂದಿ ಧೃತರಾಷ್ಟ್ರಪುತ್ರರ ಹೆಸರು, ಹಿಂದೆ ಇದೇ ಪರ್ವದ ೬೮ ನೇ ಅಧ್ಯಾಯದಲ್ಲಿಯೂ ಬಂದಿವೆ. ಆದರೆ ಒಂದಕ್ಕೊಂದಕ್ಕೆ ಆನುಪೂರ್ವಿಯಲ್ಲಿಯೂ, ಸಂಖ್ಯೆಯಲ್ಲಿಯೂ ಬಹಳ ವ್ಯತ್ಯಾಸವಿರುವುದರಿಂ,ದ ಪುನರುಕ್ತಿಗಳನ್ನೂ, ವಿಶೇಷಣಗಳನ್ನೂ ಬಿಟ್ಟು ನಾಮಸಂಖ್ಯೆಯನ್ನು ಸರಿನೂಡಿಕೊಳ್ಳಬೇಕೆಂದು ತೋರುತ್ತಿದೆ.

ಕಾಲದಿಂದ ಸಾಯಂಕಾಲದವರೆಗೂ ಬಿಸಿಲಿನಲ್ಲಿಯೇ ನಿಂತಿದ್ದನು. ಹೀಗೆ ಬಹುಕಾಲವು ಕಳೆದಮೇಲೆ ಇಂದ್ರನು ಆತನಲ್ಲಿಗೆ ಬಂದು "ಮೂರು ಲೋಕಗಳಲ್ಲಿಯೂ ಪ್ರಸಿದ್ಧನಾಗುವ ಮಗನನ್ನು ನಿನಗೆ ಕೊಡುವೆನು. ಆತನು ಗೋಬ್ರಾಹ್ಮಣರಿಗೂ, ಸಾಧುಜನರಿಗೂ ಸದಾ ಕ್ಷೇಮಚಿಂತಕನಾಗಿರುವನು. ವೈರಿಜನರಿಗೆ ದುಃಖವನ್ನೂ, ಬಂಧುಗಳಿಗೆ ಸಂತೋಷವನ್ನೂ ಉಂಟು ಮಾಡುವನು. ಅಂತಹ ಶೂರನಾದ ಮಗನೊಬ್ಬನನ್ನು ನಿನಗೆ ಕೊಡುವೆನು" ಎಂದನು.

ಮಹಾತ್ಮನಾದ ಇಂದ್ರನು ಹೇಳಿದ ಮಾತುಗಳನ್ನು ನೆನಪಿನಲ್ಲಿಟ್ಟುಕೊಂಡು ಪಾಂಡುವು ಕುಂತಿಯನ್ನು ಕುರಿತು "ಕಲ್ಯಾಣೀ! ನಿನಗೆ ಶುಭವಾಗಲಿ. ದೇವತೆಗಳಿಗೆ ಒಡೆಯನಾದ ಇಂದ್ರನು ನನ್ನಲ್ಲಿ ಪ್ರಸನ್ನನಾಗಿ ನೀನು ಅಪೇಕ್ಷಿಸಿದಂತಹ ಮಗನನ್ನೇ ನಿನಗೆ ಕೊಡುವುದಾಗಿರುವನು. ಅಮಾನುಷ ಕೃತ್ಯಗಳನ್ನು ಮಾಡತಕ್ಕವನೂ, ವಿಶೇಷ ಕೀರ್ತಿವಂತನೂ, ಆದ ಮಗನು ನಿನಗೆ ಹುಟ್ಟುವನು. ಶತ್ರುನಿಗ್ರಹಕನೂ, ಜ್ಞಾನಿಯೂ, ನೀತಿವಂತನೂ, ಸೂರ್ಯನಂತೆ ತೇಜಸ್ವಿಯೂ, ಯುದ್ಧದಲ್ಲಿ ಅಜೇಯನೂ ಸತ್ಕರ್ಮಪರಾಯಣನೂ, ಅದ್ಭುತಸಾಹಸಿಯೂ, ಕ್ಷತ್ರಿಯರಿಗೆಲ್ಲ ಆದರ್ಶಪ್ರಾಯನೂ ಆದ ಮಗನನ್ನು ನೀನು ಪಡೆಯುವೆ. ಇಂದ್ರನು ನಮ್ಮಲ್ಲಿ ಅನುಗ್ರಹಿಸಿರುವನು. ಈಗಲೇ ನೀನು ಮಂತ್ರದಿಂದ ಅವನನ್ನು ಆಮಂತ್ರಿಸು" ಎಂದನು. ಒಡನೆಯೇ ಆಕೆಯು ಇಂದ್ರನನ್ನು ಧ್ಯಾನಿಸಲು, ಆತನು ಕುಂತಿಯಬಳಿಗೆ ಬಂದು, ತನ್ನ ತೇಜಸ್ಸನ್ನು ಅವಳಲ್ಲಿಟ್ಟನು. ಒಡನೆಯೇ ಗಂಡುಶಿಶುವೊಂದು ಹುಟ್ಟಿತು. ಪೂರ್ವಫಲ್ಗುನಿಯೂ, ಉತ್ತರಫಲ್ಗುನಿಯೂ ಸೇರಿದ ಫಾಲ್ಗುನ ಮಾಸದಲ್ಲಿ ಉದಯದಲ್ಲಿ ಹುಟ್ಟಿದುದರಿಂದ ಆತನು ಫಲ್ಗುಣನೆಂಬ ಹೆಸರನ್ನು ಪಡೆದನು. ಈ ಮಗುವು ಹುಟ್ಟಿದಾಗ ಪ್ರಸವಗೃಹದಲ್ಲಿದ್ದ ಕುಂತಿಯನ್ನು ಕುರಿತು, ಸಮಸ್ತ ಪ್ರಾಣಿಗಳಿಗೂ ಸಂತೋಷವನ್ನುಂಟುಮಾಡುವ ಅಶರೀರವಾಣಿಯೊಂದು ಗಂಭೀರಧ್ವನಿಯಿಂದ ಆಕಾಶವನ್ನು ಪ್ರತಿಧ್ವನಿಗೊಳಿಸುತ್ತಾ, ಸಮಸ್ತ ಭೂತಗಳೂ, ಆಶ್ರಮವಾಸಿಗಳಾದ ಸಮಸ್ತಜನರೂ ಕೇಳುವಂತೆ ಸ್ಫುಟವಾಕ್ಯಗಳಿಂದ ಹೀಗೆ ಹೇಳಿತು.

“ಕುಂತೀ! ಈತನು ಕಾರ್ತವೀರ್ಯಾರ್ಜುನನಿಗೆ ಸಮಾನನು. ಶಿವನಂತೆ ಪರಾಕ್ರಮಶಾಲಿ! ಇಂದ್ರನಂತೆ ಅಜೇಯನು. ನಿನ್ನ ಯಶಸ್ಸನ್ನು ವಿಶೇಷವಾಗಿ ಹರಡುವನು. ವಿಷ್ಣುಸಮಾನನು. ವಿಷ್ಣುವು ಅದಿತಿಗೆ ಹೇಗೋಹಾಗೆ ನಿನಗೆ ಆನಂದವರ್ಧಕನು. ಈತನು ಮದ್ರದೇಶವನ್ನೂ, ಕುರುದೇಶವನ್ನೂ, ಸೋಮಕರನ್ನೂ, ಚೇದಿ, ಕಾಶೀ, ಕರೂಷಾದಿ ದೇಶಗಳನ್ನೂ ಗೆದ್ದು, ಕುರುರಾಜ್ಯಲಕ್ಷ್ಮಿಗೆ ಬೆಂಬಲವಾಗುವನು. ಈತನ ಬಾಹುಬಲದಿಂದ ಅಗ್ನಿಯು ಖಾಂಡವವನದಲ್ಲಿರುವ ಸಮಸ್ತಪ್ರಾಣಿಗಳ ಮೇದಸ್ಸನ್ನೂ ಭುಜಿಸಿ ತೃಪ್ತನಾಗುವನು. ಈ ಶೂರನು ಭೂಲೋಕದಲ್ಲಿರುವ ಸಮಸ್ತರಾಜರನ್ನೂ ಗೆದ್ದು, ತನ್ನ ಸಹೋದರರೊಡನೆ ಮೂರು ಅಶ್ವಮೇಧಯಾಗಗಳನ್ನು ಮಾಡುವನು. ಈತನು ಪರಶುರಾಮನಿಗೆ ಸಮಾನನೂ, ವಿಷ್ಣುವಿನಂತೆ ಪರಾಕ್ರಮವುಳ್ಳವನೂ, ವೀರಶ್ರೇಷ್ಠನೂ, ಲೋಕಪ್ರಸಿದ್ಧನೂ ಆಗುವನು. ಈತನು ಮಹಾದೇವನಾದ ಶಂಕರನನ್ನು ಯುದ್ಧದಲ್ಲಿ ಮೆಚ್ಚಿಸುವನು. ಆ ದೇವನು ಸಂತುಷ್ಟನಾಗಿ ಈತನಿಗೆ ಪಾಶುಪತಾಸ್ತ್ರವನ್ನು ಕೊಡುವನು. ಮಹಾಪರಾಕ್ರಮಿಯಾದ ಈ ನಿನ್ನ ಮಗನು ಇಂದ್ರನ ಆಜ್ಞೆಯಂತೆ ನಿವಾತಕವಚರೆಂಬ ದೇವವಿರೋಧಿಗಳಾದ ರಾಕ್ಷಸರನ್ನು ಸಂಹರಿಸುವನು. ಮತ್ತು ದೇವಲೋಕದಿಂದ ಅನೇಕ ದಿವ್ಯಾಸ್ತ್ರಗಳನ್ನೂ ಪಡೆಯುವನು. ಈ ಪುರುಷಲಲಾಮನು ನಶಿಸಿ ಹೋದ ರಾಜ್ಯಲಕ್ಷ್ಮಿಯನ್ನು ಹಿಂತಿರುಗಿ ಕರೆತರಬಲ್ಲನು” ಎಂದಿತು. ಸೂತಿಕಾಗೃಹದಲ್ಲಿದ್ದ ಕುಂತಿಯೊಡನೆ ಶತಶೃಂಗಪರ್ವತದಲ್ಲಿದ್ದ ಎಲ್ಲಾ ಋಷಿಗಳೂ, ದೇವರ್ಷಿಗಳೂ, ಇಂದ್ರಾದಿ ದೇವತೆಗಳೂ ಈ ಅಶರೀರವಾಣಿಯನ್ನು ಕೇಳಿ ಆನಂದಪರವಶರಾದರು. ದೇವದುಂದುಭಿಗಳು ಮೊಳಗಿದುವು. ಪುಷ್ಪವರ್ಷವು ಸುರಿಯಿತು. ದೇವತೆಗಳು ಗುಂಪುಗುಂಪಾಗಿ ಸೇರಿ ಅರ್ಜುನನನ್ನು ಕೊಂಡಾಡಿದರು. ನಾಗ ಗಂಧರ್ವ ಗರುಡರೂ, ಅಪ್ಸರಸ್ಸುಗಳೂ, ಭರದ್ವಾಜ, ಕಶ್ಯಪ, ಗೌತಮ, ವಿಶ್ವಾಮಿತ್ರ, ಜಮದಗ್ನಿ, ವಸಿಷ್ಠಾದಿ ಮಹರ್ಷಿಗಳೂ, ಹಿಂದೊಮ್ಮೆ ಸೂರ್ಯನು ಮರೆಸಿ ಹೋದಾಗ ತಾನೇ ಉದಯಿಸಿ ಪ್ರಪಂಚಕ್ಕೆ ಬೆಳಕನ್ನು ಕೊಟ್ಟ ಅತ್ರಿ ಮಹಾಮುನಿಯೂ, ಮಹನೀಯರಾದ ಸಪ್ತಋಷಿಗಳೂ, ಮರೀಚಿ, ಅಂ

ಗಿರಸ, ಪುಲಸ್ತ್ಯ, ಪುಲಹ, ಕ್ರತು, ದಕ್ಷ ಮುಂತಾದವರೂ ಬಂದರು. ಗಂಧರ್ವರೂ, ಅಪ್ಸರಸುಗಳೂ ದಿವ್ಯಪುಷ್ಪಮಾಲಿಕೆಗಳನ್ನು ಧರಿಸಿ, ದಿವ್ಯವಾದ ಉಡುಪುಗಳನ್ನುಟ್ಟು, ಸರ್ವಾಲಂಕಾರಭೂಷಿತರಾಗಿ ಬಂದು ಮಧುರ ಗಾನಗಳಿಂದ ಅರ್ಜುನನನ್ನು ಸ್ತುತಿಮಾಡಿದರು. ಅಪ್ಸರಸ್ಸುಗಳು ಗುಂಪುಕೂಡಿ ನರ್ತನಮಾಡಿದರು. ಮಹರ್ಷಿಗಳು ಎಲ್ಲಾ ಕಡೆಗಳಲ್ಲಿಯೂ ವೇದ ಮಂತ್ರಗಳನ್ನು ಜಪಿಸಿದರು ತುಂಬುರುವು ಅನೇಕಗಂಧರ್ವರೊಡನೆ ಸೇರಿ ಗಾನಮಾಡಿದನು. ಭೀಮಸೇನ, ಉಗ್ರಸೇನ, ಊರ್ಣಾಯು, ಅನಘ, ಗೋಪತಿ, ಧೃತರಾಷ್ಟ್ರ, ಸೂರ್ಯವರ್ಚಸ್ಸು, ಯುಗಪ, ತೃಣಪ, ಕಾರ್ಷ್ಣಿ, ನಂದಿ, ಚೈತ್ರರಥ, ಶಾಲಿಶಿರಸ್ಸು, ಪರ್ಜನ್ಯ, ಕಲಿ, ನಾರದ, ಋತ್ವಂತ, ಬೃಹತ್, ಕರಾಳ, ಬ್ರಹ್ಮಚಾರಿ, ಬಹುಗುಣ, ಸುವರ್ಣ, ವಿಶ್ವಾವಸು, ಭುಮನ್ಯು, ಸುಚಂದ್ರ, ಚರು, ವೊದಲಾದವರೂ, ಮಧುರಗಾನದಲ್ಲಿ ಪ್ರಖ್ಯಾತರಾದ ಹಾಹಾ, ಹೂಹೂ, ಎಂಬ ಗಂಧರ್ವಪ್ರಧಾನರೂ, ಇನ್ನೂ ಅನೇಕ ದೇವಗಂಧರ್ವರೂ ನೆರೆದು ಗಾನಮಾಡಿದರು. ಸರ್ವಾಭರಣಾಲಂಕೃತರಾದ ಅನೇಕ ಅಪ್ಸರಸ್ತ್ರೀಯರು ಅಲ್ಲಿಗೆ ಬಂದು ಗಾನ ನರ್ತನಗಳನ್ನು ಮಾಡುತಿದ್ದರು. ಅವರಲ್ಲಿ ಪ್ರಖ್ಯಾತರಾದ ಅನೂಚಾನೆ, ಅನವದ್ಯೆ, ಗುಣಮುಖ್ಯೆ, ಗುಣಾವರೆ, ಅಧಿಕೆ, ಸೋಮೆ, ಮಿಶ್ರಕೇಶಿ, ಅಲಂಬುಸೆ, ಮರೀಚಿ, ಶುಚಿಕೆ, ವಿದ್ಯುತ್ಪರ್ಣೆ, ತಿಲೋತ್ತಮೆ, ಅಂಬಿಕೆ, ಲಕ್ಷಣೆ, ಕ್ಷೇಮೆ, ದೇವಿ, ರಂಭೆ, ಮನೋರಮೆ, ಅಸಿತೆ, ಸುಬಾಹು, ಸುಪ್ರಿಯೆ, ವಪುಸ್ಸು, ಪುಂಡರೀಕೆ, ಸುಗಂಧೆ, ಸುರಸೆ, ಪ್ರಮಾಥಿನಿ, ಸೌಮ್ಯೆ, ಶಾರದ್ವತಿ ವೊದಲಾದವರೆಲ್ಲ ಗುಂಪುಕೂಡಿ ನರ್ತನಮಾಡಿದರು. ಬೇರೊಂದೆಡೆಯಲ್ಲಿ ಮೇನಕೆ, ಸಹಜನ್ಯೆ, ಕರ್ಣಿಕೆ, ಪುಂಜಿಕಸ್ಥಲೆ, ಋತುಸ್ಥಲೆ, ಘೃತಾಚಿ, ವಿಶ್ವಾಚಿ, ಪೂರ್ವಚಿತ್ತಿ, ಉಮ್ಲೋಚೆ, ಪ್ರಮ್ಲೋಚೆ, ಊರ್ವಶಿ ಎಂಬೀ ಹನ್ನೊಂದುಮಂದಿ ಅಪ್ಸರಸ್ತ್ರೀಯರೂ ಹಾಡಿದರು. ಧಾತೃ, ಅರ್ಯಮ, ಮಿತ್ರ, ವರುಣ, ಅಂಶ, ಭಗ, ಇಂದ್ರ, ವಿವಸ್ವಂತ, ಪೂಷ, ಪರ್ಜನ್ಯ, ತ್ವಷ್ಟ, ಜನ್ಮತಃ ತಾನು ಕನಿಷ್ಠನಾಗಿದ್ದರೂ ಮಹಿಮೆಯಲ್ಲಿ ಜ್ಯೇಷ್ಠನೆನಿಸಿದ ವಿಷ್ಣುವೆಂಬೀ ದ್ವಾದಶಾದಿತ್ಯರೂ, ಮೃಗವ್ಯಾಧ, ಸರ್ಪ, ನಿಋತಿ (ನಿರೃತಿ) ಅಜೈಕಪಾತ್ತು, ಅಹಿರ್ಬುಧ್ನ್ಯ, ಪಿ

ಸಾಕಿ, ದಹನ, ಈಶ್ವರ, ಕಪಾಲಿ, ಸ್ಥಾಣು, ಬಕನೆಂಬೀ ಏಕಾದಶ ರುದ್ರರೂ, ಅಶ್ವಿನೀದೇವತೆಗಳೂ, ಅಷ್ಟವಸುಗಳೂ, ಮಹಾಬಲಿಷ್ಠರಾದ ಸಪ್ತಮರುತ್ತುಗಳೂ, ವಿಶ್ವೇದೇವತೆಗಳೂ, ಸಾಧ್ಯರೂ ಅಲ್ಲಿ ಬಂದು ಸುತ್ತಿ ನೆರೆದಿದ್ದರು. ಮಹಾತಪಸ್ವಿಗಳೂ, ಮಹಾಕೋಪಿಷ್ಠರೂ, ಮಹಾಬಲಶಾಲಿಗಳೂ ಆದ ಕರ್ಕೋಟಕ, ವಾಸುಕಿ, ಕಚ್ಛಪ, ಕುಂಡ, ತಕ್ಷಕರೆಂಬೀ ಪ್ರಸಿದ್ಧ ನಾಗರೊಡನೆ ಇನ್ನೂ ಅನೇಕನಾಗರೂ ಅಲ್ಲಿಗೆ ಬಂದಿದ್ದರು. ತಾರ್ಕ್ಷ್ಯ, ಅರಿಷ್ಟನೇಮಿ, ಗರುಡ, ಅಸಿತಧ್ವಜ, ಅರುಣ, ಆರುಣಿ, ಎಂಬ ವೈನತೇಯರೂ ಬಂದು ನೆರೆದಿದ್ದರು. ವಿಮಾನದಲ್ಲಿಯೂ, ಪರ್ವತಶಿಖರಗಳಲ್ಲಿಯೂ ಇದ್ದ ಈ ದೇವತಾಸಮೂಹಗಳನ್ನು ತಪಸ್ಸಿದ್ಧರೂ, ಮಹರ್ಷಿಗಳೂಮಾತ್ರ ನೋಡಿದರು. ಸಾಮಾನ್ಯಜನರಾರಿಗೂ ಅವರು ಕಾಣಿಸಲಿಲ್ಲ. ಆ ಮಹಾಶ್ಚರ್ಯಕ್ಕೆ ಋಷಿಶ್ರೇಷ್ಠರೆಲ್ಲ ಬೆರಗಾಗಿ, ಆ ಅರ್ಜುನನ ಪ್ರಭಾವದಲ್ಲಿ ವಿಶೇಷಗೌರವವುಳ್ಳವರಾದರು. ಪಾಂಡುವು ಮನಸ್ಸಿನಲ್ಲಿ ಪರಮಸಂತುಷ್ಟನಾಗಿ ದೇವತಾಪೂಜೆಗಳನ್ನು ನಡೆಸಿದನು. ಪಾಂಡುವಿನಿಂದ ಪೂಜಿತರಾದ ಆ ದೇವತೆಗಳು ಆ ಪುರುಷಲಲಾಮನನ್ನು ನೋಡಿ “ದೇವತೆಗಳ ಅನುಗ್ರಹದಿಂದ ಧರ್ಮದೇವತೆಯು ನಿನಗೆ ಜ್ಯೇಷ್ಠಪುತ್ರನಾಗಿ ಹುಟ್ಟಿರುವನು. ವಾಯುವೇ ಮಹಾಬಲಶಾಲಿಯೂ, ಶತ್ರುಗಳ ಸೊಕ್ಕನ್ನು ಮುರಿಯತಕ್ಕವನೂ ಆದ ಈ ಭೀಮನಾಗಿ ಹುಟ್ಟಿರುವನು. ಇಂದ್ರನು ಸುಂದರನಾದ ಈ ಅರ್ಜುನನ ರೂಪದಿಂದ ಹುಟ್ಟಿರುವನು. ಈ ರೀತಿಯಲ್ಲಿ ನೀನು ದೇವತೆಗಳಿಗೇ ತಂದೆಯಾಗಿರುವುದರಿಂದ, ನಿನಗಿಂತಲೂ ಉತ್ತಮನಾದ ಪುಣ್ಯಪುರುಷನೇ ಇಲ್ಲ. ಪಿತೃಗಳ ಋಣದಿಂದ ವಿಮುಕ್ತನಾಗಿ ಪುಣ್ಯವನ್ನು ಹೊಂದಿ ಸ್ವರ್ಗವನ್ನು ಸೇರುವೆ” ಎಂದರು. ಹೀಗೆ ಹೇಳಿ ದೇವತೆಗಳೆಲ್ಲರೂ ತಮ್ಮತಮ್ಮ ಸ್ಥಳಗಳಿಗೆ ಹೋದರು. ಮಹಾಯಶಸ್ವಿಯಾದ ಪಾಂಡುವಾದರೋ ಇನ್ನೂ ಮಕ್ಕಳನ್ನು ಪಡೆಯುವ ಆಶೆಯಿಂದ, ಸುಂದರನಾದ ಮಗನೊಬ್ಬನನ್ನು ಅಪೇಕ್ಷಿಸಿ ಮತ್ತೆ ಕುಂತಿಗೆ ಆಜ್ಞಾಪಿಸಿದನು. ಅದಕ್ಕೆ ಕುಂತಿಯು “ಇದಕ್ಕಿಂತ ಹೆಚ್ಚಾಗಿ ನಾಲ್ಕನೆಯ ಮಗನನ್ನು ಪಡೆಯುವಂತೆ ಯಾವ ಆಪದ್ಧರ್ಮವು ವಿಧಿಸಲಿಲ್ಲ. ಹೆಚ್ಚುಮಂದಿ ಮಕ್ಕಳನ್ನು ಅಪೇಕ್ಷಿಸುವ ಸ್ತ್ರೀಯು ಪತಿ

ಪ್ರತಿಯೆನಿಸಲಾರಳು. ಐದನೆಯ ಮಗನನ್ನು ಕೋರಿದವಳು ವೇಶ್ಯೆಗೆ ಸಮಾನಳಾಗುವಳು. ನೀನು ಸಕಲವನ್ನೂ ತಿಳಿದವನು. ನಿನಗೆ ಈ ಧರ್ಮವು ತಿಳಿದಿದ್ದರೂ, ಪುತ್ರಾಪೇಕ್ಷೆಯಿಂದ ಧರ್ಮವನ್ನು ಬಿಟ್ಟು, ನನ್ನನ್ನು ನೋಡಿ ಬುದ್ಧಿವಿಕಲ್ಪವುಳ್ಳವನಂತೆ ಹೀಗೇಕೆ ಮಾತನಾಡುವೆ?'' ಎಂದಳು.

ಇದು ನೂರಮೂವತ್ತೆರಡನೆಯ ಅಧ್ಯಾಯವು.

ಅಶ್ವಿನೀದೇವತೆಗಳಿಂದ ಮಾದ್ರಿಯಲ್ಲಿ ನಕುಲಸಹದೇವರು ಹುಟ್ಟಿದುದು. ಪಾಂಡವರಿಗೆ ನಾಮಕರಣವಾದುದು. ಪಾಂಡವರು ಶುಕ್ರನಿಂದ ಧನುರ್ವೇದವನ್ನು ಅಭ್ಯಾಸಮಾಡಿದುದು.

ಕುಂತಿಗೂ, ಗಾಂಧಾರಿಗೂ ಹೀಗೆ ಮಕ್ಕಳಾದಮೇಲೆ ಮಾದ್ರಿಯು ರಹಸ್ಯವಾಗಿ ಪಾಂಡುವನ್ನು ಕುರಿತು “ ನಾಥಾ ! ನಿನಗೆ ಸಂತಾನಪ್ರಾಪ್ತಿಗೆ ಅರ್ಹತೆಯಿಲ್ಲವೆಂಬುದಕ್ಕಾಗಿಯೂ ನಾನು ವ್ಯಸನಪಡುವುದಿಲ್ಲ. ನಾನು ಕುಂತಿಗಿಂತಲೂ ದೊಡ್ಡ ಮನೆತನಕ್ಕೆ ಸೇರಿದವಳಾಗಿದ್ದು, ಅವಳಿಗಿಂತಲೂ ನಾನು ಕೀಳಾಗಿರುವೆನೆಂಬುದಕ್ಕೂ ನಾನು ಕೊರಗುವುದಿಲ್ಲ. ಗಾಂಧಾರಿಗೆ ನೂರುಮಂದಿ ಮಕ್ಕಳು ಹುಟ್ಟಿದರೆಂದು ಕೇಳಿಯೂ ನನಗೆ ದುಃಖವಿಲ್ಲ. ಆದರೆ, ಕುಂತಿಯೂ, ನಾನೂ ನಿನಗೆ ಸಮಭಾರ್ಯೆಯರಾಗಿರುವಾಗ, ಅವಳಿಗೆಮಕ್ಕಳಾಗಿ ನನಗೆಮಾತ್ರ ಪುತ್ರರಿಲ್ಲದಿರುವುದೇ ನನಗೆ ಮಿತಿಮೀರಿದ ದುಃಖವನ್ನುಂಟುಮಾಡುತ್ತಿರುವುದು. ಕುಂತಿಯಲ್ಲಿಯಾದರೂ, ಈಗ ನಿನಗೆಸಂತತಿಭಾಗ್ಯವು ಲಭಿಸಿದುದೇನೋ ನನಗೆ ಸಂತೋಷವೇ ! ಆದರೆ ಕುಂತಿಯೇ ಈಗ ನನಗೂ ಪುತ್ರಸಂತಾನಭಾಗ್ಯವನ್ನುಂಟುಮಾಡಿದರೆ ನನ್ನನ್ನೂ ಅನುಗ್ರಹಿಸಿದಂತಾಗುವುದು. ಅದರಿಂದ ನಿನಗೂ ಒಳ್ಳೆಯದು. ಕುಂತಿಯು ನನಗೆ ಸವತಿಯಾಗಿರುವುದರಿಂದ, ನಾನಾಗಿ ಅವಳಿಂದ ಉಪಕಾರವನ್ನು ಯಾಚಿಸುವುದು ನನಗೇನೋ ಅವಮಾನಕರವಾಗಿದೆ. ನನ್ನಲ್ಲಿ

ನಿನಗೆ ದಯೆಯಿದ್ದರೆ, ನೀನೇ ಆಕೆಗೆ ಆಜ್ಞಾಪಿಸು" ಎಂದಳು. ಅದಕ್ಕೆ ಪಾಂಡುವು "ಮಾದ್ರೀ! ನನ್ನ ಹೃದಯವನ್ನು ಕೂಡ ನಿನ್ನ ವಿಷಯವಾದ ಈ ಚಿಂತೆಯೇ ಅಡಿಗಡಿಗೆ ಬಾಧಿಸುತ್ತಿದೆ. ಈ ವಿಚಾರದಲ್ಲಿ ನಿನ್ನ ಅಭಿಪ್ರಾಯವು ಹೇಗೋ ಅದನ್ನು ತಿಳಿದುಕೊಳ್ಳಬೇಕೆಂದೇ ನಾನು ನಿನಗೆ ಇದುವರೆಗೆ ಈ ವಿಷಯವನ್ನು ತಿಳಿಸದಿದ್ದೆನು. ಈಗ ನಿನಗೂ ಇದು ಸಮ್ಮತವೆಂದು ತಿಳಿದುದರಿಂದ ಇನ್ನುಮೇಲೆ ಪ್ರಯತ್ನಿಸುವೆನು. ನಾನು ಹೇಳಿದರೆ ಕುಂತಿಯು ತಪ್ಪದೆ ನನ್ನ ಮಾತನ್ನು ಅಂಗೀಕರಿಸುವಳೆಂದು ಭಾವಿಸುವೆನು" ಎಂದು ಹೇಳಿ, ಆಮೇಲೆ ಕುಂತಿಯನ್ನು ಕರೆದು ರಹಸ್ಯವಾಗಿ "ಕಲ್ಯಾಣೀ! ಮಾದ್ರಿಯನ್ನೂ ಅನುಗ್ರಹಿಸು. ಕುಲಕ್ಕೆ ಅಧಿಕಸಂತಾನದೊಡನೆ ಲೋಕಕ್ಕೆ ಪ್ರಿಯವನ್ನೂ ಉಂಟುಮಾಡು. ನನಗೂ, ಮಹಾತ್ಮರಾದ ನನ್ನ ಪೂರ್ವಿಕರಿಗೂ ಪಿಂಡನಾಶವಾಗದಿರುವುದಕ್ಕಾಗಿಯೂ, ನನ್ನ ಪ್ರೀತಿಗಾಗಿಯೂ ಈ ಕಾರ್ಯವನ್ನು ನೀನು ಮಾಡಬೇಕು. ಇದರಿಂದ ನಿನಗೆ ಶಾಶ್ವತವಾದ ಯಶಸ್ಸುಂಟು. ನಿನಗೆ ದುಸ್ಸಾಧ್ಯವಾದರೂ ಈ ಕಾರ್ಯವನ್ನು ಮಾಡಬೇಕು. ಇಂದ್ರನು ದೇವರಾಜ್ಯವನ್ನು ಪಡೆದಮೇಲೆಯೂ ಕೀರ್ತಿಗಾಗಿ ಅನೇಕ ಯಾಗಗಳನ್ನು ಮಾಡಿದನು. ನಾರೀಮಣೀ! ಹಾಗೆಯೇ ಮಂತ್ರವಿತ್ತುಗಳಾದ ಬ್ರಾಹ್ಮಣರು ವಿಶೇಷದುಷ್ಕರಗಳಾದ ತಪಸ್ಸುಗಳನ್ನು ಮಾಡಿಯೂ ಕೀರ್ತಿಗಾಗಿ ತಮ್ಮ ಗುರುಹಿರಿಯರನ್ನು ಪೂಜಿಸುವರು. ಹಾಗೆಯೇ ರಾಜರ್ಷಿಗಳೂ, ತಪೋಧನರಾದ ಬ್ರಾಹ್ಮಣರೂ ದುಷ್ಕರವಾದ ಅನೇಕಕಾರ್ಯಗಳನ್ನು ಕೀರ್ತಿಗಾಗಿಯೇ ಮಾಡಿರುವರು. ನೀನೂ ಅವರಂತೆ ಸುಶೀಲೆಯಾದುದರಿಂದ, ದೋಣಿಯಿಂದ ನದಿಯನ್ನು ದಾಟಿಸುವಂತೆ, ಈ ಮಾದ್ರಿಯನ್ನೂ ದಡಕ್ಕೇರಿಸುವಂತೆ ಆಕೆಗೂ ಸಂತತಿಯನ್ನು ಕೊಟ್ಟು ಅತಿಶಯವಾದ ಕೀರ್ತಿಯನ್ನು ಪಡೆಯುವವಳಾಗು" ಎಂದನು. ಆಗ ಕುಂತಿಯು "ನಾಥಾ! ವಿಧಿಗನುಸಾರವಾಗಿಯೂ ನೀನು ಹೇಳಿದಂತೆ ನಡೆಯಬೇಕಾಗಿದೆ. ಮಾದ್ರಿಗೆ ಸಂತತಿಯನ್ನು ಕೊಡುವೆನು" ಎಂದು ಹೇಳಿ ಮಾದ್ರಿಯನ್ನು ಕುರಿತು "ಸಖಿ! ನೀನು ಯಾವನಾದರೊಬ್ಬ ದೇವತೆಯನ್ನು ಮನಸ್ಸಿನಲ್ಲಿ ನಿಶ್ಚಯಿಸು. ಅದರಿಂದ ನಿನಗೆ ಅನುರೂಪವಾದ ಸಂತತಿಯು ಆಗುವುದು" ಎಂದಳು.

ರಾಜಪುತ್ರಿಯಾದ ಮಾದ್ರಿಯು ಸ್ನಾನಮಾಡಿ, ಕ್ರಮವಾಗಿ ಕುಂತಿಯಿಂದ ಮಂತ್ರವನ್ನು ಉಪದೇಶಹೊಂದಿದಮೇಲೆ, ಶಯನಗೃಹದಲ್ಲಿ ಮಲಗಿದ್ದಳು. ಮಾದ್ರಿಯು ಏಕಾಂತವಾಗಿ ಆಲೋಚಿಸಿ ಅಶ್ವಿನೀದೇವತೆಗಳನ್ನು ಮನಸ್ಸಿನಲ್ಲಿ ಸ್ಮರಿಸಿದಳು. ಆ ದೇವತೆಗಳಿಬ್ಬರೂ ಒಡನೆಯೇ ಗೋಚರಿಸಿ, ಭೂಲೋಕದಲ್ಲಿ ಅಸಮಾನವಾದ ರೂಪವುಳ್ಳ ನಕುಲಸಹದೇವರೆಂಬ ಅವಳಿಮಕ್ಕಳನ್ನು ಆಕೆಯಲ್ಲಿ ಜನಿಸುವಂತೆ ಮಾಡಿದರು. ಹಿಂದಿನಂತೆ ಅಶರೀರವಾಣಿಯೊಂದು "ಇವರು ಧರ್ಮದಲ್ಲಿಯೂ, ಭಕ್ತಿಯಲ್ಲಿಯೂ, ಶೀಲದಲ್ಲಿಯೂ, ವಿನಯದಲ್ಲಿಯೂ ಅಶ್ವಿನೀದೇವತೆಗಳನ್ನೂ ಮಿಾರಿಸಿ, ಬಲ, ರೂಪ, ಗುಣಗಳಿಂದ ಮೇಲೆನಿಸುವರು" ಎಂದಿತು. ಶರೀರಕಾಂತಿ, ಸೌಂದರ್ಯಗಳಿಂದ ಅವರಿಬ್ಬರೂ ಆ ಪ್ರದೇಶವೆಲ್ಲವನ್ನೂ ಪ್ರಕಾಶಗೊಳಿಸಿದರು. ರಾಜಾ! ಶತಶೃಂಗಪರ್ವತದಲ್ಲಿ ವಾಸಮಾಡುವ ಋಷಿಗಳು ಭಕ್ತಿಪೂರ್ವಕವಾಗಿಯೂ, ಶಾಸ್ತ್ರೋಕ್ತಪ್ರಕಾರವಾಗಿಯೂ ಆಶೀರ್ವದಿಸುತ್ತ ಪಂಚಪಾಂಡವರಿಗೆ ನಾಮಕರಣಗಳನ್ನು ಮಾಡಿದರು. ಕುಂತಿಯ ಪುತ್ರರಲ್ಲಿ ಜ್ಯೇಷ್ಠನಿಗೆ ಯುಧಿಷ್ಠಿರನೆಂದೂ, ಮಧ್ಯಮನಿಗೆ ಭೀಮಸೇನನೆಂದೂ, ಮೂರನೆಯವನಿಗೆ ಅರ್ಜುನನೆಂದೂ, ಮಾದ್ರಿಯ ಪುತ್ರರಲ್ಲಿ ಮೊದಲನೆಯವನಿಗೆ ನಕುಲನೆಂದೂ, ಎರಡನೆಯವನಿಗೆ ಸಹದೇವನೆಂದೂ ಹೆಸರಿಟ್ಟರು. ಪಾಂಡುಕುಮಾರರೈವರೂ ಒಂದೊಂದು ಸಂವತ್ಸರಾಂತದಲ್ಲಿ ಒಬ್ಬೊಬ್ಬರಂತೆ ಹುಟ್ಟಿದ್ದರೂ ಅವರೈವರೂ ಸಮವಾಗಿ ಐದು ವರ್ಷದ ಬಾಲಕರಂತೆ ಕಾಣುತ್ತಿದ್ದರು.

ರೂಪ ಶೀಲ ಪರಾಕ್ರಮಗಳಿಂದೊಪ್ಪುತ್ತ ಕಾಂತಿಯುಕ್ತರಾದ ಆ ಕುಮಾರರನ್ನು ನೋಡಿ ಪಾಂಡುವು ಅತ್ಯಾನಂದಗೊಂಡನು. ಆ ಕುಮಾರರು ಶತಶೃಂಗಪರ್ವತದಲ್ಲಿರುವ ಋಷಿಗಳೆಲ್ಲರ ಮತ್ತು ಅವರ ಪತ್ನಿಯರ ಆದರಕ್ಕೆ ಪಾತ್ರರಾದರು. ಪಾಂಡುವು ತಿರುಗಿ ಮಾದ್ರಿಗೆ ಮತ್ತೊಂದು ಮಂತ್ರೋಪದೇಶಕ್ಕಾಗಿ ಕುಂತಿಗೆ ನಿಯಮಿಸಲು, ಕುಂತಿಯು ರಹಸ್ಯವಾಗಿ ತನ್ನ ಪತಿಯೊಡನೆ "ನಾನು ಉಪದೇಶಿಸಿದ ಒಂದೇ ಮಂತ್ರಕ್ಕೆ ಅವಳು ಇಬ್ಬರುಪುತ್ರರನ್ನು ಪಡೆದಳು. ಆದುದರಿಂದ ಈಗಲೇ ನಾನು ಮೋಸ

ಹೋದಂತಾಗಿದೆ. ಇನ್ನೂ ಒಂದು ಮಂತ್ರವನ್ನು ಅವಳಿಗೆ ಉಪದೇಶಿಸಿದರೆ, ಅವಳು ಪುತ್ರಲಾಭದಲ್ಲಿ ನನ್ನನ್ನು ಮೀರಿಸುವಳೆಂದು ಭಯಪಡುವೆನು. ದುಷ್ಟಸ್ತ್ರೀಯರ ನಡೆವಳಿಕೆಯೇ ಹೀಗೆ. ನಾನೂ ಅವಳಿದೇವತೆಗಳನ್ನು ಸ್ಮರಿಸಿದಲ್ಲಿ ಒಂದೊಂದು ಸಲಕ್ಕೆ ಇಬ್ಬಿಬ್ಬರು ಮಕ್ಕಳನ್ನು ಪಡೆಯಬಹುದಾಗಿದ್ದಿತಲ್ಲವೆ? ನಾನು ಅಜ್ಞಳಾದುದರಿಂದ ಆ ಯುಕ್ತಿಯು ನನಗೆ ತಿಳಿಯದೆಹೋಯಿತು. ಆದುದರಿಂದ ಇನ್ನು ನನ್ನನ್ನು ನಿರ್ಬಂಧಿಸಬೇಡವೆಂದು ಬೇಡಿಕೊಳ್ಳುವೆನು. ಇದು ನೀನು ನನಗೆ ಕೊಟ್ಟ ವರವಾಗಲಿ'' ಎಂದಳು.

ಜನಮೇಜಯರಾಜಾ! ಆ ರಾಜಕುಮಾರರೈವರೂ ಕೀರ್ತಿವಂತರೂ, ಕುರುವಂಶವನ್ನು ವೃದ್ಧಿಮಾಡತಕ್ಕವರೂ, ಶುಭಲಕ್ಷಣ ಸಂಪನ್ನರೂ, ಚಂದ್ರನಂತೆ ಆಹ್ಲಾದಕರೂ ಆಗಿದ್ದರು. ಸಿಹ್ಮದಂತೆ ದರ್ಪದಿಂದ ಕೂಡಿ ಧನುರ್ವಿದ್ಯಾನಿಪುಣರೆನಿಸಿದರು. ಅವರ ಎದೆ, ಅವರ ಕಣ್ಣುಗಳು, ಅವರ ಗಂಭೀರವಾದ ನಡೆ, ಅವರ ಕಂಠ, ಅವರ ಸಾಹಸ, ಇವೆಲ್ಲ ಸಿಹ್ಮಕ್ಕೆ ಸಮಾನರೀತಿಯಲ್ಲಿದ್ದುವು. ದೇವಕುಮಾರರಂತೆ ಆ ಪಾಂಡವರು ಬೆಳೆಯುತ್ತಿರಲು, ಪವಿತ್ರವಾದ ಆ ಹಿಮವತ್ಪರ್ವತದಲ್ಲಿದ್ದ ಮುನಿಗಳೆಲ್ಲರೂ ನೋಡಿ ಆಶ್ಚರ್ಯಪಟ್ಟರು. ಶತಶೃಂಗದಲ್ಲಿದ್ದ ಋಷಿಗಳೆಲ್ಲ ಆ ಕುಮಾರರನ್ನು ಎತ್ತಿಕೊಂಡು, ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆ ಭಾವಿಸುತಿದ್ದರು. ಕಿಂದಮನ ಶಾಪಕ್ಕಾಗಿ ಸದಾ ಭಯಪಟ್ಟು ಕೊರಗುತಿದ್ದ ಪಾಂಡುವು ಶತಶೃಂಗಕ್ಕೆ ಹೋಗಿ ಅಲ್ಲಿ ತಪಸ್ಸುಮಾಡುತ್ತಿರುವ ಋಷಿಗಳೊಡನೆ ತಾನೂ ಋಷಿಯಾಗಿದ್ದನು. ಹೀಗೆ ಪಾಂಡುರಾಜನು ಕಾಡಿನಲ್ಲಿ ಕಂದಮೂಲಫಲಗಳನ್ನು ತಿನ್ನುತ್ತ, ಜಿತೇಂದ್ರಿಯನಾಗಿ ತಪೋನಿಷ್ಠೆಯಲ್ಲಿರುವನೆಂಬ ಮಾತುಗಳನ್ನು ಕೇಳಿ, ವಸುದೇವಾದಿ ಯಾದವರೆಲ್ಲರೂ ವ್ಯಸನದಿಂದ ಕೊರಗುತಿದ್ದರು. ಆ ಯಾದವರೆಲ್ಲರೂ ತಮ್ಮ ಬಂಧುಗಳೊಡನೆ ಕಲೆತು "ಅಯ್ಯೋ! ಇನ್ನು ನಾವು ಆ ಪಾಂಡುರಾಜನ ಪ್ರಿಯವಾಕ್ಯಗಳನ್ನು ಕೇಳುವುದೆಲ್ಲಿ? ಅವನನ್ನು ಯಾವಾಗ ತಿರುಗಿ ನೋಡುವೆವು?'' ಎಂದು ವಿಲಪಿಸುತ್ತಿರುವ ಸಮಯಕ್ಕೆ ಸರಿಯಾಗಿ, ಪಾಂಡುವಿಗೆ ಪುತ್ರಲಾಭವಾದ ವೃತ್ತಾಂತ

ವು ಅವರ ಕಿವಿಗೆ ಬಿದ್ದಿತು. ಅವರ ದುಃಖವೆಲ್ಲ ಸಂತೋಷಕ್ಕೆ ತಿರುಗಿತು. ಆಗ ಅವರೆಲ್ಲರೂ ಒಟ್ಟಿಗೆ ವಸುದೇವನೊಡನೆ “ ಮಹಾಬಲಶಾಲಿಗಳಾದ ಪಾಂಡುಕುಮಾರರಿಗೆ ಜಾತಕರ್ಮಾದಿ ಸಂಸ್ಕಾರಗಳು ನಡೆಯದಿರಕೂಡ ದು ನೀನು ಪಾಂಡುವಿಗೆ ಪ್ರಿಯವನ್ನೂ, ಹಿತವನ್ನೂ ಕೋರತಕ್ಕವನು. ಆದುದರಿಂದ ಈಗಲೇ ನಿನ್ನ ಪುರೋಹಿತನನ್ನು ಅಲ್ಲಿಗೆ ಕಳುಹಿಸು ” ಎಂದು ಪ್ರೀತಿಪುರಸ್ಸರವಾದ ಮಾತುಗಳನ್ನಾಡಿದರು. ಅದರಂತೆ ವಸುದೇವನು ತನ್ನ ಪುರೋಹಿತನನ್ನು ಕಳುಹಿಸುತ್ತ ಅವನೊಡನೆ ಆ ಪಾಂಡುಪುತ್ರರಿಗೆ ಯೋಗ್ಯವಾದ ಅಮೋಘವಸ್ತುಗಳನ್ನೂ, ಕುಂತಿಗೂ, ಮಾದ್ರಿಗೂ ತಕ್ಕ ಸಂದೇಶಗಳೊಡನೆ ದಾಸದಾಸೀ ಪರಿಜನರನ್ನೂ, ಗೋವುಗಳನ್ನೂ, ಬಂಗಾ ರವನ್ನೂ, ಬೆಳ್ಳಿಯನ್ನೂ ಕಳುಹಿಸಿದನು. ಆ ಪುರೋಹಿತನು ಅವುಗಳೆಲ್ಲ ವನ್ನೂ ತೆಗೆದುಕೊಂಡು ಹೊರಟು ಶತಶೃಂಗಪರ್ವತದಲ್ಲಿದ್ದ ಪಾಂಡುವಿನ ಆಶ್ರಮಕ್ಕೆ ಬಂದನು. ಶೂರನಾದ ಪಾಂಡುವು ಆತನನ್ನು ಕಂಡೊಡನೆ ತಕ್ಕ ರೀತಿಯಲ್ಲಿ ಪೂಜಿಸಿದನು. ಕುಂತೀಮಾದ್ರಿಯರಿಬ್ಬರೂ ವಿಶೇಷ ಸಂ ತೋಷದಿಂದ ವಸುದೇವನನ್ನು ಪ್ರಶಂಸೆಮಾಡಿದರು. ಆಮೇಲೆ ಪಾಂಡು ವು ತನ್ನ ಪುತ್ರರಿಗೆ ಆ ಪುರೋಹಿತನಿಂದಲೇ ಸಕಲಸಂಸ್ಕಾರಗಳನ್ನೂ ಮಾ ಡಿಸಿದನು. ಗರ್ಭಾದಾನವೇ ಮೊದಲಾಗಿ ಚೌಲ, ಉಪನಯನ, ಉಪಾ ಕರ್ಮ, ಮುಂತಾದ ಸಮಸ್ತ ಸಂಸ್ಕಾರಗಳೂ ನಡೆದುವು. ಸರ್ವಲಕ್ಷಣ ಸಂಪನ್ನರಾದ ಆ ಪಾಂಡವರಿಗೆ ಉಪನಯನವಾದಮೇಲೆ ವೇದಾಧ್ಯಯನ ವು ನಡೆದು ಅದರಲ್ಲಿಯೂ ಪಾರಂಗತರಾದರು. ಅದೇ ಶತಶೃಂಗಪರ್ವ ತದಲ್ಲಿ ಶರ್ಯಾತಿಯ ಪ್ರಥಮಪುತ್ರನಾದ ಶುಕನೆಂಬವನಿದ್ದನು. ಆತನು ಸಮುದ್ರವೇ ಮೇರೆಯಾಗಿ ಉಳ್ಳ ಈ ಭೂಮಂಡಲವನ್ನೆಲ್ಲ ಜಯಿಸಿದ್ದವನು. ಮತ್ತು ಮಹಾ ಬುದ್ಧಿಶಾಲಿ. ಅವನು ನೂರು ಅಶ್ವಮೇಧಗಳನ್ನು ಮಾಡಿ ದೇವತೆಗಳನ್ನೂ, ಋಷಿಗಳನ್ನೂ ಸಂತೋಷಪಡಿಸಿದ್ದವನು. ಆತನು ಕಂದಮೂಲಫಲಗಳನ್ನೇ ಸೇವಿಸುತ್ತ ಆ ಪರ್ವತದಲ್ಲಿ ತಪಸ್ಸುಮಾಡುತ್ತಿ ದ್ದನು. ಆತನೇ ಪಾಂಡವರಿಗೆ ಉತ್ತಮವಾದ ಮಂತ್ರಾಸ್ತ್ರಗಳನ್ನೆಲ್ಲ ಉಪ ದೇಶಿಸಿ ವಿದ್ಯೆಯನ್ನು ಕಲಿಸಿದನು. ಆತನ ಶಿಕ್ಷೆಯಿಂದ ಪಾಂಡವರು ಧನು ರ್ವಿದ್ಯಾಪಾರಂಗತರಾದರು. ಭೀಮಸೇನನು ಗದೆಯಲ್ಲಿ ತೇರ್ಗಡೆಹೊಂದಿ

ದನು. ಯುಧಿಷ್ಠಿರನು ಈಟಿಯ ಯುದ್ಧದಲ್ಲಿ ಸಮರ್ಥನಾದನು. ಬಲಶಾಲಿಗಳಲ್ಲಿ ಶ್ರೇಷ್ಠರಾದ ನಕುಲಸಹದೇವರಿಬ್ಬರೂ ಕತ್ತಿಯಸಾಧನೆಯಲ್ಲಿ ನಿಪುಣರಾದರು. ದೇವೇಂದ್ರಪುತ್ರನಾದ ಅರ್ಜುನನು ಧನುರ್ವಿದ್ಯೆಯಲ್ಲಿ ಪಾರಂಗತನಾದನು. ಜನಮೇಜಯರಾಜಾ! ಶುಕನು ಅರ್ಜುನನನ್ನು 'ಈತನು ನನಗೆ ಸಮಾನನಾಗುವನು' ಎಂದು ಅನುಮತಿಯನ್ನು ಕೊಟ್ಟು ಕಳುಹಿಸುವಾಗ ಅವನಿಗೆ ಒಂದು ಶಕ್ತಿಯನ್ನೂ, ಖಡ್ಗವನ್ನೂ, ಬಾಣಗಳನ್ನೂ, ತಾಳೆಯಮರದಷ್ಟು ಉದ್ದವೂ, ಕಾಂತಿಯುಕ್ತವೂ ಆದ ಒಂದು ಬಿಲ್ಲನ್ನೂ, ಗೃಧ್ರಪಕ್ಷಗಳಿಂದ ಅಲಂಕೃತವಾಗಿ ಮಹಾಸರ್ಪದಂತೆ ಕಾಂತಿಯುಕ್ತವಾಗಿರುವ ವಿಪಾಟ, ಕ್ಷುರ, ನಾರಾಚಗಳೆಂಬ ಬಾಣಗಳನ್ನೂ ಆತನಿಗೆ ಪ್ರೀತಿಪುರಸ್ಸರವಾಗಿ ಕೊಟ್ಟನು. ಅರ್ಜುನನು ಸರ್ವಾಸ್ತ್ರವಿಶಾರದನಾಗಿ, ತೇಜಸ್ಸಿನಲ್ಲಿ ರಾಜರೆಲ್ಲರನ್ನೂ ಮೀರಿಸಿದನು. ಹೀಗೆ ಶೂರರಾಗಿ ಬೆಳೆಯುತ್ತಿದ್ದ ಕುಂತೀಪುತ್ರರೂ, ಮಾದ್ರೀಪುತ್ರರೂ ಒಬ್ಬರೊಡನೊಬ್ಬರು ಅನ್ಯೋನ್ಯಸ್ನೇಹದಿಂದ ಆಡುತ್ತಿದ್ದರು. ಕುರುವಂಶವರ್ಧಕರಾದ ಆ ಪಂಚಪಾಂಡವರೂ, ಧೃತರಾಷ್ಟ್ರನ ನೂರುಮಂದಿ ಮಕ್ಕಳೂ ನೀರುತುಂಬಿದ ಸರೋವರದಲ್ಲಿ ತಾವರೆಹೂಗಳಂತೆ ಅತ್ಯಲ್ಪಕಾಲದಲ್ಲಿಯೇ ಅಭಿವೃದ್ಧಿಗೆ ಬಂದರು.

ಇದು ನೂರ ಮೂವತ್ತುಮೂರನೆಯ ಅಧ್ಯಾಯವು.

---

ಮಾದ್ರಿಯೊಡನೆ ಸಂಗಮಿಸಿದ ಪಾಂಡುರಾಜನ ಮರಣವು.
ಪಾಂಡವರ ಪ್ರಲಾಪವು. ಮಾದ್ರಿಯ ಸಹಗಮನವು.
ಪಾಂಡುವಿಗೆ ದಹನಾದಿ ಸಂಸ್ಕಾರಗಳು.

ಜನಮೇಜಯನು ವೈಶಂಪಾಯನನ್ನು ಕುರಿತು "ದೇವಾಂಶದಿಂದ ಜನಿಸಿದ ಪಾಂಡವರು ಯಾವ ವಯಸ್ಸಿನಲ್ಲಿ ಹಸ್ತಿನಾಪುರವನ್ನು ಸೇರಿದರು? ಅವರು ಎಷ್ಟು ಕಾಲವಿದ್ದರು? ಅವರ ಪೂರ್ಣಾಯುಸ್ಸೆಷ್ಟು?" ಎಂದು ಕೇಳಿದನು. ಅದಕ್ಕೆ ವೈಶಂಪಾಯನನು "ಕುರುಶ್ರೇಷ್ಠಾ! ಪಾಂಡವರ ಆಯುಷ್ಕಾಲವನ್ನು ತಿಳಿಸುವೆನು ಕೇಳು. ಹಸ್ತಿನಾಪುರಕ್ಕೆ

ಹೋದಾಗ ಯುಧಿಷ್ಠಿರನಿಗೆ ಹದಿನಾರು ವಯಸ್ಸು. ಭೀಮಸೇನನಿಗೆ ಹದಿನೈದು. ಅರ್ಜುನನಿಗೆ ಹದಿನಾಲ್ಕು. ನಕುಲಸಹದೇವರಿಗೆ ವಯಸ್ಸು ಹದಿಮೂರು. ಪಾಂಡವರು ಹಸ್ತಿನಾಪುರದಲ್ಲಿ ಧೃತರಾಷ್ಟ್ರನೊಡನೆ ಹದಿಮೂರು ವರ್ಷಕಾಲ ವಾಸಮಾಡಿಕೊಂಡಿದ್ದರು. ಅರಗಿನ ಮನೆಯಿಂದ ತಪ್ಪಿಸಿಕೊಂಡು ಹೋಗಿ ಆರು ತಿಂಗಳ ಕಾಲವಿದ್ದರು. ಆಗಲೇ ಘಟೋತ್ಕಚನು ಹುಟ್ಟಿದುದು. ಏಕಚಕ್ರಪುರದಲ್ಲಿ ಆರು ತಿಂಗಳ ಕಾಲವಿದ್ದರು. ಪಾಂಚಾಲರಾಜಗೃಹದಲ್ಲಿ ಒಂದು ಸಂವತ್ಸರ ಕಾಲವಿದ್ದರು. ಅವರು ತಿರುಗಿ ಧೃತರಾಷ್ಟ್ರಪುತ್ರರೊಡನೆ ಸೇರಿ ಐದು ವರ್ಷಗಳವರೆಗೆ ವಾಸಮಾಡಿಕೊಂಡಿದ್ದರು. ಆಮೇಲೆ ಇಂದ್ರಪ್ರಸ್ಥದಲ್ಲಿ ಇಪ್ಪತ್ತುಮೂರು ವರ್ಷಕಾಲವಿದ್ದರು. ಆಮೇಲೆ ದ್ಯೂತದಲ್ಲಿ ಸೋತು ಹದಿಮೂರು ವರ್ಷಗಳವರೆಗೆ ದೇಶಭ್ರಷ್ಟರಾಗಿದ್ದರು. ಆಮೇಲೆ ತಮಗೆ ಕೃಷ್ಣನೇ ಪರಮಗತಿಯೆಂದು ಭಾವಿಸಿ, ಭೂಲೋಕವನ್ನೆಲ್ಲ ಮೂವತ್ತಾರು ವರ್ಷಗಳವರೆಗೆ ಅನುಭವಿಸಿದರು. ಆಮೇಲೆ ಆರು ತಿಂಗಳು ಕಳೆದನಂತರದಲ್ಲಿ ಪರೀಕ್ಷಿತನಿಗೆ ರಾಜ್ಯಕ್ಕೆ ಪಟ್ಟಗಟ್ಟಿ, ಕಾಲಗತಿಯನ್ನು ಹೊಂದಿದರು. ಈ ರೀತಿಯಲ್ಲಿ ಯುಧಿಷ್ಠಿರನ ಆಯುಃಕಾಲವು ನೂರೆಂಟು ವರ್ಷಗಳಾದುವು. ಕೃಷ್ಣನು ಅರ್ಜುನನಿಗಿಂತಲೂ ಮೂರು ತಿಂಗಳು ದೊಡ್ಡವನು. ಬಲರಾಮನು ಕೃಷ್ಣನಿಗಿಂತಲೂ ಮೂರು ತಿಂಗಳು ದೊಡ್ಡವನು. ಪಾಂಡುವು ಶತಶೃಂಗಪರ್ವತದಲ್ಲಿ ಕಾಶ್ಯಪನೆಂಬ ಪುರೋಹಿತನೊಡನೆಯೂ, ತನ್ನ ಪತ್ನಿಯರೊಡನೆಯೂ ಸೇರಿ, ತನ್ನ ಐದುಮಂದಿ ಪುತ್ರರನ್ನೂ ಕಣ್ಣಿದಣಿಯುವಂತೆ ನೋಡಿಕೊಂಡು ಸುಖವಾಗಿ ಕಾಲಹರಣಮಾಡುತಿದ್ದನಷ್ಟೆ? ಆಗ ಒಮ್ಮೆ ವಸಂತಕಾಲದಲ್ಲಿ ವೈಶಾಖಮಾಸವು ಬಂದಿತು. ವನವೆಲ್ಲವೂ ಪುಷ್ಪಭರಿತವಾಗಿದ್ದಿತು. ಆಗ ಅರ್ಜುನನಿಗೆ ಹದಿನಾಲ್ಕು ವರ್ಷಗಳು ತುಂಬಿದ್ದುವು. ಆತನು ಹುಟ್ಟಿದ ಉತ್ತರಫಲ್ಗುಣೀ ನಕ್ಷತ್ರವೂ ಬಂದಿತು. ಆದಕ್ಕಾಗಿ ಕುಂತಿಯು ಸ್ವಸ್ತಿವಾಚನೆ, ಬ್ರಾಹ್ಮಣಸಂತರ್ಪಣೆ, ಮುಂತಾದ ಕಾರ್ಯಗಳಲ್ಲಿ ವಿಶೇಷಾಸಕ್ತಳಾಗಿ, ಎಂದಿನಂತೆ ಪಾಂಡುರಾಜನನ್ನು ಎಚ್ಚರಿಕೆಯಿಂದ ನೋಡಿಕೊಳ್ಳುವುದಕ್ಕೆ ಮರೆತಳು. ಆಕೆಯು ಪುರೋಹಿತನಿಗೂ, ಇತರ ಬ್ರಾಹ್ಮಣರಿಗೂ ಭೋಜನವನ್ನು ಮಾಡಿಸುತಿದ್ದಳು.

ಸಮಸ್ತ ಪ್ರಾಣಿಗಳನ್ನೂ ಮೋಹಗೊಳಿಸುವ ವಸಂತಋತುವು ತಲೆದೋರಿ, ವನಗಳೆಲ್ಲ ಪುಷ್ಪಿತಗಳಾಗಿದ್ದುವು. ಪರ್ವತದ ತಪ್ಪಲುಗಳಲ್ಲಿರುವ ಮಹಾರಣ್ಯಪ್ರದೇಶವು ಅತ್ಯಂತ ನೇತ್ರಾನಂದಕರವಾಗಿದ್ದಿತು. ಈ ಸನ್ನಿವೇಶದಲ್ಲಿ ಪಾಂಡುವು ತನ್ನ ಪ್ರಿಯಪುತ್ರರೊಡನೆಯೂ, ತನ್ನ ಪತ್ನಿಯಾದ ಮಾದ್ರಿಯೊಡನೆಯೂ ಅದೇ ವನದಲ್ಲಿ ವಿನೋದದಿಂದ ಸಂಚರಿಸುತಿದ್ದನು. ಆಗ ಆ ವನದ ಸೊಬಗನ್ನು ಕೇಳಬೇಕೆ? ಸಂಪಿಗೆ, ಮುತ್ತುಗ, ಪಗಡೆ, ಮಾವು, ದೇವದಾರು ಮುಂತಾದ ವೃಕ್ಷಗಳೆಲ್ಲ ಪುಷ್ಪಭರಿತಗಳಾಗಿ ಶೋಭಿಸುತ್ತಿದ್ದುವು. ಅಲ್ಲಿ ಪಾರಿಜಾತಗಳು ಆಗಲೇ ಅರಳುತಿದ್ದುವು. ಆಯಾ ವೃಕ್ಷಗಳ ಕೊಂಬೆಕೊಂಬೆಗಳಲ್ಲಿಯೂ ಕೋಗಿಲೆಗಳು ಮಧುರವಾಗಿ ಗಾನ ಮಾಡುತಿದ್ದುವು. ಅಲ್ಲಲ್ಲಿ ಮಕರಂದಪಾನದಿಂದ ಮತ್ತೇರಿದ ದುಂಬಿಗಳು ಝೇಂಕರಿಸುತಿದ್ದುವು. ಅನೇಕ ವೃಕ್ಷಗಳು ಪುಷ್ಪಫಲಗಳ ಭಾರದಿಂದ ಜಗ್ಗುತಿದ್ದುವು. ಅಲ್ಲಲ್ಲಿ ಅನೇಕ ತಟಾಕಗಳೂ, ತಾವರೆಕೊಳಗಳೂ, ಕಂಗೊಳಿಸುತಿದ್ದುವು. ಇವುಗಳನ್ನೆಲ್ಲ ನೋಡಿದಾಗ ಪಾಂಡುವಿನ ಮನಸ್ಸಿನಲ್ಲಿ ಅದುವರೆಗಿಲ್ಲದ ಒಂದು ಮನ್ಮಥವಿಕಾರವು ಹುಟ್ಟಿತು. ಅದೇ ಸಮಯದಲ್ಲಿ ಅಂತಹ ರಮಣೀಯವಾದ ಪ್ರದೇಶದಲ್ಲಿ, ಮಾದ್ರಿಯು ಕೂಡ, ಶುದ್ಧವಾದ ಬಿಳೀದುಕೂಲವನ್ನುಟ್ಟು, ಪಾಂಡುವಿನ ಸಮೀಪದಲ್ಲಿಯೇ ನಲಿದಾಡುತಿದ್ದಳು. ಅವಳಿಗೋ ಮೈಯಲ್ಲಿ ಯೌವನವು ಉಕ್ಕುತ್ತಿರುವುದು. ಆಗ ಅಲ್ಲಿ ಆ ಮಾದ್ರಿಯು ಹೊರತು ಬೇರೆ ಯಾರೂ ಇರಲಿಲ್ಲ. ಲೋಕಮೋಹಕವಾದ ರೂಪಯೌವನಗಳಿಂದ ತನ್ನ ಸಮೀಪದಲ್ಲಿ ಒಂಟಿಯಾಗಿದ್ದ ಆ ಸುಂದರೀಮಣಿಯನ್ನು ನೋಡಿದಂತೆಲ್ಲ, ರಾಜನ ಮನಸ್ಸಿನಲ್ಲಿ ಅಂಕುರಿಸಿದ ವಿಕಾರವು ಕಾಡುಗಿಚ್ಚಿನಂತೆ ವೃದ್ಧಿಯಾಗುತ್ತ ಬಂದಿತು. ರಾಜನಿಗೆ ಆ ಮನ್ಮಥತಾಪವನ್ನು ಅಡಗಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಕಾಮಪಾಶಕ್ಕೆ ವಶನಾದನು. ಒಂಟಿಯಾಗಿ ಕೈಗೆ ಸಿಕ್ಕಿದ ಆ ಸುಂದರೀಮಣಿಯನ್ನು ರತಿಸುಖಕ್ಕಾಗಿ ನಿರ್ಬಂಧಿಸಿದನು. ಆಕೆಯು ಭಯದಿಂದ ಅದಕ್ಕೆ ಒಡಂಬಡದೆ, ನಿವಾರಿಸಿ ಹಿಂಜರಿದರೂ ಬಿಡದೆ ಪಾಂಡುವು ಬಲಾತ್ಕಾರದಿಂದ ಅವಳನ್ನು ಹಿಡಿದು ನಿಲ್ಲಿಸಿಕೊಂಡನು. ವಿನಾಶಕಾಲಕ್ಕೆ ತಕ್ಕಂತೆ ಅವನಿಗೆ ಮನ್ಮಥವಿಕಾರದಿಂದ ಬುದ್ಧಿಯು ವಿಕಲ್ಪ ಹೊಂದಿತು.

ವಿಧಿವಶದಿಂದ ಶಾಪಭಯವನ್ನೂ ಬಿಟ್ಟು ಮಾದ್ರಿಯನ್ನು ಬಲಾತ್ಕಾರದಿಂದೆ ಳೆದನು. ವಸಂತಕಾಲದ ರೂಪದಿಂದ ಪ್ರತ್ಯಕ್ಷಯಮನೇ ಆತನ ಇಂದ್ರಿಯಗಳೆಲ್ಲವನ್ನೂ ಕಲಗಿಸಿ, ಬುದ್ಧಿಭ್ರಮಣವನ್ನು ಉಂಟುಮಾಡಿದನು. ಪಾಂಡುವು ಹೀಗೆ ಪತ್ನೀಸಂಗವನ್ನು ಮಾಡಿದೊಡನೆ ಕಾಲಗತಿಯನ್ನು ಹೊಂದಿದನು. ಇದನ್ನು ನೋಡಿದೊಡನೆ ಮಾದ್ರಿಯು ಆತನ ದೇಹವನ್ನಪ್ಪಿಕೊಂಡು, ದುಃಖದಿಂದ 'ಹಾ' ಎಂದು ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು. ಈ ಆಕ್ರಂದನಧ್ವನಿಯನ್ನು ಕೇಳಿ, ಕುಂತಿಯೂ ಪಂಚಪಾಂಡರೂ ಆ ಸ್ಥಳಕ್ಕೆ ಹೊರಟರು. ಇಷ್ಟರಲ್ಲಿಯೇ ಮಾದ್ರಿಯು ಕುಂತಿಯನ್ನು ಕುರಿತು "ಮಕ್ಕಳೆಲ್ಲರೂ ಅಲ್ಲಿಯೇ ಇರಲಿ" ಎಂದು ಹೇಳಿದಳು. ಆಕೆಯ ಮಾತುಗಳನ್ನು ಕೇಳಿ ಕುಂತಿಯು ಮಕ್ಕಳನ್ನು ದೂರದಲ್ಲಿಯೇ ನಿಲ್ಲಿಸಿ "ಅಯ್ಯೋ! ಕೆಟ್ಟೆನಲ್ಲಾ!" ಎಂದು ಅಳುತ್ತಾ ಓಡಿಬಂದಳು. ಮಾದ್ರಿಯೂ, ಪಾಂಡುವೂ ಭೂಮಿಯಲ್ಲಿ ಬಿದ್ದಿರುವ ಸ್ಥಿತಿಯನ್ನು ನೋಡಿ, ಕುಂತಿಗೆ ಮಿತಿಮೀರಿದ ದುಃಖವುಂಟಾಯಿತು. ಅದನ್ನು ತಡೆಯಲಾರದೆ ಅವಳು "ಆಹಾ! ನಾನು ಈತನನ್ನು ಎಷ್ಟೋ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿದ್ದೆನಲ್ಲಾ? ತನ್ನಮೇಲೆ ಬಿದ್ದ ಶಾಪವನ್ನು ತಿಳಿದಿದ್ದರೂ, ಆತನು ಭೋಗೇಚ್ಛೆಯಿಂದ ನಿನ್ನೊಡನೆ ಹೇಗೆ ಸೇರಿದನು? ರಾಜನನ್ನು ನೀನಾದರೂ ರಕ್ಷಿಸಬೇಕಾಗಿತ್ತಲ್ಲವೆ? ನೀನೇಕೆ ಏಕಾಂತಸ್ಥಳದಲ್ಲಿದ್ದು ರಾಜನನ್ನು ಮೋಹಗೊಳಿಸಿದೆ? ಯಾವಾಗಲೂ ಆ ಋಷಿಯ ಶಾಪಕ್ಕಾಗಿ ಭಯಪಟ್ಟು ಕೊರಗುತ್ತಲೇ ಇದ್ದ ಆತನು ನಿನ್ನೊಡನೆ ಏಕಾಂತವಾಗಿ ಹೇಗೆ ಸೇರಿದನು? ಮಾದ್ರೀ! ನೀನೇ ಧನ್ಯಳು. ನನಗಿಂತಲೂ ನೀನೇ ಭಾಗ್ಯಶಾಲಿ! ಭೋಗಕಾಲದಲ್ಲಿ ಉಲ್ಲಾಸದಿಂದಲೂ, ಆನಂದದಿಂದಲೂ, ಅರಳಿದ್ದ ನಿನ್ನ ಕಾಂತನ ಮುಖವನ್ನು ಒಂದಾವರ್ತಿಯಾದರೂ ಕಣ್ಣಾರೆ ನೋಡಿರುವೆ" ಎಂದಳು. ಅದಕ್ಕೆ ಮಾದ್ರಿಯು "ದೇವೀ! ನಾನು ಬೇಡಬೇಡವೆಂದು ಎಷ್ಟು ತಡೆದರೂ ಆತನು ತನ್ನ ಶಾಪವಿಧಿಯನ್ನು ಸತ್ಯವಾಗಿ ಮಾಡುವುದಕ್ಕಾಗಿಯೇ ಇರಬಹುದು. ತನ್ನ ಮನಸ್ಸನ್ನು ತಡೆಯಲಾರದೆ ಹೋದನು" ಎಂದಳು. ಆಕೆಯ ಮಾತುಗಳನ್ನು ಕೇಳಿ ಕುಂತಿಗೆ ದುಃಖವು ಪ್ರಬಲಿಸಿ, ಬೇರುಕಿತ್ತಮರದಂತೆ ಧೊಪ್ಪನೆ ಕೆಳಗೆ ಬಿದ್ದಳು. ಆಕೆಯು ಹಾಗೆಯೇ

ಭೂಮಿಯಲ್ಲಿ ಬಿದ್ದು ಪ್ರಜ್ಞೆತಪ್ಪಿ ನಿಶ್ಚೇಷ್ಟಳಾದಳು. ಮಾದ್ರಿಯು ಪಾಂಡುವಿಗೆ ಸ್ನಾನಮಾಡಿಸಿ, ಹೊಸಬಟ್ಟೆಯನ್ನು ಉಡಿಸಿ ಅಲಂಕಾರಮಾಡಿ, ಒಳ್ಳೆಯ ಹಾಸಿಗೆಯಮೇಲೆ ಮಲಗಿಸಿದಳು. ಪ್ರಜ್ಞೆಯಿಲ್ಲದೆ ಬಿದ್ದಿರುವ ಕುಂತಿಯನ್ನು ನೋಡಿ "ಅಕ್ಕಾ! ಬಾ!" ಎಂದು ರಾಜನನ್ನು ತೋರಿಸಿದಳು. ಕುಂತಿಯು ಪತಿಯ ಪಾದಕಮಲಗಳಲ್ಲಿ ಬಿದ್ದು, ತಿರುಗಿ ಎದ್ದು ರಕ್ತಚಂದನಗಳಿಂದಲೂ, ಸುವಾಸನೆಯುಳ್ಳ ಪುಷ್ಪಮಾಲಿಕೆಗಳಿಂದಲೂ ಅಲಂಕೃತನಾಗಿ, ಆಗಲೂ ಹಸನ್ಮುಖನಾಗಿ ಮಾತಾಡುವಂತಿದ್ದ ಪಾಂಡುರಾಜನನ್ನು ಅಪ್ಪಿಕೊಂಡು, ಮೋಹವಶಳಾಗಿ ತಿರುಗಿ ಪ್ರಜ್ಞೆತಪ್ಪಿದಳು. ಮಾದ್ರಿಯೂ ರಾಜನನ್ನಪ್ಪಿಕೊಂಡು ದುಃಖಪಡುತಿದ್ದಳು. ಹಾಗೆ ಮಲಗಿದ್ದ ರಾಜನ ಬಳಿಗೆ ಆತನ ಪುತ್ರರೂ, ಋಷಿಗಳೂ, ಚಾರಣರೇ ಮುಂತಾದವರೂ ಬಂದು, ದುಃಖದಿಂದ ಕಣ್ಣೀರು ಬಿಟ್ಟರು. ಸೂರ್ಯನು ಅಸ್ತಮಿಸಿದಂತೆಯೂ, ಸಮುದ್ರವು ಒಣಗಿಹೋದಂತೆಯೂ, ಪುರುಷಸಿಂಹನಾದ ಪಾಂಡುವು ಮೃತನಾಗಿರುವುದನ್ನು ನೋಡಿ ಮಹರ್ಷಿಗಳೂ ದುಃಖಪಟ್ಟರು. ಪಾಂಡವರೊಡನೆ ಸಮಾನದುಃಖದಿಂದ ಆಶ್ರಮವಾಸಿಗಳೆಲ್ಲರೂ ಶೋಕಿಸುತಿದ್ದರು. ಪತಿವ್ರತಾಶಿರೋಮಣಿಯರಾದ ಆ ಪತ್ನಿಯರಿಬ್ಬರೂ ಎಷ್ಟು ತಡೆದರೂ ಕೇಳದೆ ಗೋಳಿಡುತ್ತಲೇ ಇದ್ದರು. ಕುಂತಿಯು ಪತಿಯನ್ನು ನೋಡಿ "ಕಾಂತಾ! ನಮ್ಮನ್ನು ಯಾರಿಗೆ ಒಪ್ಪಿಸಿ ನೀನು ದೇವಲೋಕಕ್ಕೆ ಹೋಗುತ್ತಿರುವೆ? ಅಯ್ಯೋ! ನಾನು ಬುದ್ಧಿಗೆಟ್ಟು ಮರೆತಿದ್ದರೂ, ನೀನೇಕೆ ಮಾದ್ರಿಯನ್ನು ಸೇರಿ ಮರಣಕ್ಕೆ ಗುರಿಯಾದೆ? ಅಯ್ಯೋ ಬೇರೊಬ್ಬರನ್ನು ನಿಂದಿಸಿ ಪ್ರಯೋಜನವೇನು? ಭಾಗ್ಯಕ್ಷಯವೇ ನಿನ್ನನ್ನು ಈ ಮರಣಕ್ಕೀಡುಮಾಡಿತಲ್ಲದೆ ಬೇರೆಯಲ್ಲ. ನಿನ್ನ ಪ್ರಿಯಪುತ್ರರಾದ ಯುಧಿಷ್ಠಿರ ಭೀಮಾರ್ಜುನ ನಕುಲ ಸಹದೇವರೈವರನ್ನೂ ಯಾರ ಬಳಿಯಲ್ಲಿ ಬಿಟ್ಟುಹೋಗುವೆ? ಬ್ರಾಹ್ಮಣಗೋಷ್ಠಿಯಲ್ಲಿ ಉಗ್ರತಪಸ್ಸಿನಲ್ಲಿದ್ದ ನಿನ್ನನ್ನು ದೇವತೆಗಳೂ ಅಭಿನಂದಿಸುತಿದ್ದರಲ್ಲಾ! ನಾಥಾ! ನೀನು ಸ್ವರ್ಗಸುಖವನ್ನು ಅನುಭವಿಸುವಾಗ ನಿನ್ನ ಪ್ರಿಯಪತ್ನಿಯರಾದ ನಮ್ಮನ್ನೇಕೆ ಕರೆದುಕೊಂಡು ಹೋಗದಿರುವೆ? ಹಿಂತಿರುಗಿ ಬಾ! ಕುರುಶ್ರೇಷ್ಠಾ! ಪುಣ್ಯಕರ್ಮಗಳನ್ನು ಮಾಡಿದ ಅಜಮೀಢವಂಶದವರು ಪಡೆದ ಸದ್ಗತಿಗೆ ನಮ್ಮ

ಬ್ಬರೊಡನೆಯೇ ಹೋಗುವಂತೆ ನಾವು ವನಕ್ಕೆ ಬಂದಾಗಕೂಡ ನೀನು ಪ್ರತಿಜ್ಞೆಮಾಡಿರುವೆಯಲ್ಲವೆ? ಆದುದರಿಂದ ನೀನು ನಮ್ಮನ್ನು ಬಿಟ್ಟು ಹೋಗಬಾರದು. ಕಾಂತಾ! ನಿಲ್ಲು. ನಾನು ನಿನ್ನ ಮುಖಮಂಡಲವನ್ನು ನೋಡುವೆನು'' ಎಂದಳು. ಹೀಗೆ ಆ ಪತ್ನಿಯರಿಬ್ಬರೂ, ಕಾಡಿನಲ್ಲಿ ಜೇಟೆಗಾರನ ಬಾಣದಿಂದ ಹತವಾದ ಗಂಡುಜಿಂಕೆಯನ್ನು ನೋಡಿ ಹೆಣ್ಣು ಜಿಂಕೆಗಳು ಹೇಗೋ ಹಾಗೆ ದುಃಖದಿಂದ ಪ್ರಜ್ಞೆತಪ್ಪಿ ಕೆಳಗೆ ಬಿದ್ದರು. ಪಾಂಡವರೂ ಅಲ್ಲಿಗೆ ಓಡಿಬಂದು ತಂದೆಯ ಪಾದಗಳನ್ನು ಅಪ್ಪಿಕೊಂಡು "ಹಾ ಜನಕಾ! ನಾವು ಕೆಟ್ಟೆವು'' ಎಂದು ಅಳಲಾರಂಭಿಸಿದರು. ಆಗ ಯುಧಿಷ್ಠಿರನು ತಂದೆಯನ್ನು ಕುರಿತು "ಅಯ್ಯೋ! ಅನಾಥರಾದೆವು. ಮಹಾಪ್ರಾಜ್ಞನಾದ ನೀನಿಲ್ಲದೆ ಬಾಲಕರಾದ ನಾವು ಹೇಗೆ ಬದುಕಬಲ್ಲೆವು? ಲೋಕನಾಥನ ಹೊಟ್ಟೆಯಲ್ಲಿ ಹುಟ್ಟಿದ ನಾವು ಒಂದು ಕ್ಷಣಕಾಲದಲ್ಲಿ ಅನಾಥರಾದೆವಲ್ಲಾ! ಏನಾಶ್ಚರ್ಯವಿದು? ರಾಜಪುತ್ರರಾಗಿ ಹುಟ್ಟಿಯೂ ನಮ್ಮಂತೆ ಭಾಗ್ಯಹೀನರಾದವರು ಬೇರೆ ಯಾರೂ ಇಲ್ಲ. ನೀನು ಮೃತಪಟ್ಟುದರಿಂದ ನಮಗೆ ರಾಜ್ಯವೂ ತಪ್ಪಿದಂತಾಯಿತು. ಪಾಂಡುವಿನ ಪುತ್ರರಾಗಿ ಹುಟ್ಟಿಯೂ ನಾವೆಲ್ಲರೂ ಮಹಾವ್ಯಸನಕ್ಕೆ ಗುರಿಯಾದೆವಲ್ಲಾ. ಜನಕಾ! ಇನ್ನು ನಾವು ಮಾಡಬೇಕಾದುದನ್ನು ಅನುಗ್ರಹಿಸು'' ಎಂದು ರೋದನ ಮಾಡಿದರು. ಭೀಮಸೇನನು "ನೀನು ರಾಜಾಧಿರಾಜನಾಗಿದ್ದರೂ, ರಾಜಭೋಗಗಳನ್ನೂ, ರಾಜ್ಯವನ್ನೂ ಬಿಟ್ಟು ಶತಶೃಂಗದಲ್ಲಿ ವಾಸಮಾಡುತ್ತ ಮಹಾತಪಸ್ಸುಮಾಡಿ ನಮ್ಮನ್ನು ಪಡೆದೆ. ರಾಜಾಧಿರಾಜನಾಗಿದ್ದರೂ, ಆ ಗೌರವವನ್ನೆಣಿಸದೆ, ಕಾಡಿಗೆ ಹೋಗಿ ನೀನೇ ಧನಧಾನ್ಯಗಳನ್ನಾಯ್ದು ಕಾಡಿನಲ್ಲಿರುವ ಕಾಯಿಗಳನ್ನೂ, ಫಲಮೂಲಗಳನ್ನೂ ತಂದು, ನಮ್ಮನ್ನು ಪೋಷಿಸಿದೆ. ಧರ್ಮಾರ್ಥಕಾಮಗಳೆಂಬ ಮೂರು ಪುರುಷಾರ್ಥಗಳನ್ನೂ ಕೋರುವ ತಂದೆಯು, ಮಕ್ಕಳನ್ನು ಪಡೆದು ಯಾವ ಫಲವನ್ನು ಅಪೇಕ್ಷಿಸುವನೋ, ಆದನ್ನು ನೀನು ಪಡೆಯಲು ಈಗಲೇ ಸಕಾಲವಾಗಿರುವುದು. ಆ ಫಲವನ್ನು ನೀನು ಅನುಭವಿಸದೆಯೇ ಹೋಗುವೆಯಾ? ಹೋಗಬಾರದು. ನಿಲ್ಲು'' ಎಂದನು. ಹಾಗೆಯೇ ಅರ್ಜುನನು "ಜನಕಾ! ನೀನು ಪ್ರಜೆಗಳಿಗೆಲ್ಲ ಸುಖಪ್ರದನೆನಿಸಿದವನಲ್ಲವೆ? ಜನರೆಲ್ಲರೂ

ನಿನ್ನನ್ನು ಕುರಿತು “ ನಶಿಸಿ ಹೋದ ಭಾರತವಂಶವನ್ನು ಈ ಪಾಂಡುವು ತಿರುಗಿ ಉದ್ಧರಿಸಿದನು. ಆ ಪಾಂಡುವು ಕಾಡಿಗೆ ಹೋದುದರಿಂದ ರಾಜನಿಲ್ಲದೆ ರಾಜ್ಯವು ನಾಶವಾದರೂ ಪಂಚಪಾಂಡವರು ಮರೆಯಾಗಿದ್ದ ಕ್ಷತ್ರಶಕ್ತಿಯನ್ನು ಮತ್ತೆ ಪ್ರಕಾಶಪಡಿಸಿದರು ” ಎಂದು ಹೇಳುವ ಮಾತನ್ನು ಕೇಳಿ ಆಮೋದಿಸಿದಮೇಲೆ ನೀನು ಹೋಗಬಹುದು ” ಎಂದನು. ಮತ್ತು ನಕುಲಸಹದೇವರು “ ಭರತ ಕುಲ ತಿಲಕಾ ! ದುಸ್ಸಹವಾದ ತಪಸ್ಸನ್ನು ಮಾಡಿ ನಮ್ಮನ್ನು ಪಡೆದೆ. ಇಂತಹ ಪುತ್ರಲಾಭಕ್ಕೆ ಫಲವಾಗಿ ನಮ್ಮಿಂದ ಶುಶ್ರೂಷೆಯೊಂದನ್ನೂ ಮಾಡಿಸಿಕೊಳ್ಳದೆಯೇ ದಶರಥನಂತೆ ನೀನೂ ಹೋದೆಯಲ್ಲಾ ” ಎಂದು ಪ್ರಲಾಪಿಸಿದರು. ಆಗ ಕುಂತಿಯು ಮಾದ್ರಿಯೊಡನೆ “ ಮಾದ್ರೀ ! ನಾನು ಇವನಿಗೆ ಮೊದಲನೆಯ ಧರ್ಮಪತ್ನಿ. ಆದುದರಿಂದ ಧರ್ಮದ ಫಲವು ಮೊದಲು ನನ್ನದೇ. ಅದನ್ನನುಸರಿಸಿ ಅತ್ಯವಶ್ಯವಾಗಿ ಮೊದಲು ನಡೆಸಬೇಕಾದ ಕಾರ್ಯವೊಂದಿರುವುದು ಅದಕ್ಕೆ ನನ್ನನ್ನು ನಿವಾರಿಸಬೇಡ. ಬೇರೇನೂ ಅಲ್ಲ. ಮೃತನಾದ ಭರ್ತನನ್ನು ನಾನು ಈಗಲೇ ಹಿಂಬಾಲಿಸುವೆನು. ನೀನು ಈತನ ದೇಹವನ್ನು ಬಿಡು ! ಮೇಲೇಳು. ಈ ಬಾಲಕರನ್ನು ಕಾಪಾಡು. ಭಾಗ್ಯವಂತರಾದ ಈ ಮಕ್ಕಳನ್ನು ಪಡೆದಿದ್ದರೂ, ವೀರಪತ್ನಿಯಾದುದರಿಂದ ನಾನು ಅದನ್ನೇ ಕೋರುವೆನು ” ಎಂದಳು.

ಆಗ ಮಾದ್ರಿಯು ಕುಂತಿಯನ್ನು ನೋಡಿ “ ನನ್ನನ್ನು ಮೋಹಮಾಡಿದ ಪತಿಯನ್ನು ನಾನೇ ಮೊದಲು ಹಿಂಬಾಲಿಸುವೆನು. ಅಲ್ಲದೆ ಕಾಮಭೋಗದಲ್ಲಿಯೂ ನನಗೆ ತೃಪ್ತಿಯಿಲ್ಲದಿದೆ ವಯಸ್ಸಿನಲ್ಲಿ ನೀನು ಹಿರಿಯವಳಾದುದರಿಂದ ನನಗೆ ಅಪ್ಪಣೆಯನ್ನು ಕೊಡು ! ಈ ಭರತಕುಲಶ್ರೇಷ್ಠನು ನನ್ನಲ್ಲಿ ಮೋಹದಿಂದ ನನ್ನನ್ನು ಸಂಗಮಿಸಿಯಲ್ಲವೇ ಮೃತಪಟ್ಟನು. ಆತನು ಮೃತ್ಯುಶಯನದಲ್ಲಿರುವಾಗ ಆತನು ಕಾಮಿಸಿದ ಸ್ತ್ರೀಯು ಸಂಗಡ ಹೋಗದಿರಬಹುದೇ ? ನನ್ನಿಂದಲ್ಲವೇ ಇವನು ಸ್ವರ್ಗವನ್ನು ಸೇರಿದನು ? ಆತನಂತೆ ಬುದ್ಧಿಯೂ ಬೇರೆಯವರಿಗಿಲ್ಲ ! ಆತನಿಗೆ ಸಮಾನರಾದ ಬಂಧುಗಳೂ ನನಗಿಲ್ಲ. ಪತಿಯನ್ನು ಬಿಟ್ಟು ಜೀವಂತಳಾಗಿರುವುದಕ್ಕೂ ನನಗೆ

ಸಾಧ್ಯವಿಲ್ಲ. ಅದುದರಿಂದ ಆ ಪ್ರಾಣೇಶ್ವರನ ಹಿಂದೆಯೇ ನಾನೂ ಹೋಗುವೆನು. ಅಲ್ಲದೆ ನಾನು ನನ್ನ ಮಕ್ಕಳ ವಿಷಯದಲ್ಲಿ ನಡೆದುಕೊಳ್ಳುವಂತೆ ನಿನ್ನ ಮಕ್ಕಳ ವಿಷಯದಲ್ಲಿ ಯಾವಾಗಲೂ ನಡೆದುಕೊಳ್ಳುವೆನೆಂಬ ಭರವಸವಿಲ್ಲ. ಹಾಗೆ ಪಕ್ಷಪಾತದಿಂದ ನಡೆದುಕೊಂಡರೆ, ನನಗೆ ಮಹಾಪಾತಕವು ಬರುವುದು. ಆದುದರಿಂದ ದೇವೀ! ನೀನಾದರೆ ನಿನ್ನ ಮಕ್ಕಳ ವಿಷಯದಲ್ಲಿ ನಡೆದುಕೊಳ್ಳುವಂತೆ ನನ್ನ ಮಕ್ಕಳಲ್ಲಿ ನಿಷ್ಪಕ್ಷಪಾತವಾಗಿ ನಡೆದುಕೊಳ್ಳುವ ನಂಬಿಕೆಯುಂಟು. ಆದುದರಿಂದ ನಾನು ಪತಿಯನ್ನು ಹಿಂಬಾಲಿಸುವೆನು. ನನ್ನನ್ನು ಕಾಮಿಸಿದುದರಿಂದಲ್ಲವೇ ಈ ರಾಜನು ಮೃತನಾದನು. ಈ ಶರೀರದೊಡನೆ ನನ್ನ ದೇಹವನ್ನೂ ಸೇರಿಸಿ, ಒಟ್ಟಿಗೆ ದಹಿಸಿದಾಗಲೇ ಅವನಿಗೆ ಪ್ರಿಯವು. ನೀನು ಈ ಪ್ರಿಯಕಾರ್ಯವನ್ನು ಮಾಡು. ನಾನು ಬೇಡಿಕೊಳ್ಳುವೆನು. ಮಕ್ಕಳ ಪೋಷಣೆಯಲ್ಲಿ ನೀನು ಎಂದಿಗೂ ಅಜಾಗರೂಕಳಲ್ಲ. ನಿನಗೆ ಹಿತವನ್ನು ಹೇಳುವುದಕ್ಕೆ ನಾನು ಅರ್ಹಳಲ್ಲ" ಎಂದಳು. ಆಗ ಮಹಾತಪಸ್ವಿಗಳಾದ ಋಷಿಗಳೆಲ್ಲ ಸೇರಿ ಬಂದು, ಪಾಂಡವರನ್ನೂ, ಕುಂತೀಮಾದ್ರಿಯರನ್ನೂ ಸಮಾಧಾನಪಡಿಸುತ್ತಾ "ಓ ಮಾನಿನಿಯರೇ! ನಿಮ್ಮ ಮಕ್ಕಳು ಇನ್ನೂ ಬಾಲಕರು. ಆದುದರಿಂದ ನಿಮ್ಮಲ್ಲಿ ಯಾರೊಬ್ಬರೂ ದೇಹತ್ಯಾಗಮಾಡಬಾರದು. ಈ ನಿಮ್ಮ ಮಕ್ಕಳನ್ನು ಕುರುರಾಜ್ಯಕ್ಕೆ ಕರೆದುಕೊಂಡು ಹೋಗಿ ಬಿಡುವೆವು. ಆದರೆ, ಒಂದುವೇಳೆ ಧೃತರಾಷ್ಟ್ರನು ಈ ಪಾಂಡವರನ್ನು ಅಸಡ್ಡೆಮಾಡಿ ಅನ್ಯಾಯದಿಂದ ನಡೆಯಬಹುದು. ಅವನು ಅಧರ್ಮದಿಂದ ದ್ರವ್ಯಸಂಗ್ರಹದಲ್ಲಿ ಆಸೆಯುಳ್ಳವನು. ಆದರೆ, ಕುಂತಿಗೆ ಯಾದವರೂ, ಕುಂತಿಭೋಜರೂ ನಾಥರಾಗಿರುವರು. ಮಾದ್ರಿಗೆ ಬಲಶಾಲಿಗಳಲ್ಲಿ ಶ್ರೇಷ್ಠನೂ, ಮಹಾರಥನೂ ಆದ ಶಲ್ಯನು ಸಹೋದರನಾಗಿರುವನು. ಪತ್ನಿಗೆ ಪತಿಯೊಡನೆ ಮರಣಹೊಂದುವುದೇನೋ ಫಲಕಾರಿಯೇ! ಅದರಲ್ಲಿ ಸಂದೇಹವಿಲ್ಲ. ಆದರೆ ಈಗ ನಿಮಗೆಮಾತ್ರ ಇದು ದುಷ್ಕರವೆಂದು ಬ್ರಾಹ್ಮಣೋತ್ತಮರು ಹೇಳುವರು. ಪತಿಯು ಮೃತನಾದರೂ, ಪತಿವ್ರತೆಯಾದ ಸ್ತ್ರೀಯು ಬ್ರಹ್ಮಚರ್ಯವ್ರತವನ್ನು ದೃಢವಾಗಿ ಅವಲಂಬಿಸಿ, ಮನೋವಾಕ್ಕಾಯಗಳನ್ನು ಅಡಗಿಸಿಡುವುದರಿಂದಲೂ, ಮಿಕ್ಕ ಅನುಷ್ಠಾನನಿಯಮಗಳಿಂದಲೂ

ಆತ್ಮಶುದ್ಧಿಯನ್ನು ಹೊಂದಿ ತನ್ನ ಪತಿಯನ್ನೇ ಸ್ಮರಿಸುತ್ತಿದ್ದರೂ, ಸದ್ಗತಿಯುಂಟು. ಅಂತಹ ಸ್ತ್ರೀಯು ತನ್ನ ಪತಿಯನ್ನೂ, ತನ್ನನ್ನೂ, ತನ್ನ ಪುತ್ರರನ್ನೂ ಉದ್ಧರಿಸುವಳು. ಆದುದರಿಂದ ನೀವಿಬ್ಬರೂ ಬದುಕಿರುವುದೇ ಒಳ್ಳೆಯದೆಂದು ನಮಗೆ ತೋರುವುದು" ಎಂದರು. ಅದಕ್ಕೆ ಕುಂತಿಯು "ಪಾಂಡುವಿನ ಆಜ್ಞೆಯನ್ನು ಹೇಗೋ ಹಾಗೆ ನಾನು ಬ್ರಾಹ್ಮಣರ ಆಜ್ಞೆಯನ್ನೂ ಶಿರಸಾವಹಿಸಿ ನಡೆಸತಕ್ಕವಳು. ಅದರಂತೆಯೇ ಆಚರಿಸುವೆನು. ಮಹಾತ್ಮರು ಹೇಳಿದಂತೆ ನಡೆಸುವುದೇ ನನ್ನ ಪತಿಗೂ, ನನಗೂ, ನನ್ನ ಪುತ್ರರಿಗೂ ಶ್ರೇಯಸ್ಕರವೆಂದು ನಾನು ದೃಢವಾಗಿ ನಂಬುವೆನು" ಎಂದಳು. ಆಗ ಮಾದ್ರಿಯು ತನ್ನಲ್ಲಿ ತಾನು "ಇನ್ನು ಚಿಂತೆಯಿಲ್ಲ! ಮಕ್ಕಳ ಯೋಗಕ್ಷೇಮಚಿಂತನೆಯಲ್ಲಿ ಕುಂತಿಯು ಸಮರ್ಥಳು. ಬುದ್ಧಿಯಲ್ಲಿ ಅರುಂಧತಿಯಾಗಲಿ, ಬೇರೆ ಯಾವ ಸ್ತ್ರೀಯಾಗಲಿ ಈಕೆಗೆ ಸಮಾನರಲ್ಲ. ಅಲ್ಲದೆ, ಇವಳಿಗೆ ಯಾದವರೂ, ಕುಂತಿಭೋಜನೂ ದಿಕ್ಕಾಗಿರುವರು" ಎಂದು ಯೋಚಿಸಿ "ಕುಂತೀ! ನಿನ್ನಂತೆ ಪುತ್ರರನ್ನು ಕಾಪಾಡುವುದಕ್ಕೆ ನಾನು ಸಮರ್ಥಳಲ್ಲ. ಇಂತಹ ನಾನು ಇನ್ನು ಮಕ್ಕಳಿಗಾಗಿ ಏಕೆ ಬದುಕಿರಬೇಕು? ನಾನು ಭರ್ತನನ್ನೇ ಅನುಗಮಿಸುವೆನು. ಅಲ್ಲದೆ ಕಾಮಭೋಗದಲ್ಲಿ ನಾನು ಇನ್ನೂ ತೃಪ್ತಿಹೊಂದಿದವಳಲ್ಲ. ಅಕ್ಕಾ! ನನಗೆ ಪತಿಲೋಕಕ್ಕೆ ಹೋಗಲು ಅನುಮತಿಸು. ಧರ್ಮಜ್ಞನೂ, ಕೃತಜ್ಞನೂ, ಸತ್ಯಸಂಧನೂ ಆದ ಪತಿಯ ಪಾದಗಳನ್ನು ಉಪಚರಿಸಲು ಹೋಗುವೆನು. ಪೂಜ್ಯಳಾದ ನೀನು ನನಗೆ ಈಗಲೇ ಅನುಮತಿ ಕೊಡು" ಎಂದಳು. ಜನಮೇಜಯಾ! ಪತಿವ್ರತಾಶಿರೋಮಣಿಯಾದ ಆ ಮದ್ರರಾಜಕುಮಾರಿಯು ಹೀಗೆ ಹೇಳಿ, ತಲೆಬಗ್ಗಿಸಿ ನಮಸ್ಕರಿಸಿ, ಕುಂತಿಯ ಕೈಗೆ ನಕುಲಸಹದೇವರನ್ನು ಒಪ್ಪಿಸಿದಳು. ಆಮೇಲೆ ಮಹರ್ಷಿಗಳನ್ನೂ ನಮಸ್ಕರಿಸಿ, ಕುಂತೀಪುತ್ರರಾಗಿದ್ದರೂ ತನಗೆ ಪುತ್ರಸಮಾನರಾದ ಪಾಂಡವರನ್ನು ಅಪ್ಪಿಕೊಂಡು, ಅವರ ಶಿರಸ್ಸನ್ನು ಬಾರಿಬಾರಿಗೂ ಆಘ್ರಾಣಿಸಿ, ಯುಧಿಷ್ಠಿರನ ಕೈಗಳನ್ನು ಹಿಡಿದು, "ಪುತ್ರರೇ! ನಿಮಗೆ ಕುಂತಿಯು ತಾಯಿ! ನಾನು ದಾದಿ! ನಿಮ್ಮ ತಂದೆಯು ಮೃತನಾದನು. ನಾಲ್ವರಿಗೂ ಹಿರಿಯನಾದ ಈ ಯುಧಿಷ್ಠಿರನೇ ಧರ್ಮಾನುಸಾರವಾಗಿ ಈಗ ನಿಮ್ಮ

ಲ್ಲರಿಗೂ ತಂದೆ. ಗುರುಹಿರಿಯರನ್ನು ಸೇವಿಸುವುದರಲ್ಲಿ ನಿತ್ಯಾಸಕ್ತರಾಗಿ, ಸತ್ಯಧರ್ಮಗಳನ್ನು ಬಿಡದವರಿಗೆ ಎಂದಿಗೂ ಹಾನಿಯಿಲ್ಲ. ಅವರು ಹೀನ ಗತಿಗೆ ಬೀಳುವುದಿಲ್ಲ. ಆದುದರಿಂದ ನೀವೆಲ್ಲರೂ ತಂದೆಯಲ್ಲಿ ಹೇಗೋ ಯುಧಿಷ್ಠಿರನಲ್ಲಿಯೂ ಹಾಗೆ ನಡೆದುಕೊಳ್ಳಿರಿ" ಎಂದಳು. ಮಾದ್ರಿಯು ಋಷಿಗಳಿಗೂ, ಕುಂತಿಗೂ ಬಾರಿಬಾರಿಗೂ ನಮಸ್ಕರಿಸಿ, ಕುಂತಿಯೊಡನೆ "ಅಕ್ಕಾ! ನಾನು ಸ್ವರ್ಗವನ್ನು ನೋಡಲಪೇಕ್ಷಿಸಿ ಈಗ ಈ ಋಷಿಗಳ ಸನ್ನಿಧಾನದಲ್ಲಿ ಆಡಿದ ಮಾತುಗಳು ಸುಳ್ಳಾಗಕೂಡದು. ನೀನು ಧನ್ಯಳು. ನಿನಗೆ ಸಮಾನಳಾದ ಸ್ತ್ರೀಯಿಲ್ಲ. ಏಕೆಂದರೆ, ಕೀರ್ತಿವಂತರೂ, ಅಪಾರತೇಜಸ್ವಿಗಳೂ ಆದ ಪುತ್ರರೈವರ ವೀರ್ಯವನ್ನೂ, ತೇಜಸ್ಸನ್ನೂ, ತಪೋಯೋಗವನ್ನೂ, ಮಹಾತ್ಮ್ಯವನ್ನೂ ನೀನು ಮುಂದೆ ಕಣ್ಣಾರೆ ನೋಡುವೆ! ನನಗೆ ಆ ಭಾಗ್ಯವಿಲ್ಲ. ಆದುದರಿಂದ ನೀನೇ ಭಾಗ್ಯವತಿ. ದೇವೀ! ನೀನು ನನ್ನ ನಮಸ್ಕಾರಕ್ಕೂ, ಪೂಜೆಗೂ ಅರ್ಹಳು. ಸಕಲವಿಧದಲ್ಲಿಯೂ ನೀನು ಹಿರಿಯಳು. ನೀನು ಅಲಂಕಾರರಹಿತಳಾದ ವಿಧವೆಯಾದರೂ ನಿನ್ನ ಕಲ್ಯಾಣಗುಣಗಳೇ ನಿನ್ನನ್ನು ಅಲಂಕರಿಸುವುವು. ಯಾದವಕುಮಾರೀ! ನನಗೆ ಅಪ್ಪಣೆ ಕೊಡು. ನಾನು ಧರ್ಮವನ್ನೂ, ಸ್ವರ್ಗವನ್ನೂ ಕೀರ್ತಿಯನ್ನೂ ಪಡೆಯುವಂತೆ ಮಾಡು. ಅನ್ಯಥಾ ಆಲೋಚಿಸಬೇಡ" ಎಂದಳು. ಹೀಗೆ ಕಣ್ಣಿನಿ ತುಂಬಿ ಗದ್ಗದಸ್ವರದಿಂದ ಮಾತನ್ನಾಡುವ ಮಾದ್ರಿಯನ್ನು ನೋಡಿ ಕುಂತಿಯು "ಓ ಕಲ್ಯಾಣೀ! ವಿಶಾಲಾಕ್ಷೀ! ಹೋಗಿ ಬಾ! ನಿನಗೆ ಸ್ವರ್ಗದಲ್ಲಿ ಭರ್ತನೊಡನೆ ಸಂಗಮವಾಗಲಿ. ಸ್ವರ್ಗದಲ್ಲಿ ಚಿರಕಾಲದವರೆಗೂ ಪತಿಯೊಡನೆ ವಿಹರಿಸುತ್ತಿರು" ಎಂದಳು.

ಆಗ ಕರ್ಮವಿಶಾರದನಾದ ಕಶ್ಯಪನು ಸ್ನಾನಮಾಡಿ, ಋಷಿಗಳೊಡಗೂಡಿ ಬಂದು, ಬಂಗಾರದ ನಾಣ್ಯಗಳು, ತುಪ್ಪ, ಎಳ್ಳು, ಮೊಸರು, ಅಕ್ಕಿ, ಗಡಿಗೆ, ಹಸುಗಳು, ಮುಂತಾದುವುಗಳನ್ನೆಲ್ಲ ತರಿಸಿ, ಅಶ್ವಮೇಧಾಗ್ನಿಯನ್ನು ತಂದು, ಮೃತನಾದ ಪಾಂಡುವಿಗೆ ಉತ್ತರಕ್ರಿಯೆಗಳೆಲ್ಲವನ್ನೂ ಕ್ರಮವಾಗಿ ಮಾಡಿಸಿದನು. ಪುರೋಹಿತನು ಹೇಳಿದ ವಿಧಿಗನುಸಾರವಾಗಿ ಯುಧಿಷ್ಠಿರನು ಅಗ್ನಿಯಿಂದ ಪಾಂಡುವಿನ ಶರೀರವನ್ನು ದಹನಮಾಡಿದನು.

ಕ್ರಿಯೆಗಳು ನಡೆದಮೇಲೆ ಯುಧಿಷ್ಠಿರನು ಶೋಕದಿಂದ ಪರಿತಪಿಸಿ, ರೋದನಮಾಡುತ್ತ, ಮೂರ್ಛಿತನಾಗಿ ಬಿದ್ದನು. ಪಾಂಡುವಿನ ಧರ್ಮಪತ್ನಿಯೂ, ಪತಿವ್ರತಾಶಿರೋಮಣಿಯೂ ಆದ ಆ ಮಾದ್ರಿಯು ಋಷಿಗಳನ್ನೂ, ಪುತ್ರರನ್ನೂ, ಕುಂತಿಯನ್ನೂ ಪರಿತ್ಯಜಿಸಿ, ಚಿತೆಯಮೇಲಿದ್ದ ಪತಿಗೆ ನಮಸ್ಕರಿಸಿ, ಒಡನೆಯೇ ತಾನೂ ಚಿತೆಯಲ್ಲಿ ಬಿದ್ದಳು. ಯುಧಿಷ್ಠಿರನೂ, ಆತನ ತಮ್ಮಂದಿರೂ, ನೂತನವಸ್ತ್ರಗಳನ್ನು ಧರಿಸಿ ಪುರೋಹಿತನ ನಿಯಮದಂತೆ ಅಲ್ಲಿ ಜಲತರ್ಪಣಮಾಡಿದರು. ಮಹಾತ್ಮನಾದ ಆ ಪಾಂಡುವಿಗೆ, ಶತಶೃಂಗದಲ್ಲಿ ತಪಸ್ಸುಮಾಡುತ್ತಿದ್ದ ಸಿದ್ಧಚಾರಣಾದಿಗಳೂ, ಮಹರ್ಷಿಗಳೂ ಸೇರಿ ಯಥಾವಿಧಿಯಾಗಿ ಉತ್ತರಕ್ರಿಯೆಗಳನ್ನು ನೆರವೇರಿಸಿದರು.

ಇದು ನೂರ ಮೂವತ್ತುನಾಲ್ಕನೆಯ ಅಧ್ಯಾಯವು.

## ಋಷಿಗಳು ಪಾಂಡವರನ್ನು ಹಸ್ತಿನಾಪುರಕ್ಕೆ ಕರೆದುಕೊಂಡು ಹೋಗಿ ಭೀಷ್ಮನಿಗೆ ಅವರನ್ನೊಪ್ಪಿಸಿ ಹಿಂತಿರುಗಿದುದು

ಪಾಂಡುವು ಹಾಗೆ ಮೃತನಾದುದನ್ನು ನೋಡಿ ಮಂತ್ರವಿದರೂ, ದೇವಕಲ್ಪರೂ ಆದ ಮಹರ್ಷಿಗಳೆಲ್ಲರೂ ಅನ್ಯೋನ್ಯವಾಗಿ ಆಲೋಚಿಸತೊಡಗಿದರು. 'ಮಹಾತ್ಮನೂ, ಯಶಸ್ವಿಯೂ ಆದ ಪಾಂಡುವು ರಾಜ್ಯವನ್ನೂ ಭೋಗವನ್ನೂ ಬಿಟ್ಟು, ತಪಸ್ಸುಮಾಡಿ ತಾಪಸರಾದ ನಮ್ಮ ಮರೆಹೊಕ್ಕಿದ್ದವನು. ಆ ರಾಜನು ತನ್ನ ಪುತ್ರರು ಹುಟ್ಟಿದುದನ್ನು ಮಾತ್ರ ಕಂಡನೇಹೊರತು, ಅವರಿಗೆ ವಿವಾಹಾದಿ ಸಂಸ್ಕಾರಗಳೊಂದನ್ನೂ ಮಾಡಿ ನೋಡಲಿಲ್ಲ. ಪುತ್ರರನ್ನೂ, ಪತ್ನಿಯನ್ನೂ ಇಲ್ಲಿ ನಮಗೊಪ್ಪಿಸಿ ಇಲ್ಲಿಂದ ಸ್ವರ್ಗವನ್ನು ಸೇರಿಬಿಟ್ಟನು. ಆ ಮಹಾತ್ಮನ ಪುತ್ರರಾದ ಈ ಪಾಂಡವರನ್ನೂ, ಅವನ ದೇಹದ ಅಸ್ಥಿಗಳನ್ನೂ, ಕುಂತಿಯನ್ನೂ ಈಗಲೇ ಸಾಗಿಸಿ ಅವರ ಸ್ವದೇಶಕ್ಕೆ ಸೇರಿಸಬೇಕಾದುದು ನಮಗೆ ಧರ್ಮವು" ಎಂದರು. ಹೀಗೆ ಉದಾರಹೃದಯರಾದ ಮಹರ್ಷಿಗಳು ಒಬ್ಬರೊಡನೊಬ್ಬರು ಸೇರಿ ಪಾಂಡವರನ್ನು ಮುಂದೆಬಿಟ್ಟುಕೊಂಡು ಹಸ್ತಿನಾಪುರಕ್ಕೆ ಹೋಗಿ, ಭೀಷ್ಮ ಧೃತರಾಷ್ಟ್ರರಿಗೆ ಅವರನ್ನು ಒಪ್ಪಿಸಬೇಕೆಂದು ನಿಶ್ಚಯಿಸಿ, ಪಾಂಡುಪತ್ನಿಯಾದ ಕುಂತಿಯನ್ನೂ,

ಪಾಂಡವರನ್ನೂ ಕರೆದುಕೊಂಡು, ಪಾಂಡು ಮಾದ್ರಿಯರ ಅಸ್ಥಿಗಳನ್ನೂ ತೆಗೆಸಿಕೊಂಡು ಹೊರಟರು. ಬಹುದೂರ ನಡೆದರೂ ಮಕ್ಕಳಮೇಲಿನ ಪ್ರೀತಿಯಿಂದ ಕುಂತಿಗೆ ಅದು ಬಹುಸಮೀಪದಂತೆ ತೋರಿತು. ಆಕೆಯು ಸ್ವಲ್ಪಕಾಲದೊಳಗಾಗಿ ಕುರುಜಾಂಗಲವನ್ನು ಸೇರಿ, ಪಟ್ಟಣದ ಹೆಬ್ಬಾಗಿಲಿಗೆ ಬಂದಳು. ಋಷಿಗಳು ದ್ವಾರಪಾಲಕರೊಡನೆ ರಾಜನಿಗೆ ಹೇಳಿಕಳುಹಿಸಿದರು. ಆಗ ದ್ವಾರಪಾಲಕರು ಕ್ಷಣಮಾತ್ರದಲ್ಲಿ ಸಭಾಸ್ಥಾನಕ್ಕೆ ಹೋಗಿ ಅನೇಕ ಋಷಿಗಳೂ, ಚಾರಣರೂ ಬಂದಿರುವರೆಂದು ರಾಜನಿಗೆ ತಿಳಿಸಿದರು. ಇದನ್ನು ಕೇಳಿ ಹಸ್ತಿನಾಪುರದವರಿಗೆಲ್ಲ ಅತ್ಯಾಶ್ಚರ್ಯವಾಯಿತು. ಸೂರ್ಯೋದಯವಾದ ಒಂದು ಗಳಿಗೆಯಾದಮೇಲೆ ಹಸ್ತಿನಾಪುರದಲ್ಲಿರುವವರೆಲ್ಲರೂ ತಮ್ಮ ಹೆಂಡಿರು ಮಕ್ಕಳೊಡನೆ ಹೊರಟುಬಂದರು. ಕ್ಷತ್ರಿಯರೂ, ಕ್ಷತ್ರಿಯಸ್ತ್ರೀಯರೂ, ಬ್ರಾಹ್ಮಣರೂ, ಬ್ರಾಹ್ಮಣಸ್ತ್ರೀಯರೂ, ಗುಂಪುಗುಂಪಾಗಿ ಅನೇಕ ವಾಹನಗಳನ್ನೇರಿ ಹೊರಟುಬಂದರು. ವೈಶ್ಯರ ಮತ್ತು ಶೂದ್ರರ ಗುಂಪೂ ಅತಿಶಯವಾಗಿದ್ದಿತು. ಅದೇ ರೀತಿಯಲ್ಲಿ ಭೀಷ್ಮನೂ, ಬಾಹ್ಲಿಕನಾದ ಸೋಮದತ್ತನೂ, ಪ್ರಜ್ಞಾಚಕ್ಷುವೆನಿಸಿದ ಧೃತರಾಷ್ಟ್ರನೂ, ವಿದುರನೂ, ಸತ್ಯವತಿಯೂ, ಕೋಸಲರಾಜಕುಮಾರಿಯೂ, ಗಾಂಧಾರಿಯೂ ಹೊರಟುಬಂದರು. ದುರ್ಯೋಧನನೇ ಮೊದಲಾದ ಧೃತರಾಷ್ಟ್ರಪುತ್ರರು ನೂರ್ವರೂ ವಿಚಿತ್ರಾಭರಣಗಳಿಂದಲಂಕೃತರಾಗಿ ಹೊರಟರು. ಕೌರವರೆಲ್ಲರೂ ತಮ್ಮ ಪುರೋಹಿತರೊಡನೆ ಆ ಋಷಿಸಮೂಹದ ಬಳಿಗೆ ಬಂದು ತಲೆಬಗ್ಗಿ ನಮಸ್ಕರಿಸಿ, ಅವರ ಸಮೀಪದಲ್ಲಿ ಕುಳಿತುಕೊಂಡರು. ದೇಶದ ಮತ್ತು ಪಟ್ಟಣದ ಜನರೆಲ್ಲರೂ ಆ ಮಹರ್ಷಿಗಳಿಗೆ ನಮಸ್ಕರಿಸಿ ಕುಳಿತರು. ಜನಮೇಜಯರಾಜಾ! ಜನಸಮೂಹವೆಲ್ಲವೂ ನಿಶ್ಶಬ್ದವಾಗಿರುವುದನ್ನು ನೋಡಿ, ಭೀಷ್ಮನು ಆ ಋಷಿಗಳಿಗೆ ಅರ್ಘ್ಯಪಾದ್ಯಗಳನ್ನು ಕೊಟ್ಟು ವಿಧ್ಯುಕ್ತವಾಗಿ ಪೂಜಿಸಿ ರಾಜ್ಯವನ್ನೂ, ದೇಶವನ್ನೂ ಅವರಿಗೆ ಅರ್ಪಿಸಿದನು. ಆಗ ಅವರಲ್ಲಿ ವಿಶೇಷ ವೃದ್ಧನೂ, ಜಟಾವಲ್ಕಲಧಾರಿಯೂ ಆದ ಮಹರ್ಷಿಯೊಬ್ಬನು, ಮೇಲಕ್ಕೆದ್ದು ಇತರ ಋಷಿಗಳ ಅಭಿಪ್ರಾಯವನ್ನು ತಿಳಿದು, ಭೀಷ್ಮಾದಿಗಳೊಡನೆ “ ಕೌರವವಂಶದಲ್ಲಿ ಹುಟ್ಟಿದ ಪಾಂಡುವೆಂಬ ರಾಜನು, ಕಾಮಭೋಗಗಳನ್ನು ತ್ಯಜಿಸಿ, ಇಲ್ಲಿಂದ ಶತಶೃಂಗಪರ್ವತಕ್ಕೆ

ಹೋಗಿ ರಾಜಸುಖಗಳನ್ನು ಬಿಟ್ಟು, ತಪಸ್ವಿಯಾಗಿದ್ದುದು ನಿಮಗೂ ತಿಳಿದಿರುವುದಷ್ಟೆ? ಆ ಮಹಾತ್ಮನು ಸ್ವಲ್ಪಕಾಲದವರೆಗೆ ಫಲಮೂಲಗಳನ್ನೇ ತಿನ್ನುತ್ತ ಪತ್ನಿಯರೊಡನೆ ಶಾಸ್ತ್ರೋಕ್ತರೀತಿಯಲ್ಲಿ ತಪಸ್ಸನ್ನಾಡುತಿದ್ದನು. ಆತನು ತನ್ನ ನಡೆವಳಿಕೆಗಳಿಂದಲೂ, ಸತ್ಕಾರ್ಯಗಳಿಂದಲೂ, ತಪಸ್ಸುಗಳಿಂದಲೂ ಶತಶೃಂಗದಲ್ಲಿದ್ದ ತಾಪಸರೆಲ್ಲರನ್ನೂ ಸಂತೋಷಗೊಳಿಸಿದನು. ಆ ರಾಜನು ಒಮ್ಮೆ ತನ್ನ ಪತ್ನಿಯರೊಡನೆ ಸ್ವರ್ಗಕ್ಕೆ ಹೋಗಲು ಪ್ರಯತ್ನಿಸಿದಾಗ, ಬ್ರಹ್ಮರ್ಷಿಗಳು ಆತನೊಡನೆ 'ರಾಜೇಂದ್ರಾ! ನಿನಗೆ ಸಂತಾನವಿಲ್ಲ. ಅದರಿಂದ ಪುಣ್ಯಲೋಕಪ್ರಾಪ್ತಿಯೂ ಇಲ್ಲ. ಆದುದರಿಂದ ನೀನು ನಿನ್ನ ಪತ್ನಿಯರೊಡನೆ ಧರ್ಮದೇವನನ್ನೂ, ವಾಯುವನ್ನೂ, ಇಂದ್ರನನ್ನೂ, ಅಶ್ವಿನೀದೇವತೆಗಳನ್ನೂ ಆರಾಧಿಸಿದರೆ ಅವರು ಮಕ್ಕಳನ್ನು ಕೊಡುವರು. ಆಗ ನೀನು ಪಿತೃಋಣದಿಂದ ವಿಮುಕ್ತನಾಗುವೆ. ನಿನಗೆ ಆ ರೀತಿಯಲ್ಲಿ ಪುತ್ರರು ಹುಟ್ಟುವರೆಂಬುದೂ ತಪೋಬಲದಿಂದ ನಮ್ಮ ದಿವ್ಯದೃಷ್ಟಿಗೆ ಗೋಚರವಾಗುತ್ತಿದೆ' ಎಂದರು. ಆತನು ಅವರು ಹೇಳಿದಂತೆಯೇ ದೇವತೆಗಳನ್ನು ಆರಾಧಿಸಿದನು. ಬ್ರಹ್ಮಚರ್ಯವ್ರತದಲ್ಲಿದ್ದರೂ ಆ ಪಾಂಡುವಿನ ಭಾಗ್ಯದಿಂದ ಧರ್ಮದೇವತೆಯಿಂದ ಯುಧಿಷ್ಠಿರನೆಂಬ ಈ ಪುತ್ರನು ಶತಶೃಂಗದಲ್ಲಿ ಹುಟ್ಟಿದನು. ಹಾಗೆಯೇ ಆ ಮಹಾತ್ಮನಿಗೆ ವಾಯುದೇವನಿಂದ ಬಲಿಷ್ಠನೂ, ಮಹಾ ಪರಾಕ್ರಮಿಯೂ ಆದ ಈ ಭೀಮನೆಂಬ ಪುತ್ರನು ಹುಟ್ಟಿದನು. ಇಂದ್ರನಿಂದ ಸತ್ಯಪರಾಕ್ರಮಿಯಾದ ಈ ಮಗನು ಹುಟ್ಟಿದನು. ಈ ಮಹಾಧನುರ್ಧಾರಿಯು ಹುಟ್ಟಿದಾಗ ಇಂದ್ರನು ಕುಂತಿಯನ್ನು ನೋಡಿ 'ಕುಂತೀ! ನನ್ನ ಪ್ರಸಾದದಿಂದ ಮಹಾಪರಾಕ್ರಮಿಯಾದ ಈತನು ಹುಟ್ಟಿರುವನು. ತನಗೆ ಅಜೇಯರಾದ ದೇವತೆಗಳೇ ಶತ್ರುಗಳಾದರೂ, ಅವರನ್ನು ಈತನು ಜಯಿಸಬಲ್ಲನು. ಇದರಲ್ಲಿ ಸಂದೇಹವಿಲ್ಲ. ಈತನ ಕೀರ್ತಿಯು ಧನುರ್ವಿದ್ಯೆಯಲ್ಲಿ ನಿಪುಣರಾದವರೆಲ್ಲರ ಕೀರ್ತಿಯೆಲ್ಲವನ್ನೂ ವಿಾರಿಸುವುದು. ಯುಧಿಷ್ಠಿರನು ತನ್ನ ತಮ್ಮನಾದ ಈತನ ಪರಾಕ್ರಮದಿಂದ ರಾಜಸೂಯಯಾಗವನ್ನು ನೆರವೇರಿಸುವನು. ಈತನು ಸಮಸ್ತಮನುಷ್ಯರನ್ನೂ, ಸಕಲ ಗಂಧರ್ವರಾಕ್ಷಸರನ್ನೂ ಜಯಿಸಬಲ್ಲನು. ಈತನು ದುರ್ಯೋಧನನೇ ಮೊದಲಾದ ಎಲ್ಲಾ ಕೌರವ-

ರನ್ನೂ ಗೆಲ್ಲಬಲ್ಲನು. ಧರ್ಮಪುತ್ರನಾದ ಯುಧಿಷ್ಠಿರನು ಧರ್ಮವೇ ಮುಖ್ಯ ವಾಗಿ ಉಳ್ಳವನು. ಮಹಾಧನುರ್ಧರರೂ, ಪುರುಷಶ್ರೇಷ್ಠರೂ, ಶೂರಸಿಹ್ಮರೂ ಆದ ಈ ಮಾದ್ರೀಪುತ್ರರಿಬ್ಬರೂ, ಅಶ್ವಿನೀದೇವತೆಗಳಿಂದ ಹುಟ್ಟಿದವರು. ಇದೋ! ಇವರಿಗೆ ನಕುಲಸಹದೇವರೆಂದು ಹೆಸರು. ಇವರೂ ಅತ್ಯಂತ ತೇಜಸ್ವಿಗಳು. ಕೀರ್ತಿವಂತನಾದ ಪಾಂಡುವು ವನವಾಸದಲ್ಲಿ ಸದಾಧರ್ಮರತನಾಗಿ, ಪಿತೃಪಿತಾಮಹರ ವಂಶವನ್ನು ಉದ್ಧರಿಸಿದನು. ಈ ಪಾಂಡುಪುತ್ರರ ಹುಟ್ಟು, ಬೆಳವಳಿಕೆ, ವೇದಾಧ್ಯಯನ ಮುಂತಾದುವುಗಳನ್ನು ಕಂಡರೆ ನೀವೂ ಸಂತುಷ್ಟರಾಗುವಿರಿ. ಪಾಂಡುವು ಸತ್ಪುರುಷರ ನಡೆವಳಿಕೆಯಲ್ಲಿ ಪ್ರವರ್ತಿಸಿ, ಅಲಭ್ಯವಾದ ಈ ಪುತ್ರಲಾಭವನ್ನು ಪಡೆದನು. ಹದಿನೇಳು ದಿನಗಳ ಹಿಂದೆ ಆತನು ಪಿತೃಲೋಕವನ್ನು ಸೇರಿದನು.

ಚಿತೆಯಲ್ಲಿ ಪಾಂಡುವನ್ನಿಟ್ಟು, ಅಗ್ನಿಮುಖವಾಗಿ ಹೋಮಮಾಡುವುದನ್ನು ನೋಡಿ, ಮಾದ್ರಿಯೂ ಅದೇ ಅಗ್ನಿಗೆ ತನ್ನನ್ನು ಒಪ್ಪಿಸಿದಳು. ಆಕೆಯು ಸಹಗಮನದಿಂದ ಆತನೊಡನೆ ಪತಿಲೋಕವನ್ನು ಸೇರಿದಳು. ಆಕೆಗೂ, ಆ ಪಾಂಡುವಿಗೂ ಇನ್ನುಮೇಲೆ ಮಾಡಬೇಕಾದ ಕಾರ್ಯಗಳೆಲ್ಲವನ್ನೂ ನೀವು ನೆರವೇರಿಸಬಹುದು. ಕುಂತಿಯೂ, ಕೀರ್ತಿವಂತರಾದ ಈ ಪಾಂಡವರೂ ನಿಮ್ಮ ಮನೆಯನ್ನು ಹುಡುಕಿಕೊಂಡು ಬಂದು, ನಿಮ್ಮಲ್ಲಿ ಶರಣಾಗತರಾಗಿರುವುದರಿಂದ, ನೀವು ಅವರನ್ನು ಗೌರವದಿಂದ ಸ್ವೀಕರಿಸಬೇಕು. ಇದು ಈಗಿನದಲ್ಲ. ಅನಾದಿಯಾದ ಧರ್ಮವು. ಇವೆರಡೂ ಅವರಿಬ್ಬರ ಶರೀರಶೇಷಗಳು ಇವರೆಲ್ಲರೂ ಅವರ ಮಕ್ಕಳು. ಇವರನ್ನು ಅವರ ತಾಯಿಯೊಡನೆ ಅನುಗ್ರಹಿಸಿ ರಕ್ಷಿಸಿರಿ. ದಹನಮೊದಲುಗೊಂಡು, ಸಪಿಂಡೀಕರಣದವರೆಗಿನ ಪ್ರೇತಕಾರ್ಯಗಳು ಮುಗಿದಮೇಲೆ, ಮಹಾಯಶಸ್ವಿಯೂ, ಸಕಲಧರ್ಮವಿದನೂ, ಕುರುಕುಲೋದ್ಧಾರಕನೂ ಆದ ಪಾಂಡುವಿಗೆ ಪಿತೃಮೇಧಯಜ್ಞವು ನಡೆಯಲಿ'' ಎಂದು ಹೇಳಿ ಅವರೆಲ್ಲರೂ ನೋಡುತ್ತಿರುವಂತೆಯೇ ಆ ಋಷಿಗಳೂ ಮತ್ತು ಚಾರಣರೂ ಕ್ಷಣಮಾತ್ರದಲ್ಲಿ ಅದೃಶ್ಯರಾದರು. ಹೀಗೆ ಋಷಿಗಳ ಮತ್ತು ಚಾರಣರ ಸಮೂಹವು, ಆಕಾಶದಲ್ಲಿ ಕಾಣಿಸಿ ಕಣ್ಮರೆಯಾಗುವ ಗಂಧರ್ವನಗರದಂತೆ, ಮೊದಲು ಕಂಡ

ಕಡೆಯಲ್ಲಿ ತಿರುಗಿ ಕಾಣದಂತೆ ತಟ್ಟನೆ ಮಾಯವಾದುದನ್ನು ನೋಡಿ ಜನರೆಲ್ಲ ಆಶ್ಚರ್ಯಪಟ್ಟರು.

ಇದು ನೂರಮೂವತ್ತೈದನೆಯ ಅಧ್ಯಾಯವು.

---

{ ಪಾಂಡುವಿನ ಅಸ್ಥಿಪಂಜರಕ್ಕೆ ಅಗ್ನಿಸಂಚಯನಾದಿ ಪ್ರೇತಕರ್ಮಗಳನ್ನು ನಡೆಸಿದುದು. }

ಧೃತರಾಷ್ಟ್ರನು ವಿದುರನನ್ನು ಕುರಿತು “ ವಿದುರಾ! ರಾಜಸಿಂಹನಾದ ಪಾಂಡುವಿಗೂ, ಮಾದ್ರಿಗೂ ಪ್ರೇತಕಾರ್ಯಗಳೆಲ್ಲವನ್ನೂ ರಾಜಗೌರವಕ್ಕೆ ತಕ್ಕಂತೆ ಇಲ್ಲಿ ಸಂಭ್ರಮವಾಗಿ ಮಾಡಿಸು. ಅವರ ತೃಪ್ತಿಗಾಗಿ ಪಶುಗಳನ್ನೂ, ವಿವಿಧವಸ್ತ್ರಗಳನ್ನೂ, ರತ್ನಗಳನ್ನೂ, ಧನಗಳನ್ನೂ ಕೇಳುವವರಿಗೆ ಕೇಳುವಷ್ಟು ಕೊಡು. ಮಾದ್ರಿಯ ದೇಹವನ್ನು ಗಾಳಿಯೂ, ಸೂರ್ಯನ ಬೆಳಕೂ ಸ್ಪರ್ಶಿಸದಂತೆ ಚೆನ್ನಾಗಿ ಮುಚ್ಚಿಟ್ಟಿದ್ದು, ಆಕೆಗೆ ಕುಂತಿಯು ಯಾವರೀತಿಯಲ್ಲಿ ಮರ್ಯಾದೆಮಾಡಬೇಕೋ ಅವನ್ನೆಲ್ಲ ಮಾಡಿಸು. ಪಾಂಡುವು ದೇವಕುಮಾರರಿಗೆ ಸಮಾನರಾದ ಐದುಮಂದಿ ಪುತ್ರರನ್ನು ಪಡೆದವನು. ಆದುದರಿಂದ ಆತನನ್ನು ಕುರಿತು ನಾವು ಶೋಕಿಸಬೇಕಾದುದಿಲ್ಲ. ಅಲ್ಲದೆ, ಈಗ ನಾವು ಅವನು ಮಹಾಭಾಗ್ಯಶಾಲಿಯೆಂದೇ ಶ್ಲಾಘಿಸಬೇಕು ” ಎಂದನು. ವಿದುರನು ಹಾಗೆಯೇ ಆಗಲೆಂದು ಹೇಳಿ, ಭೀಷ್ಮನೊಡಗೂಡಿ ಪವಿತ್ರವಾದ ಪ್ರದೇಶದಲ್ಲಿ ಪಾಂಡುವಿಗೆ ಸಂಸ್ಕಾರಗಳನ್ನು ಮಾಡಿದನು. ಆಗ ಪಾಂಡುವಿನ ಪುರೋಹಿತರು ತುಪ್ಪದ ವಾಸನೆಯೊಡನೆ ಜ್ವಲಿಸುತಿದ್ದ ಅಗ್ನಿಹೋತ್ರಗಳನ್ನು ಪಟ್ಟಣದಿಂದ ಅತಿಶೀಘ್ರವಾಗಿ ತೆಗೆದುಕೊಂಡುಬಂದರು. ಆಮೇಲೆ ಆ ಋತುವಿನಲ್ಲಿ ದೊರೆಯುವ ಹಲವು ಬಗೆಯ ಹೂಗಳಿಂದಲೂ, ಚಂದನವೇ ಮೊದಲಾದ ವಾಸನಾದ್ರವ್ಯಗಳಿಂದಲೂ ಪಲ್ಲಕ್ಕಿಯನ್ನು ಅಲಂಕರಿಸಿದರು. ಅದನ್ನು ನಾಲ್ಕು ಕಡೆಗಳಲ್ಲಿಯೂ ತೆರೆಗಳಿಂದ ಮುಚ್ಚಿ, ಅದರಮೇಲೆ ಹೂಗಳಿಂದಲೂ, ಬೆಲೆಬಾಳುವ ವಸ್ತ್ರಗಳಿಂದಲೂ ಅಲಂಕರಿಸಿದರು. ಮಂತ್ರಿಗಳೂ, ಜ್ಞಾತಿಗಳೂ ಸತ್ಪುರುಷರೂ ಸೇರಿ ಆ ಪಾಂಡುವಿನ ದೇಹವನ್ನು ಎತ್ತಿತಂದು, ಪಲ್ಲಕ್ಕಿ

ಯಲ್ಲಿ ಮಲಗಿಸಿಟ್ಟರು. ಮಾದ್ರಿಯ ದೇಹವನ್ನೂ ಹಾಗೆಯೇ ಅದರಲ್ಲಿಟ್ಟು, ಚೆನ್ನಾಗಿ ಮುಚ್ಚಿ ಅಲಂಕರಿಸಿದ ಆ ವಾಹನವನ್ನು ಮನುಷ್ಯರಿಂದ ಹೊರಿಸಿಕೊಂಡುಹೋದರು. ಆಗ ಪಾಂಡುವಿಗೆ ಛತ್ರಚಾಮರಾದಿ ರಾಜಯೋಗ್ಯವಾದ ಬಿರುದುಗಳೂ, ಸಮಸ್ತ ವಾದ್ಯಗಳೂ ಸಂಗಡ ಬಂದುವು. ನೂರಾರುಮಂದಿ ಜನರು ಅಪರಿಮಿತವಾದ ರತ್ನಗಳನ್ನು ತಂದು ಆ ಪಾಂಡುವಿಗೆ ಸಂಸ್ಕಾರಮಾಡುವ ಕಾಲದಲ್ಲಿ ಕೋರಿದವರಿಗೆ ಕೋರಿದಷ್ಟನ್ನು ದಾನಕೊಟ್ಟರು. ಹೀಗೆ ಶ್ವೇತಛತ್ರಗಳು, ಬಿಳೀ ಚಾಮರಗಳು, ಉತ್ತಮವಸ್ತ್ರಗಳು ಇವೆಲ್ಲ ಆ ಪಾಂಡುವಿನ ದೇಹದೊಡನೆ ಸಾಗಿಬರುತಿದ್ದುವು. ಪುರೋಹಿತರು ಬಿಳಿಯವಸ್ತ್ರಗಳನ್ನು ಧರಿಸಿ, ಗಂಧಪುಷ್ಪಾದಿಗಳಿಂದ ಅಲಂಕೃತವಾದ ಪಾತ್ರೆಯಲ್ಲಿ ಜ್ವಲಿಸುತ್ತಿರುವ ಹೋಮಾಗ್ನಿಗೆ ತುಪ್ಪವನ್ನು ಸುರಿಯುತ್ತ, ಆ ಮೃತದೇಹದ ಮುಂದೆ ಹೊರಟರು. ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ, ಶೂದ್ರರೂ ದುಃಖದಿಂದ ಕಣ್ಣೀರು ತುಂಬಿಕೊಂಡು ರಾಜನನ್ನು ಹಿಂಬಾಲಿಸಿದರು. ಆಗ ಪಾಂಡವರೂ, ಭೀಷ್ಮ, ವಿದುರ, ಸೋಮದತ್ತ, ಭೂರಿಶ್ರವಸೇ ಮುಂತಾದವರೂ ವ್ಯಸನದಿಂದ "ಅಯ್ಯೋ! ನಮ್ಮೆಲ್ಲರನ್ನೂ ದುಃಖದಲ್ಲಿ ಮುಳುಗಿಸಿ, ಅನಾಥರನ್ನಾಗಿ ಮಾಡಿ ನೀನು ಎಲ್ಲಿಗೆ ಹೋಗುತ್ತಿರುವೆ?" ಎಂದು ಗಟ್ಟಿಯಾಗಿ ರೋದನಮಾಡುತ್ತಾ, ಒಬ್ಬರನ್ನೊಬ್ಬರು ಅಪ್ಪಿಕೊಂಡು ಹಿಂದೆ ಹೋದರು. ಸತ್ಯವಾದಿಗಳಾದ ಭೀಷ್ಮಾದಿಗಳು ಗಂಗಾತೀರದಲ್ಲಿರುವ ರಮಣೀಯವಾದ ವನಪ್ರದೇಶದಲ್ಲಿ ಪವಿತ್ರವಾದ ಮೈದಾನದಲ್ಲಿ ಆ ಪಲ್ಲಕ್ಕಿಯನ್ನು ಇಳಿಸಿದರು. ಅಲ್ಲಿ ಪಾಂಡುವಿನ ಶರೀರಕ್ಕೂ, ಆತನ ಪತ್ನಿಯಾದ ಮಾದ್ರಿಯ ಶರೀರಕ್ಕೂ ಅನೇಕ ಸುಗಂಧದ್ರವ್ಯಗಳನ್ನು ಸೇರಿಸಿದ ಒಳ್ಳೇ ಅಗಿಲು, ದೇವದಾರು ಮುಂತಾದುವುಗಳನ್ನು ಲೇಪಿಸಿದರು. ಚಿನ್ನದ ಕಲಶಗಳಿಂದ ನೀರನ್ನು ತಂದು ಆ ರಾಜನ ಶರೀರವನ್ನು ತೊಳೆದು, ಬಿಳಿಯ ಗಂಧವನ್ನೂ, ತುಂಗ ಪದ್ಮಕರಸಗಳನ್ನೂ ಹಚ್ಚಿದರು. ಆಮೇಲೆ ಹಲವು ದೇಶಗಳಿಂದ ತಂದ ಬಿಳಿಯವಸ್ತ್ರಗಳನ್ನು ಆತನಿಗೆ ಉಡಿಸಿದರು. ಹೀಗೆ ಉತ್ತಮವಸ್ತ್ರಗಳಿಂದ ಅಲಂಕೃತನಾದ ಪಾಂಡುವು, ಆಗಲೂ ಸಜೀವನಾಗಿ ದಿವ್ಯಶಯ್ಯೆಯಮೇಲೆ ಮಲಗಿರುವಂತೆಯೇ ತೋರುತಿದ್ದನು.

ಋತ್ವಿಕ್ಪುರೋಹಿತರೇ ಮುಂತಾದವರು, ಅಶ್ವಮೇಧಾಗ್ನಿಯನ್ನು ತಂದು ವೇದೋಕ್ತವಿಧಿಗನುಸಾರವಾಗಿ ಮಂತ್ರಪೂರ್ವಕವಾಗಿ ಸಂಸ್ಕಾರಗಳನ್ನು ಮಾಡಿದರು. ಋತ್ವಿಜರ ನಿಯಮದಂತೆ ಪ್ರೇತಕರ್ಮಗಳೆಲ್ಲ ನಡೆದ ಮೇಲೆ, *ರಾಜನಿಗೂ, ಮಾದ್ರಿಗೂ ತುಪ್ಪವನ್ನು ಲೇಪಿಸಿ, ಅಲಂಕರಿಸಿ, ಹೊನ್ನೆ, ಪದ್ಮಕ, ಚಂದನ, ಸರಳ, ದೇವದಾರು, ಗುಗ್ಗುಳ, ಶ್ರೀಗಂಧ, ಮುಡಿವಾಳ, ಲಾಮಂಚ, ಮುಂತಾದ ಪರಿಮಳವುಳ್ಳ ಕಾಷ್ಠಗಳಿಂದಲೂ, ಹಲವು ಬಗೆಯ ಸುಗಂಧದ್ರವ್ಯಗಳಿಂದಲೂ ಶಾಸ್ತ್ರೋಕ್ತಕಾಗಿ ದಹನಮಾಡಿದರು. ಆಗ ಆ ಇಬ್ಬರ ದೇಹವನ್ನೂ ನೋಡಿ ಅಂಬಾಲಿಕೆಯು 'ಹಾ! ಪುತ್ರಾ! ಎಂದು ಮೂರ್ಛಿತಳಾಗಿ ನೆಲದಮೇಲೆ ಬಿದ್ದಳು. ಅದನ್ನು ನೋಡಿ ರಾಜಭಕ್ತಿನಿಷ್ಠರಾದ ಪುರಜನರೂ, ದೇಶದ ಜನರೂ ಮತ್ತಷ್ಟು ವ್ಯಸನದಿಂದ ರೋದನಮಾಡಲಾರಂಭಿಸಿದರು. ಕುಂತಿಯು ಎಲ್ಲರಿಗಿಂತಲೂ ಉಚ್ಚಧ್ವನಿಯಿಂದ ಗೋಳಿಡುವುದನ್ನು ಕಂಡು ಜನರೆಲ್ಲ ಬೆರಗಾದರು. ಪಶುಪಕ್ಷ್ಯಾದಿ ತಿರ್ಯಗ್ಜಂತುಗಳೂಕೂಡ ರೋದಿಸಲಾರಂಭಿಸಿದುವು. ಹಾಗೆಯೇ ಭೀಷ್ಮನೂ, ಮಹಾಮತಿಯಾದ ವಿದುರನೂ, ಬೇರೆ ಎಲ್ಲಾ ಗುರುಹಿರಿಯರೂ ವಿಶೇಷವ್ಯಸನಾಕ್ರಾಂತರಾದರು. ಆಮೇಲೆ ಭೀಷ್ಮನೂ, ವಿದುರನೂ ಧೃತರಾಷ್ಟ್ರಮಹಾರಾಜನೂ, ಕೌರವಸ್ತ್ರೀಯರೆಲ್ಲರೂ, ಪಾಂಡವರೊಡಯೂ, ಇತರ ಜ್ಞಾತಿಗಗಳೊಡನೆಯೂ ಸೇರಿ ರೋದನಮಾಡುತ್ತಲೇ ತರ್ಪಣವನ್ನು ಬಿಟ್ಟರು. ಆಮೇಲೆ ಮಂತ್ರಿಗಳೆಲ್ಲರೂ, ಶೋಕದಿಂದ ಕುಗ್ಗುತ್ತಿದ್ದ ಪಾಂಡವರನ್ನು ಎತ್ತಿಕೊಂಡು ಸಮಾಧಾನಪಡಿಸುತಿದ್ದರು. ರಾಜಾ! ಪಾಂಡವರೂ, ಇತರ ಬಂಧುಗಳೂ ನೆಲದಮೇಲೆ ಮಲಗಿದುದನ್ನು ನೋಡಿ ಅವರಂತೆ ಎಲ್ಲಾ ಬ್ರಾಹ್ಮಣರೂ ನೆಲದಮೇಲೆಯೇ ಮಲಗಿದರು. ಅಬಾಲವೃದ್ಧರು ಮೊದಲುಗೊಂಡು ಭೂಮಿಯಲ್ಲಿರುವ ಸಮಸ್ತ ಜನರೂ ಪಾಂಡವರಿಗಾಗಿ ವ್ಯಸನಪಡುತ್ತಾ, ಆ ಪಾಂಡುಪುತ್ರರೊಡನೆ ತಾವೂ ಹನ್ನೆರಡು ರಾತ್ರಿಗಳನ್ನು ದುಃಖದಿಂದಲೇ ಕಳೆದರು.

ಇದು ನೂರ ಮೂವತ್ತಾರನೆಯ ಅಧ್ಯಾಯವು.

---

* ಪಾಂಡು ಮಾದ್ರಿಯರ ದೇಹವು ಮೊದಲೇ ದಗ್ಧವಾಗಿದ್ದರೂ, ಆ ಶರೀರಾಕಾರಕ್ಕೇ ನಿಂತಿದ್ದ ಅಸ್ಥಿಪಂಜರಕ್ಕೇ ಈ ಪುನಸ್ಸಂಸ್ಕಾರಗಳೆಲ್ಲ ನಡೆದುದಾಗಿ ತಿಳಿಯಬೇಕು.

ಪಾಂಡುವಿಗೆ ಶ್ರಾದ್ಧಕಾರ್ಯಗಳು, ಆಟದಲ್ಲಿ ಭೀಮನು ದುರ್ಯೋಧನಾದಿಗಳನ್ನು ಸೋಲಿಸಿದುದು. ದುರ್ಯೋಧನನು ಭೀಮನನ್ನು ಪ್ರಮಾಣಕೋಟಿಯ ನೀರಿನಲ್ಲಿ ಎತ್ತಿಹಾಕಿ ಹಾವುಗಳಿಂದ ಕಡಿಸಿದುದು.

ಆಗ ವಿದುರ, ಭೀಷ್ಮ, ವ್ಯಾಸ, ಧೃತರಾಷ್ಟ್ರಾದಿ ಜ್ಞಾತಿಗಳೆಲ್ಲರೂ ಗೂಡಿ, ಪುರೋಹಿತನು ವಿಧಿಸಿದಂತೆ ಘೃತಮಿಶ್ರವಾದ ಅನ್ನದಿಂದ ಪಾಂಡುವಿಗೆ ಪಿಂಡಪ್ರದಾನಮಾಡಿ, ಶ್ರಾದ್ಧಕಾರ್ಯವನ್ನು ನಡೆಸಿದರು. ಕೌರವರಿಗೂ, ಸಾವಿರಾರುಮಂದಿ ಬ್ರಾಹ್ಮಣೋತ್ತಮರಿಗೂ ಸಂತರ್ಪಣೆಯಾಯಿತು. ಬ್ರಾಹ್ಮಣರಿಗೆ ರತ್ನಸಮೂಹಗಳನ್ನೂ, ಉತ್ತಮವಾದ ಗ್ರಾಮಗಳನ್ನೂ ದಾನಮಾಡಿದರು. ಸ್ನಾನವು ಮುಗಿದಮೇಲೆ, ಭರತಕುಲಶ್ರೇಷ್ಠರಾದ ಪಾಂಡವರನ್ನು ಕರೆದುಕೊಂಡು, ಎಲ್ಲರೂ ಹಸ್ತಿನಾವತಿಗೆ ಹೋದರು. ಅಲ್ಲಿನ ಜನರೆಲ್ಲರೂ ಬಂಧುಮರಣವಲ್ಲಿ ಹೇಗೋಹಾಗೆ, ಪಾಂಡುವಿನ ಮರಣಕ್ಕಾಗಿ ಬಹಳ ದುಃಖಪಡುತಿದ್ದರು. ಶ್ರಾದ್ಧವೆಲ್ಲ ಮುಗಿದಮೇಲೆಯೂ ಜನರೆಲ್ಲ ದುಃಖಿತರಾಗಿರುವುದನ್ನು ನೋಡಿ, ಸತ್ಯವತಿಯೂ ವ್ಯಸನದಿಂದ ಹಿಂದುಮುಂದು ತೋರದೆ ಕೊರಗುತಿದ್ದಳು. ಆಗ ವ್ಯಾಸನು ತಾಯಿಯಾದ ಸತ್ಯವತಿಯನ್ನು ನೋಡಿ “ಅಮ್ಮಾ! ನಮಗೆ ಸುಖಕಾಲವು ಕಳೆದುಹೋಗಿ ದುಃಖಕಾಲವು ಆರಂಭಿಸಿರುವುದು. ಕಾಲವು ಕೆಟ್ಟುಹೋಗಿ, ದಿನದಿನಕ್ಕೆ ಪಾಪವೂ ಹೆಚ್ಚುತ್ತಿರುವುದು. ಭೂಮಿಗೆ ಯೌವನವು ಕಳೆದುಹೋಯಿತು. ಮರೆ ಮೋಸಗಳೇ ಎಲ್ಲಾ ಕಡೆಗಳಲ್ಲಿಯೂ ವ್ಯಾಪಿಸಿ, ಪ್ರಪಂಚವೇ ನಾನಾದೋಷಗಳಿಂದ ಕಲಂಕಿತವಾಗಿದೆ. ವರ್ಣಾಶ್ರಮಾದಿಧರ್ಮಗಳೂ, ಸತ್ಕ್ರಿಯೆಗಳೂ, ಸದಾಚಾರಗಳೂ ಖಿಲವಾಗುತ್ತ ಬಂದು ಅತಿ ಭಯಂಕರಕಾಲವು ಬರುತ್ತಿದೆ. ಕೌರವರ ದೌಷ್ಟ್ಯವನ್ನು ಭೂಮಿಯು ಸಹಿಸಲಾರಳು. ಇನ್ನು ನೀನು ಯೋಗಾಭ್ಯಾಸವನ್ನು ಹಿಡಿದು ದೃಢಚಿತ್ತಳಾಗಿ, ತಪೋವನದಲ್ಲಿ ವಾಸಮಾಡುವುದುಚಿತವು. ಈ ನಿನ್ನ ವಾರ್ಧಕದಶೆಯಲ್ಲಿ ನಮ್ಮ ಕುಲಕ್ಕೆ ಒದಗುವ ಘೋರನಾಶವನ್ನು ನೀನು ಕಣ್ಣಾರೆ ನೋಡಬೇಡ” ಎಂದನು. ಸತ್ಯವತಿಯು ಹಾಗೆಯೇ ಆಗಲೆಂದು ಹೇಳಿ, ಒಳಕ್ಕೆ ಹೋಗಿ ಸೊಸೆಯನ್ನು ನೋಡಿ, “ಅಂಬಿಕೇ! ನಿನ್ನ ಮು

ಮ್ಮಗನಾದ ದುರ್ಯೋಧನನ ಅನೀತಿಯಿಂದ ನಮ್ಮ ಭರತಕುಲವೂ, ಎಲ್ಲಾ ಪುರಜನರೂ ಸಮಸ್ತ ಬಂಧುಗಳೊಡನೆ ನಾಶವಾಗುವ ಕಾಲವು ಕಾದಿರುವುದಾಗಿ ಕೇಳಿದೆನು. ನೀನು ಸಮ್ಮತಿಸುವುದಾದರೆ, ಈಗಲೇ ನಾವಿಬ್ಬರೂ ಪುತ್ರಶೋಕದಿಂದ ಕೊರಗುತ್ತಿರುವ ಈ ಅಂಬಾಲಿಕೆಯನ್ನೂ ಕರೆದುಕೊಂಡು ವನಕ್ಕೆ ಹೋಗುವೆವು. ನಿನಗೆ ಶುಭವಾಗಲಿ'' ಎಂದಳು. ಅದಕ್ಕೆ ಅಂಬಾಲಿಕೆಯೂ ಅನುಮತಿಸಿದಳು. ಆಮೇಲೆ ಸತ್ಯವತಿಯು ಭೀಷ್ಮನ ಅನುಮತಿಯನ್ನು ಪಡೆದು, ಇಬ್ಬರು ಸೊಸೆಯರೊಡನೆ ಕಾಡಿಗೆ ಹೋದಳು. ಅಲ್ಲಿ ಆಕೆಯು ಕಠಿನವಾದ ತಪಸ್ಸನ್ನು ಹಿಡಿದು, ಒಳ್ಳೇ ಪುಣ್ಯಕಾಲದಲ್ಲಿ ದೇಹವನ್ನು ಬಿಟ್ಟು ಸದ್ಗತಿಯನ್ನು ಸೇರಿದಳು.

ಇತ್ತಲಾಗಿ ಪಾಂಡವರಿಗೆ ವೇದೋಕ್ತವಾದ ಚೌಲೋಪನಯನಾದಿ ಸಂಸ್ಕಾರಗಳೆಲ್ಲ ನಡೆದಮೇಲೆ, ಅವರು ರಾಜಭೋಗಗಳನ್ನು ಅನುಭವಿಸುತ್ತ ಧೃತರಾಷ್ಟ್ರಪುತ್ರರೊಡಗೂಡಿ ಉತ್ಸಾಹದಿಂದ ಆಟವಾಡುತಿದ್ದರು. ಬಾಲಕ್ರೀಡೆಗಳಲ್ಲಿಯೇ ತಮ್ಮ ಅತಿಶಯವಾದ ಸಾಮರ್ಥ್ಯವನ್ನು ತೋರಿಸುತಿದ್ದರು. ಆ ಆಟದಲ್ಲ ಭೀಮನು ವೇಗದಿಂದೋಡುವುದರಲ್ಲಿಯೂ, ಅಸಾಧ್ಯವಸ್ತುವನ್ನು ಸಾಧಿಸಿ ತರುವುದರಲ್ಲಿಯೂ, ಭೋಜನದಲ್ಲಿಯೂ, ಧೂಳುಗಳನ್ನು ಹಾರಿಸುವುದರಲ್ಲಿಯೂ, ಕೌರವರೆಲ್ಲರನ್ನೂ ಸೋಲಿಸುತಿದ್ದನು. ಧೃತರಾಷ್ಟ್ರಪುತ್ರರು ಸಂತೋಷದಿಂದ ಆಟವಾಡುತ್ತಿರುವಾಗ, ಆತನು ಅವರನ್ನು ಎತ್ತಿಕೊಂಡು ಹೋಗಿ ಎಲ್ಲಿಯಾದರೂ ಬಚ್ಚಿಡುವನು. ಅವರ ತಲೆಕೂದಲುಗಳನ್ನು ಹಿಡಿದು ಒಬ್ಬರಿಗೊಬ್ಬರಿಗೆ ಮುಟ್ಟುಕೊಟ್ಟು ನೋಡಿ ನಗುವನು. ಅವರ ಸಂಖ್ಯೆಯು ನೂರೊಂದಾಗಿದ್ದರೂ, ಅವರೆಲ್ಲರೂ ಸೇರಿಯೂ ಅವನನ್ನು ಯಾವ ಆಟದಲ್ಲಿಯೂ ಸೋಲಿಸಲು ಶಕ್ತರಾಗಲಿಲ್ಲ. ಮಹಾಬಲಶಾಲಿಯಾದ ಆ ಭೀಮನು, ಆಗಾಗ ಅವರನ್ನು ಹಿಡಿದು, ಅವರು ಅರಚಿಕೊಳ್ಳುತಿದ್ದರೂ ಬಿಡದೆ, ಅವರ ತಲೆಕೂದಲನ್ನು ಹಿಡಿದೆತ್ತಿ, ಅವರನ್ನು ತಲೆಕೆಳಗಾಗಿ ನೆಲಕ್ಕೆ ಕುಕ್ಕುತಿದ್ದನು. ನೀರಿನಲ್ಲಿ ಈಜಾಡುವಾಗ ಅವನು, ಹತ್ತು ಹುಡುಗರನ್ನು ಒಂದೇ ಸಲಕ್ಕೆ ಕೈಯಿಂದ ತಬ್ಬಿಕೊಂಡು, ನೀರಿನಲ್ಲಿ ಮುಳುಗಿ, ಅವರು ಜೀವಚ್ಛವದಂತಾಗುವರೆಗೂ ಹಿಡಿದಿದ್ದು ಆ

ಮೇಲೆ ಅವರನ್ನು ಬಿಟ್ಟುಬಿಡುತ್ತಿದ್ದನು. ಅವರು ಮರವನ್ನೇರಿ ಹಣ್ಣು ಗಳನ್ನು ಕುಯ್ಯುತ್ತಿರುವಾಗ, ಭೀಮನು ಆ ಮರಗಳನ್ನು ಕಾಲಿನಿಂದೊದೆದು, ಚೆನ್ನಾಗಿ ಆಡಿಸಿ, ಆ ಮರದ ಮೇಲಿದ್ದ ಹಣ್ಣುಗಳೊಡನೆ ಅವರೆಲ್ಲರನ್ನೂ ಕೆಳಕ್ಕೆ ಉದಿರಿಸಿಬಿಡುತ್ತಿದ್ದನು. ಇದರಿಂದ ಕೆಲವರು ಕೈಮುರಿದೂ, ಕೆಲವರು ಕಾಲುಮುರಿದೂ, ಕೆಲವರು ತಲೆಯೊಡೆದೂ ಅರಚುತಿದ್ದರು. ಕೌರವರೆಲ್ಲರೂ ಸೇರಿ ಬಾಹುಯುದ್ಧದಲ್ಲಿಯೂ, ವೇಗದಲ್ಲಿಯೂ, ಅಂಗಸಾಧನೆಯಲ್ಲಿಯೂ ಭೀಮಸೇನನೊಡನೆ ಹೋರಾಡಿಸಿ, ಎಷ್ಟೋ ಹಟ ಮಾಡಿದರೂ ಆತನನ್ನು ಸೋಲಿಸಲಾರದಿದ್ದರು. ಭೀಮನು ಕೇವಲ ಬಾಲ್ಯಚೇಷ್ಟೆಯಿಂದ ಹೀಗೆ ಮಾಡುತಿದ್ದನಲ್ಲದೆ, ದ್ರೋಹಬುದ್ಧಿಯಿಂದಲ್ಲ. ಆದರೂ ಇದರಿಂದ ಆತನು ಧೃತರಾಷ್ಟ್ರಪುತ್ರರ ಮತ್ಸರಕ್ಕೂ, ದ್ವೇಷಕ್ಕೂ ಪಾತ್ರನಾದನು. ಸ್ವಭಾವದಿಂದಲೇ ಬಹಳ ಅಭಿಮಾನಿಯಾದ ದುರ್ಯೋಧನನು, ಭೀಮನು ಬಲದಲ್ಲಿ ಪ್ರಖ್ಯಾತಿಗೆ ಬರುತ್ತಿರುವುದನ್ನು ನೋಡಿ, ಅಂದಿನಿಂದ ತನ್ನ ದುಷ್ಟಸ್ವಭಾವವನ್ನು ತೋರಿಸಲು ಮೊದಲುಮಾಡಿದನು. ಆ ದುರ್ಯೋಧನನೋ ಕೇವಲ ಧರ್ಮಬಾಹಿರನು. ಪಾಪದಲ್ಲಿಯೇ ಪ್ರವರ್ತಿಸತಕ್ಕವನು. ವಿವೇಕವಿಲ್ಲದುದೊಂದು, ಧನದಾಶೆಯೊಂದು, ಇವೆರಡೂ ಸೇರಿ, ಆತನಿಗೆ ಪಾಪಕೃತ್ಯದಲ್ಲಿಯೇ ಮನಸ್ಸು ಹೋಗುತಿದ್ದಿತು. ಆಗ ದುರ್ಯೋಧನನು ತನ್ನೊಳಗೆ ತಾನು "ಈ ಭೀಮನಾದರೋ ಬಲಶಾಲಿಗಳಲ್ಲಿ ಮೇಲೆನಿಸಿರುವನು. ಕುಂತಿಯ ಮಧ್ಯಮಪುತ್ರನಾದ ಈತನನ್ನು ಕಪಟದಿಂದಲೇ ಧ್ವಂಸಮಾಡಬೇಕು. ಬಲಶಾಲಿಯೂ, ಪರಾಕ್ರಮಿಯೂ, ಮಹಾ ಶೌರ್ಯವಂತನೂ ಆದ ಈತನೊಬ್ಬನೇ ನಮ್ಮೆಲ್ಲರಲ್ಲಿ ದ್ವೇಷವನ್ನಿಟ್ಟಿರುವನು. ಈತನು ನಮ್ಮ ಪಟ್ಟಣದ ತೋಟದಲ್ಲಿ ನಿದ್ರಿಸುತ್ತಿರುವಾಗ ಈತನನ್ನು ಗಂಗೆಯಲ್ಲಿ ಹಾಕಿಬಿಡಬೇಕು. ಆಮೇಲೆ ಈತನ ತಮ್ಮನಾದ ಅರ್ಜುನನನ್ನೂ, ಅಣ್ಣನಾದ ಯುಧಿಷ್ಠಿರನನ್ನೂ ಸುಲಭವಾಗಿ ಸೆರೆಯಲ್ಲಿಟ್ಟು ಭೂಮಿಯೆಲ್ಲವನ್ನೂ ನಾನೇ ಪರಿಪಾಲಿಸುವೆನು" ಎಂದು ನಿಶ್ಚಯಿಸಿಕೊಂಡು, ಭೀಮನು ಎಚ್ಚರತಪ್ಪಿರುವ ಸಮಯವನ್ನೇ ನಿರೀಕ್ಷಿಸುತಿದ್ದನು.

ಇದಕ್ಕಾಗಿ ದುರ್ಯೋಧನನು, ಗಂಗಾತೀರದಲ್ಲಿ ಪ್ರಮಾಣಕೋಟಿಯೆಂಬ ಸ್ಥಳದಲ್ಲಿ ವಿವಿಧ ವಸ್ತ್ರಗಳ ಮತ್ತು ಶಾಲುಮೆಯ ಗುಡಾರಗಳನ್ನು ಹಾಕಿಸಿದನು. ಆ ತೀರ್ಥಘಟ್ಟದಲ್ಲಿ ಜಲಕ್ರೀಡೆಗಳನ್ನಾಡುವ ನೆವವನ್ನು ಕಲ್ಪಿಸಿ, ಅಲ್ಲಿ ಮನಸ್ಸನ್ನು ಆಕರ್ಷಿಸುವ ಸಕಲವಿಧ ಪದಾರ್ಥಗಳನ್ನೂ, ಹಲವು ಬಗೆಯ ಭಕ್ಷ್ಯಗಳನ್ನೂ ತುಂಬಿಸಿದನು. ಆ ಮನೆಯಮೇಲೆ ಧ್ವಜಗಳನ್ನು ಹಾರಾಡಿಸಿ, ಅದಕ್ಕೆ ಉದಕಕ್ರೀಡನವೆಂದು ಹೆಸರಿಟ್ಟನು. ಕ್ರೀಡೆಯು ಮುಗಿದೊಡನೆಯೇ ಅವರೆಲ್ಲರೂ ಶುದ್ಧವಸ್ತ್ರಗಳನುಟ್ಟು ಚೆನ್ನಾಗಿ ಅಲಂಕರಿಸಿಕೊಂಡು ಮೃಷ್ಟಾನ್ನ ಭೋಜನಮಾಡಿದರು. ಅಲ್ಲಿ ಎಲ್ಲರೂ ಆಟವಾಡಿ ಸಾಯಂಕಾಲವಾದಮೇಲೆ, ತಮ್ಮ ಆಟಕ್ಕಾಗಿ ಏರ್ಪಡಿಸಿದ್ದ ಗುಡಾರಗಳಲ್ಲಿ ತಂಗುವುದಾಗಿ ನಿಶ್ಚಯಿಸಿದರು. ಜಲಕ್ರೀಡೆಗೆ ಬಂದವರೆಲ್ಲರನ್ನೂ ಆಟವಾಡಿಸಿದುದರಿಂದ, ವಿಶೇಷವಾಗಿ ಬಳಲಿದ್ದ ಭೀಮನು, ಅವರು ಏರ್ಪಡಿಸಿದ ಸ್ಥಳದಲ್ಲಿ ಬಂದು ಮಲಗಿದ್ದನು. ಆತನು ಮದ್ಯಪಾನದಿಂದ ಮತ್ತುಹಿಡಿದು, ತಣ್ಣಗಿದ್ದ ಒಂದು ಸ್ಥಳಕ್ಕೆ ಹೋಗಿ ಆಯಾಸದಿಂದ ಕದಲದೆ ಚೆನ್ನಾಗಿ ನಿದ್ರೆಮಾಡುವುದಕ್ಕೆ ಪ್ರಾರಂಭಿಸಿದನು. ಆಗ ದುರ್ಯೋಧನನು, ಪ್ರಮಾಣಕೋಟಿಯಲ್ಲಿ ನಿದ್ರಿಸುತ್ತಿರುವ ಭೀಮನನ್ನು ಹಂಬುಗಳಿಂದ ಮೆಲ್ಲಗೆ ಕಟ್ಟಿ, ಗಂಗಾನದಿಯಲ್ಲಿ ಹಾಕಿಬಿಟ್ಟನು. ಭೀಮನು ಒಡನೆಯೇ ಎಚ್ಚರಗೊಂಡು, ತನ್ನ ಬಲದಿಂದ ಆ ಕಟ್ಟುಗಳೆಲ್ಲವನ್ನೂ ಬಿಡಿಸಿಕೊಂಡು ತಿರುಗಿ ಮೇಲಕ್ಕೆದ್ದನು. ಕಟ್ಟುಗಳನ್ನು ಬಿಡಿಸಿಕೊಂಡು ಬಂದಮೇಲೆಯೂ ಆ ದುಷ್ಕಾರ್ಯವನ್ನು ದುರ್ಯೋಧನನೇ ಮಾಡಿದನೆಂದು ತಿಳಿಯದೆ, ಮತ್ತೆ ನಿದ್ರಾಪರವಶನಾಗಿ ಅಲ್ಲಿಯೇ ಬಂದು ಮಲಗಿದ್ದನು. ಅರ್ಧರಾತ್ರಿಯಾದಮೇಲೆ ಕೌರವರೂ, ಇತರ ಪಾಂಡವರೂ ಎದ್ದರು. ಮೊದಲಿನಂತೆಯೇ ಅಲ್ಲಿ ಮಲಗಿದ್ದ ಭೀಮಸೇನನನ್ನು ನೋಡಿ ದುರ್ಯೋಧನನಿಗೆ ದಿಗ್ಭ್ರಮೆಹಿಡಿದಂತಾಯಿತು. ಆಮೇಲೆ ಅವನು ಕೋಪಗೊಂಡ ವಿಷಸರ್ಪಗಳನ್ನು ಹಿಡಿದು ತರಿಸಿ, ನಿದ್ರಿಸುತ್ತಿದ್ದ ಭೀಮನ ಅಂಗಾಂಗಳೆಲ್ಲವನ್ನೂ ಕಚ್ಚಿಸಿದನು. ಆ ಸರ್ಪದ ವಿಷದಂಷ್ಟ್ರೆಗಳು ಭೀಮನ ಮರ್ಮಸ್ಥಳಗಳಲ್ಲಿ ನಾಟಿದರೂ, ದೃಢಾಂಗನಾದ ಆತನ ಮೇಲುಚರ್ಮವನ್ನು ಕೂಡ ಹರಿಯಲಾರದೆ ಹೋದುವು. ಭೀಮ

ನು ಎಚ್ಚರಗೊಂಡೊಡನೆ ಆ ಸರ್ಪಗಳೆಲ್ಲವನ್ನೂ ಕೈಯಿಂದಲೇ ಒತ್ತರಿಸಿದನು. ಮತ್ತು ದುರ್ಯೋಧನನಿಗೆ ಪ್ರಿಯನಾಗಿ, ಈ ಕಾರ್ಯಕ್ಕೆ ಸಹಾಯಕನಾದ ಸಾರಥಿಯನ್ನು ತನ್ನ ಎಡಗೈಯಿಂದ ಅಪ್ಪಳಿಸಿ ಕೊಂದನು. ಹಾಗೆಯೇ ಮತ್ತೊಮ್ಮೆ ದುರ್ಯೋಧನನು ಭೀಮನನ್ನು ಕೊಲ್ಲುವುದಾಗಿ ಉದ್ದೇಶಿಸಿ, ಶಕುನಿಯ ಸೂಚನೆಯಮೇಲೆ ವಲಲನೆಂಬ ಅಡಿಗೆಯವನೊಡನೆ ಆಲೋಚಿಸಿ, ಆತನ ಮೂಲಕವಾಗಿ ಭೀಮಸೇನನ ಆಹಾರದಲ್ಲಿ ಕಾಲಕೂಟವಿಷವನ್ನು ಕಲೆಸಿಟ್ಟನು. ಭೀಮನು ಅದನ್ನು ಸೇವಿಸಿಯೂ ಯಾವ ವಿಕಾರವೂ ಇಲ್ಲದೆ ಅದನ್ನು ಜೀರ್ಣಿಸಿಕೊಂಡನು. ಭೀಮನು ದೃಢಕಾಯನಾದುದರಿಂದ ಆ ವಿಷವೂ ಜೀರ್ಣಿಸಿ ಹೋಯಿತು. ಮತ್ತೊಮ್ಮೆ ದುರ್ಯೋಧನನು ಭೀಮನನ್ನು ಕೊಲ್ಲಬೇಕೆಂದು ಉದ್ದೇಶಿಸಿ ತನಗೆ ಸಹಾಯಕನಾದ ಶಕುನಿಯೊಡನೆ ಆಲೋಚಿಸಿದನು. ಆತನು ರಾತ್ರಿಯೂ, ಹಗಲೂ ಚಿಂತಾಕ್ರಾಂತನಾಗಿ ಕಣ್ಣುಮುಚ್ಚದೆ ಯೋಚಿಸುತ್ತಲೇ ಇದ್ದನು. ಹೀಗೆ ದುರ್ಯೋಧನ ಕರ್ಣ ಶಕುನಿಗಳು ವಿವಿಧೋಪಾಯಗಳಿಂದ ಪಾಂಡವರನ್ನು ಕೊಲ್ಲಬೇಕೆಂದು ಉದ್ದೇಶಿಸಿದರು. ವೈಶ್ಯಾಪುತ್ರನಾದ ಯುಯುತ್ಸುವುಮಾತ್ರ ಪಾಂಡವರ ಹಿತವನ್ನು ಕೋರಿ, ಅದನ್ನು ಅವರಿಗೆ ತಿಳಿಸುತಿದ್ದನು. ಪಾಂಡವರು ವಿದುರನ ಅಭಿಪ್ರಾಯದಂತೆ ತಪ್ಪದೆ ವರ್ತಿಸುತ್ತಾ, ರಹಸ್ಯವಾಗಿ ಎಲ್ಲವನ್ನೂ ತಿಳಿದುಕೊಳ್ಳುತಿದ್ದರು.

ಇದು ನೂರಮೂವತ್ತೇಳನೆಯ ಅಧ್ಯಾಯವು.



ಭೀಮನಿಗೆ ವಿಷಮಿಶ್ರವಾದ ಭಕ್ಷ್ಯಗಳನ್ನು ಕೊಟ್ಟುದು. ಪ್ರಮಾಣಕೋಟಿಯಲ್ಲಿ ದೊಡ್ಡ ಶೂಲವೊಂದು ನಾಟಿರುವ ಸ್ಥಳದಲ್ಲಿ ಭೀಮನನ್ನು ತಳ್ಳಿದುದು.

ಆಗ ದುರ್ಯೋಧನನೇ ಮೊದಲಾದವರು ಕಲೆತು ತಮ್ಮೊಳಗೆ “ಭೀಮನೋ ಮಹಾಬಲಶಾಲಿ! ಪರಾಕ್ರಮಿ! ಮತ್ತು ಮಹಾಶೂರನು ಆತನು ಯಾವಾಗಲೂ ನಮ್ಮನ್ನು ದ್ವೇಷಿಸುತ್ತಿರುವನು. ಆತನು ನಮ್ಮ

ಪುರೋದ್ಯಾನದಲ್ಲಿ ಮಲಗಿರುವಾಗ ನೀರಿನಲ್ಲಿ ನಾಟಿರುವ ಶೂಲದಮೇಲೆ ಅವನನ್ನು ಬಿಸಾಡಬೇಕು" ಎಂದು ನಿಶ್ಚಯಿಸಿಕೊಂಡರು. ಇದಕ್ಕಾಗಿ ಅವರು ಪ್ರಮಾಣಕೋಟಿಯಲ್ಲಿ ಜಲಕ್ರೀಡೆಗೆ ರಮ್ಯವಾದ ಸ್ಥಳವನ್ನು ಆರಿಸಿದರು.

ಪಾಕಶಾಸ್ತ್ರ ನಿಪುಣರು ವಿವಿಧ ಭಕ್ಷ್ಯಭೋಜ್ಯಾದಿಗಳನ್ನು ತಯಾರಿಸಿದರು. ಎಲ್ಲವೂ ಸಿದ್ಧವಾದಮೇಲೆ ಅಧಿಕಾರಿಗಳು ದುರ್ಯೋಧನನಿಗೆ ಹೇಳಿಕಳುಹಿಸಿದರು. ದುರಾತ್ಮನಾದ ದುರ್ಯೋಧನನು ಪಾಂಡವರನ್ನು ಕುರಿತು "ವೃಕ್ಷಗಳಿಂದಲೂ, ಪುಷ್ಪಗಳಿಂದಲೂ ರಮ್ಯವಾದ ಗಂಗಾತೀರಕ್ಕೆ ಹೋಗಿ ಅಲ್ಲಿ ಜಲಕ್ರೀಡೆಗಳನ್ನಾಡುವೆವು ಬನ್ನಿರಿ" ಎಂದನು. ಯುಧಿಷ್ಠಿರನೂ ಇದಕ್ಕೊಪ್ಪಿದನು. ಧೃತರಾಷ್ಟ್ರಪುತ್ರರು ಪಾಂಡವರೊಡನೆ ದೊಡ್ಡ ಆನೆಗಳನ್ನೂ, ನಗರಕ್ಕೆ ಸಮಾನಗಳಾದ ರಥಗಳನ್ನೂ ಏರಿ ರಾಜಧಾನಿಯನ್ನು ಬಿಟ್ಟು ಹೊರಟರು.

ಆ ಸ್ಥಳಕ್ಕೆ ಬಂದಮೇಲೆ, ರಾಜಕುಮಾರರು ಜನರನ್ನೆಲ್ಲ ಕಳುಹಿಸಿ, ಉದ್ಯಾನವನದ ಸೌಂದರ್ಯವನ್ನು ನೋಡುತ್ತ, ಸಿಂಹಗಳು ತಮ್ಮ ಪರ್ವತಗುಹೆಗೆ ಹುಗುವಂತೆ ಆ ಅರಮನೆಯೊಳಕ್ಕೆ ಹೋದರು. ಶಿಲ್ಪಿಗಳು ಅದರ ಕಟ್ಟಡಗಳನ್ನು ಕಟ್ಟಿರುವ ರೀತಿಯನ್ನೂ, ಅದರಮೇಲೆ ಚಿತ್ರಗಾರರು ವಿವಿಧ ವರ್ಣಗಳಿಂದ ಬರೆದ ಚಿತ್ರಗಳನ್ನೂ ನೋಡಿದರು. ಬಿಳುಪಾದ ನಿರೀಕ್ಷಣಗೃಹಗಳು! ಕಾರಂಜಿಗಳು! ವಲಭಿಗಳು! ರಮ್ಯವಾದ ಕಿಟಕಿಗಳು! ಆಶ್ಚರ್ಯಕರವಾದ ಜಲಯಂತ್ರಗಳು! ಅಲ್ಲಲ್ಲಿ ಪುಷ್ಪಿತಗಳಾದ ತಾವರೆ ಕೊಳಗಳು! ಹಲವು ಜಾತಿಯ ಹೂಗಿಡಗಳಿಂದ ಅಲಂಕೃತವಾದ ತೀರಪ್ರದೇಶಗಳು! ಎಲ್ಲಾ ಕಡೆಗಳಿಂದಲೂ ಘಮಘಮಿಸುತ್ತಿರುವ ಹೂಗಳ ಸುವಾಸನೆ, ಇವನ್ನೆಲ್ಲ ಅನುಭವಿಸುತ್ತಾ ಪಾಂಡವಕೌರವರೆಲ್ಲರೂ ಅಲ್ಲಿ ಕುಳಿತು, ತಮತಮಗೆ ಪ್ರಿಯವಾದ ಭಕ್ಷ್ಯಭೋಜ್ಯಗಳನ್ನು ಸವಿಯುತ್ತಿದ್ದರು. ಈ ಭೋಜನಕಾಲದಲ್ಲಿ ವಿನೋದಕ್ಕಾಗಿ ತಮತಮಗೆ ಬಡಿಸಿದ ಪದಾರ್ಥಗಳನ್ನು ಒಬ್ಬರಿಗೊಬ್ಬರು ಬಾಯಿಗೆ ಹಾಕುವರು. ಹೀಗೆ ವಿನೋದದಿಂದ ಎಲ್ಲರೂ ಸಹಭೋಜನಮಾಡುತ್ತಿರುವಾಗ, ದುರಾತ್ಮನಾದ ಆ ದು

ಯೋಧನನು ಭೀಮನನ್ನು ಕೊಲ್ಲಬೇಕೆಂಬ ದುರುದ್ದೇಶದಿಂದ ಭೀಮನಿಗೆ ಬಡಿಸುವ ಭಕ್ಷ್ಯದಲ್ಲಿ ವಿಷವನ್ನು ಮಿಶ್ರಮಾಡಿಸಿದನು. ಪಾಪಿಯಾದ ಆ ದುರ್ಯೋಧನನು, ಮನಸ್ಸಿನಲ್ಲಿ ಕ್ಷುರದಂತೆ ತೀಕ್ಷ್ಣನಾಗಿ, ಮಾತಿನಲ್ಲಿಮಾತ್ರ ಅಮೃತವನ್ನು ಸುರಿಸುವಂತೆ ಮಾತಾಡುತ್ತಾ, ಪ್ರಿಯಸಹೋದರನಂತೆಯೂ, ಪರಮಮಿತ್ರನಂತೆಯೂ ಭೀಮನಬಳಿಗೆ ತಾನೇ ಎದ್ದು ಬಂದು ಅವನ ಬಾಯಿಗೆ ಆ ವಿಷಾನ್ನವನ್ನು ನಿರ್ಬಂಧದಿಂದ ಉಣಿಸಿದನು. ಭೀಮನು ಆ ಮೋಸವನ್ನು ತಿಳಿಯದೆ ಅದನ್ನು ತೃಪ್ತಿಯಾಗಿಯೇ ಭುಜಿಸಿಬಿಟ್ಟನು. ಆಗ ದುರ್ಯೋಧನನು ಒಳಗೊಳಗೆ ಸಂತೋಷದಿಂದ ಭೀಮನನ್ನು ನೋಡಿ ನಗುತ್ತಾ, ತನ್ನ ಕಾರ್ಯವು ಕೈಗೂಡಿದಂತೆ ಭಾವಿಸಿದನು. ತಿರುಗಿ ಪಾಂಡವರೂ, ಧೃತರಾಷ್ಟ್ರಪುತ್ರರೂ ಸೇರಿ ಸಂತೋಷದಿಂದ ಜಲಕ್ರೀಡೆಗಳನ್ನಾರಂಭಿಸಿದರು. ಆ ವೀರರೆಲ್ಲರೂ ಸೇರಿ ಜಲಕ್ರೀಡೆಗಾಗಿ ಏರ್ಪಡಿಸಿದ್ದ ಗುಡಾರದಲ್ಲಿಯೇ ತಂಗುವಂತೆ ಉದ್ದೇಶಿಸಿದರು. ಬಲಶಾಲಿಯಾದ ಭೀಮನು ಪ್ರಮಾಣಕೋಟಿಯಲ್ಲಿ ಜಲಕ್ರೀಡೆಗಾಗಿ ಬಂದಿದ್ದ ಆ ಕುಮಾರರನ್ನೆಲ್ಲ ತನ್ನ ಕೈಯಿಂದೆತ್ತಿಕೊಂಡು ಜಲದಲ್ಲಿ ಕ್ರೀಡಿಸಿ ವಿಶೇಷಶ್ರಮಪಟ್ಟಿದ್ದನು. ಅಲ್ಲದೆ ಆ ದಿನದಲ್ಲಿ ಹೆಚ್ಚಾಗಿ ಭೋಜನವನ್ನೂ ಮಾಡಿದ್ದನು. ಇದರಿಂದ ವಿಶ್ರಾಂತಿಗಾಗಿ ಸ್ಥಳವನ್ನು ಹುಡುಕಿಕೊಂಡು, ಓಡಾಡುತ್ತಾ ಅಲ್ಲಿಗೇ ಬಂದು ಸೇರಿದನು. ಬಳಲಿಕೆಯೊಂದು ಕಡೆ! ಮದ್ಯಪಾನದ ಮದವೊಂದು ಕಡೆ! ದೇಹದಲ್ಲಿ ವಿಷದ ವೇಗವೊಂದು ಕಡೆ! ಇವೆಲ್ಲಾ ಸೇರಿದುದರಿಂದ ಆತನಿಗೆ ಮೈಮೇಲೆ ತಂಗಾಳಿಯು ಬೀಸಿದೊಡನೆ, ಗಾಢನಿದ್ರೆ ಬಂದು ಮಲಗಿಬಿಟ್ಟನು. ಇದನ್ನು ನೋಡಿ ದುರ್ಯೋಧನನು ಹಂಬುಗಳಿಂದ ಭೀಮನನ್ನು ಬಂಧಿಸಿ, ನೀರಿನಲ್ಲಿ ಒಂದು ಶೂಲವನ್ನು ನಾಟಿಸಿ, ಪಾಶಬದ್ಧನಾಗಿದ್ದ ಭೀಮನನ್ನು ಎತ್ತಿ ಅದರಮೇಲೆ ಬಿಸಾಡಿದನು. ಆ ಭೀಮನಿಗೆ ಆಯುಸ್ಸು ದೃಢವಾಗಿದ್ದುದರಿಂದ, ಜಲದಲ್ಲಿ ನಾಟಿದ್ದ ಶೂಲದ ಮೇಲೆ ಬೀಳದೆ, ಪಕ್ಕದಲ್ಲಿ ನೀರಿನಲ್ಲಿಯೇ ಬಿದ್ದನು. ಆದರೆ ಅವನು ಪ್ರಜ್ಞೆ ತಪ್ಪಿ ನೀರಿನಲ್ಲಿ ತಲೆಕೆಳಗಾಗಿ ಮುಳುಗಿ, ನಾಗಗಳ ನಿವಾಸದವರೆಗೆ ಹೋದನು. ಅಲ್ಲಿ ಹಲವು ಸರ್ಪಗಳು ತಮ್ಮ ಕ್ರೂರವಾದ ವಿಷದ ಹಲ್ಲುಗಳಿಂದ ಭೀಮನನ್ನು ಕಚ್ಚಿ, ಅಧಿಕವಾದ ವಿಷವನ್ನು ಕಕ್ಕಿದುವು. ಆದರೆ, ಅವನು

ಕಚ್ಚಿಸಿಕೊಂಡುದರಿಂದ, ಅವನ ಮೈಯಲ್ಲಿ ಮೊದಲೇ ಸೇರಿದ್ದ ಸ್ಥಾವರ ವಿಷವಾದ ಕಾಲಕೂಟವು, ಜಂಗಮವಾದ ಸರ್ಪವಿಷದೊಡನೆ ಸೇರಿ, ಎರಡು ವಿಷಗಳ ಗುಣವೂ ಅಡಗಿಹೋಯಿತು. ಅಲ್ಲದೆ ಹಲವು ಸರ್ಪಗಳು ಇನ್ನೂ ಬಲವಾಗಿ ತಮ್ಮ ಕೋರೆಹಲ್ಲುಗಳಿಂದ ಭೀಮನ ಮರ್ಮಸ್ಥಳಗಳೊಳಗೆಲ್ಲ ವಿಷವನ್ನು ಸುರಿಸಿದರೂ, ಆ ವಿಷವು ಆತನ ಮೈಮೇಲಿನ ಚರ್ಮದ ಪರೆಯನ್ನು ಕೂಡ ದಾಟಿ ಹೋಗಲಾರದೆ ಹೋಯಿತು. ಆಗ ಭೀಮಸೇನನಿಗೆ ಎಚ್ಚರವಾಗಿ, ಕಟ್ಟುಗಳನ್ನೆಲ್ಲ ತಾನೇ ಕಿತ್ತು ಬಿಡಿಸಿಕೊಂಡು, ಆ ಸರ್ಪಗಳನ್ನು ಅಪ್ಪಳಿಸಲು, ಅವುಗಳಲ್ಲಿ ಕೆಲವು ಭಯದಿಂದ ಓಡಿಹೋದುವು. ಸತ್ತುಳಿದ ಕೆಲವು ಸರ್ಪಗಳು ಸರ್ಪರಾಜನಾದ ವಾಸುಕಿಯ ಬಳಿಗೆ ಹೋಗಿ "ನಾಗರಾಜಾ! ಈ ಮನುಷ್ಯನನ್ನು ಬಂಧಿಸಿ ಯಾರೋ ನೀರಿನಲ್ಲಿ ಹಾಕಿದರು. ಈತನು ವಿಷಪಾನವನ್ನು ಮಾಡಿದ್ದನೆಂದು ತೋರುವುದು. ನಿಶ್ಚೇಷ್ಟನಾಗಿ ನಮ್ಮ ಬಳಿಗೆ ಬಂದನು. ನಾವು ಕಚ್ಚಿದೊಡನೆ ಆತನಿಗೆ ಎಚ್ಚರವಾಗಿ ಸ್ಮೃತಿಯು ಬಂದು, ತನ್ನ ಕಟ್ಟುಗಳೆಲ್ಲವನ್ನೂ ಬಿಡಿಸಿಕೊಂಡು ನಮ್ಮನ್ನೂ ಹೊಡೆಯುತ್ತಿರುವನು. ಈ ಮಹಾಬಾಹುವು ಯಾರೆಂದು ತಿಳಿಯದು. ನೀನು ವಿಚಾರಿಸಿ ತಿಳಿ" ಎಂದರು. ಆಮೇಲೆ ವಾಸುಕಿಯು ಆರ್ಯಕನೆಂಬ ನಾಗನೊಡನೆ ಬಂದು, ಭಯಂಕರ ಪರಾಕ್ರಮಿಯೂ, ಮಹಾಬಾಹುವೂ ಆದ ಭೀಮನನ್ನು ನೋಡಿದನು. ಆರ್ಯಕನು ಕುಂತಿಯ ಕೂಟಸ್ಥನು. (ಆರ್ಯಕನ ಮಗಳ ಮಗನು ಶೂರನು. ಶೂರನ ಮಗಳು ಕುಂತಿ. ಕುಂತಿಯ ಮಗನು ಭೀಮನು.) ಆದುದರಿಂದ ಭೀಮನು ಆರ್ಯಕನ ದೌಹಿತ್ರನಿಗೆ ದೌಹಿತ್ರನಾಗುವನು. ಆರ್ಯಕನು ಭೀಮನನ್ನು ಅಪ್ಪಿಕೊಂಡನು. ಕೀರ್ತಿವಂತನಾದ ವಾಸುಕಿಯೂ ಭೀಮನಲ್ಲಿ ವಿಶೇಷಪ್ರೀತಿಯುಳ್ಳವನಾಗಿ "ಈಗ ತಾನು ಈತನಿಗೆ ಯಾವ ಪ್ರಿಯಕಾರ್ಯವನ್ನು ಮಾಡಬಹುದೆಂದು ಯೋಚಿಸಿ, ನಾಗರನ್ನು ನೋಡಿ "ರತ್ನಗಳನ್ನೂ ಅಪಾರಧನವನ್ನೂ ಇವನಿಗೆ ಬಹುಮಾನಿಸಿರಿ" ಎಂದನು ಆಗ ಆರ್ಯಕನು ವಾಸುಕಿಯೊಡನೆ "ನಾಗೇಂದ್ರಾ! ನಿನಗೆ ಈತನಲ್ಲಿ ಪ್ರೀತಿಯಿದ್ದರೆ ಈತನಿಗೆ ಧನರಾಶಿಯಿಂದ ಪ್ರಯೋಜನವಿಲ್ಲ. ನಿನಗೆ ಪ್ರೀತಿಯಿರುವುದಾದರೆ ಬಲಶಾಲಿಯಾದ ಈ ಕುಮಾರನಿಗೆ, ಸಿದ್ಧರಸವನ್ನು

ಕುಡಿಸು. ನೂರು ಆನೆಗಳ ಬಲವನ್ನು ಕೊಡುವ ರಸವು ಕುಂಡದಲ್ಲಿ ತುಂಬಿಡಲ್ಪಟ್ಟಿರುವುದು. ಈ ಬಾಲನು ಪಾನಮಾಡುವಷ್ಟು ರಸವನ್ನು ಈತನಿಗೆ ಕೊಡಬಹುದು" ಎಂದನು. ನಾಗರಾಜನಾದ ವಾಸುಕಿಯು ಅದಕ್ಕೆ ಒಪ್ಪಿದನು. ಆಗ ಭೀಮನು ನಾಗರಿಂದ ಮಂಗಳಾಶೀರ್ವಾದಗಳನ್ನು ಪಡೆದು ಶುಚೀಭೂತನಾಗಿ ಪೂರ್ವಾಭಿಮುಖನಾಗಿ ಕುಳಿತು ಆ ರಸವನ್ನು ಕುಡಿದನು. ಆ ಮಹಾಬಲಿಷ್ಠನು, ಒಂದು ಗುಟಿಕಿಗೆ ಒಂದು ಪಾತ್ರೆಯ ರಸದಂತೆ ಎಂಟು ಕುಂಡಗಳಷ್ಟು ರಸವನ್ನು ಕುಡಿದು, ಆಮೇಲೆ ನಾಗರು ತಂದುಕೊಟ್ಟ ದಿವ್ಯವಾದ ಶಯ್ಯೆಯಲ್ಲಿ ಅಲ್ಲಿಯೇ ಸುಖವಾಗಿ ಮಲಗಿದನು.

ಇದು ನೂರಮೂವತ್ತೆಂಟನೆಯ ಅಧ್ಯಾಯವು.

(ಭೀಮನು ಬಾರದಿರುವುದನ್ನು ನೋಡಿ ಕುಂತೀ ವಿದುರರ ಸಂಭಾಷಣೆಗಳು. ಆಮೇಲೆ ಭೀಮನು ಹಸ್ತಿನಾಪುರಕ್ಕೆ ಬಂದುದು. ಭೀಷ್ಮನು ಮಕ್ಕಳೆಲ್ಲರನ್ನೂ ಧನುರ್ವಿದ್ಯಾಭ್ಯಾಸಕ್ಕಾಗಿ ಕೃಪಾಚಾರ್ಯನಲ್ಲಿ ಒಪ್ಪಿಸಿದುದು.)

ಮೂಢನೂ, ಪಾಪಾತ್ಮನೂ ಆದ ದುರ್ಯೋಧನನು ಭೀಮನನ್ನು ಕ್ರೂರ ಸರ್ಪಗಳುಳ್ಳ ಮಡುವಿನಲ್ಲಿ ಹಾಕಿ ತನ್ನ ಕಾರ್ಯವು ಫಲಿಸಿತೆಂದು ಭಾವಿಸಿಕೊಂಡು, ಬೆಳಗಾದಮೇಲೆ "ಭೀಮನು ನಮಗೆ ಮೊದಲೇ ಪುರವನ್ನು ಸೇರಿಬಿಟ್ಟನು" ಎಂದು ಹೇಳುತ್ತಾ, ಅಲ್ಲಿಂದ ಪಟ್ಟಣಕ್ಕೆ ಹೋದನು. ಯುಧಿಷ್ಠಿರನು ಯಾವ ಪಾಪಕೃತ್ಯವನ್ನೂ ಮಾಡಿ ನೋಡದ ಧರ್ಮಾತ್ಮನಾದುದರಿಂದ, ಇತರರೂ ತನ್ನಂತೆಯೇ ಸಜ್ಜನರೆಂದು ಭಾವಿಸುತ್ತಿದ್ದವನು. ಆದುದರಿಂದ ಅವನು ದುರ್ಯೋಧನನ ಮಾತು ನಿಜವೆಂದೇ ನಂಬಿ ಕುಂತಿಯ ಬಳಿಗೆ ಬಂದು ನಮಸ್ಕರಿಸಿ "ಅಮ್ಮಾ! ಭೀಮನು ಇಲ್ಲಿಗೆ ಬಂದಿರುವನೆ? ಆತನನ್ನು ಅಲ್ಲಿ ಕಾಣಲಿಲ್ಲ! ಎಲ್ಲಿಗೆ ಹೋಗಿರಬಹುದು? ತೋಟದಲ್ಲಿಯೂ, ವನದಲ್ಲಿಯೂ ಹುಡುಕಿ ನೋಡಿದೆವು. ಆತನು ಮೊದಲೇ ಇಲ್ಲಿಗೆ ಬಂದಿರುವನೆಂದು ಭಾವಿಸಿ ನಾವೆಲ್ಲರೂ ಆತುರಗೊಂಡು ಬಂದೆವು. ಇಲ್ಲಿಗೆ ಬಂದು ಹೋದನೇನು? ನೀನು ಆತ

ನನ್ನು ಎಲ್ಲಿಗಾದರೂ ಕಳುಹಿಸಿರುವೆಯಾ? ಆತನ ವಿಷಯವಾಗಿ ನಮ್ಮ ಮನಸ್ಸು ಕಳವಳಿಸುತ್ತಿದೆ. ಭೀಮನು ನಿದ್ರಿಸುತ್ತಿರುವನೆಂದು ನಾನು ಭಾವಿಸಿದೆನು ಆತನನ್ನು ಎಲ್ಲೆಲ್ಲಿಯೂ ಕಾಣದುದರಿಂದ ಏನಾದನೋ?'' ಎಂದನು.

ಯುಧಿಷ್ಠಿರನ ಮಾತುಗಳನ್ನು ಕೇಳಿ ಕುಂತಿಯು ಹಾಹಾಕಾರದಿಂದ ತತ್ತರಿಸುತ್ತಾ ಆತನೊಡನೆ ''ಅಪ್ಪಾ! ಭೀಮನನ್ನು ನಾನೂ ನೋಡ ಲಿಲ್ಲವಲ್ಲಾ! ಆತನು ನನ್ನ ಬಳಿಗೆ ಬರಲಿಲ್ಲ. ನೀನೂ, ನಿನ್ನ ತಮ್ಮಂದಿ ರೂ ಆತನನ್ನು ಹುಡುಕಿ ಬನ್ನಿರಿ!'' ಎಂದಳು. ಪಾಂಡವರು ವೇಗದಿಂದ ಪಟ್ಟಣದ ಉದ್ಯಾನವನಕ್ಕೆ ಹೋಗಿ, ಅಲ್ಲಿ ಆತನನ್ನು ಹುಡುಕಿನೋ ಡುತ್ತ, ಅಲ್ಲಲ್ಲಿ ನಿಂತು ''ಭೀಮಾ! ಭೀಮಾ!'' ಎಂದು ಗಟ್ಟಿಯಾಗಿ ಅರಚಿದರು. ಫಲವಿಲ್ಲದೆ ಹೋಯಿತು. ಆಮೇಲೆ ತಿಂತಿರುಗಿ ಮನೆಗೆ ಬಂದು ಕುಂತಿಯನ್ನು ನೋಡಿ, ''ಅಮ್ಮಾ! ಭೀಮನನ್ನು ವನದಲ್ಲಿಯೂ, ತೋಟದಲ್ಲಿಯೂ ಹುಡುಕಿ ನೋಡಿದೆವು. ನದಿಗಳಲ್ಲೆಲ್ಲಾ ಹುಡುಕಿದೆವು. ಕಾಣಿಸಲಿಲ್ಲ'' ಎಂದರು. ಆಮೇಲೆ ಕುಂತಿಯು ವಿದುರನನ್ನು ತನ್ನ ಮನೆಗೆ ಕರೆಯಿಸಿ ''ಭಾವಾ! ಬಲಶಾಲಿಯಾದ ಭೀಮಸೇನನು ಕಾಣಿಸ ಲಿಲ್ಲ. ಪಾಂಡವ ಕೌರವರೆಲ್ಲರೂ ಉದ್ಯಾನವನದಿಂದ ಬಂದರೂ, ಭೀಮ ನೊಬ್ಬನುಮಾತ್ರ ಬರಲಿಲ್ಲ. ಆತನು ದುರ್ಯೋಧನನ ಕಣ್ಣಿಗೆ ಯಾವಾಗ ಲೂ ಕಂಟಕಪ್ರಾಯನಾಗಿದ್ದವನು. ಆತನು ಇವನಲ್ಲಿ ದ್ವೇಷಿಸುತಿದ್ದವನು. ಆ ದುರ್ಯೋಧನನಾದರೋ ಕ್ರೂರನು. ನೀಚನು. ರಾಜ್ಯದಲ್ಲಿ ಪೇರಾಸೆ ಯುಳ್ಳವನು. ಅವನು ಯಾವುದಕ್ಕೂ ಹಿಂಜರಿಯುವನಲ್ಲ. ಆತನೇ ವೈರದಿಂದ ಭೀಮನನ್ನು ಕೊಂದಿದ್ದರೂ ಇರಬಹುದು. ಆದುದರಿಂದ ನನ್ನ ಮನಸ್ಸು ಕಳವಳಪಡುತ್ತಿರುವುದು. ನನ್ನ ಹೊಟ್ಟೆಯು ಉರಿಯುತ್ತಿ ರುವುದು'' ಎಂದಳು. ಅದಕ್ಕೆ ವಿದುರನು ''ಕಲ್ಯಾಣೀ! ಹಾಗೆಣಿಸಬಾ ರದು. ನಿನ್ನ ಇತರಪುತ್ರರನ್ನು ನೀನು ರಕ್ಷಿಸು! ದುರ್ಯೋಧನನು ದುಷ್ಟ ನಾದುದರಿಂದ ''ಭೀಮನನ್ನು ಏನುಮಾಡಿದೆ?'' ಎಂದು ಆತನನ್ನು ಆಕ್ಷೇಪಿಸಿ ಕೇಳಿದರೆ, ನಿನ್ನ ಬೇರೆ ಮಕ್ಕಳನ್ನೂ ಆತನು ಕೊಲ್ಲಲು ಪ್ರಯ

ತ್ನಿಸುವನು. ವ್ಯಾಸಮಹರ್ಷಿಯು ಹೇಳಿರುವಂತೆ ನಿನ್ನ ಮಕ್ಕಳೆಲ್ಲರೂ ದೀರ್ಘಾಯುಷ್ಮಂತರು. ನಿನ್ನ ಮಗನು ಬಂದು ನಿನಗೆ ಸಂತೋಷವನ್ನುಂಟು ಮಾಡುವನು" ಎಂದನು. ವಿದ್ವಾಂಸನಾದ ವಿದುರನು ಹೀಗೆ ಹೇಳಿ ತನ್ನ ಮನೆಗೆ ಹೋದನು. ಕುಂತಿಯು ವ್ಯಾಕುಲಚಿತ್ತಳಾಗಿ ಪುತ್ರರೊಡನೆ ಮನೆಯಲ್ಲಿದ್ದಳು. ಆಮೇಲೆ ಭೀಮನಿಗೆ ಎಂಟನೆಯ ದಿನಕ್ಕೆ ಎಚ್ಚರವಾಯಿತು. ಆಗ ಆ ರಸವೂ ಜೀರ್ಣಿಸಿತು. ಮೊದಲೇ ಮಹಾಬಲಶಾಲಿಯಾಗಿದ್ದ ಭೀಮನು ಇನ್ನೂ ಅಪಾರಶಕ್ತಿಯುಳ್ಳವನಾದನು. ಆತನು ನಿದ್ರೆ ತಿಳಿದೇಳುವುದನ್ನು ನೋಡಿ ನಾಗರು ಆತನನ್ನು ಮೆಲ್ಲಗೆ ಸಮಾಧಾನಪಡಿಸಿ "ಪರಾಕ್ರಮಿ! ವೀರ್ಯವರ್ಧಕವಾದ ಈ ರಸವನ್ನು ನೀನು ಪಾನಮಾಡಿದುದರಿಂದ, ಹತ್ತುಸಾವಿರ ಆನೆಗಳ ಬಲವುಳ್ಳವನಾಗಿರುವೆ. ನಿನ್ನನ್ನು ಯುದ್ಧದಲ್ಲಿ ಯಾರೂ ಸೋಲಿಸಲಾರರು. ನೀನು ದಿವ್ಯವಾದೀ ಜಲದಲ್ಲಿ ಸ್ನಾನಮಾಡಿ ಮನೆಗೆ ಹೋಗು. ಕುರುಕುಲಶ್ರೇಷ್ಠಾ! ನಿನ್ನನ್ನು ಕಾಣದೆ ನಿನ್ನ ಅಣ್ಣತಮ್ಮಂದಿರು ನಿನಗಾಗಿ ಪರಿತಪಿಸುತ್ತಿರುವರು" ಎಂದರು. ಭೀಮನು ಒಡನೆಯೇ ಸ್ನಾನಮಾಡಿ, ಬಿಳಿಯ ವಸ್ತ್ರಗಳನ್ನೂ, ಪುಷ್ಪಮಾಲಿಕೆಗಳನ್ನೂ ಧರಿಸಿದನು. ನಾಗಲೋಕದಿಂದ ನಾಗರೆಲ್ಲರೂ ಆತನಿಗೆ ವಿಷದೋಷವನ್ನು ನೀಗಿಸುವ ಒಳ್ಳೇ ವಾಸನೆಗಳಿಂದ ಕೂಡಿದ ಮೂಲಿಕೆಗಳಿಂದ ಮಂಗಳಕರವಾದ ಕಂಕಣವನ್ನು ಕಟ್ಟಿದರು. ಆಮೇಲೆ ಆ ವೀರನು ನಾಗರು ತಂದು ಬಡಿಸಿದ ಪರಮಾನ್ನವನ್ನು ಸೇವಿಸಿ, ಅವರು ಮಾಡಿದ ಪೂಜೆಗಳನ್ನೂ, ಆಶೀರ್ವಾದಗಳನ್ನೂ ಸ್ವೀಕರಿಸಿ, ಆಭರಣಾಲಂಕೃತನಾಗಿ, ಅವರಿಂದ ಅಪ್ಪಣೆಯನ್ನು ಪಡೆದು ನಾಗಲೋಕದಿಂದ ಮೇಲಕ್ಕೆದ್ದನು. ನಾಗರು ಭೀಮನನ್ನು ಜಲದಿಂದ ಮೇಲಕ್ಕೆತ್ತಿತಂದು, ಆತನು ಹಿಂದೆ ಆಡುತಿದ್ದ ವನಪ್ರದೇಶದಲ್ಲಿಯೇ ಆತನನ್ನು ಬಿಟ್ಟರು. ಆಮೇಲೆ ಭೀಮನು ನೋಡುತಿದ್ದಂತೆಯೇ ಆ ನಾಗರು ಅದೃಶ್ಯರಾದರು.

ಆಮೇಲೆ ಭೀಮನು ತಾಯಿಯ ಬಳಿಗೆ ಬಂದನು. ತಾಯಿಗೂ ಅಣ್ಣನಾದ ಯುಧಿಷ್ಠಿರನಿಗೂ ನಮಸ್ಕರಿಸಿ, ತನ್ನ ತಮ್ಮಂದಿರ ತಲೆಗಳನ್ನು ಆಘ್ರಾಣಿಸಿದನು. ಕುಂತಿಯೂ, ಅಣ್ಣತಮ್ಮಂದಿರೂ ಆತನನ್ನು ಅಪ್ಪಿ

ಕೊಂಡರು. ಒಬ್ಬರಿಗೊಬ್ಬರು ಆನಂದದಿಂದ "ಶುಭಕಾಲವು! ಶುಭಕಾಲವು!" ಎಂದು ಹೇಳಿಕೊಂಡರು. ದುರ್ಯೋಧನನು ಮಾಡಿದ ಚೇಷ್ಟೆಗಳೆಲ್ಲವನ್ನೂ ಭೀಮನು ತನ್ನ ಸಹೋದರರಿಗೆ ತಿಳಿಸಿದನು. ತನಗೆ ನಾಗಲೋಕದಲ್ಲಿ ನಡೆದ ಕಷ್ಟಸುಖಗಳನ್ನೆಲ್ಲ ಸಂಪೂರ್ಣವಾಗಿ ವಿವರಿಸಿದನು. ಆಮೇಲೆ ಯುಧಿಷ್ಠಿರನು ಭೀಮನನ್ನು ನೋಡಿ "ತಮ್ಮಾ! ಇನ್ನು ನೀನು ಈ ವಿಚಾರದಲ್ಲಿ ಮೌನದಿಂದಿರು. ಈ ವಿಷಯವನ್ನು ಯಾರಿಗೂ ತಿಳಿಸಬೇಡ. ಇಂದಿನಿಂದ ನೀವೆಲ್ಲರೂ ಪರಸ್ಪರ ಜಾಗರೂಕರಾಗಿ ಭೀಮನನ್ನು ರಕ್ಷಿಸಿರಿ" ಎಂದನು. ಹೀಗೆ ಹೇಳಿ ಯುಧಿಷ್ಠಿರನು ಸಹೋದರರೆಲ್ಲರೊಡನೆ ಅತ್ಯಂತ ಜಾಗರೂಕನಾಗಿದ್ದನು. ಪಾಂಡವರೆಲ್ಲರೂ ಭೀಮನಿಗೆ ನಡೆದ ಕ್ರೂರಕಾರ್ಯವನ್ನು ತಿಳಿದು, ಆ ರಹಸ್ಯವು ಬಹಿರಂಗವಾಗದಂತೆ ಎಚ್ಚರದಿಂದ ನೋಡಿಕೊಳ್ಳುತಿದ್ದರು. ವಿದುರನು ಧರ್ಮಾತ್ಮನೂ, ಬುದ್ಧಿಶಾಲಿಯೂ ಆದುದರಿಂದ, ಆ ಪಾಂಡವರಿಗೆ ಆಗಾಗ ಹಿತಸೂಚನೆಗಳನ್ನು ಮಾಡುತಿದ್ದನು. ಭೀಮನು ತಿರುಗಿ ಬದುಕಿಬಂದುದನ್ನು ನೋಡಿ, ದುರ್ಯೋಧನನು ಪ್ರತಿದಿನವೂ ಇದೇ ವಿಷಯವಾದ ದುರಾಲೋಚನೆಗಳಿಂದ ನಿಟ್ಟುಸಿರುಬಿಡುತ್ತಾ, ಸಂತಪಿಸುತಿದ್ದನು. ಧೃತರಾಷ್ಟ್ರನು, ಆಟವಾಡುತ್ತಾ ತುಂಟರಾಗುತ್ತಿರುವ ಆ ಮಕ್ಕಳನ್ನು ನೋಡಿ ಅವರಿಗೆ ಬಿಲ್ಲುವಿದ್ಯೆಯನ್ನು ಕಲಿಸಲು ಶರಸ್ತಂಬ (ನೊದೆಹುಲ್ಲಿನ ತೆನೆ) ದಲ್ಲಿ ಹುಟ್ಟಿದವನೂ, ವೇದಶಾಸ್ತ್ರದಲ್ಲಿ ಪಾರೀಣನೂ ಆದ ಕೃಪಾಚಾರ್ಯನನ್ನು ಗುರುವಾಗಿಟ್ಟು, ಅವರನ್ನು ಆತನಿಗೆ ಒಪ್ಪಿಸಿದನು. ಕುರುಕುಮಾರರೆಲ್ಲರೂ ಶ್ರದ್ಧೆಯಿಂದ ಆ ಕೃಪನ ಬಳಿಯಲ್ಲಿ ಧನುರ್ವೇದವನ್ನು ಅಭ್ಯಾಸ ಮಾಡಿದರು.

ಇದು ನೂರಮೂವತ್ತೊಂಭತ್ತನೆಯ ಅಧ್ಯಾಯವು.



{ ಕೃಪ, ದ್ರೋಣಾಶ್ವತ್ಥಾಮರ ಉತ್ಪತ್ತಿ. ದ್ರೋಣನು ಪರಶು ರಾಮನಿಂದ ಅಸ್ತ್ರವನ್ನು ಪಡೆದುದು }

ಜನಮೇಜಯನು ವೈಶಂಪಾಯನನನ್ನು ಕುರಿತು, "ಬ್ರಾಹ್ಮಣೋತ್ತಮಾ! ಕೃಪನ ಜನ್ಮವೃತ್ತಾಂತವೇನು? ಆತನು ಜೊಂಡಿನಲ್ಲಿ ಹುಟ್ಟಿದುದು ಹೇಗೆ? ಆತನು ಅಸ್ತ್ರವಿದ್ಯೆಯನ್ನು ಪಡೆದುದು ಹೇಗೆ?" ಎಂದು ಕೇಳಿದನು. ಆಗ ವೈಶಂಪಾಯನನು ಜನಮೇಜಯನನ್ನು ಕುರಿತು, "ಮಹಾರಾಜಾ! ಗೌತಮಮಹರ್ಷಿಗೆ ಶರದ್ವಂತನೆಂಬ ಪುತ್ರನೊಬ್ಬನು ಬಾಣಸಹಿತನಾಗಿಯೇ ಹುಟ್ಟಿದನು. ಆ ಶರದ್ವಂತನಿಗೆ ಧನುರ್ವೇದದಲ್ಲಿ ಆಸಕ್ತಿಯಿದ್ದಷ್ಟು ವೇದಾಧ್ಯಯನದಲ್ಲಿ ಅಭಿರುಚಿಯಿರಲಿಲ್ಲ. ಬ್ರಹ್ಮಚಾರಿಗಳು ವೇದಗಳನ್ನು ತಪಸ್ಸಿನ ಮೂಲಕವಾಗಿ ಅಭ್ಯಾಸಮಾಡುವಂತೆ, ಆತನು ಸರ್ವಾಸ್ತ್ರಗಳನ್ನೂ ತಪಸ್ಸಿನಮೂಲಕವೇ ಪಡೆದನು. ಧನುರ್ವೇದದಲ್ಲಿ ಆಸಕ್ತಿಯಿಂದ ಆತನು ದೊಡ್ಡ ತಪಸ್ಸನ್ನು ಹಿಡಿಯಲು ಇಂದ್ರನಿಗೆ ಅದರಿಂದ ಭೀತಿ ಹುಟ್ಟಿತು. ಆಗ ಇಂದ್ರನು ಶರದ್ವಂತನ ತಪಸ್ಸಿಗೆ ವಿಘ್ನಮಾಡುವಂತೆ ಜಾಲವತಿಯೆಂಬ ದೇವಕನ್ಯೆಯನ್ನು ಕಳುಹಿಸಿದನು. ಆಕೆಯು ಶರದ್ವಂತನ ಆಶ್ರಮಕ್ಕೆ ಹೋಗಿ, ಧನುರ್ಬಾಣಗಳನ್ನು ಧರಿಸಿದ್ದ ಆತನ ಮನಸ್ಸನ್ನು ವಶಪಡಿಸಿಕೊಂಡಳು. ಅಸಮಾನವಾದ ರೂಪಲಾವಣ್ಯಗಳಿಂದ ಒಪ್ಪುತ್ತಿರುವ ಆ ಅಪ್ಸರಸ್ತ್ರೀಯು, ಒಳ್ಳೇ ಯೌವನವತಿಯಾಗಿ, ಏಕವಸ್ತ್ರವನ್ನುಟ್ಟುಕೊಂಡಿರುವುದನ್ನು ಕಂಡು, ಆ ಶರದ್ವತನಿಗೆ ಆನಂದದಿಂದ ಕಣ್ಣುಗಳು ಅರಳಿದುವು. ಒಡನೆಯೇ ಆತನು ಕಾಮವಿಕಾರಕ್ಕೊಳಗಾದನು. ಅವನ ಕೈಯಲ್ಲಿದ್ದ ಧನುರ್ಬಾಣಗಳೆರಡೂ ಜಾರಿಬಿದ್ದುವು. ಆದರೂ ಆತನು ದೃಢಚಿತ್ತನಾಗಿಯೇ ಕದಲದಿದ್ದನು. ಆದರೆ ಆತನಿಗೆ ಆ ಅಪ್ಸರಸ್ತ್ರೀಯನ್ನು ಕಂಡು ಮನೋವಿಕಾರವುಂಟಾದುದರಿಂದ ಆತನ ರೇತಸ್ಸು ಸ್ಖಲಿತವಾಯಿತು. ಅದೂ ಆತನಿಗೆ ತಿಳಿಯಲಿಲ್ಲ. ಆಗ ಆ ಋಷಿಶ್ರೇಷ್ಠನು ತನ್ನ ಧನುರ್ಬಾಣಗಳನ್ನೂ, ಕೃಷ್ಣಾಜಿನವನ್ನೂ, ತನ್ನ ಆ ಆಶ್ರಮವನ್ನೂ ಆ ಅಪ್ಸರಸ್ತ್ರೀಯನ್ನೂ ಬಿಟ್ಟು ಅಲ್ಲಿಂದ ಹೊರಟುಹೋದನು. ಆತನ ವೀರ್ಯವು ಒಂದು ಜೊಂಡಿನ ಮಧ್ಯದಲ್ಲಿ ಬಿದ್ದು ಎರಡು ವಿಭಾಗವಾಯಿತು.

ಆ ವೀರ್ಯದಿಂದ ಒಂದು ಹೆಣ್ಣು, ಮತ್ತು ಒಂದು ಗಂಡು, ಹೀಗೆ ಎರಡು ಮಕ್ಕಳಾದುವು. ಆ ಮಹರ್ಷಿಯ ಆಶ್ರಮಕ್ಕೆ ಸಮೀಪದಲ್ಲಿ ಶಂತನುಮಹಾರಾಜನು ಒಮ್ಮೆ ಬೇಟೆಯಾಡುತ್ತ ಬಂದಾಗ, ಆತನ ಸೈನಿಕರಲ್ಲಿ ಒಬ್ಬನು ಆಕಸ್ಮಿಕವಾಗಿ ಆ ಅವಳಿಮಕ್ಕಳನ್ನು ನೋಡಿದನು. ಮತ್ತು ಅಲ್ಲಿ ಬಿಲ್ಲನ್ನೂ, ಅಂಬನ್ನೂ, ಕೃಷ್ಣಾಜಿನವನ್ನೂ ಕಂಡನು. ಆಗ ಆ ಮಕ್ಕಳೆರಡೂ ಧನುರ್ವೇದಪಾರಂಗತನಾದ ಒಬ್ಬ ಬ್ರಾಹ್ಮಣನ ಸಂತಾನವಾಗಿರಬೇಕೆಂದೂಹಿಸಿ, ಆ ಅವಳಿಮಕ್ಕಳನ್ನೂ, ಬಿಲ್ಲನ್ನೂ, ಅಂಬನ್ನೂ ಶಂತನುವಿಗೆ ತೋರಿಸಿದನು ಆಗ ರಾಜನು ಕನಿಕರದಿಂದ ಆ ಅವಳಿಮಕ್ಕಳನ್ನು ಎತ್ತಿಕೊಂಡು ' ನನ್ನ ಮಗಳು, ನನ್ನ ಮಗಳು ' ಎಂದು ಹೇಳುತ್ತಾ ತನ್ನ ಮನೆಗೆ ಹೋದನು. ಹೀಗೆ ಪ್ರತೀಪಪುತ್ರನಾದ ಶಂತನುವು ಶರದ್ವಂತನ ಸಂತಾನವಾದ ಆ ಪುತ್ರರಿಬ್ಬರನ್ನೂ ಬೆಳಸಿ, ಅವರಿಗೆ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿಸಿದನು. ಆ ಮಕ್ಕಳು ಆ ರಾಜನ ಕೃಪೆಯಿಂದ ಬೆಳೆಸಲ್ಪಟ್ಟುದರಿಂದಲೇ ರಾಜನು ಅವರಿಗೆ ಆ ಹೆಸರನ್ನೇ ಇಟ್ಟನು. ಅದರಿಂದ ಗಂಡುಮಗುವಿಗೆ ಕೃಪನೆಂದೂ, ಮಗಳಿಗೆ ಕೃಪಿಯೆಂದೂ ಹೆಸರಾದುವು. ಅವರ ತಂದೆಯಾದ ಶರದ್ವಂತನು ತನ್ನ ತಪೋಬಲದಿಂದ ತನ್ನ ಮಕ್ಕಳು ಅಲ್ಲಿರುವುದನ್ನು ತಿಳಿದು, ತಾನೂ ಅಲ್ಲಿಗೆ ಬಂದು, ಆ ಪುತ್ರನ ಕುಲಗೋತ್ರಾದಿಗಳನ್ನೆಲ್ಲ ತಿಳಿಸಿದನು. ಕೃಪನೂ ಅದುಮೊದಲು ಧನುರ್ವಿದ್ಯೆಯಲ್ಲಿಯೇ ಆಸಕ್ತನಾಗಿದ್ದನು. ಕೃಪನಿಗೆ ಆತನ ತಂದೆಯು ಪ್ರಯೋಗ, ಸಂಹರಣ, ಕಲ್ಪ, ರಹಸ್ಯಗಳೆಂಬ ನಾಲ್ಕುಬಗೆಯ ಧನುರ್ವೇದಗಳನ್ನೂ, ವಿವಿಧ ಶಾಸ್ತ್ರಗಳನ್ನೂ ವಿವರಿಸಿದನು. ಕೃಪನು ಸ್ವಲ್ಪಕಾಲದೊಳಗಾಗಿ ಧನುರ್ವಿದ್ಯೆಯಲ್ಲಿ ಪರಮಾಚಾರ್ಯನಾಗಲು, ಭೀಷ್ಮನು ಕೃಪನನ್ನು ಕುರಿತು "ಇವರು ನಿಮ್ಮ ಶಿಷ್ಯರು" ಎಂದು ತನ್ನ ಮೊಮ್ಮಕ್ಕಳನ್ನು ಜತೆಯಲ್ಲಿ ಕರೆತಂದು ಆತನಿಗೆ ಒಪ್ಪಿಸಿದನು. ಆಮೇಲೆ ಅವರಲ್ಲಿ ಮಹಾರಥರಾದ ಧೃತರಾಷ್ಟ್ರಪುತ್ರರೂ, ಪಾಂಡವರೂ, ಯಾದವರೂ ಸೇರಿ ಧನುರ್ವೇದವನ್ನು ಅಭ್ಯಾಸಮಾಡಿದರು. ಇನ್ನೂ ನಾನಾದೇಶಗಳಿಂದ ಬಂದ ಇತರ ರಾಜರೂ ಕೃಪನನ್ನು ಆಚಾರ್ಯನನ್ನಾಗಿ ಮಾಡಿಕೊಂಡು, ಶಸ್ತ್ರಾಸ್ತ್ರಗಳನ್ನು ಕಲಿತುಕೊಂಡರು. ಆದರೆ ಭೀಷ್ಮನಿಗೆ ಇಷ್ಟರಲ್ಲಿ ತೃಪ್ತಿಯಿರಲಿಲ್ಲ. ತನ್ನ ಮೊ

ಮ್ಮಕ್ಕಳಿಗೆ ಇನ್ನೂ ಪುರೋವೃದ್ಧಿಯನ್ನು ಬಯಸಿ, ಬಾಣವಿದ್ಯೆಯಲ್ಲಿಯೂ ಅಸ್ತ್ರವಿದ್ಯೆಯಲ್ಲಿಯೂ ಪೂರ್ಣಜ್ಞಾನವುಳ್ಳವನೂ, ಪರಾಕ್ರಮಿಯೂ ಆದ ಇನ್ನೂ ಒಬ್ಬ ಆಚಾರ್ಯನನ್ನು ನಿಯಮಿಸಬೇಕೆಂದು ವಿಚಾರಿಸುತಿದ್ದನು. ಮಹಾಬಲಶಾಲಿಗಳಾದ ಆ ಕುರುವಂಶೀಯರಿಗೆ ಅಸ್ತ್ರವಿದ್ಯೆಯನ್ನು ಅಭ್ಯಾಸಮಾಡಿಸುವ ವಿಷಯದಲ್ಲಿ ಸಾಮಾನ್ಯಜನರು ಸಾಲದು. ಅಲ್ಪಬುದ್ಧಿಯುಳ್ಳವನೂ, ಮಹತ್ವವಿಲ್ಲದವನೂ, ಅಸ್ತ್ರವಿದ್ಯೆಯಲ್ಲಿ ನೈಪುಣ್ಯವಿಲ್ಲದವನೂ, ಸಾಮರ್ಥ್ಯದಲ್ಲಿ ದೇವತೆಗಳಿಗೆ ಸಮಾನನಲ್ಲದವನೂ ಆ ಕಾರ್ಯಕ್ಕೆ ಯೋಗ್ಯನಲ್ಲವೆಂದು ಭಾವಿಸಿ, ಕೊನೆಗೆ ವೇದಜ್ಞನೂ, ಮೇಧಾವಿಯೂ, ಆದ ದ್ರೋಣನಲ್ಲಿ ಪಾಂಡವಕೌರವರೆಲ್ಲರನ್ನೂ ಶಿಷ್ಯವೃತ್ತಿಗಾಗಿ ಒಪ್ಪಿಸಿದನು. ಆ ದ್ರೋಣನೋ ಅಸ್ತ್ರವಿದ್ಯಾನಿಪುಣನು. ಮಹಾಯಶಸ್ವಿ. ಭೀಷ್ಮನು ಆತನನ್ನು ಶಾಸ್ತ್ರೋಕ್ತರೀತಿಯಲ್ಲಿ ಪೂಜಿಸಿ ಪ್ರಾರ್ಥಿಸಲು, ದ್ರೋಣನು ಅವರೆಲ್ಲರನ್ನೂ ತನ್ನ ಶಿಷ್ಯರನ್ನಾಗಿ ಅಂಗೀಕರಿಸಿದನು. ಆತನು ಅವರಿಗೆ ಧನುರ್ವೇದವನ್ನೆಲ್ಲ ಪೂರ್ಣವಾಗಿ ಕಲಿಸಿದನು. ಕೌರವರೂ, ಪಾಂಡವರೂ ಅಲ್ಪಕಾಲದೊಳಗಾಗಿ ಎಲ್ಲಾ ಅಸ್ತ್ರಗಳಲ್ಲಿಯೂ ಪ್ರವೀಣರಾದರು" ಎಂದನು.

ಜನಮೇಜಯನು ಅದನ್ನು ಕೇಳಿ, ವೈಶಂಪಾಯನನೊಡನೆ "ಬ್ರಾಹ್ಮಣೋತ್ತಮಾ! ದ್ರೋಣನು ಹೇಗೆ ಹುಟ್ಟಿದನು? ಆತನು ಅಸ್ತ್ರಗಳನ್ನು ಪಡೆದುದು ಹೇಗೆ? ಕೌರವರಲ್ಲಿ ಹೇಗೆ ಬಂದು ಸೇರಿದನು? ಆತನ ತಂದೆ ಯಾರು? ಆ ದ್ರೋಣನಿಗೆ ಅಸ್ತ್ರವಿಶಾರದನಾದ ಅಶ್ವತ್ಥಾಮನು ಹುಟ್ಟಿದುದು ಹೇಗೆ?" ಎಂದನು. ಆಗ ವೈಶಂಪಾಯನನು "ಜನಮೇಜಯಾ! ಬಹುಕಾಲಕ್ಕೆ ಹಿಂದೆ ಗಂಗಾದ್ವಾರಕ್ಕೆ ಸಮೀಪದಲ್ಲಿ, ಮಹಾತ್ಮನೂ, ದೃಢವ್ರತನೂ ಆದ ಭರದ್ವಾಜನೆಂಬ ಮಹರ್ಷಿಯೊಬ್ಬನಿದ್ದನು. ಆತನು ಸ್ನಾನಕ್ಕಾಗಿ ಗಂಗೆಗೆ ಹೋಗಿ, ಮಹರ್ಷಿಗಳೊಡನೆ ಹವಿರ್ಧಾನವೆಂಬ ಸ್ಥಳದಲ್ಲಿ ಸಂಚರಿಸುತ್ತಿರಲು, ಅಲ್ಲಿ ಯೌವನವತಿಯೂ, ಸುಂದರಿಯೂ ಆದ ಘೃತಾಚಿಯೆಂಬ ಅಪ್ಸರಸಿಯು, ಮೊದಲೇ ಅಲ್ಲಿಗೆ ಬಂದು ಜಲಕ್ರೀಡೆಯಾಡುತ್ತಿರುವುದನ್ನು ಕಂಡನು. ಆಕೆಯು ತನ್ನ ಸ್ನಾನವು ಮುಗಿದೊಡನೆ ನೀರಿ

ಯಿಂದ ಮೇಲಕ್ಕೆದ್ದಳು. ಆಕೆಯು ದಡವನ್ನು ಹತ್ತುತ್ತಿರುವಾಗ ಅವಳ ಸೀರೆಯು ಗಾಳಿಗೆ ಹಾರಿತು. ಅದನ್ನು ನೋಡಿ ಋಷಿಯ ಮನಸ್ಸು ಕದಲಿ, ಕಾಮವಿಕಾರವು ತಲೆದೋರಿತು. ಆಗಲೇ ಅವನ ರೇತಸ್ಸು ಸ್ಖಲಿತವಾಯಿತು. ಆ ಋಷಿಯು ಅದನ್ನು ಒಂದು ದ್ರೋಣದಲ್ಲಿ (ಕಲಶದಲ್ಲಿ) ಹಿಡಿದಿಟ್ಟನು. ಆ ಕಲಶದಿಂದಲೇ ದ್ರೋಣನು ಹುಟ್ಟಿದುದು. ಆತನು ವೇದವೇದಾಂಗಗಳೆಲ್ಲವನ್ನೂ ಚೆನ್ನಾಗಿ ಅಭ್ಯಾಸಮಾಡಿದನು. ಕಶ್ಯಪನು ಅಗ್ನಿಯಿಂದ ಕಲಿತುಕೊಂಡಿದ್ದ ಅಸ್ತ್ರವಿದ್ಯೆಯನ್ನೆಲ್ಲ ಅವನಿಂದ ಭರದ್ವಾಜನು ದೇವತೆಗಳ ಕಾರ್ಯಾರ್ಥವಾಗಿ ಕಲಿತುಕೊಂಡನು. ಅಸ್ತ್ರವಿದ್ಯಾನಿಪುಣನೂ, ಪ್ರತಾಪಶಾಲಿಯೂ ಆ ಆದ ಭರದ್ವಾಜನು ಅಗ್ನಿವೇಶ್ಯನೆಂಬ ಮುನಿಗೆ ಆಗ್ನೇಯಾಸ್ತ್ರವನ್ನು ಕೊಟ್ಟನು. ಭರತಕುಲಶ್ರೇಷ್ಠಾ! ಆ ಅಗ್ನಿವೇಶ್ಯನಿಗೆ ದ್ರೋಣನು ಸ್ನೇಹಿತನಾದುದರಿಂದ, ತಾನು ಭರದ್ವಾಜಋಷಿಯಿಂದ ಪಡೆದಿದ್ದ ಆಗ್ನೇಯಾಸ್ತ್ರವನ್ನು ಅವನಿಗೆ ಕೊಟ್ಟನು. ಭರದ್ವಾಜನಿಗೆ ಮಿತ್ರನಾದ ಪೃಷತನೆಂಬ ರಾಜನೊಬ್ಬನಿದ್ದನು. ಆ ರಾಜನಿಗೆ ದ್ರುಪದನೆಂಬ ಮಗನು ಹುಟ್ಟಿದನು. ಕ್ಷತ್ರಿಯಕುಮಾರನಾದ ಆ ದ್ರುಪದನು ಪ್ರತಿದಿನವೂ ಆಶ್ರಮಕ್ಕೆ ಹೋಗಿ, ದ್ರೋಣನೊಡನೆ ಆಟವಾಡುತ್ತ, ವೇದಾಧ್ಯಯನವನ್ನು ಮಾಡುತಿದ್ದನು.

ಪೃಷತನು ಮೃತನಾದಮೇಲೆ, ಮಹಾವೀರನೂ, ಪುರುಷಶ್ರೇಷ್ಠನೂ ಆದ ದ್ರುಪದನೇ ಉತ್ತರಪಾಂಚಾಲದೇಶಕ್ಕೆ ರಾಜನಾದನು. ಇತ್ತಲಾಗಿ ಭರದ್ವಾಜಮಹರ್ಷಿಯು ಸ್ವರ್ಗಸ್ಥನಾದಮೇಲೆ, ದ್ರೋಣನು ಆ ಆಶ್ರಮದಲ್ಲಿಯೇ ಇದ್ದು ತಪಸ್ಸುಮಾಡುತ್ತಿದ್ದನು. ವೇದವೇದಾಂಗಗಳನ್ನು ತಿಳಿದವನೂ, ಮಹಾಯಶಸ್ವಿಯೂ ಆದ ಆ ದ್ರೋಣನು ತಪಸ್ಸಿನ ಮೂಲಕವಾಗಿ ಪಾಪಗಳೆಲ್ಲವನ್ನೂ ದಹಿಸಿ, ಸಂತಾನಾರ್ಥವಾಗಿ ಶರದ್ವಂತನ ಮಗಳಾದ ಕೃಪಿಯನ್ನು ವಿವಾಹವಾದನು. ಆಕೆಯು ಯಾವಾಗಲೂ ಆತನ ಅಗ್ನಿಹೋತ್ರಗಳಿಗೆ ಸಹಕಾರಿಣಿಯಾಗಿ ಸ್ವಧರ್ಮಪರಾಯಣಳಾಗಿದ್ದಳು. ತಪಸ್ವಿನಿಯಂತಿದ್ದ ಆಕೆಗೆ ಅಶ್ವತ್ಥಾಮನೆಂಬ ಪುತ್ರನು ಹುಟ್ಟಿದನು. ಆತನು ಹುಟ್ಟಿದೊಡನೆ ಉಚ್ಚೈಃಶ್ರವವೆಂಬ ಇಂದ್ರಾಶ್ವದಂತೆ ಕೂಗಿದನು. ಅವನ್ನು

ಕೇಳಿ ಆಕಾಶದಿಂದ ಅದೃಶ್ಯವಾದೊಂದು ಭೂತವು "ಈ ಮಗುವಿನ ಧ್ವನಿಯು ಅಶ್ವದ ಧ್ವನಿಯಂತೆ ಎಲ್ಲಾ ದಿಕ್ಕುಗಳಲ್ಲಿಯೂ ವ್ಯಾಪಿಸಿದುದರಿಂದ ಈತನು ಅಶ್ವತ್ಥಾಮನೆಂಬ ಹೆಸರಿನಿಂದಲೇ ಪ್ರಸಿದ್ಧನಾಗುವನು" ಎಂದಿತು. ದ್ರೋಣನು ಆ ಪುತ್ರನನ್ನು ಬಹಳವೋಹದಿಂದ ಬೆಳೆಸುತ್ತಿದ್ದನು. ಆತನು ಆ ಆಶ್ರಮದಲ್ಲಿಯೇ ವಾಸಮಾಡುತ್ತ, ಧನುರ್ವೇದದಲ್ಲಿ ಆಸಕ್ತನಾಗಿದ್ದನು. ಇದೇ ಸಮಯದಲ್ಲಿ ಮಹಾತ್ಮನೂ, ಅಸ್ತ್ರಧಾರಿಗಳಲ್ಲಿ ಅಗ್ರಗಣ್ಯನೂ ಆದ ಪರಶುರಾಮನು ತನ್ನ ಧನವೆಲ್ಲವನ್ನೂ ಬ್ರಾಹ್ಮಣರಿಗೆ ದಾನವಮಾಡುವುದಾಗಿ ಉದ್ದೇಶಿಸಿರುವನೆಂದು ದ್ರೋಣನ ಕಿವಿಗೆ ಬಿದ್ದಿತು. ದ್ರೋಣನು ಪರಶುರಾಮನ ಧನುರ್ವೇದಜ್ಞಾನವನ್ನೂ, ದಿವ್ಯಾಸ್ತ್ರಗಳನ್ನೂ ಕೇಳಿದ್ದವನಾದುದರಿಂದ, ಅವನಲ್ಲಿರುವ ಅಸ್ತ್ರಗಳನ್ನೂ, ಆತನ ರಾಜನೀತಿಶಾಸ್ತ್ರವನ್ನೂ ಅವನಿಂದ ಪಡೆಯಬೇಕೆಂದು ದ್ರೋಣನಿಗೆ ಆಸೆ ಹುಟ್ಟಿತು. ಅದರ ಮೇಲೆ ದ್ರೋಣನು ತಪೋನಿಷ್ಠರೂ, ಬ್ರಹ್ಮಚರ್ಯವ್ರತನಿಯಮವುಳ್ಳವರೂ ಆದ ತನ್ನ ಕೆಲವು ಶಿಷ್ಯರೊಡಗೂಡಿ ಮಹೇಂದ್ರಪರ್ವತಕ್ಕೆ ಹೊರಟು, ಅಲ್ಲಿ ಪರಶುರಾಮನನ್ನು ನೋಡಿ, ತನ್ನ ಹೆಸರನ್ನೂ, ತಾನು ಅಂಗಿರಸಕುಲದಲ್ಲಿ ಹುಟ್ಟಿದುದನ್ನೂ ತಿಳಿಸಿ, ಆತನ ಪಾದಗಳನ್ನು ಹಿಡಿದು ಅಭಿವಾದಿಸಿದನು. ಇಷ್ಟರಲ್ಲಿಯೇ ಪರಶುರಾಮನು ತನ್ನ ಸರ್ವಸ್ವವನ್ನೂ ಬ್ರಾಹ್ಮಣರಿಗೆ ದಾನಮಾಡಿ, ಆಗಲೇ ವನಕ್ಕೆ ಹೊರಡುವುದರಲ್ಲಿದ್ದನು. ಆಗ ದ್ರೋಣನು ಆತನನ್ನು ಕುರಿತು "ಬ್ರಾಹ್ಮಣೋತ್ತಮಾ! ನಾನು ಭರದ್ವಾಜನ ಪುತ್ರನು. ಅಯೋನಿಜನು. ನಾನೊಂದು ಮಹಾಧನವನ್ನಪೇಕ್ಷಿಸಿ ನಿನ್ನಲ್ಲಿಗೆ ಬಂದೆನು" ಎಂದನು. ಆಗ ಕ್ಷತ್ರಕುಲಾಂತಕನಾದ ಪರಶುರಾಮನು ದ್ರೋಣನನ್ನು ನೋಡಿ 'ಬ್ರಾಹ್ಮಣೋತ್ತಮಾ! ನಿನಗೆ ಸ್ವಾಗತವು! ನಿನಗೆ ಬೇಕಾದುದನ್ನು ಸ್ಪಷ್ಟವಾಗಿ ತಿಳಿಸು' ಎಂದನು. ಆಗ ದ್ರೋಣನು ಯಾವುದನ್ನಾದರೂ ಕೊಡಲು ಸಿದ್ಧನಾಗಿದ್ದ ಆ ವೀರಾಗ್ರಣಿಯೊಡನೆ 'ಮಹಾವ್ರತಾ! ನನಗೆ ನಿನ್ನಲ್ಲಿರುವ ಶಾಶ್ವತವಾದ ಧನವೊಂದು ಬೇಕು' ಎಂದನು. ಅದಕ್ಕೆ ಪರಶುರಾಮನು 'ತಪೋಧನಾ! ನಾನು ನನ್ನಲ್ಲಿದ್ದ ಧನಕನಕಾದಿಗಳೆಲ್ಲವನ್ನೂ ಬ್ರಾಹ್ಮಣರಿಗೆ ದಾನಮಾಡಿಬಿಟ್ಟಿರುವೆನು. ನಾನಾನಗರಗಳಿಂದ ಶೋಭಿತವಾಗಿ, ಸಮುದ್ರಮೇಖಲೆಯಾದ

ಈ ಭೂಮಿಯೆಲ್ಲವನ್ನೂ ಕಶ್ಯಪನಿಗೆ ಕೊಟ್ಟುಬಿಟ್ಟೆನು. ಈಗ ನನ್ನ ಶರೀರಮಾತ್ರವೂ, ಶ್ರೇಷ್ಠವಾದ ಹಲವು ಶಸ್ತ್ರಾಸ್ತ್ರಗಳೂ ನನ್ನಲ್ಲಿ ಉಳಿದಿವೆ. ಬ್ರಾಹ್ಮಣಾ! ನನ್ನ ಶರೀರವನ್ನೇ ಆಗಲಿ, ಈ ಅಸ್ತ್ರಶಸ್ತ್ರಗಳನ್ನೇ ಆಗಲಿ, ಯಾವುದನ್ನು ಕೇಳುವೆಯೋ ಕೇಳು. ಇವುಗಳಲ್ಲಿ ಏನನ್ನು ಕೊಡಲಿ?'' ಎಂದನು. ಆಗ ದ್ರೋಣನು 'ಭಾರ್ಗವಾ! ನಿನ್ನ ಅಸ್ತ್ರಗಳೆಲ್ಲವನ್ನೂ ಅವುಗಳ ಪ್ರಯೋಗೋಪಸಂಹಾರ ರಹಸ್ಯಗಳೊಡನೆ ನನಗೆ ಸಂಪೂರ್ಣವಾಗಿ ಕೊಡು. ಇದೇ ಎಲ್ಲಾ ಧನಗಳಿಗಿಂತಲೂ ಉತ್ತಮ ಧನವು'' ಎಂದನು. ಪರಶುರಾಮನು ಹಾಗೆಯೇ ಆಗಲೆಂದು ಒಪ್ಪಿ ಒಡನೆಯೇ ಆತನಿಗೆ *ಸರ್ವರಹಸ್ಯಗಳೊಡನೆ, ಪುರಶ್ಚರಣವ್ರತಯುಕ್ತವಾಗಿ ಧನುರ್ವೇದವನ್ನೂ ಮಂತ್ರಾಸ್ತ್ರಗಳನ್ನೂ ಸಂಪೂರ್ಣವಾಗಿ ಆತನಿಗೆ ಕೊಟ್ಟನು. ಆ ದ್ರೋಣನು ಅವುಗಳೆಲ್ಲವನ್ನೂ ಪಡೆದು ಅಸ್ತ್ರವಿದ್ಯಾಪಾರಂಗತನಾಗಿ, ಅಧಿಕ ಸಂತೋಷದಿಂದ ತನ್ನ ಬಾಲ್ಯಸ್ನೇಹಿತನಾದ ದ್ರುಪದನ ಪಟ್ಟಣಕ್ಕೆ ಹೋದನು.

ಇದು ನೂರ ನಾಲ್ವತ್ತನೆಯ ಅಧ್ಯಾಯವು.



{ ದ್ರುಪದನಿಂದ ನಿರಾಕರಿಸಲ್ಪಟ್ಟ ದ್ರೋಣನು ಕೋಪದಿಂದ ಹಸ್ತಿನಾಪುರಕ್ಕೆ ಬರಲು ಭೀಷ್ಮನು ಆತನನ್ನು ತನ್ನ ಗೃಹದಲ್ಲಿರುವಂತೆ ಪ್ರಾರ್ಥಿಸಿದುದು. }

ಆಗ ದ್ರೋಣನು ದ್ರುಪದನ ಬಳಿಗೆ ಹೋಗಿ "ರಾಜಾ! ನಾನು ನಿನ್ನ ಸ್ನೇಹಿತನು. ಆ ಸ್ನೇಹಭಾವದಿಂದ ನಿನ್ನ ಬಳಿಗೆ ಬಂದಿರುವೆನು'' ಎಂದನು. ಹೀಗೆ ದ್ರೋಣನು ಸ್ನೇಹಕ್ಕೆ ತಕ್ಕ ಪ್ರಿಯವಾಕ್ಯಗಳಿಂದ ದ್ರುಪದನನ್ನು ಮಾತನಾಡಿಸಿದರೂ ಐಶ್ವರ್ಯಮದದಿಂದ ಆ ರಾಜನು ಆ ಬ್ರಾಹ್ಮಣನ ಮಾತಿಗೆ ಸಹಿಸಲಾರದೆ ಹುಬ್ಬು ಗಂಟುಹಾಕುತ್ತ, ಕೋಪದಿಂದ ಕೆಂಪೇರಿದ ಕಣ್ಣುಗಳೊಡನೆ "ಎಲ ಬ್ರಾಹ್ಮಣಾ! ನಿನ್ನ ಬುದ್ಧಿಯು

* ರಹಸ್ಯವೆಂದರೆ ಸ್ವರೂಪಜ್ಞಾನವೆಂದೂ, ಪುನಶ್ಚರಣವೆಂದರೆ ಮುಂದಾಗಿ ನಡೆಯತಕ್ಕ ವ್ರತವಿಶೇಷವೆಂದೂ ತಿಳಿಯಬೇಕು.

ಇನ್ನೂ ಪರಿಪಾಕಹೊಂದಿಲ್ಲ! ಆದುದರಿಂದಲೇ ನೀನು ಹೀಗೆ ಮಾತನಾಡುತ್ತಿರುವೆ. ಬಡಬ್ರಾಹ್ಮಣನಾದ ನೀನು ಇದ್ದಕಿದ್ದಹಾಗೆ ನನ್ನಲ್ಲಿಗೆ ಬಂದು ರಾಜನಾದ ನನ್ನೊಡನೆ ಸ್ನೇಹಿತನೆಂದು ಹೇಳಿಕೊಳ್ಳುತ್ತಿರುವೆ. ನಿನಗೆ ಬುದ್ಧಿಯು ಸರಿಯಾಗಿದ್ದರೆ ನೀನು ಹೀಗೆ ಹೇಳುತ್ತಿದ್ದೆಯಾ? ತಿಳಿಗೇಡಿ! ಮಹೋನ್ನತಪದವಿಯಲ್ಲಿರುವ ನನ್ನಂತಹ ರಾಜನಿಗೆ, ನಿರ್ಭಾಗ್ಯನಾಗಿ ಬಡತನದಿಂದ ಅಲೆಯುತ್ತಿರುವ ನಿನ್ನಂತವನೊಡನೆ ಸ್ನೇಹವೇ? ಎಲ್ಲಿಯಾದರೂ ಹೀಗೆ ಸಂಭವಿಸುವುದುಂಟೇ? ಎಲ್ಲಿಯೂ ಇಲ್ಲ. ನಿಜವಾಗಿದ್ದ ಸ್ನೇಹವುಕೂಡ ಮನುಷ್ಯನ ಸ್ಥಿತಿಯು ಬದಲಾಯಿಸುತ್ತ ಬಂದ ಹಾಗೆಲ್ಲ ಕಾಲಕ್ರಮದಲ್ಲಿ ನಾಶವಾಗುವುದು. ಹಿಂದೆ ನಾನೂ, ನೀನೂ ಸಮಾನಸ್ಥಿತಿಯಲ್ಲಿದ್ದುದರಿಂದ ನಮ್ಮಿಬ್ಬರಿಗೆ ಸ್ನೇಹವಿದ್ದಿರಬಹುದು. ಅಷ್ಟು ಹೊರತು ಬೇರೆಯಲ್ಲ. ಲೋಕದಲ್ಲಿ ಯಾರಿಗಾದರೂ ಸ್ನೇಹಭಾವವು ಶಾಶ್ವತವಾಗಿ ನಿಂತಿರುವುದಿಲ್ಲ. ಕಾಮವು ಸ್ನೇಹವನ್ನು ಹಾಳುಮಾಡುವುದು. ಕೋಪವೂ ಸ್ನೇಹವನ್ನು ಕೆಡಿಸುವುದು. ನನ್ನ ನಿನ್ನ ಸ್ನೇಹವು ಯಾವುದೋ ಕಾರಣದಿಂದ ಆಗಂತುಕವಾಗಿ ಸಂಭವಿಸಿತು. ಈಗ ಆ ಕಾಲವು ಗತಿಸಿಹೋಯಿತು. ಇನ್ನೂ ನೀನು ಆ ಸ್ನೇಹವನ್ನೇಕೆ ನೆನೆಸಿಕೊಂಡಿರುವೆ? ಯಾವುದೋ ಒಂದು ಪ್ರಯೋಜನಕ್ಕಾಗಿ ನಿನ್ನೊಡನೆ ನನಗೆ ಸ್ನೇಹವಾಯಿತು. ಈಗ ಅಂತಹ ಪ್ರಯೋಜನವೇನಿದೆ? ಅದು ಹಾಗಿರಲಿ. ದರಿದ್ರನು ಧನಿಕನಿಗೂ, ಮೂರ್ಖನು ವಿದ್ವಾಂಸನಿಗೂ, ಹೇಡಿಯು ಶೂರನಿಗೂ ಸ್ನೇಹಿತನಾಗಬಲ್ಲನೇ? ಬ್ರಾಹ್ಮಣಾ! ಸ್ನೇಹವೆಂಬ ನೆವವನ್ನು ಮುಂದಿಟ್ಟುಕೊಂಡು ನನ್ನನ್ನು ಯಾಚಿಸುತ್ತಿರುವೆಯಾ? ಯಾರಲ್ಲಿ ಐಶ್ವರ್ಯವು ಸಮವಾಗಿರುವುದೋ, ಯಾರಲ್ಲಿ (ಶಾಸ್ತ್ರಶ್ರವಣವು) ವಿದ್ಯೆಯು ಸಮವಾಗಿರುವುದೋ, ಆ ಇಬ್ಬರಿಗೇ ವಿವಾಹವೂ, ಸ್ನೇಹವೂ ಹೊಂದುವುದು. ಹಾಗಿಲ್ಲದೆ, ಬಲಿಷ್ಠನಿಗೂ ದುರ್ಬಲನಿಗೂ ಸ್ನೇಹವು ಸರಿಬೀಳುವುದೇ? ಹಾಗೆಯೇ ಶ್ರೋತ್ರಿಯನಲ್ಲದವನು ಶ್ರೋತ್ರಿಯನಿಗೂ, ರಥವಿಲ್ಲದವನು ರಥಿಕನಿಗೂ, ರಾಜನಲ್ಲದವನು ರಾಜನಿಗೂ ಸ್ನೇಹಿತನಾಗುವನೇ? ಎಂದಿಗೂ ಇಲ್ಲ. ಹಿಂದೆ ಯಾವಾಗಲೋ ಇದ್ದ ಸ್ನೇಹವನ್ನೇಕೆ ಈಗ ತಂದೊಡ್ಡುವೆ?'' ಎಂದು ನಿರಾಕರಿಸಿದನು.

ದ್ರೋಣನು ನಿಜವಾದ ಪ್ರತಾಪಶಾಲಿಯಾದುದರಿಂದ, ಸ್ವಲ್ಪಹೊತ್ತು ತನ್ನಲ್ಲಿ ಚಿಂತಿಸಿದನು. ಅವನಿಗೆ ಕೋಪವು ಉಕ್ಕಿಬಂದಿತು. ಆದರೂ ಆತನು ವಿವೇಕಿಯಾದುದರಿಂದ, ಆಗ ಕೋಪಾವಿಷ್ಟನಾಗುವುದು ಸರಿಯಲ್ಲ ವೆಂದು ಭಾವಿಸಿ, ಕೋಪವನ್ನು ಹಾಗೆಯೇ ತನ್ನಲ್ಲಿ ಅಡಗಿಸಿಕೊಂಡನು. ದ್ರುಪದನಿಗೆ ತಾನು ಶೀಘ್ರದಲ್ಲಿಯೇ ಮಾಡತಕ್ಕ ಪ್ರತೀಕಾರವೊಂದನ್ನು ತನ್ನಲ್ಲಿ ತೀರ್ಮಾನಿಸಿ, ಅದನ್ನು ನೆರವೇರಿಸುವುದಕ್ಕಾಗಿ ಪ್ರತಿಜ್ಞೆಮಾಡಿ ದನು. ತನ್ನ ಶಿಷ್ಯರನ್ನೂ, ಪುತ್ರನನ್ನೂ ಕರೆದುಕೊಂಡು, ಕೌರವರ ರಾಜ ಧಾನಿಯಾದ ಹಸ್ತಿನಾಪುರಕ್ಕೆ ಬಂದು, ಕೃಪನ ಮನೆಯಲ್ಲಿ ಯಾರಿಗೂ ತಿಳಿಯುವಂತೆ ವಾಸವಾಡುತ್ತಿದ್ದನು. ದ್ರೋಣನ ಮಗನಾದ ಅಶ್ವತ್ಥಾಮ ನೂ ಬಹಳ ಸಮರ್ಥನಾದುದರಿಂದ, ಕೃಪನಿಲ್ಲದಿದ್ದಾಗ ಆತನೂ ಪಾಂಡವ ರಿಗೆ ವಿದ್ಯಾಭ್ಯಾಸ ಮಾಡಿಸುತ್ತಿದ್ದನು. ಆತನನ್ನೂ ಯಾರೂ ಅರಿಯರು. ಒಂದು ದಿನ ವೀರರಾದ ರಾಜಕುಮಾರರೆಲ್ಲರೂ ಹಸ್ತಿನಾವತಿಯ ಹೊರ ಭಾಗಕ್ಕೆ ಬಂದು ಅಲ್ಲಿ ಚಂಡಾಡುತ್ತ, ಸಂತೋಷದಿಂದ ವಿಹರಿಸುತ್ತಿದ್ದರು. ಆಗ ಧರ್ಮರಾಜನ (ಉಂಗುರವೂ) ಅವರ ಚಂಡೂ ಬಾವಿಯೊಳಕ್ಕೆ ಬಿ ದ್ದು ಮುಳುಗಿಹೋದುವು. ಆಗ ಕುಮಾರರು ನೀರಿನಲ್ಲಿ ನಕ್ಷತ್ರದಂತೆ ಮಿನುಗುತ್ತಿದ್ದ ಆ ಉಂಗುರವನ್ನು ನೋಡಿ ಅದನ್ನು ಎತ್ತುವುದಕ್ಕಾಗಿ ಪ್ರಯಾಸಪಟ್ಟರು. ಆದರೂ ಸಾಧ್ಯವಾಗದಿರಲು, ಮುಂದೇನು ಮಾಡು ವುದೆಂದು ತೋರದೆ, ಆ ಬಾವಿಯ ಸುತ್ತಲೂ ನಿಂತಿದ್ದರು ಅವರಿಗೆ ಉಪಾಯವೇನೂ ತೋರಲಿಲ್ಲ. ಅದರಿಂದ ಅವರು ಅವಮಾನಪಟ್ಟು ತಲೆ ಬಾಗಿಸಿಕೊಂಡು, ಒಬ್ಬರ ಮುಖವನ್ನು ಒಬ್ಬರು ನೋಡುತ್ತ, ವಿಶೇಷ ಚಿಂತಾಕುಲರಾಗಿದ್ದರು. ಆಗ ಅವರು ಸಮೀಪದಲ್ಲಿದ್ದ ಒಬ್ಬ ಬ್ರಾಹ್ಮಣ ನನ್ನು ಕಂಡರು. ಅವನ ಮೈಬಣ್ಣವು ಕಪ್ಪಾಗಿ, ಆತನ ದೇಹದಲ್ಲಿ ಸು ಕ್ಕುಗಳಿದ್ದುವು. ಆತನು ಕೃಶನಾಗಿದ್ದನು. ಆಗಲೇ ಅವನು ತನ್ನ ನಿತ್ಯಕರ್ಮಗಳನ್ನೆಲ್ಲ ಮುಗಿಸಿಕೊಂಡು ಅಗ್ನಿಯಲ್ಲಿ ಹೋಮಮಾಡುತ್ತಿ ರುವುದನ್ನು ಕಂಡರು. ಆ ಬ್ರಾಹ್ಮಣನು ಅದಕ್ಕೇನಾದರೂ ಉಪಾಯ ವನ್ನು ಸೂಚಿಸಬಹುದೆಂಬ ಅಪೇಕ್ಷೆಯಿಂದ ಅವರೆಲ್ಲರೂ ಬಂದು ಆತನನ್ನು ಸುತ್ತಿ ನಿಂತರು. ಅವನೇ ದ್ರೋಣನು. ಸ್ವಕಾರ್ಯಾರ್ಥಿಯಾಗಿದ್ದ ಆತನು

ಆ ಕುಮಾರರನ್ನು ನೋಡಿ ಮುಗುಳ್ನಗೆಯಿಂದ "ನಿಮ್ಮ ಕ್ಷತ್ರಿಯಬಲವೂ, ನಿಮ್ಮ ಅಸ್ತ್ರಚಾತುರ್ಯವೂ ಇಷ್ಟೇಯೋ? ಇದೂ ಒಂದು ನಿಪುಣತೆಯೋ? ಭರತವಂಶದಲ್ಲಿ ಹುಟ್ಟಿದ ನೀವು (ಬಾವಿಯಿಂದ) ಒಂದು *ಚಂಡನ್ನು ಎತ್ತಲಾರದೆ ಹೋದಿರಾ? ನೀವು ನನಗೆ ಭೋಜನಮಾಡಿಸಿದರೆ, ನಿಮ್ಮ ಚಂಡನ್ನೂ, ಉಂಗುರವನ್ನೂ ಈ ಕಡ್ಡಿಗಳಿಂದಲೇ ಮೇಲಕ್ಕೆತ್ತುವೆನು" ಎಂದನು. ಒಡನೆಯೇ ಅವರಲ್ಲಿ ಕುಂತೀಪುತ್ರನಾದ ಯುಧಿಷ್ಠಿರನು ದ್ರೋಣನನ್ನು ನೋಡಿ "ಬ್ರಾಹ್ಮಣೋತ್ತಮಾ! ಕೃಪನ ಅನುಮತಿಯನ್ನು ಪಡೆದು ಬಂದು ನಿನ್ನ ಜೀವಿತಕಾಲ ಪರ್ಯಂತವೂ ನಮ್ಮಲ್ಲಿ ನೀವು ಭೋಜನವನ್ನು ಹೊಂದಬಹುದು" ಎಂದನು. ಅದಕ್ಕೆ ದ್ರೋಣನು ನಗುತ್ತ "ಇದೋ! ಈ ಒಂದು ಹಿಡಿ ಹುಲ್ಲನ್ನು ಅಸ್ತ್ರಮಂತ್ರದಿಂದ ಮಂತ್ರಿಸಿರುವೆನು. ಇವುಗಳ ಶಕ್ತಿಯನ್ನು ನೋಡಿರಿ. ಇದರಲ್ಲಿರುವ ಶಕ್ತಿಯು ಬೇರೆ ಯಾವ ಅಸ್ತ್ರಗಳಲ್ಲಿಯೂ ಇಲ್ಲ. ಒಂದು ದರ್ಭೆಯನ್ನು ಚೆಂಡಿಗೆ ಚುಚ್ಚಿ, ಆ ದರ್ಭೆಗೆ ಇನ್ನೊಂದು ದರ್ಭೆಯನ್ನೂ, ಅದಕ್ಕೆ ಮತ್ತೊಂದು ದರ್ಭೆಯನ್ನೂ ಸೇರಿಸುವೆನು. ಹೀಗೆಯೇ ಚೆಂಡಿರುವ ಪ್ರದೇಶದಿಂದ ಹಿಡಿದು ಮೇಲಿನವರೆಗೂ ದರ್ಭೆಗಳನ್ನು ಸೇರಿಸುತ್ತಾ ಬಂದು, ಈ ದರ್ಭೆಯ ಆಧಾರದಿಂದಲೇ ಚಂಡನ್ನು ಮೇಲಕ್ಕೆತ್ತುವೆನು" ಎಂದನು. ಆಮೇಲೆ ದ್ರೋಣನು ತಾನು ಹೇಳಿದಂತೆಯೇ ಎಲ್ಲವನ್ನೂ ಮಾಡಿದನು. ಅದನ್ನು ನೋಡಿ ಆ ಕುಮಾರರಿಗೆ ಆಶ್ಚರ್ಯದಿಂದ ಕಣ್ಣುಗಳು ಅರಳಿದುವು. ಅತನೊಡನೆ "ಬ್ರಹ್ಮರ್ಷೀ! ಉಂಗುರವನ್ನೂ ಮೇಲಕ್ಕೆತ್ತು" ಎಂದರು. ಆಗ ದ್ರೋಣನು ಬಿಲ್ಲಿನಲ್ಲಿ ಅಂಬನ್ನು ಸೇರಿಸಿ, ಅದನ್ನು ಬಿಟ್ಟು, ಉಂಗುರವನ್ನು ಚುಚ್ಚಿ ಅದನ್ನು ಮೇಲಕ್ಕೆತ್ತಿ ಆ ಉಂಗುರವನ್ನೂ ಕೊಟ್ಟನು. ಆಗ ಆ ಕುಮಾರರು "ಬ್ರಾಹ್ಮಣಶ್ರೇಷ್ಠಾ! ನಿನಗೆ ನಮ್ಮ ವಂದನವು. ಇಂತಹ ಶಕ್ತಿಯು ಬೇರೆ ಯಾರಲ್ಲಿಯೂ ಇಲ್ಲ. ನೀನು ಯಾರು? ಮತ್ತು ಯಾರ ಮಗನು! ನಮ್ಮಿಂದ ನಿನಗೆ ಆಗತಕ್ಕ ಉಪಕಾರವೇನು?" ಎಂದು ಕೇಳಿದರು. ಆಗ ದ್ರೋಣನು ರಾಜಕುಮಾರರನ್ನು ನೋಡಿ "ನನ್ನ

* ಮೊದಲು ಚೆಂಡೊಂದು ಬಿದ್ದಿತೆಂದೂ, ದ್ರೋಣನು ತನ್ನ ಚಾತುರ್ಯವನ್ನು ತೋರಿಸಲು, ತನ್ನ ಉಂಗುರವನ್ನೂ ಹಾಕಿ ಎರಡನ್ನೂ ಮೇಲಕ್ಕೆತ್ತಿದುದಾಗಿ ಹೇಳುವರು.

ಆ ಕುಮಾರರನ್ನು ನೋಡಿ ಮುಗುಳ್ನಗೆಯಿಂದ "ನಿಮ್ಮ ಕ್ಷತ್ರಿಯಬಲವೂ, ನಿಮ್ಮ ಅಸ್ತ್ರಚಾತುರ್ಯವೂ ಇಷ್ಟೇಯೋ ? ಇದೂ ಒಂದು ನಿಪುಣತೆಯೋ ? ಭರತವಂಶದಲ್ಲಿ ಹುಟ್ಟಿದ ನೀವು (ಬಾವಿಯಿಂದ) ಒಂದು *ಚಂಡನ್ನು ಎತ್ತಲಾರದೆ ಹೋದಿರಾ? ನೀವು ನನಗೆ ಭೋಜನಮಾಡಿಸಿದರೆ, ನಿಮ್ಮ ಚಂಡನ್ನೂ, ಉಂಗುರವನ್ನೂ ಈ ಕಡ್ಡಿಗಳಿಂದಲೇ ಮೇಲಕ್ಕೆತ್ತುವೆನು" ಎಂದನು. ಒಡನೆಯೇ ಅವರಲ್ಲಿ ಕುಂತೀಪುತ್ರನಾದ ಯುಧಿಷ್ಠಿರನು ದ್ರೋಣನನ್ನು ನೋಡಿ "ಬ್ರಾಹ್ಮಣೋತ್ತಮಾ ! ಕೃಪನ ಅನುಮತಿಯನ್ನು ಪಡೆದು ಬಂದು ನಿನ್ನ ಜೀವಿತಕಾಲ ಪರ್ಯಂತವೂ ನಮ್ಮಲ್ಲಿ ನೀವು ಭೋಜನವನ್ನು ಹೊಂದಬಹುದು" ಎಂದನು. ಅದಕ್ಕೆ ದ್ರೋಣನು ನಗುತ್ತ "ಇದೋ ! ಈ ಒಂದು ಹಿಡಿ ಹುಲ್ಲನ್ನು ಅಸ್ತ್ರಮಂತ್ರದಿಂದ ಮಂತ್ರಿಸಿರುವೆನು. ಇವುಗಳ ಶಕ್ತಿಯನ್ನು ನೋಡಿರಿ. ಇದರಲ್ಲಿರುವ ಶಕ್ತಿಯು ಬೇರೆ ಯಾವ ಅಸ್ತ್ರಗಳಲ್ಲಿಯೂ ಇಲ್ಲ. ಒಂದು ದರ್ಭೆಯನ್ನು ಚೆಂಡಿಗೆ ಚುಚ್ಚಿ, ಆ ದರ್ಭೆಗೆ ಇನ್ನೊಂದು ದರ್ಭೆಯನ್ನೂ, ಅದಕ್ಕೆ ಮತ್ತೊಂದು ದರ್ಭೆಯನ್ನೂ ಸೇರಿಸುವೆನು. ಹೀಗೆಯೇ ಚೆಂಡಿರುವ ಪ್ರದೇಶದಿಂದ ಹಿಡಿದು ಮೇಲಿನವರೆಗೂ ದರ್ಭೆಗಳನ್ನು ಸೇರಿಸುತ್ತಾ ಬಂದು, ಈ ದರ್ಭೆಯ ಆಧಾರದಿಂದಲೇ ಚಂಡನ್ನು ಮೇಲಕ್ಕೆತ್ತುವೆನು" ಎಂದನು. ಆಮೇಲೆ ದ್ರೋಣನು ತಾನು ಹೇಳಿದಂತೆಯೇ ಎಲ್ಲವನ್ನೂ ಮಾಡಿದನು. ಅದನ್ನು ನೋಡಿ ಆ ಕುಮಾರರಿಗೆ ಆಶ್ಚರ್ಯದಿಂದ ಕಣ್ಣುಗಳು ಅರಳಿದುವು. ಅತನೊಡನೆ "ಬ್ರಹ್ಮರ್ಷೀ ! ಉಂಗುರವನ್ನೂ ಮೇಲಕ್ಕೆತ್ತು" ಎಂದರು. ಆಗ ದ್ರೋಣನು ಬಿಲ್ಲಿನಲ್ಲಿ ಅಂಬನ್ನು ಸೇರಿಸಿ, ಅದನ್ನು ಬಿಟ್ಟು, ಉಂಗುರವನ್ನು ಚುಚ್ಚಿ ಅದನ್ನು ಮೇಲಕ್ಕೆತ್ತಿ ಆ ಉಂಗುರವನ್ನೂ ಕೊಟ್ಟನು. ಆಗ ಆ ಕುಮಾರರು "ಬ್ರಾಹ್ಮಣಶ್ರೇಷ್ಠಾ ! ನಿನಗೆ ನಮ್ಮ ವಂದನವು. ಇಂತಹ ಶಕ್ತಿಯು ಬೇರೆ ಯಾರಲ್ಲಿಯೂ ಇಲ್ಲ. ನೀನು ಯಾರು ? ಮತ್ತು ಯಾರ ಮಗನು ! ನಮ್ಮಿಂದ ನಿನಗೆ ಆಗತಕ್ಕ ಉಪಕಾರವೇನು ?" ಎಂದು ಕೇಳಿದರು. ಆಗ ದ್ರೋಣನು ರಾಜಕುಮಾರರನ್ನು ನೋಡಿ "ನನ್ನ

* ಮೊದಲು ಚೆಂಡೊಂದು ಬಿದ್ದಿತೆಂದೂ, ದ್ರೋಣನು ತನ್ನ ಚಾತುರ್ಯವನ್ನು ತೋರಿಸಲು, ತನ್ನ ಉಂಗುರವನ್ನೂ ಹಾಕಿ ಎರಡನ್ನೂ ಮೇಲಕ್ಕೆತ್ತಿದುದಾಗಿ ಹೇಳುವರು.

ಅಪೇಕ್ಷೆಯಿಂದ ಕೀರ್ತಿಮತಿಯೂ, ಪ್ರಾಜ್ಞಳೂ, ಮಹಾವ್ರತನಿಷ್ಠಳೂ ಆದ ಶರದ್ವಂತನ ಮಗಳನ್ನು ಮದುವೆಯಾದೆನು. ಆಕೆಯು ಅಗ್ನಿಹೋತ್ರದಲ್ಲಿಯೂ, ಯಜ್ಞದಲ್ಲಿಯೂ, ವ್ರತನಿಯಮಗಳಲ್ಲಿಯೂ ವಿಶೇಷ ಆಸಕ್ತಳು. ಆಕೆಯು ನನ್ನಿಂದ ಅಶ್ವತ್ಥಾಮನೆಂಬ ಔರಸಪುತ್ರನನ್ನು ಪಡೆದಳು. ಆತನ ಪರಾಕ್ರಮಗಳೂ, ಕೃತ್ಯಗಳೂ ಅದ್ಭುತಗಳಾಗಿವೆ. ಆತನು ಸೂರ್ಯನಿಗೆ ಸಮಾನವಾದ ದೇಹಕಾಂತಿಯುಳ್ಳವನು. ಭರದ್ವಾಜನು ನನ್ನನ್ನು ಪಡೆದು ಎಷ್ಟು ಸಂತುಷ್ಟನಾದನೋ, ಅಶ್ವತ್ಥಾಮನನ್ನು ಪಡೆದು ನಾನೂ ಅಷ್ಟೇ ಸಂತುಷ್ಟನಾದೆನು. ಒಮ್ಮೆ ಆವನ ಸ್ನೇಹಿತರಾದ ಶ್ರೀಮಂತರ ಮಕ್ಕಳು ಹಾಲುಕುಡಿಯುತ್ತಿರುವುದನ್ನು ನೋಡಿ, ಚಿಕ್ಕ ಮಗುವಾಗಿದ್ದ ಅಶ್ವತ್ಥಾಮನು ನನ್ನಲ್ಲಿಗೆ ಬಂದು ತನಗೂ ಹಾಲುಬೇಕೆಂದು ಅಳಲಾರಂಭಿಸಿದನು. ಅದು ನನಗೆ ಬಹಳ ಸಂಕಟಕರವಾಗಿ ಮನಸ್ಸನ್ನು ಕೊರಗಿಸಿತು. ಆದರೆ ಸ್ವಧರ್ಮಸ್ನಾತಕನನ್ನು (ವಿದ್ಯೆಯಲ್ಲಿಯೂ ತಪಸ್ಸಿನಲ್ಲಿಯೂ ಪ್ರವೀಣನಾದವನು) ಕಷ್ಟಪಡಿಸಬಾರದೆಂದು ಮನಸ್ಸಿನಲ್ಲಿ ನಿಶ್ಚಯಿಸಿದೆನು. ಅಲ್ಪಗೋಧನವನ್ನು ಹೊಂದಿರುವ ಸ್ವಧರ್ಮನಿರತನ ಬಳಿಯಲ್ಲಿ ಒಂದು ಗೋವನ್ನು ಯಾಚಿಸಿದರೂ, ಆತನಿಗೆ ಸ್ವಧರ್ಮಲೋಪದಿಂದ ಕಷ್ಟವಾಗುವುದರಿಂದ ಬಹು ಗೋಧನವಿರುವವನಿಂದಲೇ ಗೋವನ್ನು ಪಡೆಯಬೇಕೆಂದು ಆಲೋಚಿಸಿದೆನು. ಪರಿಶುದ್ಧವಾದ ಇಂತಹ ದಾನವನ್ನು ಧರ್ಮರೀತಿಯಲ್ಲಿ ಸಂಪಾದಿಸಬೇಕೆಂದೆಣಿಸಿ, ಒಂದು ಕೊನೆಯಿಂದ ಮತ್ತೊಂದು ಕೊನೆಯವರೆಗೂ ಮೂಲೆಮೂಲೆಯಲ್ಲಿ ದೇಶದೇಶಗಳೊಳಗೆಲ್ಲ ಹುಡುಕಿ ನೋಡಿದೆನು. ಆದರೆ ನನಗೆ ಹಾಲುಕರೆಯುತ್ತಿರುವ ಹಸುವು ಒಂದಾದರೂ ದೊರಕದೆ ವಿಫಲಪ್ರಯತ್ನನಾದೆನು. ಆಮೇಲೆ ನನ್ನ ಕುಮಾರನಿಗೆ ಅಕ್ಕಿಯ ಹಿಟ್ಟನ್ನು ಕಲೆಸಿದ ನೀರನ್ನೇ ಹಾಲೆಂದು ಹೇಳಿ ಕೊಟ್ಟೆನು. ನಮ್ಮಂತಹ ಬಡವರು ಇನ್ನೇನು ಮಾಡಲಾದೀತು? ಅವನು ಇನ್ನೂ ಚಿಕ್ಕ ಮಗುವಾದುದರಿಂದ, ಆ ಹಿಟ್ಟುಕಲಸಿದ ನೀರನ್ನೇ ಕುಡಿದು, ನಿಜವನ್ನು ತಿಳಿಯದೆ ಅದರಿಂದಲೇ ತೃಪ್ತನಾಗಿ “ನಾನೂ ಹಾಲನ್ನು ಕುಡಿದು ಬಂದೆನು” ಎಂದು ಸಂತೋಷದಿಂದ ತನ್ನ ಸಂಗಡಿಗರಾದ ಧನಿಕರ ಮಕ್ಕಳ ನಡುವೆ ಕುಣಿದಾಡುವುದಕ್ಕೆ ಪ್ರಾರಂಭಿಸಿದನು. ಆತನು ಹಾಗೆ ನರ್ತನ

ಮಾಡುತ್ತಿರುವಾಗ, ಅವನನ್ನು ಸುತ್ತಿಮುತ್ತಿ ಬಾಲಕರು ಪರಿಹಾಸಮಾಡು ತಿದ್ದುದನ್ನು ನೋಡಿ, ನನ್ನ ಮನಸ್ಸಿಗೆ ಬಹಳ ಕಷ್ಟವಾಯಿತು. ಜನರು ಆಗಾಗ ನನ್ನಿದಿರಾಗಿಯೇ "ದ್ರೋಣನು ಕೇವಲದರಿದ್ರನು. ಆತನಿಗೆ ಧನವೆಲ್ಲಿಯದು? ಆತನ ಮಗನಿಗೆ ಹಾಲಿನಲ್ಲಿ ಅತ್ಯಾಸೆ! ಅಕ್ಕಿಯ ಹಿಟ್ಟನ್ನು ಕಲಕಿದ ನೀರನ್ನು ಕುಡಿದು ಬಂದು 'ತಾನೂ ಹಾಲನ್ನು ಕುಡಿದೆನೆಂದು' ಸಂತೋಷದಿಂದ ನರ್ತನಮಾಡುತ್ತಿರುವನು" ಎಂದು ಗುಸಗುಸನೆ ಮಾತನಾಡುತಿದ್ದರು. ಅದನ್ನೂ ನಾನು ಕಿವಿಯಾರೆ ಕೇಳಿದೆನು. ಅದನ್ನು ಕೇಳಿ ನನ್ನ ಬುದ್ಧಿಯು ಕದಲಿತು. ನಾನು ನನ್ನನ್ನೇ ನಿಂದಿಸಿಕೊಳ್ಳುತ್ತಾ "ನಾನು ಬ್ರಾಹ್ಮಣರಿಂದ ತಿರಸ್ಕೃತನೂ, ನಿಂದಿತನೂ ಆದರೂ ಅವರ ಮಧ್ಯದಲ್ಲಿಯೇ ವಾಸಿಸುವೆನೇಹೊರತು, ದ್ರವ್ಯಾಪೇಕ್ಷೆಯಿಂದ ಇತರರಲ್ಲಿ ನೀಚವಾದ ದಾಸ್ಯವೃತ್ತಿಯನ್ನು ಎಂದಿಗೂ ಮಾಡುವುದಿಲ್ಲವೆಂದು ತೀರ್ಮಾನಿಸಿಕೊಂಡೆನು. ಭೀಷ್ಮಾ! ಈ ತೀರ್ಮಾನದಮೇಲೆ ನಾನು ನನ್ನ ಹೆಂಡತಿಯನ್ನೂ, ಮಗನನ್ನೂ ಕರೆದುಕೊಂಡು ನನ್ನ ಪೂರ್ವಸ್ನೇಹಿತನಾದ ದ್ರುಪದನಬಳಿಗೆ ಹೋದೆನು. ಆತನಿಗೆ ಪಟ್ಟಾಭಿಷೇಕವಾಯಿತೆಂದು ಕೇಳಿ, ಹಿಂದೆ ಅವನಲ್ಲಿ ನನಗಿದ್ದ ಸ್ನೇಹವನ್ನೂ, ಆತನ ಮಾತುಗಳನ್ನೂ ಜ್ಞಾಪಿಸಿಕೊಂಡು, ಅದರಿಂದ ನಾನು ಕೃತಕೃತ್ಯನಾಗಬಹುದೆಂಬ ಆಲೋಚನೆ ದಿಂದ ಆ ರಾಜನಲ್ಲಿಗೆ ಹೋದೆನು. ಅಲ್ಲಿ ಆ ರಾಜನಿಗೆ ನನ್ನ ಪೂರ್ವಸ್ನೇಹವನ್ನು ಸೂಚಿಸಿ "ನಾನು ನಿನ್ನ ಸ್ನೇಹಿತನೆಂಬುದು ನೆನಪಿನಲ್ಲಿದೆಯೆ?" ಎಂದೆನು. ಸ್ನೇಹಿತನನ್ನು ಕಾಣುವಂತೆಯೇ ಆತನನ್ನು ಬಹಳ ಸಲಿಗೆಯಿಂದ ಕಂಡೆನು. ಆತನು ಹಿಂದೆ ನನ್ನನ್ನು ಯಾವಾಗಲೂ ನೋಡಿಲ್ಲದವನಂತೆ ನಗುತ್ತಾ "ಬ್ರಾಹ್ಮಣಾ! ನಿನಗೆ ಬುದ್ಧಿಯು ಸರಿಯಿಲ್ಲವೆಂದು ತೋರುತ್ತಿದೆ. ಆದುದರಿಂದಲೇ ರಾಜನಾದ ನನ್ನನ್ನು ನೋಡಿ ನೀನು ನನಗೆ ಸ್ನೇಹಿತನೆಂದು ಬೊಗುಳುತ್ತಿರುವೆ! ಲೋಕದಲ್ಲಿ ಸ್ನೇಹವು ಮನುಷ್ಯನು ಬೆಳೆಯುತ್ತ ಬಂದಂತೆಲ್ಲಾ ಕಾಲಕ್ರಮದಲ್ಲಿ ಮಲಿನವಾಗುತ್ತಾ ಬರುವುದು. ಹಿಂದೆ ಯಾವುದೋ ಕಾರಣದಿಂದ ನಿನಗೂ ನನಗೂ ಸ್ನೇಹವಾಗಿರಬಹುದು. ಸಮಾನತ್ವದಿಂದ ಸ್ನೇಹವುಂಟಾಗುವುದು. ವಿಷಮತ್ವದಿಂದ ಸ್ನೇಹವು ಹೋಗುವುದು. ಲೋಕದಲ್ಲಿ ಸ್ನೇಹವು ಯಾವನಿಗೂ

ಯಾವ ಕಾಲದಲ್ಲಿಯೂ ಸ್ಥಿರವಾಗಿ ನಿಲ್ಲತಕ್ಕುದಲ್ಲ. ಕೆಲವುವೇಳೆ ಕಾಮವು ಸ್ನೇಹವನ್ನು ಕೆಡಿಸುವುದು. ಕೋಪವು ಸ್ನೇಹವನ್ನು ನೀಗಿಸುವುದು. ಯಾವಾಗಲೋ ಯಾವುದೋ ಒಂದು ಕಾರಣದಿಂದ ಘಟಿಸಿ, ಈಗ ಚದರಿಹೋದ ಹಳೇ ಸ್ನೇಹವನ್ನು ನೀನೇಕೆ ಕೊಂಡಾಡುತ್ತಿರುವೆ? ದರಿದ್ರನಿಗೂ ಧನವಂತನಿಗೂ, ಮೂರ್ಖನಿಗೂ ವಿದ್ವಾಂಸನಿಗೂ, ಹೇಡಿಗೂ ಶೂರನಿಗೂ ಎಂದಿಗೂ ಸ್ನೇಹವಿರದು. ಯಾವಾಗಲೋ ಕಳೆದುಹೋದ ಸ್ನೇಹವನ್ನು ಮುಂದಿಟ್ಟುಕೊಂಡು ನನ್ನನ್ನೇಕೆ ಮಾತನಾಡಿಸುವೆ? ತಿಳಿಗೇಡಿ! ಮಹೋನ್ನತಪದವಿಯಲ್ಲಿರುವ ನನ್ನಂತಹ ರಾಜನಿಗೆ, ರೂಪವೂ ಸಂಪತ್ತೂ ಇಲ್ಲದ ನಿನ್ನಂತಹ ಬಡಮನುಷ್ಯನೊಡನೆ ಸ್ನೇಹವು ಎಂದಿಗೂ ಇರದು. ಅಶ್ರೋತ್ರಿಯನು ಶ್ರೋತ್ರಿಯನಿಗೂ, ರಥವಿಲ್ಲದವನು ರಥಿಕನಿಗೂ, ರಾಜನಲ್ಲದವನು ರಾಜನಿಗೂ ಸ್ನೇಹಿತನಾಗಲಾರನು. ಯಾವ ಕಾಲದ ಸ್ನೇಹವನ್ನೋ ನೆನೆಸಿ ಈಗ ನೀನು ಯಾವುವನ್ನೋ ಕೋರುತ್ತಿರುವೆಯೇಕೆ? ನಾನು ರಾಜ್ಯವಿಭಾಗವನ್ನು ಕುರಿತು ನಿನ್ನೊಡನೆ ಪ್ರತಿಜ್ಞೆಮಾಡಿರುದೆಲ್ಲ ಸುಳ್ಳು! ಅದೇನೋ ನನಗೆ ತಿಳಿಯದು. ಬ್ರಾಹ್ಮಣಾ! ಬೇಕಾದರೆ ಒಂದು ರಾತ್ರಿಗೆ ಮಾತ್ರ ನಿನಗೆ ಬೇಕಾದಷ್ಟು ಭೋಜನವನ್ನು ಮಾಡಿಸುವೆನು. ತಿಂದು ಹೋಗು" ಎಂದನು. ಆತನು ಹೀಗೆ ಹೇಳಿದೊಡನೆ ನಾನು ಸ್ವಲ್ಪಕಾಲದೊಳಗಾಗಿ ನೆರವೇರಿಸಬಹುದಾದ ಕಾರ್ಯವೊಂದನ್ನು ಪ್ರತಿಜ್ಞೆಮಾಡಿ, ಒಡನೆಯೇ ನನ್ನ ಹೆಂಡತಿಯೊಡನೆ ಹೊರಟು ಬಂದೆನು. ಭೀಷ್ಮಾ! ಹೀಗೆ ದ್ರುಪದನಮೇಲೆ ಕೋಪದಿಂದ ನಾನು ಗುಣಶಾಲಿಗಳಾದ ಶಿಷ್ಯರಿಗಾಗಿ ಈ ಕೌರವರಾಜ್ಯಕ್ಕೆ ಬಂದಿರುವೆನು. ನಿನಗೆ ನನ್ನಿಂದ ಆಗಬೇಕಾದುದೇನು?" ಎಂದನು. ಆಗ ಭೀಷ್ಮನು ದ್ರೋಣನನ್ನು ನೋಡಿ "ನಿನ್ನ ಬಿಲ್ಲಿನ ನಾಣನ್ನು ಇಳಿಸು. ಉತ್ತಮವಾದ ಅಸ್ತ್ರವಿದ್ಯೆಯನ್ನು ಕಲಿಸು. ಕೌರವರಿಂದ ಪೂಜಿತನಾಗಿ ಅವರ ಗೃಹದಲ್ಲಿ ಸಂತೋಷದಿಂದ ಕಾಲಕಳೆಯುತ್ತಾ ಸಕಲ ಭೋಗಗಳನ್ನೂ ಇಷ್ಟಗಳನ್ನೂ ಪಡೆಯುವವನಾಗು. ಕೌರವರಿಗಿರುವ ಧನ, ರಾಜ್ಯ, ದೇಶಗಳೆಲ್ಲಕ್ಕೂ ನೀನೇ ಅಧಿಪತಿ. ಎಲ್ಲರೂ ನಿನ್ನ ಆಜ್ಞಾನುವರ್ತಿಗಳು. ಬ್ರಾಹ್ಮಣೋತ್ತಮಾ! ನೀನು ಅಪೇಕ್ಷಿಸಿದುದೆಲ್ಲವೂ ನೆರವೇರಿದಂತೆಯೇ ತಿಳಿ. ಬ್ರಹ್ಮರ್ಷೀ!

ನೀನು ನಮ್ಮ ಭಾಗ್ಯವಿಶೇಷದಿಂದ ಇಲ್ಲಿಗೆ ಬಂದು ನಮ್ಮಲ್ಲಿ ವಿಶೇಷ ಅನುಗ್ರಹವನ್ನೂ ಸೂಚಿಸಿದೆ" ಎಂದನು.

ಇದು ನೂರ ನಾಲ್ವತ್ತೊಂದನೆಯ ಅಧ್ಯಾಯವು.

ದ್ರೋಣನು ಕೌರವಪಾಂಡವರಿಗೆ ಧನುರ್ವಿದ್ಯೆಯನ್ನು ಕಲಿಸಿದುದು. ಬೇಟೆಗಾಗಿ ಹೋದ ಪಾಂಡವರು ಏಕಲವ್ಯನ ಚಮತ್ಕಾರವನ್ನು ನೋಡಿ, ಆ ವಿಷಯವನ್ನು ದ್ರೋಣನಿಗೆ ತಿಳಿಸಲು ಆತನು ಏಕಲವ್ಯನ ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ ಪಡೆದುದು. ದ್ರೋಣನು ಶಿಷ್ಯರನ್ನು ಪರೀಕ್ಷಿಸಿದುದು.

ಭೀಷ್ಮನು ದ್ರೋಣನನ್ನು ಪಾಂಡವರಿಗೆ ಗುರುವನ್ನಾಗಿ ಅಂಗೀಕರಿಸಿ, ಪಾಂಡವ ಕೌರವರೆಲ್ಲರನ್ನೂ ದ್ರೋಣನ ಬಳಿಗೆ ಕರೆತಂದು "ಆಚಾರ್ಯ! ಇವರು ನಿನ್ನ ಶಿಷ್ಯರು" ಎಂದು ಹೇಳಿ, ಹಲವು ಬಗೆಯ ದಾನಗಳೊಡನೆ ಶಾಸ್ತ್ರರೀತಿಯಿಂದ ಅವರನ್ನು ದ್ರೋಣನ ವಶಕ್ಕೆ ಒಪ್ಪಿಸಿದಾಗ, ದ್ರೋಣನು ಭೀಷ್ಮನನ್ನು ಕುರಿತು "ಕುರುತಿಲಕಾ! ಕೃಪಾಚಾರ್ಯನು ಸಕಲ ಶಸ್ತ್ರಗಳನ್ನೂ ತಿಳಿದವನು. ಮಹಾಪ್ರಾಜ್ಞನು. ಎಲ್ಲರ ಗೌರವಕ್ಕೂ ಪಾತ್ರನಾದವನು. ಇದುವರೆಗೆ ಆತನು ಗುರುವಾಗಿದ್ದನು. ಈಗ ನಾನು ಆ ಸ್ಥಾನಕ್ಕೆ ಬಂದರೆ, ಅವನ ಮನಸ್ಸಿನಲ್ಲಿ ಕಿಂಕೃತಿಯುಂಟಾಗಬಹುದು. ಆದುದರಿಂದ ನಾನು ನಿಮ್ಮಿಂದ ಸ್ವಲ್ಪ ಧನವನ್ನು ಯಾಚಿಸಿ ತೆಗೆದುಕೊಂಡು ಸಂತೋಷದಿಂದ ನಾನು ಬಂದ ದಾರಿಯನ್ನೇ ಹಿಡಿದು ಹಿಂತಿರುಗಿ ನನ್ನ ಆಶ್ರಮಕ್ಕೆ ಹೋಗುವೆನು" ಎಂದನು. ಅದಕ್ಕಾ ಭೀಷ್ಮನು "ಆಚಾರ್ಯ! ಕೃಪನ ವಿಷಯವಾಗಿ ನೀನು ಯೋಚಿಸಬೇಡ! ಆತನು ನನ್ನ ಪೋಷಣೆಗೂ, ಪೂಜೆಗೂ ಅರ್ಹನೇ. ಅವನೂ ಇರಲಿ! ನೀನೂ ನನ್ನ ಮುಮ್ಮಕ್ಕಳಿಗೆ ಗುರುವಾಗಿರು. ನೀನು ಆಚಾರ್ಯನಾರಬೇಕೆಂಬುದು ನನ್ನ ಮತವು. ಈ ಕುಮಾರರನ್ನು ಸ್ವೀಕರಿಸು. ಇವರನ್ನು ಯಾವಾಗಲೂ ನಿನ್ನ ಬಳಿಯಲ್ಲಿಟ್ಟುಕೊಂಡು ಅಸ್ತ್ರವಿದ್ಯಾನಿಪುಣರನ್ನಾಗಿ ಮಾಡು"

ಎಂದನು. ಮಹಾಪರಾಕ್ರಮಿಯಾದ ಆ ದ್ರೋಣನು ಭೀಷ್ಮನಿಂದ ಹಾಗೆ ಸತ್ಕಾರವನ್ನೂ, ಅರ್ಘ್ಯಪಾದ್ಯಾದಿಗಳನ್ನೂ ಸ್ವೀಕರಿಸಿ, ವಿಶ್ರಾಂತಿಯನ್ನು ತೆಗೆದುಕೊಂಡನು. ಭೀಷ್ಮನು ತನ್ನ ಮೊಮ್ಮಕ್ಕಳನ್ನು ವಿವಿಧ ಸತ್ಕಾರಗಳೊಡನೆ ಆತನಿಗೆ ಶಿಷ್ಯರನ್ನಾಗಿ ಒಪ್ಪಿಸಿದಮೇಲೆ, ಸಕಲ ಪದಾರ್ಥಗಳಿಂದಲೂ, ಧನಧಾನ್ಯಗಳಿಂದಲೂ ತುಂಬಿದ ಒಂದು ಗೃಹವನ್ನು ದ್ರೋಣನಿಗಾಗಿ ಕೊಟ್ಟನು. ದ್ರೋಣನೂ ಸಂತೋಷದಿಂದ ಆ ಪಾಂಡವಕೌರವರನ್ನೆಲ್ಲ ತನ್ನ ಶಿಷ್ಯರನ್ನಾಗಿ ಅಂಗೀಕರಿಸಿದನು. ದ್ರೋಣನು ಅವರೆಲ್ಲರಿಗೂ ವಿದ್ಯಾಭ್ಯಾಸಮಾಡಿಸುತಿದ್ದಾಗ, ಒಮ್ಮೆ ತಾನು ಏಕಾಕಿಯಾಗಿದ್ದ ಸಮಯದಲ್ಲಿ ಬಂದು ತನ್ನ ಪಾದಗಳಿಗೆ ನಮಸ್ಕರಿಸಿದ ಶಿಷ್ಯರನ್ನು ಕುರಿತು 'ಪುಣ್ಯಾತ್ಮರೇ! ನಾನು ಉದ್ದೇಶಿಸಿದ ಕಾರ್ಯವೊಂದು ನನ್ನ ಹೃದಯದಲ್ಲಿ ನೆಲೆಗೊಂಡಿದೆ. ನೀವು ಅಸ್ತ್ರವಿದ್ಯೆಯಲ್ಲಿ ಪಾರಂಗತರಾದಮೇಲೆ, ನನಗೆ ಆ ಅಭಿಲಾಷೆಯನ್ನು ನೆರವೇರಿಸಬೇಕು. ಆ ವಿಷಯದಲ್ಲಿ ನೀವು ಈಗಲೇ ವಾಗ್ದಾನಮಾಡಿರಿ' ಎಂದನು. ಜನಮೇಜಯಾ! ಅದನ್ನು ಕೇಳಿ ಕೌರವರು ಮೌನದಿಂದಿದ್ದರು. ಅರ್ಜುನನುಮಾತ್ರ ತಾನು ಆ ಕೋರಿಕೆಯೇನಿದ್ದರೂ ನೆರವೇರಿಸುವುದಾಗಿ ಪ್ರತಿಜ್ಞೆಮಾಡಿದನು. ಒಡನೆಯೇ ದ್ರೋಣನು ಹಲವುಬಾರಿ ಅರ್ಜುನನ ಶಿರಸ್ಸನ್ನು ಆಘ್ರಾಣಿಸಿ, ಪ್ರೀತಿಯಿಂದಪ್ಪಿಕೊಂಡು, ಆನಂದಬಾಷ್ಪವನ್ನು ಸುರಿಸಿದನು. ಆಮೇಲೆ ಅಶ್ವತ್ಥಾಮನನ್ನು ಕರೆದು "ಕುಮಾರಾ! ಈ ಅರ್ಜುನನು ನಿನಗೆ ಸ್ನೇಹಿತನೆಂದು ತಿಳಿ. ಈತನನ್ನು ನಿನ್ನ ವಶಮಾಡುವೆನು. ಪ್ರತಿಗ್ರಹಿಸು" ಎಂದನು. ಪಾಂಡುಕುಮಾರನಾದ ಅರ್ಜುನನೂ ಅದಕ್ಕೆ ಒಪ್ಪಿ, ಅಶ್ವತ್ಥಾಮನನ್ನು ಅಪ್ಪಿಕೊಂಡು, ದ್ರೋಣನನ್ನು ಕುರಿತು 'ಬ್ರಾಹ್ಮಣೋತ್ತಮಾ! ಇದುಮೊದಲು ಧರ್ಮಾನುಸಾರವಾಗಿ ನಿನ್ನ ಅಧೀನದಲ್ಲಿರುವೆನು. ನಾನು ಶಿಷ್ಯನು. ನಿನ್ನ ಅನುಗ್ರಹದಿಂದ ಬದುಕುವೆನು' ಎಂದು ಹೇಳಿ ಒಡನೆಯೇ ಆತನ ಪಾದಗಳನ್ನು ಹಿಡಿದನು. ಆಮೇಲೆ ದ್ರೋಣನು ಪಾಂಡವರಿಗೆ ದಿವ್ಯವೂ, ಅಮಾನುಷವೂ ಆದ ಹಲವು ದಿವ್ಯಾಸ್ತ್ರಗಳನ್ನು ಕಲಿಸಿದನು. ಇಷ್ಟರಲ್ಲಿಯೇ ಯಾದವರೂ, ಇನ್ನೂ ಬೇರೆಬೇರೆ ಅನೇಕ ದೇಶಗಳ ರಾಜರೂ, ರಾಜಕುಮಾರರೂ, ಅಸ್ತ್ರವಿದ್ಯೆಯನ್ನು ಕಲಿಯುವುದಕ್ಕಾಗಿ ಆ ದ್ರೋಣನ ಬಳಿಗೆ ಬಂದು ಸೇರಿದರು.

ಸೂತಪುತ್ರನಾದ ಕರ್ಣನೂ ಬಂದು ಆ ದ್ರೋಣನನ್ನೇ ಆಶ್ರಯಿಸಿದನು. ಆ ಕರ್ಣನು ಮೊದಲಿಂದಲೂ ಅರ್ಜುನನನ್ನು ದ್ವೇಷಿಸುತ್ತ, ದುರ್ಯೋಧನನೊಡನೆ ಸೇರಿ ಪಾಂಡವರನ್ನು ನಿರಾಕರಿಸುತ್ತ ಬಂದವನು. ಆ ಹಟದಿಂದಲೇ ಅವನು ಅರ್ಜುನನಿಗೆ ಸಮಾನನಾಗಿ ಧನುರ್ವೇದವನ್ನು ಅಭ್ಯಾಸಮಾಡಬೇಕೆಂಬ ಆಶೆಯಿಂದ ದ್ರೋಣನ ಬಳಿಗೆ ಬಂದುಸೇರಿದನು. ಅಸ್ತ್ರವಿದ್ಯೆಯಲ್ಲಿ ತನಗಿದ್ದ ಅಸಾಧಾರಣವಾದ ಆಸಕ್ತಿಯಿಂದ ಅರ್ಜುನನು ಯಾವಾಗಲೂ ತನ್ನ ಗುರುವಿನ ಸಾನ್ನಿಧ್ಯದಲ್ಲಿಯೇ ಇದ್ದು, ತನ್ನ ಭುಜಪರಾಕ್ರಮದಿಂದಲೂ, ಸಾಹಸದಿಂದಲೂ ಜೇರೆಯವರೆಲ್ಲರನ್ನೂ ಮೀರಿಸಿದನು. ದ್ರೋಣನು ತನ್ನ ಶಿಷ್ಯರೆಲ್ಲರಿಗೂ ಸಮಾನವಾದ ಶಿಕ್ಷಣವನ್ನು ಕೊಟ್ಟರೂ ತನ್ನ ಹಸ್ತಲಾಘವದಿಂದಲೂ, ಸಾಮರ್ಥ್ಯದಿಂದಲೂ ಅರ್ಜುನನು ತನ್ನ ಸಹಪಾಠಿಗಳೆಲ್ಲರನ್ನೂ ಮೀರಿಸಿದ್ದನು. ಇದನ್ನು ನೋಡಿ ದ್ರೋಣನು ಅರ್ಜುನನಿಗೆ ಯಾರೂ ಸಮಾನರಲ್ಲವೆಂದು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿಬಿಟ್ಟನು. ಹೀಗೆ ದ್ರೋಣನು ತನ್ನ ಶಿಷ್ಯರೆಲ್ಲರಿಗೂ ಬಾಣವಿದ್ಯೆಯನ್ನೂ, ಅಸ್ತ್ರವಿದ್ಯೆಯನ್ನೂ ಕಲಿಸುತ್ತಿದ್ದಾಗ, ಆಗಾಗ ನೀರನ್ನು ತರುವಂತೆ ತನ್ನ ಎಲ್ಲಾ ಶಿಷ್ಯರಿಗೆ ಒಂದೊಂದು ಕಮಂಡಲುವನ್ನು ಕೊಟ್ಟುಕಳುಹಿಸುತಿದ್ದನು. ಅವರಲ್ಲಿ ತನ್ನ ಮಗನಾದ ಅಶ್ವತ್ಥಾಮನಿಗೆಮಾತ್ರ ನೀರನ್ನು ಜಾಗ್ರತೆಯಾಗಿ ತುಂಬಿಕೊಂಡು ಬರಲು ಅನುಕೂಲಿಸುವಂತೆ ಅಗಲವಾದ ಬಾಯುಳ್ಳ ಒಂದು ಪಾತ್ರೆಯನ್ನು ಕೊಟ್ಟು, ಮುಂದಾಗಿ ಬಂದ ತನ್ನ ಮಗನಿಗೆ ಇತರ ಶಿಷ್ಯರು ಬರುವುದರೊಳಗಾಗಿ ಅಸ್ತ್ರವಿದ್ಯೆಯಲ್ಲಿ ಕೆಲಕೆಲವು ಉತ್ತಮವಾದ ರಹಸ್ಯವಿಷಯಗಳನ್ನು ಬೋಧಿಸುತಿದ್ದನು. ಅರ್ಜುನನು ಇದನ್ನು ಹೇಗೋ ತಿಳಿದುಕೊಂಡು, ಅದು ಮೊದಲು ತಾನಿದ್ದಲ್ಲಿಯೇ ವಾರುಣಾಸ್ತ್ರದಿಂದ ತನ್ನ ಕಮಂಡಲವನ್ನು ತುಂಬಿಕೊಂಡು ಆಚಾರ್ಯಪುತ್ರನಿಗೆ ಮೊದಲೇ ಗುರುಸಾನ್ನಿಧ್ಯಕ್ಕೆ ಬರುತಿದ್ದನು. ಹೀಗೆ ಮಹಾಮೇಧಾವಿಯೂ, ಅಸ್ತ್ರವಿದ್ಯೆಯಲ್ಲಿ ಅಗ್ರಗಣ್ಯನೂ ಆದ ಅರ್ಜುನನು ರಹಸ್ಯಗಳನ್ನು ಉಪದೇಶಿಸುವಾಗಲೂ ಆ ಆಚಾರ್ಯಪುತ್ರನೊಡನೆಯೇ ಇರುತಿದ್ದನು. ಅರ್ಜುನನು ಗುರುಶುಶ್ರೂಷೆಯಲ್ಲಿಯೂ ಅಧಿಕ ಪ್ರಯಾಸಪಡುತ್ತ, ಅಸ್ತ್ರಶಿಕ್ಷೆಯಲ್ಲಿಯೂ ವಿಶೇಷಾಸಕ್ತಿಯನ್ನಿಟ್ಟು, ದ್ರೋಣನ ಪ್ರೀತಿಗೆ ಪಾತ್ರನಾದನು.

ಹೀಗೆ ಅರ್ಜುನನು ಅಸ್ತ್ರವಿದ್ಯೆಗಳಿಗಾಗಿ ಯಾವಾಗಲೂ ಪ್ರಯಾಸಪಡುತ್ತಿರುವುದನ್ನು ನೋಡಿ ದ್ರೋಣನು ಅಡಿಗೆಯವನನ್ನು ಕರೆದು, ಆತನೊಡನೆ ರಹಸ್ಯವಾಗಿ 'ಅರ್ಜುನನಿಗೆ ಯಾವಾಗಲೂ ಕತ್ತಲೆಯಿರುವ ಕಡೆಯಲ್ಲಿ ಅನ್ನಹಾಕಬಾರದು. ನಾನು ಹೀಗೆ ಹೇಳಿದೆನೆಂದೂ ಅರ್ಜುನನಿಗೆ ತಿಳಿಸಬಾರದು' ಎಂದನು. ಆಮೇಲೆ ಒಂದಾನೊಂದು ದಿನದಲ್ಲಿ ಅರ್ಜುನನು ಭೋಜನಮಾಡುತ್ತಿರಲು, ಗಾಳಿಯು ಬಲವಾಗಿ ಬೀಸಿ ಉರಿಯುತ್ತಿದ್ದ ದೀಪವು ಆರಿಹೋಯಿತು. ಅರ್ಜುನನು ಆಗಲೂ ಭುಜಿಸುತ್ತಲೇ ಇದ್ದನು. ಆಗ ಅರ್ಜುನನು ತನ್ನಲ್ಲಿತಾನು 'ಆಹಾ! ಏನಿದು? ಕತ್ತಲೆಯಲ್ಲಿಯೂ ತನ್ನ ಕೈ ಬಾಯಿಯಕಡೆಗೇ ಹೋಗುವುದಲ್ಲದೆ, ಗುರಿತಪ್ಪಿಹೋಗುವುದಿಲ್ಲ. ಇದಕ್ಕೆ ಅಭ್ಯಾಸವಲ್ಲವೇ ಕಾರಣವು' ಎಂದು ತಿಳಿದು, ರಾತ್ರಿಯ ಕಾಲದಲ್ಲಿಯೂ ಗುರಿಯಿಟ್ಟು ಹೊಡೆಯುವ ಬಾಣವಿದ್ಯೆಯನ್ನು ಅಭ್ಯಾಸಮಾಡಲು ಪ್ರಾರಂಭಿಸಿದನು. ಭರತಕುಲಶ್ರೇಷ್ಠಾ! ರಾತ್ರಿಯ ಕಾಲದಲ್ಲಿ ಅರ್ಜುನನ ಧನುಷ್ಟಂಕಾರಧ್ವನಿಯನ್ನು ಕೇಳಿ ದ್ರೋಣನು ಎದ್ದು ಬಂದು, ಆತನನ್ನು ಅಪ್ಪಿಕೊಂಡು "ಅರ್ಜುನಾ! ಧನುರ್ವಿದ್ಯೆಯಲ್ಲಿ ನಿನಗೆ ಸಮಾನರು ಬೇರೆ ಯಾರೂ ಈ ಭೂಲೋಕದಲ್ಲಿಲ್ಲದಂತೆ, ನಿನಗೆ ವಿದ್ಯೆಯನ್ನು ಅಭ್ಯಾಸಮಾಡಿಸುವೆನು. ಇದು ಸತ್ಯವು" ಎಂದನು.

ಆಮೇಲೆ ದ್ರೋಣನು ಅರ್ಜುನನಿಗೆ ಆನೆ, ಕುದುರೆ, ರಥಗಳಮೇಲೆ ಯುದ್ಧಮಾಡುವ ಕ್ರಮವನ್ನೂ, ಪದಾತಿಯಾಗಿ ಯುದ್ಧಮಾಡುವುದನ್ನೂ ಕಲಿಸಿದನು. ಮತ್ತು ತನ್ನ ಶಿಷ್ಯರಿಗೆಲ್ಲ ಗದೆ, ಕತ್ತಿ, ತೋಮರ, ಈಟಿ, ಶಕ್ತಿ, ಇವುಗಳ ಸಾಧನೆಗಳನ್ನೂ, ಇನ್ನೂ ಹಲವು ಬಗೆಯ ಆಯುಧಗಳಿಂದ ಸೇರಿಸಿ ಮಾಡುವ ಸಂಕೀರ್ಣಯುದ್ಧಕ್ರಮವನ್ನೂ ಅಭ್ಯಾಸಮಾಡಿಸಿದನು. ದ್ರೋಣನ ಸಾಮರ್ಥ್ಯವನ್ನು ಕೇಳಿ ಧನುರ್ವೇದವನ್ನು ಕಲಿಯುವ ಅಭಿಲಾಷೆಯಿಂದ ಮೇಲೆಮೇಲೆ ಸಾವಿರಾರುಮಂದಿ ರಾಜರೂ, ರಾಜಕುಮಾರರೂ ಅಲ್ಲಿಗೆ ಬಂದು ಸೇರುತಿದ್ದರು. ದ್ರೋಣನು ಅವರೆಲ್ಲರಿಗೂ ಕಲಿಸುತಿದ್ದನು. ಹೀಗಿರುವಾಗ, ಬೇಡರ ಕುಲಕ್ಕೆ ಸೇರಿದ ಹಿರಣ್ಯಧನುವೆಂಬ ವ್ಯಾಧರಾಜನ ಮಗನಾದ ಏಕಲವ್ಯನೆಂಬವನು ವಿದ್ಯಾಭ್ಯಾಸಕ್ಕಾಗಿ ದ್ರೋ

ಣನಬಳಿಗೆ ಬಂದನು. ಆಗ ಧರ್ಮಜ್ಞನಾದ ದ್ರೋಣನು, ಆತನು ನಿಷಾದಪುತ್ರನೆಂದು ತಿಳಿದು, ಅವನು ಉತ್ತಮವರ್ಣದ ಆ ಕುರುಕುಮಾರರಿಗೆ ಸಮಾನನಾಗಬಾರದೆಂದು ಯೋಚಿಸಿ, ಆತನನ್ನು ತನ್ನಲ್ಲಿಟ್ಟುಕೊಳ್ಳಲು ಸಮ್ಮತಿಸದೆ ಅವನನ್ನು ಕುರಿತು “ ನಿಷಾದಪುತ್ರಾ! ನೀನೇನೋ ಹೇಗಿದ್ದರೂ ಬಾಣಪ್ರಯೋಗದಲ್ಲಿ ಅಧಿಕ ಬಲಶಾಲಿಯಾಗುವೆ. ನೀನು ನನ್ನ ಶಿಷ್ಯನೇ! ಆದರೆ, ನನ್ನಲ್ಲಿ ನೀನಿರಬಾರದು. ನಿನಗೆ ಅನುಜ್ಞೆಯನ್ನು ಕೊಟ್ಟಿರುವೆನು ನಿನ್ನ ಮನೆಗೆ ಹಿಂತಿರುಗಿಹೋಗು” ಎಂದನು. ವೀರನಾದ ಆ ಏಕಲವ್ಯನು. ಅಷ್ಟೇ ಸಾಕೆಂದು ದ್ರೋಣನ ಪಾದಗಳಿಗೆ ವಂದಿಸಿ, ವನಕ್ಕೆ ಹೊರಟುಹೋದನು. ಆತನು ಹೋದಮೇಲೆ ಅಲ್ಲಿ ಮಣ್ಣಿನಿಂದ ದ್ರೋಣನಂತೆ ಒಂದು ಪ್ರತಿಮೆಯನ್ನು ಮಾಡಿ, ಅದಕ್ಕೆ ನಿಜರೂಪದಿಂದಿರುವ ತನ್ನ ಆಚಾರ್ಯನಿಗೆ ಮಾಡತಕ್ಕ ಮರ್ಯಾದೆಗಳೆಲ್ಲವನ್ನೂ ಮಾಡುತ್ತಾ, ಅದರ ಮುಂದೆ ವಿಶೇಷ ನಿಯಮದಿಂದ ಬಾಣಗಳನ್ನೂ, ಅಸ್ತ್ರಗಳನ್ನೂ ಅಭ್ಯಾಸಮಾಡತೊಡಗಿದನು. ಆತನು ಅಧಿಕ ಶ್ರದ್ಧೆಯಿಂದಲೂ, ಉತ್ತಮವಾದ ಅಭ್ಯಾಸದಿಂದಲೂ ಬಾಣವನ್ನು ತೆಗೆಯುವುದು, ಬಿಲ್ಲಿನಲ್ಲಿ ಸೇರಿಸುವುದು, ಪ್ರಯೋಗಿಸುವುದು ಈ ಕಾರ್ಯಗಳಲ್ಲಿ ವಿಶೇಷ ಹಸ್ತಲಾಘವವನ್ನೂ, ಅಸ್ತ್ರವಿದ್ಯಾಚಮತ್ಕಾರಗಳನ್ನೂ ಬಹುಬೇಗನೆ ಕಲಿತುಕೊಂಡನು. ಇದೇ ಕಾಲದಲ್ಲಿ ಒಮ್ಮೆ ಕೌರವಪಾಂಡವರೆಲ್ಲರೂ ದ್ರೋಣನ ಅಪ್ಪಣೆಯನ್ನು ಪಡೆದು, ರಥವನ್ನೇರಿ ಬೇಟೆಗಾಗಿ ಹೊರಟರು. ಒಬ್ಬ ಸೇವಕನು ಅವರ ಆಯುಧಗಳನ್ನೆತ್ತಿಕೊಂಡು, ಒಂದು ನಾಯಿಯನ್ನೂ ಜತೆಯಲ್ಲಿ ಕರೆದುಕೊಂಡು ಅವರನ್ನು ಹಿಂಬಾಲಿಸಿದನು. ಅವರು ಹಲವು ಬಗೆಯ ಆಯುಧಚಮತ್ಕಾರಗಳನ್ನು ತೋರಿಸಬೇಕೆಂದೆಣಿಸಿ, ಆ ವನದಲ್ಲಿ ಸಂಚರಿಸುತ್ತಿದ್ದಾಗ, ಮೊದಲು ಆ ನಾಯಿಯು ಆ ನಿಷಾದಕುಮಾರನನ್ನು ಕಂಡಿತು. ಮಸಿಯನ್ನು ಬಳಿದಂತೆ ಬಹಳ ಕಪ್ಪಾಗಿರುವ ಮೈಮೇಲೆ ಜಿಂಕೆಯ ಚರ್ಮವನ್ನು ಧರಿಸಿ, ಜಡೆಯನ್ನು ಬಿಟ್ಟುಕೊಂಡಿರುವ ಆ ಬೇಡನ ವಿಕೃತಾಕಾರವನ್ನು ನೋಡಿ ಆ ನಾಯಿಯು ಬೊಗಳುವುದಕ್ಕೆ ಆರಂಭಿಸಿತು.

ಆಗ ಆ ಬೇಡನು ತನ್ನ ಹಸ್ತಚಮತ್ಕಾರವನ್ನು ತೋರಿಸುವ ಉದ್ದೇಶದಿಂದ, ಬೊಗಳುತಿದ್ದ ನಾಯಿಯು ತನ್ನ ಬಾಯನ್ನು ಮುಚ್ಚುವುದ

ಯೊಳಗಾಗಿ ಅದರ ಬಾಯೊಳಕ್ಕೆ ಏಳು ಬಾಣಗಳನ್ನು ಬಿಟ್ಟನು. ಆ ಬಾಣಗಳಿಂದ ನೊಂದ ನಾಯಿಯು, ಪಾಂಡವರ ಬಳಿಗೆ ಅರಚುತ್ತ ಓಡಿ ಬಂದಿತು. ಪಾಂಡವರು ಅದನ್ನು ನೋಡಿ ವಿಶೇಷ ಆಶ್ಚರ್ಯಗೊಂಡರು. ಆ ಹಸ್ತಲಾಘವವನ್ನೂ, ಶಬ್ದವನ್ನೇ ಗುರಿಹಿಡಿದು ಹೊಡೆದ ಆ ಶಕ್ತಿಯನ್ನೂ ನೋಡಿ, ತಾವು ಅವಮಾನಪಟ್ಟಂತೆ ಭಾವಿಸಿ, ಅದನ್ನು ಕೊಂಡಾಡಿದರು. ಆಗಲೇ ಆ ಪಾಂಡವರು ಆ ವನವನ್ನೆಲ್ಲಾ ಹುಡುಕಿ, ಕೊನೆಗೆ ಬಾಣವಿದ್ಯೆಯನ್ನು ಅಭ್ಯಸಿಸುತಿದ್ದ ಆ ಬೇಡನನ್ನು ಕಂಡರು. ಆತನು ಕೇವಲ ವಿಕೃತಾಕಾರವುಳ್ಳವನಾಗಿದ್ದುದರಿಂದ, ಆತನನ್ನು ಇಂತವನೆಂದು ಗುರ್ತಿಸಲಾರದೆ, ಆತನನ್ನು ಕುರಿತು 'ನೀನು ಯಾರು? ಯಾರ ಮಗನು?' ಎಂದು ಕೇಳಿದರು. ಆಗ ಆತನು 'ವೀರರೇ! ನಾನು ವ್ಯಾಧರಾಜನಾದ ಹಿರಣ್ಯಧನುವಿನ ಮಗನು. ದ್ರೋಣನ ಶಿಷ್ಯನು. ಧನುರ್ವೇದವನ್ನು ಅಭ್ಯಾಸಮಾಡುತ್ತಿರುವೆನು' ಎಂದನು. ಆಮೇಲೆ ಪಾಂಡವರು ಹಿಂತಿರುಗಿ ಬಂದು, ಆ ಆಶ್ಚರ್ಯವನ್ನೆಲ್ಲ ನಡೆದುದು ನಡೆದಹಾಗೆ ದ್ರೋಣನಿಗೆ ತಿಳಿಸಿದರು. ರಾಜಾ! ಕುಂತೀಪುತ್ರನಾದ ಅರ್ಜುನನುಮಾತ್ರ ಏಕಲವ್ಯನ ಸಾಮರ್ಥ್ಯವನ್ನೇ ನೆನೆಸಿಕೊಂಡು, ಏಕಾಂತವಾಗಿ ದ್ರೋಣನಲ್ಲಿಗೆ ಬಂದು 'ಆಚಾರ್ಯಾ! ನೀವು ನನ್ನೊಬ್ಬನನ್ನೇ ಪ್ರೀತಿಯಿಂದಾಲಿಂಗಿಸಿ 'ನಿನಗಿಂತಲೂ ಅಧಿಕನಾದ ಪ್ರಿಯಶಿಷ್ಯನಿಲ್ಲ'ವೆಂದು ಹೇಳಿದಿರಲ್ಲವೆ? ಈಗ ನನಗಿಂತಲೂ ಮತ್ತು ಲೋಕದಲ್ಲಿರುವ ಬೇರೆ ಎಲ್ಲಾ ಧನುರ್ಧಾರಿಗಳಿಗಿಂತಲೂ ಅಧಿಕ ವೀರನಾದ ಬೇಡರ ಜಾತಿಯ ಶಿಷ್ಯನೊಬ್ಬನು ನಿಮಗಿರುವನಲ್ಲಾ! ಇದು ಹೇಗೆ?' ಎಂದು ಕೇಳಿದನು. ದ್ರೋಣನು ಆ ವಿಷಯವನ್ನು ಕುರಿತು ಸ್ವಲ್ಪಹೊತ್ತು ಆಲೋಚಿಸಿವನು. ಆಗಲೇ ಅರ್ಜುನನನ್ನೂ ಜತೆಯಲ್ಲಿ ಕರೆದುಕೊಂಡು ಹೊರಟುಬಂದನು. ದೇಹಕ್ಕೆಲ್ಲ ಬೂದಿಯನ್ನು ಬಳಿದುಕೊಂಡು, ಜಟಾಧಾರಿಯಾಗಿ, ಹರಕುಬಟ್ಟೆಗಳನ್ನುಟ್ಟು, ಕೈಯಲ್ಲಿ ಬಿಲ್ಲುಹಿಡಿದು ಎಡೆಬಿಡದೆ ಬಾಣಗಳನ್ನು ಬಿಡುತ್ತಿದ್ದ ಆ ಏಕಲವ್ಯನನ್ನು ಎಲ್ಲರೂ ನೋಡಿದರು. ಏಕಲವ್ಯನು ಸಮೀಪಕ್ಕೆ ಬರುತ್ತಿರುವ ದ್ರೋಣನನ್ನು ನೋಡಿ ಅವನನ್ನು ಇದಿರುಗೊಂಡು ಆತನ ಪಾದಗಳನ್ನು ಹಿಡಿದು ಸಾಷ್ಟಾಂಗಪ್ರಣಾಮಮಾಡಿದನು.

ಆಮೇಲೆ ಆ ನಿಷಾದನು ದ್ರೋಣನನ್ನು ಉಚಿತರೀತಿಯಲ್ಲಿ ಪೂಜಿಸಿ, ತಾನು ಆತನ ಶಿಷ್ಯನೆಂಬುದನ್ನು ತಿಳಿಸಿ ಕೈಜೋಡಿಸಿ ನಿಂತನು. ಆಗ ದ್ರೋಣನು “ ವೀರಾ! ನೀನು ನನ್ನ ಶಿಷ್ಯನಾದಮೇಲೆ ನನಗೆ ಗುರುದಕ್ಷಿಣೆಯನ್ನು ಸಲ್ಲಿಸಬೇಕಲ್ಲವೆ ? ” ಎಂದನು. ಅದಕ್ಕಾ ಏಕಲವ್ಯನು ಸಂತೋಷದಿಂದ ‘ ಮಹಾತ್ಮಾ! ನಾನೇನನ್ನು ಕೊಡಲಿ? ಆಜ್ಞೆಯಾಗಬೇಕು. ಬ್ರಾಹ್ಮಣೋತ್ತಮನೂ, ಅದರಲ್ಲಿಯೂ ಸ್ವಂತ ಗುರುವೂ ಆದ ನಿಮಗೆ ಕೊಡಬಾರದುದು ನನ್ನಲ್ಲಿ ಯಾವುದೂ ಇಲ್ಲ ’ ಎಂದನು. ದ್ರೋಣನು ಆತನೊಡನೆ ‘ ನನಗೆ ಗುರುದಕ್ಷಿಣೆಯನ್ನು ಕೊಡಬೇಕೆಂಬ ಅಭಿಲಾಷೆಯು ನಿನಗೆ ನಿಜವಾಗಿಯೂ ಇರುವುದಾದರೆ, ನಿನ್ನ ಬಲಗೈ ಹೆಬ್ಬೆರಳನ್ನು ಕೊಡು ’ ಎಂದನು. ಏಕಲವ್ಯನು ಯಾವಾಗಲೂ ಸತ್ಯಕ್ಕೆ ತಪ್ಪದವನಾದುದರಿಂದ, ಸ್ವಲ್ಪವೂ ಯೋಚಿಸದೆ, ತನ್ನ ಬಲಗೈ ಹೆಬ್ಬೆರಳನ್ನು ಕತ್ತರಿಸಿ, ದ್ರೋಣನ ಮುಂದಿಟ್ಟನು. ಆಮೇಲೆ ನಿಷಾದನು ಬೇರೆ ಬೆರಳುಗಳ ಸಹಾಯದಿಂದಲೇ ಬಾಣವನ್ನು ಪ್ರಯೋಗಿಸತೊಡಗಿದನು. ಆದರೆ ಅದು ಹಿಂದಿನಂತೆ ಅಷ್ಟು ವೇಗವಾಗಿರಲಿಲ್ಲ. ಅರ್ಜುನನು ಮತ್ಸರವನ್ನು ಬಿಟ್ಟು ಸಂತೋಷಗೊಂಡನು. ಬೇರೆ ಯಾರೂ ಅರ್ಜುನನನ್ನು ಮೀರಿಸಿದವರಿಲ್ಲದುದರಿಂದ ದ್ರೋಣನೂ ಆಡಿದಮಾತಿಗೆ ತಪ್ಪದವನಾದನು.

ಆಗ ದುರ್ಯೋಧನನೂ, ಭೀಮನೂ ದ್ರೋಣನಲ್ಲಿ ಗದಾಭ್ಯಾಸ ಮಾಡುತಿದ್ದರು. ಅಶ್ವತ್ಥಾಮನು ಅಸ್ತ್ರವಿದ್ಯಾರಹಸ್ಯದಲ್ಲಿ ಎಲ್ಲರನ್ನೂ ಮೀರಿಸಿದನು. ಹಾಗೆಯೇ ಅವಳಿಮಕ್ಕಳಾದ ನಕುಲಸಹದೇವರಿಬ್ಬರೂ ಕತ್ತಿಯ ಸಾಧನೆಯಲ್ಲಿ ಇತರ ವೀರರಿಗಿಂತಲೂ ವಿಶೇಷ ಸಮರ್ಥರಾದರು. ಯುಧಿಷ್ಠಿರನು ರಥಯುದ್ಧದಲ್ಲಿ ಪ್ರವೀಣನಾದನು. ಅರ್ಜುನನು ಎಲ್ಲವುಗಳಲ್ಲಿಯೂ ಪ್ರಸಿದ್ಧನಾಗಿ, ಸಮುದ್ರಪರ್ಯಂತವಾದ ಈ ಭೂಮಂಡಲದೊಳಗಿನ ರಥಿಕಾಗ್ರೇಸರರಿಗೆಲ್ಲ ಅಗ್ರೇಸರನೆನಿಸಿಕೊಂಡನು. ಬುದ್ಧಿ, ಯೋಗ, ಬಲ, ಉತ್ಸಾಹ, ಸರ್ವಾಸ್ತ್ರನೈಪುಣ್ಯ, ಇವುಗಳಲ್ಲೆಲ್ಲಾ ನಿಸ್ಸೀಮಪಾಂಡಿತ್ಯವುಳ್ಳವನಾದನು. ಅಸ್ತ್ರವಿದ್ಯೆಯಲ್ಲಿಯೂ, ಗುರುಭಕ್ತಿಯಲ್ಲಿಯೂ ಆತನಿಗೆ ಸಮಾನರಿಲ್ಲ. ದ್ರೋಣನು ಎಲ್ಲರಿಗೂ ಒಂದೇ ವಿಧವಾಗಿ

ಅಸ್ತ್ರೋಪದೇಶಮಾಡುತ್ತಿದ್ದರೂ, ಶೂರನಾದ ಆ ಅರ್ಜುನನುಮಾತ್ರ ತನ್ನ ಚಾತುರ್ಯದಿಂದ ಎಲ್ಲರನ್ನೂ ಮೀರಿಸಿದ್ದನು. ಮಹಾಬಲಿಷ್ಠನಾದ ಭೀಮನಲ್ಲಿಯೂ, ವಿದ್ಯೆಯಲ್ಲಿ ಅಸಮಾನನಾದ ಅರ್ಜುನನಲ್ಲಿಯೂ, ದುರಾತ್ಮರಾದ ಧೃತರಾಷ್ಟ್ರಪುತ್ರರೆಲ್ಲರಿಗೂ ಅಸೂಯೆಯು ಹುಟ್ಟಿತು. ಆಮೇಲೆ ವಿದ್ಯೆಯಲ್ಲಿಯೂ, ಅಸ್ತ್ರಗಳಲ್ಲಿಯೂ ಸುಶಿಕ್ಷಿತರಾದ ಆ ರಾಜಕುಮಾರರೆಲ್ಲರ ಲಕ್ಷ್ಯಭೇದನಚಾತುರ್ಯವನ್ನು ಪರೀಕ್ಷಿಸಬೇಕೆಂದು ದ್ರೋಣನಿಗೆ ಉದ್ದೇಶವು ಹುಟ್ಟಿತು. ಆ ಕುಮಾರರಿಗೆ ತಿಳಿಯದಂತೆ ಶಿಲ್ಪಿಗಳಿಂದ ಒಂದು ಭಾಸಪಕ್ಷಿಯ ಆಕೃತಿಯನ್ನು ಮಾಡಿಸಿ ತಂದು, ಸಮೀಪದಲ್ಲಿದ್ದ ಒಂದು ಮರಕ್ಕೆ ಅದನ್ನು ಕಟ್ಟಿ, ಅವರೆಲ್ಲರನ್ನೂ ಕರೆಯಿಸಿ "ನಾನು ಹೇಳಿದೊಡನೆಯೇ ನೀವು ಬಿಲ್ಲುಗಳನ್ನೆತ್ತಿ ಮರದಮೇಲಿರುವ ಆ ಪಕ್ಷಿಗೆ ಗುರಿಹಿಡಿದು, ಆ ಪಕ್ಷಿಯ ತಲೆಯನ್ನು ಕತ್ತರಿಸಬೇಕು. ಒಬ್ಬೊಬ್ಬರಾಗಿ ಬಂದು ಯತ್ನಿಸಿರಿ" ಎಂದನು. ಮೊದಲು ಯುಧಿಷ್ಠಿರನಿಗೆ "ಯುಧಿಷ್ಠಿರಾ! ಬಾಣವನ್ನು ಹೂಡಿಡು! ನಾನು ಹೇಳಿದೊಡನೆ ಪ್ರಯೋಗಮಾಡು" ಎಂದನು. ವೀರನಾದ ಯುಧಿಷ್ಠಿರನು ಗುರುವಾಕ್ಯಪ್ರೇರಿತನಾಗಿ, ಒಡನೆಯೇ ಬಿಲ್ಲನ್ನೆತ್ತಿ ಭಾಸಪಕ್ಷಿಗೆ ಗುರಿಹಿಡಿದು ನಿಂತನು. ಯುಧಿಷ್ಠಿರನು ಬಿಲ್ಲನ್ನೇರಿಸಿ ಸಿದ್ಧನಾದಮೇಲೆ ದ್ರೋಣನು ಸ್ವಲ್ಪ ಹೊತ್ತು ತಾಳಿ "ರಾಜಕುಮಾರಾ! ಮರದ ಕೊನೆಯಲ್ಲಿರುವ ಭಾಸಪಕ್ಷಿಯು ಕಾಣಿಸುತ್ತಿರುವುದೇ ?" ಎಂದು ಕೇಳಿದನು. ಅದಕ್ಕೆ ಯುಧಿಷ್ಠಿರನು "ಕಾಣುತ್ತಿರುವುದು" ಎಂದು ತಿಳುಹಿಸಿದನು. ತಿರುಗಿ ಸ್ವಲ್ಪ ಹೊತ್ತಾದಮೇಲೆ ದ್ರೋಣನು "ಈ ಮರವನ್ನೂ, ನಿನ್ನ ಸಹೋದರರನ್ನೂ ನೋಡುತ್ತಿರುವೆಯಾ" ಎಂದು ಯುಧಿಷ್ಠಿರನನ್ನು ಕೇಳಿದನು. ಅದಕ್ಕೆ ಆತನು "ಈ ಮರವನ್ನೂ, ನಿನ್ನನ್ನೂ, ನ್ನ ಸಹೋದರರನ್ನೂ, ಭಾಸಪಕ್ಷಿಯನ್ನೂ, ಎಲ್ಲವನ್ನೂ ನೋಡುತ್ತಿರುವೆನು" ಎಂದನು. ಎಷ್ಟು ಬಾರಿ ಕೇಳಿದರೂ ಹಾಗೆಯೇ ಉತ್ತರಕೊಟ್ಟನು. ದ್ರೋಣನು ಮನಸ್ಸಿನಲ್ಲಿ ಅತೃಪ್ತಿಪಟ್ಟು "ಈ ಗುರಿಯನ್ನು ಹೊಡೆಯಲು ನಿನಗೆ ಸಾಧ್ಯವಿಲ್ಲ" ಎಂದು ಆತನನ್ನು ನಿರಾಕರಿಸಿ ಕಳುಹಿಸಿಬಿಟ್ಟನು. ಆಮೇಲೆ ದ್ರೋಣನು ಧೃತರಾಷ್ಟ್ರಪುತ್ರರಾದ ದುರ್ಯೋಧನಾದಿಗಳನ್ನೂ, ಭೀಮನೇ ಮೊದಲಾದವರನ್ನೂ, ಇತರ ರಾಜಕುಮಾರ

ರನ್ನೂ ಆ ಯುಧಿಷ್ಠಿರನನ್ನು ಕೇಳಿದಂತೆಯೇ ಪ್ರಶ್ನಿಸಿದನು. ಅವರೆಲ್ಲರೂ ಅದೇ ವಿಧವಾಗಿ ಉತ್ತರಕೊಡಲು, ಆತನು ಅವರನ್ನೂ ತಿರಸ್ಕರಿಸಿ ಕಳುಹಿಸಿಬಿಟ್ಟನು.

ಇದು ನೂರನಾಲ್ವತ್ತೆರಡನೆಯ ಅಧ್ಯಾಯವು.

ಭಾಸಪಕ್ಷಿಯನ್ನು ಅರ್ಜುನನು ಭೇದಿಸಿದುದು. ಮತ್ತೊಮ್ಮೆ ಅರ್ಜುನನು ಮೊಸಳೆಯನ್ನು ಕೊಂದು ದ್ರೋಣನನ್ನು ಬಿಡಿಸಿದುದು. ದ್ರೋಣನು ಅರ್ಜುನನಿಗೆ ಬ್ರಹ್ಮಶಿರವೆಂಬ ಅಸ್ತ್ರವನ್ನು ಕೊಟ್ಟುದು.

ಆಮೇಲೆ ದ್ರೋಣನು ನಗುತ್ತಾ, ಅರ್ಜುನನನ್ನು ನೋಡಿ "ಈಗ ನಿನ್ನ ಸರದಿ! ಆ ಲಕ್ಷ್ಯವನ್ನು ನೋಡುತ್ತಿರು! ನಾನು ಹೇಳಿದಾಗ ಬಾಣಪ್ರಯೋಗಮಾಡು. ಪುತ್ರ! ಬಿಲ್ಲನ್ನು ಬಗ್ಗಿಸಿ ಹಿಡಿದು ಸಿದ್ಧವಾಗಿ ನಿಂತಿರು" ಎಂದನು. ಆ ಮಾತುಗಳನ್ನು ಕೇಳಿ ಅರ್ಜುನನು ಬಿಲ್ಲನ್ನು ಮಂಡಲಾಕಾರವಾಗಿ ಬಾಗಿಸಿ, ಭಾಸಪಕ್ಷಿಗೆ ಗುರಿಹಿಡಿದು ನಿಂತನು. ಸ್ವಲ್ಪ ಹೊತ್ತಾದಮೇಲೆ ದ್ರೋಣನು ಆತನನ್ನು ಕುರಿತು ಮೊದಲಿನಂತೆ "ಅರ್ಜುನಾ! ಇಲ್ಲಿರುವ ಭಾಸಪಕ್ಷಿಯನ್ನೂ, ಗಿಡವನ್ನೂ, ನನ್ನನ್ನೂ, ನೋಡುತ್ತಿರುವೆಯಷ್ಟೆ?" ಎಂದು ಕೇಳಿದನು. ಆಗ ಅರ್ಜುನನು ದ್ರೋಣನೊಡನೆ "ನಾನು ಭಾಸಪಕ್ಷಿಯೊಂದನ್ನೇ ನೋಡುತ್ತಿರುವೆನು. ಈಗ ಮರವಾಗಲಿ ನೀವಾಗಲಿ, ನನ್ನ ದೃಷ್ಟಿಗೆ ಬೀಳುವುದಿಲ್ಲ!" ಎಂದನು. ದ್ರೋಣನು ಮನಸ್ಸಿನಲ್ಲಿ ತೃಪ್ತಿಹೊಂದಿ, ಸ್ವಲ್ಪ ಹೊತ್ತು ಸುಮ್ಮನಿದ್ದು ತಿರುಗಿ "ಅರ್ಜುನಾ! ನೀನು ಆ ಭಾಸಪಕ್ಷಿಯನ್ನಾದರೂ ಚೆನ್ನಾಗಿ ನೋಡುತ್ತಿರುವೆಯಷ್ಟೆ? ಹಾಗಾದರೆ ಅದರ ವರ್ಣನೆಯೇನು ಹೇಳು! ಎಂದು ಕೇಳಿದನು. ಅದಕ್ಕೆ ಆತನು "ನಾನು ಭಾಸಪಕ್ಷಿಯ ತಲೆಯನ್ನುಮಾತ್ರ ನೋಡುತ್ತಿರುವೆನು. ಅದರ ಶರೀರವನ್ನು ನೋಡಲಿಲ್ಲ" ಎಂದನು. ಅರ್ಜುನನು ಹೀಗೆ ಹೇಳಿದೊಡನೆ ದ್ರೋಣನು ಉತ್ಸಾಹಗೊಂಡು "ಇನ್ನು ಬಾಣವನ್ನು ಬಿಡು" ಎಂದನು. ಒಡನೆಯೇ ಅರ್ಜುನನು ಬಾಣವನ್ನು ಬಿಟ್ಟು ಭಾಸಪಕ್ಷಿಯ

ತಲೆಯನ್ನು ತುಂಡಾಗಿ ಭೇದಿಸಿ ಕೆಳಕ್ಕೆ ಕೆಡಹಿದನು. ಆ ಕಾರ್ಯವು ಮುಗಿದೊಡನೆಯೇ ದ್ರೋಣನು ಬಂದು ಅರ್ಜುನನ್ನು ಅಪ್ಪಿಕೊಂಡು, ಯುದ್ಧದಲ್ಲಿ ದ್ರುಪದನನ್ನು ಆತನ ಸೈನ್ಯದೊಡನೆ ಓಡಿಸುವುದಕ್ಕೆ ಅರ್ಜುನನೇ ತಕ್ಕ ಸಾಮರ್ಥ್ಯವುಳ್ಳವನೆಂದು ನಿಶ್ಚಯಿಸಿಕೊಂಡನು.

ಭರತಕುಲಶ್ರೇಷ್ಠಾ ! ಕೆಲವು ಕಾಲದಮೇಲೆ ಒಮ್ಮೆ ದ್ರೋಣನು ಸ್ನಾನಾರ್ಥವಾಗಿ ಶಿಷ್ಯರೊಡನೆ ಗಂಗೆಗೆ ಹೋಗಿ, ಅದರಲ್ಲಿ ಮುಳುಗಿದಾಗ, ಮೃತ್ಯುಪ್ರೇರಿತವಾದ ದೊಡ್ಡ ಮೊಸಳೆಯೊಂದು ಆತನ ಕಾಲನ್ನು ಹಿಡಿದುಕೊಂಡಿತು. ದ್ರೋಣನು ಅದರಿಂದ ಬಿಡಿಸಿಕೊಳ್ಳಲು ತಾನೇ ಶಕ್ತನಾಗಿದ್ದರೂ, ಶಿಷ್ಯಪರೀಕ್ಷಾರ್ಥವಾಗಿ "ಅಯ್ಯೋ ! ನನ್ನನ್ನು ಬಿಡಿಸಿರಿ. ಈ ಮೊಸಳೆಯನ್ನು ಕೊಲ್ಲಿರಿ !" ಎಂದು ಭಯದಿಂದ ಕೂಗುವಂತೆ ಕೂಗಿದನು. ಆತನ ಬಾಯಿಂದ ಈ ಮಾತುಗಳು ಹೊರಡುತ್ತಿರುವಾಗಲೇ ಅರ್ಜುನನು ಐದು ತೀಕ್ಷ್ಣಬಾಣಗಳಿಂದ ನೀರಿನೊಳಗಿದ್ದ ಮೊಸಳೆಯನ್ನು ಕೊಂದನು. ಇತರ ಶಿಷ್ಯರೆಲ್ಲರೂ ಸುಮ್ಮನೆ ಹಿಂದುಮುಂದು ನೋಡುತ್ತ ನಿಂತಿದ್ದರು. ಅರ್ಜುನನ ಕಾರ್ಯದಕ್ಷತೆಯನ್ನು ನೋಡಿ ದ್ರೋಣನು ತನ್ನ ಶಿಷ್ಯರೊಳಗೆಲ್ಲ ಆತನೇ ಉತ್ತಮನೆಂದು ಸಂತೋಷಪಟ್ಟನು.

ಮತ್ತೊಮ್ಮೆ ದ್ರೋಣನು ಶಿಕ್ಷಾರ್ಥವಾಗಿ ಶಿಷ್ಯರನ್ನು ಕರೆಯಿಸಿದನು. ದುರ್ಯೋಧನ, ಚಿತ್ರಸೇನ, ದುಶ್ಶಾಸನ, ವಿವಿಂಶತಿ, ಅರ್ಜುನ, ಅಶ್ವತ್ಥಾಮನೇ ಮುಂತಾದವರೆಲ್ಲ ಬಂದರು. ಆಗ ದ್ರೋಣನು ಮಣ್ಣಿನಲ್ಲಿ ಒಂದು ಶಿಶುವನ್ನು ಮಾಡಿಸಿ ಆ ಶಿಷ್ಯರೆಲ್ಲರೂ ನೋಡುತ್ತಿರುವಂತೆಯೇ ಅದನ್ನು ಗಂಗೆಯೊಳಕ್ಕೆ ಬಿಸುಟನು. ಅವರಿಗೆಲ್ಲ ಬಟ್ಟೆಯಿಂದ ಕಣ್ಣುಗಳನ್ನು ಕಟ್ಟಿ, ಹಾಗೆಯೇ ನೀರಿನಲ್ಲಿರುವ ಆ ಪ್ರತಿಮೆಯನ್ನು ಭೇದಿಸಿರಿ" ಎಂದನು. ಒಡನೆಯೇ ಅರ್ಜುನನು ನೀರಿನಲ್ಲಿರುವ ಆ ಶಿಶುವಿನ ಪ್ರತಿಮೆಯನ್ನು ಹದಿನೈದು ಬಾಣಗಳಿಂದ ಹೊಡೆದನು. ಆ ಚಮತ್ಕಾರವನ್ನು ನೋಡಿ, ಆಗಲೂ ಅರ್ಜುನನೇ ತನ್ನ ಶಿಷ್ಯರೊಳಗೆಲ್ಲ ಶ್ರೇಷ್ಠನೆಂದು ನಿರ್ಧರಿಸಿ ಆನಂದಭರಿತನಾದನು. ಆಮೇಲೆ ದ್ರೋಣನು, ಅರ್ಜುನನ್ನು ಕರೆದು "ಮಹಾಬಾಹೂ ! ಅತ್ಯುತ್ತಮವೂ, ಅಭೇದ್ಯವೂ ಆದ ಬ್ರಹ್ಮಶಿರವೆಂಬ

ಅಸ್ತ್ರವನ್ನು ನೀನು ಪ್ರಯೋಗೋಪಸಂಹಾರ ಮಂತ್ರಗಳೊಡನೆ ನನ್ನಿಂದ ಪಡೆಯುವನಾಗು. ಆದರೆ ಯಾವ ಸಂದರ್ಭದಲ್ಲಿಯೂ ಇದನ್ನು ಮನುಷ್ಯರಮೇಲೆ ಪ್ರಯೋಗಿಸಕೂಡದು. ಅಲ್ಪಶಕ್ತಿಯುಳ್ಳವರಮೇಲೆ ಇದನ್ನು ಪ್ರಯೋಗಿಸಿದಲ್ಲಿ, ಇದು ಲೋಕವನ್ನೇ ಸುಟ್ಟುಬಿಡುವುದು. ಪುತ್ರಾ! ಈ ಲೋಕದಲ್ಲಿ ಈ ಅಸ್ತ್ರವು ಅಸಮಾನವಾದುದೆಂದು ಪ್ರಸಿದ್ಧವಾಗಿದೆ. ಇದನ್ನು ಆ ನಿಯಮಾನುಸಾರವಾಗಿಯೇ ಇಟ್ಟುಕೊಂಡು, ನಾನು ಹೇಳುವ ಮಾತುಗಳನ್ನು ಕೇಳು. ಯುದ್ಧದಲ್ಲಿ ಮನುಷ್ಯರುಹೊರತು ದೇವತೆಗಳೇ ಮೊದಲಾದ ಇತರಶತ್ರುಗಳು ಯಾರಾದರೂ ನಿನ್ನನ್ನು ಪೀಡಿಸಿದರೆ, ಆಗ ಅವರನ್ನು ಸಂಹರಿಸಲುಮಾತ್ರ ಈ ಅಸ್ತ್ರವನ್ನು ಪ್ರಯೋಗಮಾಡು" ಎಂದನು ಅರ್ಜುನನು "ಹಾಗೆಯೇ ಆಗಲೆಂದು" ಒಪ್ಪಿ, ಪ್ರತಿಜ್ಞೆಮಾಡಿ, ಕೈಗಳನ್ನು ಜೋಡಿಸಿಕೊಂಡು ಆ ಅಸ್ತ್ರವನ್ನು ಸ್ವೀಕರಿಸಿದನು. ಆಗ ಗುರುವು ಆತನನ್ನು ಕುರಿತು "ಅರ್ಜುನಾ! ಲೋಕದಲ್ಲಿ ನಿನಗೆ ಸಮಾನರಾದ ಅಸ್ತ್ರವಿದ್ಯಾನಿಪುಣರೂ ಬೇರೊಬ್ಬರು ಇರಲಾರರು" ಎಂದನು.

ಇದು ನೂರನಾಲ್ವತ್ತುಮೂರನೆಯ ಅಧ್ಯಾಯವು.

---

**ದ್ರೋಣನು ಎಲ್ಲಾ ಶಿಷ್ಯರ ಶಸ್ತ್ರವಿದ್ಯೆಯನ್ನು ಪರೀಕ್ಷಿಸಲು ರಂಗಸ್ಥಲವನ್ನು ನಿರ್ಮಾಣಮಾಡಿದುದು. ಭೀಮದುರ್ಯೋಧನರ ಗದಾಯುದ್ಧ ಪರೀಕ್ಷೆ.**

ಜನಮೇಜಯರಾಜಾ! ಪಾಂಡವಕೌರವರೆಲ್ಲರೂ ಎಲ್ಲಾ ಶಸ್ತ್ರಾಭ್ಯಾಸಗಳಲ್ಲಿಯೂ ಪಾರಂಗತರಾದುದನ್ನು ತಿಳಿದು ದ್ರೋಣಾಚಾರ್ಯನು, ಕೃಪ, ಸೋಮದತ್ತ, ಬಾಹ್ಲೀಕ, ಭೀಷ್ಮ, ವ್ಯಾಸ, ವಿದುರಾದಿಗಳ ಸಮಕ್ಷದಲ್ಲಿ ಧೃತರಾಷ್ಟ್ರನನ್ನು ಕುರಿತು "ಕುರುಕುಲಶ್ರೇಷ್ಠಾ! ನಿನ್ನ ಮಕ್ಕಳಿಗೆ ವಿದ್ಯಾಭ್ಯಾಸವು ಪೂರ್ಣವಾಯಿತು. ನಿನ್ನ ಅನುಮತಿಯಾದರೆ ಅವರು ತಮ್ಮ ವಿದ್ಯಾಚಾತುರ್ಯವನ್ನು ಸಭೆಯಲ್ಲಿ ತೋರಿಸುವರು" ಎಂದನು. ಆಗ ಧೃತರಾಷ್ಟ್ರನು ಸಂತೋಷದಿಂದ "ಆಚಾರ್ಯಾ! ನೀನು ಇದೊಂದು ದೊಡ್ಡ ಕಾರ್ಯವನ್ನು ನೆರವೇರಿಸಿದೆ. ಯಾವ ಕಾಲದಲ್ಲಿ, ಎಲ್ಲಿ, ಮತ್ತು ಯಾವ

ರೀತಿಯಲ್ಲಿ ಅವರನ್ನು ಪರೀಕ್ಷಿಸಬೇಕೋ ಅದನ್ನು ನೀನೇ ನಿರ್ಣಯಿಸು. ಹೇಗೂ ನಾನು ಕುರುಡನು. ಶಸ್ತ್ರವಿದ್ಯೆಯಲ್ಲಿ ನನ್ನ ಮಕ್ಕಳು ತೋರಿಸುವ ಸಾಮರ್ಥ್ಯವನ್ನು ನೋಡುವ ಭಾಗ್ಯವೇನೋ ನನಗಿಲ್ಲ. ಆ ಭಾಗ್ಯವಿದ್ದವರನ್ನು ಮತ್ಸರಿಸುವ ಸ್ಥಿತಿಗೆ ನನ್ನನ್ನು ತಂದಿಟ್ಟ ಈ ಅಂಧತ್ವಕ್ಕಾಗಿ ನಾನು ಪರಿತಪಿಸುವೆನು" ಎಂದನು. ಆಮೇಲೆ ವಿದುರನನ್ನು ಕುರಿತು "ವಿದುರಾ! ಆಚಾರ್ಯರು ಹೇಳಿದಂತೆ ನಡೆಸು. ಇದಕ್ಕಿಂತಲೂ ಪ್ರಿಯವಾದುದು ನನಗೆ ಬೇರೊಂದಿಲ್ಲ" ಎಂದನು. ಆಮೇಲೆ ದ್ರೋಣನು ಧೃತರಾಷ್ಟ್ರ ವಿದುರರ ಅನುಮತಿಯನ್ನು ಪಡೆದು, ಹಳ್ಳತಿಟ್ಟುಗಳಿಲ್ಲದೆ, ಗಿಡಗಳೂ ಪೊದೆಗಳೂ ಇಲ್ಲದೆ, ಸಮವಾಗಿರುವ ಭೂಪ್ರದೇಶವೊಂದನ್ನು ಅಳತೆಮಾಡಿಸಿದನು. ಆ ಪ್ರದೇಶದಲ್ಲಿ ಅಲ್ಲಲ್ಲಿ ಬಾವಿಗಳೂ, ಊಟೆಗಳೂ ವಿಶೇಷವಾಗಿದ್ದುವು. ಒಳ್ಳೆಯ ನಕ್ಷತ್ರದಿಂದ ಕೂಡಿದ ತಿಥಿಯಲ್ಲಿ, ಆ ಭೂಮಿಗೆ ಬಲಿಯನ್ನರ್ಪಿಸಲುದ್ದೇಶಿಸಿ, ಆ ವಿಚಾರವನ್ನು ಪಟ್ಟಣದೊಳಗೆಲ್ಲ ಡಂಗುರವನ್ನು ಹಾಕಿ ಪ್ರಚಾರಗೊಳಿಸಿದನು. ಕಾರ್ಯಸಮರ್ಥರಾದ ಶಿಲ್ಪಿಗಳು ರಂಗವನ್ನು ನಿರ್ಮಿಸುವ ಸ್ಥಳದಲ್ಲಿ ದ್ರೋಣಾಚಾರ್ಯನ ಅಪ್ಪಣೆಯಂತೆ ವಿಶಾಲವೂ, ವಿಧ್ಯುಕ್ತವೂ ಆದ ಪ್ರೇಕ್ಷಾಗಾರವನ್ನು ನಿರ್ಮಿಸಿದರು. ಅಲ್ಲಿ ಎಲ್ಲಾ ಸಲಕರಣೆಗಳನ್ನೂ ಸಿದ್ಧಪಡಿಸಿದರು. ಸ್ತ್ರೀಯರಿಗಾಗಿ ಪ್ರತ್ಯೇಕಸ್ಥಳವೊಂದು ನಿರ್ಣಯಿಸಲ್ಪಟ್ಟಿತು. ದೇಶದ ಜನರು ಸ್ವಂತವಾಗಿಯೂ ಹಲವು ಉನ್ನತಾಸನಗಳನ್ನು ಕಟ್ಟಿಸಿಕೊಂಡರು. ಧನಿಕರಾದವರು ಸುತ್ತಲೂ ವಿಶಾಲವೂ, ಎತ್ತರವೂ ಆದ ಹಲವು ಗುಡಾರಗಳನ್ನು ಹಾಕಿಸಿದರು. ಪರೀಕ್ಷೆಗಾಗಿ ನಿಶ್ಚಿತವಾಗಿದ್ದ ದಿನವು ಬರಲು, ಧೃತರಾಷ್ಟ್ರನು ವ್ಯಾಸನ ಅನುಮತಿಯನ್ನು ಪಡೆದು, ಸಭೆಯವರೊಡನೆಯೂ, ಅಂತಃಪುರಸ್ತ್ರೀಯರೊಡನೆಯೂ ಅಲ್ಲಿಗೆ ಹೊರಟು ಬಂದನು. ಭೀಷ್ಮ ಕೃಪಾಚಾರ್ಯರಿಬ್ಬರೂ ಮುಂದೆ ಹೊರಟರು. ಅವರ ಹಿಂದೆ ಬಾಹ್ಲಿಕನೂ, ಸೋಮದತ್ತನೂ, ಇತರ ಕೌರವರೂ ಸಹಾಯಕರಾಗಿ ಬಂದರು. ಇನ್ನೂ ಅನೇಕ ಬ್ರಾಹ್ಮಣರನ್ನೂ ಕೂಡಿಸಿಕೊಂಡು, ನಗರದ ಹೊರಭಾಗದಲ್ಲಿ ನಿರ್ಮಿಸಿದ್ದ ರಂಗಸ್ಥಳಕ್ಕೆ ಎಲ್ಲರೂ ಬಂದು ಸೇರಿದರು. ಅಲ್ಲಿ ಮುತ್ತಿನ ಕುಚ್ಚುಗಳಿಂದ

ಅಲಂಕೃತವಾಗಿ, ವೈಡೂರ್ಯ ಮಣಿ ಚಿತ್ರಿತವಾಗಿ, ಸುವರ್ಣಮಯವೂ, ಅದ್ಭುತವೂ ಆದ ಪ್ರೇಕ್ಷಾಗಾರಕ್ಕೆ ಪ್ರವೇಶಿಸಿದರು.

ಗಾಂಧಾರಿಯೂ ಕುಂತಿಯೂ ಹೊರಟರು. ಇತರ ರಾಜಸ್ತ್ರೀಯರೂ ಅಂದವಾದ ಉಡಿಗೆಗಳನ್ನುಟ್ಟು, ತಮ್ಮ ದಾದಿಯರೊಡನೆ ದೇವಸ್ತ್ರೀಯರು ಮೇರುವನ್ನೇರುವಂತೆ ಸಂತೋಷದಿಂದ ತಮ್ಮ ಆಸನಗಳನ್ನೇರಿದರು. ಬ್ರಾಹ್ಮಣರು, ಕ್ಷತ್ರಿಯರು ಮೊದಲಾದ ಚತುರ್ವರ್ಣದವರೂ, ರಾಜಕುಮಾರರ ಅಸ್ತ್ರಕೌಶಲವನ್ನು ನೋಡಬೇಕೆಂಬ ಅಭಿಲಾಷೆಯಿಂದ, ವೇಗವಾಗಿ ಹೊರಟುಬಂದರು ಈ ಕುತೂಹಲದಿಂದ ಅನೇಕಜನರು ಕ್ಷಣಮಾತ್ರದಲ್ಲಿ ಗುಂಪುಕೂಡಿದರು. ಆಗಿನ ಜನಸಮುದಾಯವು, ಮೊಳಗುವ ವಾದ್ಯಧ್ವನಿಗಳಿಂದಲೂ, ಜನಗಳ ಸಂತೋಷಕೋಲಾಹಲಗಳ ಧ್ವನಿಗಳಿಂದಲೂ ಮಹಾಸಮುದ್ರವೇ ಕಲಗಿದಂತೆ ಕಾಣಿಸುತ್ತಿದ್ದಿತು. ಇಷ್ಟರಲ್ಲಿ ದ್ರೋಣಾಚಾರ್ಯನು ಬಿಳಿಯ ಬಟ್ಟೆಗಳನ್ನುಟ್ಟು, ಬಿಳಿಯ ಯಜ್ಞೋಪವೀತಗಳನ್ನು ಧರಿಸಿ, ಬಿಳಿಯ ಕೂದಲುಗಳಿಂದಲೂ, ನರೆತ ಗಡ್ಡಗಳಿಂದಲೂ, ಬಿಳೀ ಪುಷ್ಪಹಾರದಿಂದಲೂ, ಬಿಳೀ ಗಂಧದಿಂವಲೂ, ಅಲಂಕೃತನಾಗಿ, ಅಂಗಾರಕನೊಡನೆ ಪೂರ್ಣಚಂದ್ರನು ಮಬ್ಬಿಲ್ಲದ ಆಕಾಶವನ್ನು ಪ್ರವೇಶಿಸುವಂತೆ ತನ್ನ ಪುತ್ರನೊಡನೆ ರಂಗಮಧ್ಯಕ್ಕೆ ಬಂದನು. ಆಮೇಲೆ ವ್ಯಾಸಮುನಿಯ ಆಜ್ಞೆಯನ್ನು ಪಡೆದು, ರಂಗಕ್ಕೆ ಪೂಜೆಮಾಡಿ, ಮಂತ್ರಜ್ಞರಾದ ಬ್ರಾಹ್ಮಣರಿಂದ ಅದಕ್ಕೆ ಮಂಗಳಕ್ರಿಯೆಗಳನ್ನೆಲ್ಲ ಮಾಡಿಸಿದನು. ಆಗ ಧೃತರಾಷ್ಟ್ರನು ದ್ರೋಣನಿಗೂ, ಕೃಪನಿಗೂ ಮುತ್ತು ರತ್ನಗಳನ್ನೂ, ಬಂಗಾರವನ್ನೂ, ಹಲವು ಬಗೆಯ ವಸ್ತ್ರಗಳನ್ನೂ ದಕ್ಷಿಣೆಯಾಗಿ ಕೊಟ್ಟನು. ಪುಣ್ಯಾಹವಾಚನವು ನಡೆಯಿತು. ಆಮೇಲೆ ಸೇವಕರು ನಾನಾಬಗೆಯ ಆಯುಧೋಪಕರಣಗಳನ್ನು ತಂದಿಟ್ಟರು.

ಆಮೇಲೆ ಮಹಾರಥರಾದ ಭರತಕುಮಾರರು, ಕೈಗೌಸಣಿಗೆಯನ್ನೂ, ಕವಚವನ್ನೂ ತೊಟ್ಟು ದಟ್ಟಿಗಳನ್ನು ಕಟ್ಟಿ, ಬಿಲ್ಲುಬತ್ತಳಿಕೆಗಳನ್ನು ಧರಿಸಿ, ರಂಗಸ್ಥಳಕ್ಕೆ ಬಂದರು. ಅವರು ಮೊದಲು ರಂಗಮಧ್ಯದಲ್ಲಿರುವ ಆಚಾರ್ಯನಾದ ದ್ರೋಣನಿಗೆ ಅಭಿವಾದನವನ್ನು ಮಾಡಿ, ದ್ರೋಣಕೃಪರಿಬ್ಬ

ರನ್ನೂ ಪೂಜಿಸಿದರು. ಗುರುಗಳಿಬ್ಬರೂ ಆಶೀರ್ವದಿಸಿದಮೇಲೆ, ಆ ರಾಜಕುಮಾರರು ಉತ್ಸಾಹದಿಂದ ಮತ್ತೊಮ್ಮೆ ಅವರಿಗೆ ಅಭಿವಾದನಗಳನ್ನು ಮಾಡಿದರು. ಮೊದಲೇ ಪೂಜಿಸಲ್ಪಟ್ಟಿದ್ದ ಶಸ್ತ್ರಗಳನ್ನು ಹೂಗಳಿಂದಲೂ, ಚಂದನದಿಂದಲೂ, ಮತ್ತೊಮ್ಮೆ ಪೂಜಿಸಿದರು. ವೀರರೆಲ್ಲರೂ ರಕ್ತಗಂಧದಿಂದ ಮೈಯನ್ನಲಂಕರಿಸಿಕೊಂಡು, ಕೆಂಪುಹೂಗಳ ಹಾರವನ್ನು ಧರಿಸಿ, ಕೆಂಪುಬಟ್ಟೆಯ ಪತಾಕೆಗಳನ್ನು ಹಿಡಿದು, ಕೆಂಡದಂತೆ ಕೆಂಪಾದ ನೇತ್ರಗಳಿಂದ ಕೂಡಿ, ಬಂಗಾರದ ಆಭರಣಗಳನ್ನೂ ಧರಿಸಿದ್ದರು. ಅವರು ದ್ರೋಣನಿಂದ ಅಪ್ಪಣೆಪಡೆದು ತಮ್ಮತಮ್ಮ ಆಯುಧಗಳನ್ನು ಕೈಗೆತ್ತಿಕೊಂಡರು.

ಮತ್ತು ಬಿಲ್ಲನ್ನೆತ್ತಿ ನಾಣೇರಿಸುಕಟ್ಟಿದರು. ಬತ್ತಳಿಕೆಗಳನ್ನು ಬಿಗಿದು, ಜ್ಯಾಘೋಷದಿಂದಲೂ, ಭುಜಾಸ್ಫಾಲನದಿಂದಲೂ ಜನರು ಮೂರ್ಛೆಬೀಳುವಂತೆ ಮಾಡಿದರು. ಯುಧಿಷ್ಠಿರನೇ ಮೊದಲಾದ ಆ ಮಹಾವೀರಕುಮಾರರೆಲ್ಲರೂ ತಮ್ಮತಮ್ಮ ವಯಸ್ಸಿಗನುಗುಣವಾಗಿ ಸಾಲಾಗಿ ನಿಂತು ಅದ್ಭುತವಾದ ಅಸ್ತ್ರಕಾರ್ಯಗಳನ್ನು ನಡೆಸಿದರು. ಅಲ್ಲಿ ನೋಡುತಿದ್ದ ಜನರ ಪುಷ್ಪಹಾರಗಳಲ್ಲಿ ಅವರ ಬಾಣಗಳು ಬಿದ್ದುವು. ಕೆಲವರು ತಲೆಯಲ್ಲಿ ಮುಡಿದ ಹೂಗಳಲ್ಲಿ ನಾಟಿದುವು. ಕೆಲವರು ತಮ್ಮತಮ್ಮ ಹೆಸರಿನಿಂದ ಕೂಡಿದ ನಾನಾಬಗೆಯ ಬಾಣಗಳನ್ನು ಚಮತ್ಕಾರದಿಂದ ಬಿಟ್ಟು, ಸಣ್ಣ ದೊಡ್ಡ ಲಕ್ಷ್ಯಗಳನ್ನೆಲ್ಲ ಭೇದಿಸಿದರು. ಜನರಲ್ಲಿ ಕೆಲವರು, ಬಾಣಗಳು ತಮ್ಮ ಮೇಲೆ ಬೀಳುವುದೆಂಬ ಭಯದಿಂದ ತಲೆಗಳನ್ನು ಬಗ್ಗಿಸಿಕೊಂಡರು. ಮತ್ತೆ ಕೆಲವರು ನಿರ್ಭಯವಾಗಿಯೇ ನಿಂತು ಅವರ ಬಾಣಚಮತ್ಕಾರವನ್ನು ಆಶ್ಚರ್ಯದಿಂದ ನೋಡುತಿದ್ದರು. ಆ ಕೌರವಕುಮಾರರು ಕುದುರೆಗಳಮೇಲೆ ಸವಾರಿಮಾಡುತ್ತ, ತಮ್ಮ ನಾಮಾಂಕಿತಗಳಾದ ವಿವಿಧಬಾಣಗಳನ್ನು ಬಹುಚಮತ್ಕಾರದಿಂದ ಪ್ರಯೋಗಿಸಿ, ಲಕ್ಷ್ಯಗಳನ್ನು ಭೇದಿಸಿದರು. ಧನುರ್ಬಾಣಗಳನ್ನು ಹಿಡಿದ ಆ ರಾಜಕುಮಾರರ ಸಮೂಹವು ಗಂಧರ್ವನಗರದಂತೆ ಅದ್ಭುತರೂಪವಾಗಿರುವುದನ್ನು ನೋಡಿ ಅಲ್ಲಿರುವ ಜನರೆಲ್ಲ ಆಶ್ಚರ್ಯದಿಂದ ಬೆರಗಾದರು. ಅಲ್ಲಿ ಸೇರಿದ್ದ ಸಾವಿರಾರು ಜನರು ಆಶ್ಚರ್ಯದಿಂದ ಕಣ್ಣುಗಳನ್ನರಳಿಸಿ, "ಭಲೇ! ಭಲೇ!" ಎಂದು

ಕೊಂಡಾಡಿದರು. ಆ ರಾಜಕುಮಾರರು ರಥಗಳನ್ನೂ ಆನೆಗಳನ್ನೂ ಏರಿ ಧನುರ್ಯುದ್ಧವನ್ನೂ, ಬಾಹುಯುದ್ಧವನ್ನೂ, ರಥಯುದ್ಧವನ್ನೂ ಮಾಡಿ ತೋರಿಸಿದರು. ಮತ್ತು ಕತ್ತಿಗಳನ್ನೂ ಈಟಿಗಳನ್ನೂ ಹಿಡಿದು ವಿವಿಧ ಯುದ್ಧಕ್ರಮಗಳನ್ನೆಲ್ಲ ತೋರಿಸಿದರು. ಕತ್ತಿಗುರಾಣಿಗಳನ್ನು ತಿರುಗಿಸುವುದರಲ್ಲಿ ಅವರ ಚಾತುರ್ಯವನ್ನೂ, ಅವರ ಅಂಗವಿನ್ಯಾಸಗಳನ್ನೂ, ಅವರ ಗಂಭೀರಭಾವವನ್ನೂ, ಅವರ ಆಸನ ದೃಢತೆಯನ್ನೂ, ಅವರ ದೃಢ ಮುಷ್ಟಿಯನ್ನೂ, ಶಕ್ತಿಸಾಹಸಗಳನ್ನೂ ಇವುಗಳನ್ನೆಲ್ಲ ನೋಡಿ ಜನ ರೆಲ್ಲರೂ ಬೆರಗಾದರು. ದುರ್ಯೋಧನನೂ ಭೀಮನೂ ಯಾವಾಗಲೂ ಒಬ್ಬರಿಗೊಬ್ಬರು ಸ್ಪರ್ಧಾಳುಗಳಾದುದರಿಂದ ಇದಿರಿದಿರಾಗಿ ಕೈಯಲ್ಲಿ ಗದೆಯ ನ್ನೆತ್ತಿ ಹಿಡಿದು, ಶಿಖರವುಳ್ಳ ಎರಡು ಪರ್ವತಗಳಂತೆ ರಂಗವನ್ನು ಪ್ರವೇಶಿಸಿ ದರು. ವಿಶೇಷ ಪರಾಕ್ರಮಿಗಳಾದ ಅವರಿಬ್ಬರೂ ದಟ್ಟಿಗಳನ್ನು ಕಟ್ಟಿ ಕೊಂಡು, ಒಂದು ಹೆಣ್ಣಾನೆಗಾಗಿ ಮದಿಸಿದ ಸಲಗಗಳೆರಡು ಹೋರಾಡು ವಂತೆ ರಂಗಕ್ಕೆ ಹೋದರು. ಆ ಬಲಶಾಲಿಗಳಿಬ್ಬರೂ ಮದಿಸಿದ ಎರಡು ಗೂಳಿಗಳಂತೆ ಅಸ್ತ್ರವಿದ್ಯಾನಿಯಮಕ್ಕನುಗುಣವಾಗಿ ಎಡಕ್ಕೂ ಬಲಕ್ಕೂ ತಿರುಗುತ್ತಾ, ಅನೇಕಾವರ್ತಿ ಸುತ್ತಾಡಿದರು. ಧೃತರಾಷ್ಟ್ರನಿಗೆ ವಿದುರನೂ, ಗಾಂಧಾರಿಗೆ ಕುಂತಿಯೂ ಸಮೀಪದಲ್ಲಿದ್ದು ಆಯಾ ರಾಜಕುಮಾರರ ಶಸ್ತ್ರಕೌಶಲ್ಯಗಳನ್ನೆಲ್ಲ ಆಗಾಗ ವಿವರಿಸುತಿದ್ದರು.

ಇದು ನೂರನಾಲ್ವತ್ತುನಾಲ್ಕನೆಯ ಅಧ್ಯಾಯವು.

---

## ಅರ್ಜುನನ ಪರೀಕ್ಷೆ.

ಜನಮೇಜಯರಾಜಾ! ಒಂದು ಕಡೆಯಲ್ಲಿ ದುರ್ಯೋಧನನೂ, ಮತ್ತೊಂದು ಕಡೆಯಲ್ಲಿ ಭೀಮನೂ ರಂಗಸ್ಥಳದಲ್ಲಿ ಬಂದು ನಿಂತಾಗ, ಅವ ರವರಲ್ಲಿ ತಮಗಿರುವ ಪಕ್ಷಪಾತದಿಂದ, ಅಲ್ಲಿ ನೆರೆದು ನೋಡುತಿದ್ದ ಜನರಲ್ಲಿ ಎರಡು ಕಕ್ಷಿಗಳೇರ್ಪಟ್ಟುವು. "ಕುರುರಾಜನಿಗೆ ಜ್ಯು" ಎಂದು ಕೆಲ ವರೂ, "ಭೀಮನಿಗೆ ಜ್ಯು" ಎಂದು ಬೇರೆ ಕೆಲವರೂ ಕೂಗಲಾರಂಭಿಸಿ

ದರು. ಜನಗಳಲ್ಲಿ ದೊಡ್ಡ ಘೋಷವುಂಟಾಯಿತು. ಕಲಗಿದ ಸಮು ದ್ರದಂತೆ ಬಹಳ ವ್ಯಾಕುಲವಾಗಿರುವ ರಂಗಸ್ಥಳವನ್ನು ನೋಡಿ ದ್ರೋಣನು ಬಹಳ ಧೀಮಂತನಾದುದರಿಂದ, ತನ್ನ ಮಗನಾದ ಅಶ್ವತ್ಥಾಮನನ್ನು ಕರೆ ದು "ಕುಮಾರಾ! ಅದೋ! ಭೀಮ ದುರ್ಯೋಧನರಿಬ್ಬರೂ ಏಕಕಾಲ ದಲ್ಲಿ ರಂಗವನ್ನು ಪ್ರವೇಶಿಸಿರುವರು. ಏಕಕಾಲದಲ್ಲಿ ಇಬ್ಬರೂ ಸೇರು ವುದರಿಂದ ದೊಡ್ಡ ಕ್ಷೋಭಕ್ಕೆ ಕಾರಣವಾಗುವುದು. ಅವರನ್ನು ಬೇಡ ವೆಂದು ತಡೆದು ಹಿಂದಕ್ಕೆ ಕಳುಹಿಸಿಬಿಡು. ಇಬ್ಬರೂ ಮಹಾವೀರ್ಯವು ಳ್ಳವರು. ಇಬ್ಬರೂ ಚೆನ್ನಾಗಿ ಯುದ್ಧಶಿಕ್ಷೆಯನ್ನು ಹೊಂದಿದವರು. ಇವ ರಿಂದ ನಿಷ್ಕಾರಣಪ್ರಕೋಪಕ್ಕೆ ಅವಕಾಶವುಂಟಾಗಬಾರದು" ಎಂದನು. ತಂದೆಯ ಆಜ್ಞೆಯನ್ನು ಕೇಳಿದೊಡನೆ ಅಶ್ವತ್ಥಾಮನು ಥಟ್ಟನೆ ಎದ್ದು ಬಂದು, ಅವರನ್ನು ತಡೆದು ನಿಲ್ಲಿಸಿ "ಭೀಮಾ! ಗುರುವಿನ ಆಜ್ಞೆ! ಬೇಡ ನಿಲ್ಲು! ಗಾಂಧಾರೀಕುಮಾರಾ! ಗುರುವಿಗೆ ಸಮ್ಮತವಿಲ್ಲ. ಬಿಟ್ಟುಬಿಡು" ನಿಮ್ಮನಿಮ್ಮ ಸಾಹಸವೂ, ನಿಮ್ಮ ಶಿಕ್ಷಾಚಾತುರ್ಯವೂ ಸಾಕು! ನಿಲ್ಲಿಸಿ ಬಿಡಿರಿ" ಎಂದು ನಿವಾರಿಸಿದನು. ಪ್ರಳಯಮಾರುತದಿಂದ ಕಲಗಿದ ಸಮುದ್ರಜಲವು, ಸಮುದ್ರದ ವೇಲೆಯಿಂದ ಹೇಗೋ ಹಾಗೆ, ಗದೆಗಳ ನ್ನೆತ್ತಿಕೊಂಡು ಮುಂದೆ ನುಗ್ಗುತ್ತಿದ್ದ ಆ ಭೀಮದುರ್ಯೋಧನರಿಬ್ಬರೂ ಅಶ್ವತ್ಥಾಮನಿಂದ ನಿವಾರಿಸಲ್ಪಟ್ಟು ಥಟ್ಟನೆ ನಿಂತುಬಿಟ್ಟರು. ಇಷ್ಟರಲ್ಲಿ ದ್ರೋಣನೇ ರಂಗಮಧ್ಯಕ್ಕೆ ಬಂದು ನಿಂತು, ಸುತ್ತಲೂ ನುಡಿಸುತಿದ್ದ ವಾದ್ಯಗಳನ್ನು ನಿಲ್ಲಿಸುವಂತೆ ಹೇಳಿ, ಅಲ್ಲಿ ನೆರೆದಿದ್ದ ಜನರನ್ನು ನೋಡಿ ಹೀಗೆಂದು ಹೇಳುವನು. "ಈ ಭೀಮದುರ್ಯೋಧನರ ಶಕ್ತಿಪರೀಕ್ಷೆಯು ತತ್ಕಾಲಕ್ಕೆ ಹಾಗಿರಲಿ! ನನ್ನ ಪುತ್ರನಿಗಿಂತಲೂ ನನಗೆ ಅಧಿಕಪ್ರಿಯನೂ ಸರ್ವಾಸ್ತ್ರವಿಶಾರದನೂ, ಇಂದ್ರಪುತ್ರನೂ, ಇಂದ್ರಾನುಜನಾದ ವಿಷ್ಣುವಿಗೆ ಸಮಾನನೂ ಆದ ಅರ್ಜುನನು ಮುಂದೆ ಬಂದು, ತನ್ನ ಧನುರ್ವಿದ್ಯೆಯ ಚಾತುರ್ಯವನ್ನು ತೋರಿಸಲಿ" ಎಂದನು. ಗುರುವಿನ ಆಜ್ಞೆಯಾದೊಡನೆ ಅರ್ಜುನನು ಬಿಲ್ಲು, ಬಾಣಪೂರ್ಣವಾದ ಬತ್ತಳಿಕೆ, ಕೈಗೌಸಣಿಗೆ, ಸುವ ರ್ಣಕವಚ, ಮುಂತಾದುವನ್ನೆಲ್ಲ ಧರಿಸಿ, ಮಂಗಳಕಾರ್ಯಗಳನ್ನೆಲ್ಲ ಮುಗಿಸಿ ಏಕಕಾಲದಲ್ಲಿ ಬಿಸಿಲು, ಕಾಮನಬಿಲ್ಲು, ಮಿಂಚು, ಸಂಜೆಗೆಂಪು ಇವು

ಮೂರರಿಂದ ಕೂಡಿ ಪ್ರಕಾಶಿಸುವ ಮಹಾಮೇಘದಂತೆ, ರಣರಂಗಮಧ್ಯಕ್ಕೆ ಬಂದುನಿಂತನು. ಆಗ ರಂಗಸ್ಥಳಕ್ಕೇ ಒಂದು ವಿಕಾಸವುಂಟಾದಂತೆ ತೋರಿತು. ನಾಲ್ಕು ಕಡೆಗಳಿಂದಲೂ ಶಂಖ ಭೇರೀ ಮೃದಂಗಾದಿ ವಾದ್ಯಗಳು ಮೊಳಗಿದುವು. ಆಗ ಸುತ್ತಲೂ ನೆರದಿದ್ದ ಜನರು ತಮ್ಮೊಳಗೆ ಅನ್ಯೋನ್ಯವಾಗಿ "ಇದೋ! ಇವನೇ ಪಾಂಡವರಲ್ಲಿ ಮಧ್ಯಮನೂ, ಶ್ರೀಮಂತನೂ ಆದ ಅರ್ಜುನನೆಂಬವನು. ಕುಂತೀದೇವಿಯ ಮಗನು. ಇವನು ಸಾಕ್ಷಾದ್ದೇವೇಂದ್ರನ ಪುತ್ರನು. ಕೌರವರಿಗೆಲ್ಲ ಇವನೇ ರಕ್ಷಕನು. ಇವನು ಅಸ್ತ್ರಜ್ಞರಲ್ಲಿ ಮೇಲಾದವನು. ಧಾರ್ಮಿಕರಲ್ಲಿ ಶ್ರೇಷ್ಠನು. ಶೀಲವಂತರಲ್ಲಿಯೂ ಶ್ರೇಷ್ಠನು. ಜ್ಞಾನನಿಧಿಯೆನಿಸಿದವನು" ಎಂದು ಕೊಂಡಾಡುತಿದ್ದರು. ಹೀಗೆ ಜನರು ಗುಂಪಾಗಿ ಆಡಿಕೊಳ್ಳುತಿದ್ದ ಮಾತುಗಳನ್ನು ಕೇಳಿ ಅಲ್ಲಿದ್ದ ಕುಂತಿಗೆ ಕಣ್ಣುಗಳಲ್ಲಿ ಆನಂದಬಾಷ್ಪವು ಉಕ್ಕಿಬಂದು, ಸ್ತನಗಳು ತೊರೆಯಿಕ್ಕಿ ಅವಳ ಎದೆಯು ನೆನೆಯಿತು. ಧೃತರಾಷ್ಟ್ರನಿಗೂ ಈ ಕೋಲಾಹಲಗಳು ಕಿವಿಗೆ ಬೀಳಲು, ಅವನು ಮನಸ್ಸಿನಲ್ಲಿ ಕುತೂಹಲಗೊಂಡು ಪಕ್ಕದಲ್ಲಿದ್ದ ವಿದುರನನ್ನು ಕುರಿತು "ಓ ಕ್ಷತ್ತಾ! ಏನಿದು? ಸಮುದ್ರವು ಕಲಗಿದಂತೆ ಜನಗಳ ಗುಂಪಿನಿಂದ ಇಷ್ಟೊಂದು ಕೋಲಾಹಲವು ಕೇಳಿಸಲು ಕಾರಣವೇನು?" ಎಂದನು. ಅದಕ್ಕಾ ವಿದುರನು "ಮಹಾರಾಜಾ! ಅದೋ! ಪಾಂಡುಪುತ್ರನಾದ ಫಲ್ಗುನನು ಕವಚಧಾರಿಯಾಗಿ ರಂಗಮಧ್ಯಕ್ಕೆ ಬಂದು ನಿಂತನು. ಅದಕ್ಕಾಗಿಯೇ ಈ ಸಂತೋಷಕೋಲಾಹಲವು" ಎಂದನು. ಆಗ ಧೃತರಾಷ್ಟ್ರನು "ಮಹಾಮತೀ! ನಾನು ಧನ್ಯನಾದೆನು. ಅನುಗೃಹೀತನಾದೆನು. ಪೃಥೆಯೆಂಬ ಅರಣಿಯಿಂದ ಉತ್ಪನ್ನರಾದ ಮೂರುಮಂದಿ ಪಾಂಡವರೆಂಬ ಅಗ್ನಿತ್ರಯದಿಂದ ನಾವು ರಕ್ಷಿಸಲ್ಪಟ್ಟೆವು" ಎಂದು ಆನಂದಪರವಶನಾಗಿದ್ದನು. ಹೀಗೆ ಆ ರಂಗಸ್ಥಲವೆಲ್ಲವೂ ಉತ್ಸಾಹಕೋಲಾಹಲಗಳಿಂದ ತುಂಬಿದ್ದು, ಆಮೇಲೆ ಹೇಗೋ ಆ ಗದ್ದಲವು ಸ್ವಲ್ಪ ಅಡಗಿ ಶಾಂತವಾದಮೇಲೆ, ಅರ್ಜುನನು ಆಚಾರ್ಯನ ಮುಂದೆ ತನ್ನ ಅಸ್ತ್ರ ಚಾತುರ್ಯವನ್ನು ತೋರಿಸುವುದಕ್ಕೆ ಆರಂಭಿಸಿದನು. ಅವನು ಮೊದಲು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿ ಬೆಂಕಿಯನ್ನು ಹುಟ್ಟಿಸಿದನು. ಆಮೇಲೆ ವಾರುಣಾಸ್ತ್ರದಿಂದ ನೀರನ್ನು ಹುಟ್ಟಿಸಿ ಆ ಬೆಂಕಿಯು

ನ್ನಾರಿಸಿದನು. ಹಾಗೆಯೇ ವಾಯವ್ಯಾಸ್ತ್ರದಿಂದ ವಾಯುವನ್ನೂ, ಪರ್ಜ ನ್ಯಾಸ್ತ್ರದಿಂದ ಮೇಘಗಳನ್ನೂ, ಭೌಮಾಸ್ತ್ರದಿಂದ ಭೂಮಿಯನ್ನೂ, ಪರ್ವ ತಾಸ್ತ್ರದಿಂದ ಪರ್ವತಗಳನ್ನೂ ಸೃಷ್ಟಿಸಿದನು. ಆಮೇಲೆ ಅಂತರ್ಧಾನಾಸ್ತ್ರ ದಿಂದ ಇದ್ದಕ್ಕಿದ್ದಹಾಗೆಯೇ ಅಲ್ಲಿದ್ದವರಿಗೆ ತಾನು ಅದೃಶ್ಯನಾದನು. ಆಮೇಲೆ ತಿರುಗಿ ಎಲ್ಲರಿದಿರಿಗೆ ಕಾಣಿಸಿಕೊಂಡನು. ಒಮ್ಮೆ ಅತ್ಯುನ್ನತಾಕಾರ ದಿಂದ ಕಾಣುವನು! ಉತ್ತರಕ್ಷಣದಲ್ಲಿಯೇ ಕುಳ್ಳನಾಗಿ ಕಾಣುವನು. ಒಮ್ಮೆ ರಥದಮುಂದೆ ಇರುವನು. ಮತ್ತೊಮ್ಮೆ ರಥಮಧ್ಯದಲ್ಲಿ ಕಾಣಿಸುವನು. ಇನ್ನೊಂದು ಕ್ಷಣಕ್ಕೆ ನೆಲದಮೇಲೆ ನಿಂತಿರುವಂತೆ ಕಾಣುವನು. ದ್ರೋಣ ನಿಗೆ ಪರಮ ಪ್ರಿಯಶಿಷ್ಯನಾದ ಆ ಅರ್ಜುನನು, ಸೌಷ್ಠವವೆಂಬ ಚಾತುರ್ಯ ದಿಂದ ವಿವಿಧ ಬಾಣಗಳನ್ನು ಪ್ರಯೋಗಿಸಿ, ಅತಿಮೃದುವೂ, ಅತಿಸೂಕ್ಷ್ಮ ವೂ, ಮತ್ತು ಬಹಳ ದೊಡ್ಡದೂ ಆದ ಬೇರೆಬೇರೆ ಲಕ್ಷ್ಯಗಳನ್ನೆಲ್ಲ ಭೇದಿಸಿ, ತನ್ನ ಹಸ್ತಚಮತ್ಕಾರವನ್ನು ತೋರಿಸಿದನು. ಕಬ್ಬಿಣದಿಂದ ಮಾಡಿ ಗಿರ ಗಿರನೆ ಸುತ್ತುತಿದ್ದ ಒಂದು ವರಾಹದ ಬಾಯಿಯೊಳಕ್ಕೆ ಗುರಿಯಿಟ್ಟು, ಏಕ ಕಾಲದಲ್ಲಿ ಐದು ಬಾಣಗಳನ್ನು ಒಂದೇ ಬಾಣದಂತೆ ಕಾಣುವಹಾಗೆ ಬೇರೆ ಬೇರೆಯಾಗಿ ಬಿಟ್ಟನು. ಮೇಲಿಂದ ಹಗ್ಗದಲ್ಲಿ ತೂಗುಬಿಟ್ಟು ನಿಲ್ಲದೆ ಆಡು ತ್ತಿರುವ ಒಂದು ಹಸುವಿನ ಕೊಂಬಿನ ದ್ವಾರದಲ್ಲಿ ಏಕಕಾಲದಲ್ಲಿ ಇಪ್ಪ ತ್ತೊಂದು ಬಾಣಗಳನ್ನು ಹುಗಿಸಿದನು. ಹೀಗೆಯೇ ಇನ್ನೂ ಬಿಲ್ಲಿನಲ್ಲಿಯೂ, ಕತ್ತಿಯಲ್ಲಿಯೂ ನಾನಾವಿಧಚಮತ್ಕಾರಗಳನ್ನು ತೋರಿಸಿದುದಲ್ಲದೆ, ಗದೆ ಯಲ್ಲಿಯೂ, ಮಂಡಲಗತಿಯಲ್ಲಿಯೂ ತನ್ನ ಅಪಾರಚಾತುರ್ಯವನ್ನು ತೋರಿಸಿದನು. ಹೀಗೆ ಅರ್ಜುನನು ತನ್ನ ಚಮತ್ಕಾರಗಳನ್ನೆಲ್ಲ ತೋರಿಸಿ ಮುಗಿಸಿದುದಾಯಿತು. ಸಭೆಯೆಲ್ಲವೂ ನಿಶ್ಶಬ್ದವಾಗಿ ನೋಡುತಿದ್ದಿತು. ವಾ ದ್ಯಧ್ವನಿಗಳೆಲ್ಲವೂ ನಿಂತಿದ್ದುವು. ಇಷ್ಟರಲ್ಲಿ ಆ ಗರಡಿಯ ಮೈದಾನಕ್ಕೆ ಪ್ರವೇಶಿಸುವ ಬಾಗಿಲಕಡೆಯಲ್ಲಿ ವಜ್ರಘಾತದಂತೆ ಅತ್ಯಂತ ಬಲಸೂಚಕವಾ ಗಿ ತೋಳನ್ನು ತಟ್ಟುವ ಧ್ವನಿಯೊಂದು ಎಲ್ಲರ ಕಿವಿಗೂ ಕೇಳಿಬಂದಿತು. ಆ ಧ್ವನಿಯನ್ನು ಕೇಳಿ ಅಲ್ಲಿ ನೆರೆದಿದ್ದ ಜನರಿಗೆಲ್ಲ ದಿಗ್ಭ್ರಮೆಹಿಡಿದಂತಾಯಿತು. ಅಲ್ಲಿದ್ದ ಜನರೆಲ್ಲರೂ ಬೆಜ್ಜರಗೊಂಡು "ಆಹಾ! ಏನಿದು? ಬೆಟ್ಟಗಳೇನಾ ದರೂ ಒಡೆದುಬಿದ್ದುವೋ? ಭೂಮಿಯೇ ಭಿನ್ನವಾಯಿತೋ? ಜಲಪೂರ್ಣ

ಗಳಾದ ಮಹಾ ಮೇಘಗಳೇನಾದರೂ ಆಕಾಶದಲ್ಲಿ ಬಂದು ತುಂಬಿಕೊಂಡಿವೆಯೋ ?'' ಎಂದು ವಿಧವಿಧವಾಗಿ ಯೋಚಿಸುತ್ತ, ಎಲ್ಲರೂ ಆ ಬಾಗಿಲ ಕಡೆಗೇ ಕಣ್ಣಿಟ್ಟು ನೋಡುತಿದ್ದರು. ಒಂದುಕಡೆಯಲ್ಲಿ ದ್ರೋಣನು (ಸಾವಿತ್ರವೆಂದು ಕರೆಯಲ್ಪಡುವ) ಐದು ಹಸ್ತನಕ್ಷತ್ರಗಳೊಡಗೂಡಿದ ಚಂದ್ರನಂತೆ, ಪಂಚಪಾಂಡವರೊಡನೆ ಸೇರಿ ನೋಡುತಿದ್ದನು. ಇತ್ತಲಾಗಿ ದುರ್ಯೋಧನನು ಥಟ್ಟನೆ ಮೇಲಕ್ಕೆದ್ದು, ಆರ್ಭಟದಿಂದ ಮುಂದುವರಿಯುತ್ತಿರುವುದನ್ನು ಕಂಡು, ಅವನ ನೂರುಮಂದಿ ತಮ್ಮಂದಿರೂ, ಅಶ್ವತ್ಥಾಮನೂ ಸುತ್ತಿನಿಂತು ತಡೆದರು. ಹೀಗೆ ಕೈಯಲ್ಲಿ ಎತ್ತಿಹಿಡಿದ ಆಯುಧಗಳೊಡನೆ ಅವರೆಲ್ಲರೂ ಸುತ್ತಿಕೊಂಡಿದ್ದಾಗ ದುರ್ಯೋಧನನು, ಹಿಂದೆ ದಾನವರ ಸಂಹಾರಕಾಲದಲ್ಲ ದೇವಗಣಗಳಿಂದ ಪರಿವೃತನಾದ ದೇವೇಂದ್ರನಂತೆ ಕಾಣಿಸುತಿದ್ದನು.

ಇದು ನೂರನಾಲ್ವತ್ತೈದನೆಯ ಅಧ್ಯಾಯವು.

ಕರ್ಣನ ಪರೀಕ್ಷೆ. ಕರ್ಣಾರ್ಜುನರ ಯುದ್ಧಪ್ರಸಕ್ತಿ. ಕೃಪನು ಕರ್ಣನನ್ನು ಧಿಕ್ಕರಿಸಿದುದು. ಕರ್ಣನಿಗೆ ದುರ್ಯೋಧನನು ಅಂಗರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದುದು.

ಓ ಜನಮೇಜಯರಾಜಾ ! ಕೇಳು ! ಹೀಗೆ ಜನಗಳ ಕೂಟವು ಕೂಡಿರುವ ಸಮಯದಲ್ಲಿ, ಕರ್ಣನು ಉಲ್ಲಾಸದಿಂದ ಅರಳಿದ ಕಣ್ಣುಳ್ಳವನಾಗಿ ರಂಗಸ್ಥಳಕ್ಕೆ ಪ್ರವೇಶಿಸಿದನು. ಅವನು ಬರುವಾಗಲೇ ಅವನ ದಿವ್ಯತೇಜಸ್ಸನ್ನು ನೋಡಿ ಬೆರಗಾಗಿ ಜನರೆಲ್ಲರೂ ಹಿಂದೆ ಸರಿದು ಅವನಿಗೆ ದಾರಿಯನ್ನು ಬಿಟ್ಟರು. ಆ ಕರ್ಣನಿಗೆ ಜನ್ಮಸಿದ್ಧವಾದ ಕವಚಕುಂಡಲಗಳು ಅವನ ತೇಜಸ್ಸಿಗೆ ಮತ್ತಷ್ಟು ಕಳೆಯೇರಿಸುತ್ತಿದ್ದುವು. ಕೈಯಲ್ಲಿ ಬಿಲ್ಲು ! ಕಟಿಪ್ರದೇಶದಲ್ಲಿ ಕತ್ತಿ ! ಈ ವೇಷದೊಡನೆ ಜಂಗಮಪರ್ವತದಂತೆ ಠೀವಿಯಿಂದ ಬರುತ್ತಿದ್ದನು. ಕುಂತಿಗೆ ಕನ್ಯಾವಸ್ಥೆಯಲ್ಲಿಯೇ ಹುಟ್ಟಿದವನು. ಅಪಾರ ಕೀರ್ತಿಯುಳ್ಳವನು. ವಿಶಾಲವಾದ ಮತ್ತು ಉಬ್ಬಿದ ಕಣ್ಣು

ಗಳಿಂದ ಕೂಡಿದವನು. ಸಾಕ್ಷಾತ್ ಸೂರ್ಯದೇವನ ಅಂಶದಿಂದ ಜನಿಸಿದವನು. ಸಿಂಹದಂತೆಯೂ, ಗೂಳಿಯಂತೆಯೂ, ಮದದಾನೆಯಂತೆಯೂ ಅಸಾಧಾರಣವಾದ ಬಲ ವೀರ್ಯ ಪರಾಕ್ರಮದಿಂದ ಕೂಡಿರುವವನು. ತೇಜಸ್ಸು, ಕಾಂತಿ, ಪ್ರಕಾಶ, ಈ ಮೂರು ಗುಣಗಳಿಂದ ಸೂರ್ಯನಿಗೂ, ಚಂದ್ರನಿಗೂ, ಅಗ್ನಿಗೂ ಸಮಾನನಾಗಿರುವನು. ಸುವರ್ಣಮಯುವಾದ ತಾಲವೃಕ್ಷದಂತೆ ಉನ್ನತಾಕೃತಿ! ಸಿಹ್ಮದಂತೆ ಮೈಕಟ್ಟು! ಎಣಿಸುವುದಕ್ಕಾಗದ ಉತ್ತಮ ಗುಣಗಳು. ಇಂತಹ ಸಮಸ್ತ ಸೌಭಾಗ್ಯಲಕ್ಷಣಗಳಿಂದ ಕೂಡಿದ ಆ ಕರ್ಣನು ಮುಂದೆ ಬಂದು, ರಂಗಸ್ಥಳವನ್ನು ಸುತ್ತಲೂ ಕಣ್ಣಿಟ್ಟು ನೋಡಿದನು. ಅಲಕ್ಷ್ಯಭಾವದಿಂದ ಅಲ್ಲಿನ ಸನ್ನಿವೇಶವನ್ನೆಲ್ಲ ನೋಡುತ್ತಾ, ಕೇವಲ ನಿರ್ಬಂಧಕ್ಕಾಗಿ ಮಾಡುವಂತೆ ದ್ರೋಣಕೃಪರಿಬ್ಬರಿಗೂ ನಮಸ್ಕರಿಸಿದನು. ಇವನ ಹೆಮ್ಮೆಯನ್ನು ನೋಡಿ ಅಲ್ಲಿ ನೆರೆದಿದ್ದ ಜನವೆಲ್ಲವೂ 'ಇವನು ಯಾವನೋ?' ಎಂದು ಆಶ್ಚರ್ಯಪರವಶವಾಗಿ ನಟ್ಟಕಣ್ಣಿನಿಂದ ಸ್ತಬ್ಧವಾಗಿ ನೋಡುತ್ತಿದ್ದಿತು. ಹೀಗೆ ಎಲ್ಲರೂ ಕುತೂಹಲದಿಂದ ನೋಡುತ್ತಿರುವಾಗ ಕರ್ಣನು ತನ್ನ ಸಹೋದರನಾದ ಅರ್ಜುನನನ್ನು ಕುರಿತು ಗಂಭೀರಧ್ವನಿಯಿಂದ "ಪಾರ್ಥ! ನೀನು ಇಲ್ಲಿ ಯಾವ ಕಾರ್ಯವನ್ನು ಮಾಡಿದೆಯೋ, ಅದಕ್ಕಿಂತಲೂ ಅತಿಶಯವಾದ ಕಾರ್ಯವನ್ನು ಈಗ ನಾನು, ಈ ಎಲ್ಲಾ ಜನರ ಮುಂದೆ, ಮಾಡಬಲ್ಲೆನು. ನಿನ್ನ ಸಾಹಸಕ್ಕಾಗಿ ನಿನ್ನಲ್ಲಿ ನೀನೇ ವೃಥಾ ಅಹಂಕಾರಪಟ್ಟು ಹಿಗ್ಗಬೇಡ" ಎಂದನು. ಕರ್ಣನ ಬಾಯಿಂದ ಈ ಮಾತು ಮುಗಿಯುವಷ್ಟರಲ್ಲಿಯೇ ಅಲ್ಲಿದ್ದ ಜನರು ಯಂತ್ರದಿಂದ ಹಾರಿಸಲ್ಪಟ್ಟ ಬೊಂಬೆಗಳಂತೆ ಎಲ್ಲಾ ಕಡೆಯೂ ಏಕಕಾಲದಲ್ಲಿ ಮೇಲೆದ್ದು ನಿಂತು ನೋಡುತ್ತಿದ್ದರು. ಕರ್ಣನ ಹೆಮ್ಮೆಯ ಮಾತನ್ನು ಕೇಳಿ ದುರ್ಯೋಧನನಿಗೆ ಅಪಾರ ಸಂತೋಷವುಂಟಾಯಿತು. ಅತ್ತಲಾಗಿ ಅರ್ಜುನನಿಗಾದರೋ, ಕರ್ಣನು ಅಷ್ಟು ಜನರ ಮುಂದೆ ತನ್ನನ್ನು ಧಿಕ್ಕರಿಸಿ ಹೇಳಿದ ಮಾತನ್ನು ಕೇಳಿ, ಲಜ್ಜೆಯೂ, ಕೋಪವೂ ಮಿತಿಮಿರಿತು. ಆಮೇಲೆ ಕರ್ಣನು ಆಚಾರ್ಯನಾದ ದ್ರೋಣನ ಅನುಮತಿಯನ್ನು ಪಡೆದು ಅರ್ಜುನನು ಮಾಡಿದಂತೆಯೇ, ತಾನೂ ತನ್ನ ಚಮತ್ಕಾರಗಳನ್ನೆಲ್ಲ ತೋರಿಸಿದನು. ಒಡನೆಯೇ ದುರ್ಯೋಧನನು ತನ್ನ

ತಮ್ಮಂದಿರೊಡನೆ ಸಂತೋಷದಿಂದೆದ್ದು ಬಂದು, ಕರ್ಣನನ್ನು ಆಲಿಂಗಿಸಿ, "ಓ ಮಹಾಬಾಹೂ! ನೀನು ನಮ್ಮೆಲ್ಲರ ಮಾನವನ್ನುಳಿಸಿದೆ. ನಿನಗೆ ಸುಖಾಗಮನವು. ಅದೃಷ್ಟವಶದಿಂದ ನೀನು ನನಗೆ ಲಭಿಸಿದೆ. ನನ್ನನ್ನೂ, ಈ ನನ್ನ ರಾಜ್ಯವನ್ನೂ ನೀನು ಯಥೇಷ್ಟವಾಗಿ ಅನುಭವಿಸು" ಎಂದನು. ಅದಕ್ಕಾ ಕರ್ಣನು ಮಿತ್ರಾ! ನನಗೆ ಇವೆಲ್ಲವನ್ನೂ ಮಾಡಿದವನು ನೀನೇ. ನನ್ನಲ್ಲಿ ನಿನ್ನ ಸ್ನೇಹವು ಸ್ಥಿರವಾಗಿರಬೇಕೆಂದು ಕೋರುವೆನು. ಈಗ ನಾನು ಅರ್ಜುನನೊಡನೆ ದ್ವಂದ್ವಯುದ್ಧವನ್ನೂ ಮಾಡಬೇಕೆಂದು ಕೋರುವೆನು" ಎಂದನು. ಕರ್ಣನ ಮಾತನ್ನು ಕೇಳಿ ದುರ್ಯೋಧನನು ತಿರುಗಿ ಅವನನ್ನು ಆಲಿಂಗಿಸಿಕೊಂಡು, "ಭಲೆ! ಕರ್ಣಾ! ನಾನು ಅನುಭವಿಸತಕ್ಕ ರಾಜಭೋಗಗಳೆಲ್ಲವನ್ನೂ, ನೀನೂ ನನ್ನೊಡನೆ ಯಥೇಷ್ಟವಾಗಿ ಅನುಭವಿಸು. ನಮ್ಮ ಬಂಧುಗಳೆಲ್ಲರಿಗೂ ಪ್ರಿಯವನ್ನುಂಟುಮಾಡು. ನಮ್ಮ ವೈರಿಗಳ ತಲೆಯನ್ನು ನಿನ್ನ ಪಾದದಿಂದ ಮೆಟ್ಟು" ಎಂದನು.

ಓ ಜನಮೇಜಯರಾಜಾ! ಅರ್ಜುನನಿಗೆ ಈ ಹೆಮ್ಮೆಯ ಮಾತುಗಳು ಕಿವಿಗೆ ಬಿದ್ದಾಗ, ಅವನನ್ನು ಎತ್ತಿಹಾಕಿದಂತಾಯಿತು. ಆಗ ಅವನು ತನ್ನ ಸಹೋದರರಾದ ಕೌರವರೊಡನೆ ಪರ್ವತಾಕಾರವಾಗಿ ನಿಂತಿರುವ ಆ ಕರ್ಣನನ್ನು ನೋಡಿ, "ಕರ್ಣಾ! ನಿನ್ನ ಹೆಮ್ಮೆಯ ಮಾತುಗಳು ಹಾಗಿರಲಿ. ಶೀಘ್ರದಲ್ಲಿಯೇ ನಾನು ನಿನ್ನನ್ನು ಕೊಂದು, ಕರೆಯದೆ ಬಂದವರೂ, ಕೇಳದೆ ಹೇಳುವವರೂ ಯಾವ ಲೋಕವನ್ನು ಹೊಂದುವರೋ ಆ ಲೋಕಗಳಿಗೇ ನಿನ್ನನ್ನು ಸೇರಿಸುವೆನು" ಎಂದನು. ಆಗ ಕರ್ಣನು "ಓ ಫಲ್ಗುಣಾ! ಈ ರಂಗಸ್ಥಳವು ಎಲ್ಲರಿಗೂ ಸಮಾನವೇ. ನಿನಗೆಮಾತ್ರ ಇಲ್ಲಿ ವಿಶೇಷವೇನಿದೆ? ಕ್ಷತ್ರಿಯರೆಲ್ಲರೂ ಪರಾಕ್ರಮದಿಂದಲೇ ದೊಡ್ಡವರೆನಿಸುವರು. ರಾಜಧರ್ಮವೂ ಪರಾಕ್ರಮವನ್ನೇ ಅನುಸರಿಸಿರುವುದು. ಕೇವಲ ಬಲಹೀನರು ನುಡಿಯತಕ್ಕ ಈ ನಿಂದೆಗಳಿಂದ ಪ್ರಯೋಜನವೇನು? ಅಂತಹ ಶಕ್ತಿಯಿದ್ದರೆ ಬಾಣಗಳಿಂದ ನನಗೆ ಪ್ರತ್ಯುತ್ತರವನ್ನು ಕೊಡು. ಅರ್ಜುನಾ! ಇದೋ! ನಮ್ಮ ಗುರುವಾದ ಈ ದ್ರೋಣಾಚಾರ್ಯರ ಕಣ್ಣೆದಿರಾಗಿ, ಈಗಲೇ ಬಾಣಗಳಿಂದ ನಿನ್ನ ತಲೆಯನ್ನು ಹಾರಿಸು

ವೆನು ನೋಡು" ಎಂದನು. ಕೂಡಲೇ ಅರ್ಜುನನು ದ್ರೋಣಾಚಾರ್ಯರ ಅನುಮತಿಯನ್ನು ಕೇಳಿ, ಯುದ್ಧಕ್ಕೆ ಸಿದ್ಧನಾದನು. ಅವನ ಸಹೋದರರೆಲ್ಲರೂ ಬಂದು ಅವನನ್ನು ಅಪ್ಪಿಕೊಂಡರು. ಇಷ್ಟರಲ್ಲಿ ಇತ್ತಲಾಗಿ ಕರ್ಣನು ಅರ್ಜುನನೊಡನೆ ಯುದ್ಧಕ್ಕೆ ಸಿದ್ಧನಾಗಿ ಮುಂದೆ ಹೊರಟನು. ದುರ್ಯೋಧನನೂ, ಅವನ ಸಹೋದರರೂ ಕರ್ಣನನ್ನು ಬಂದು ಅಪ್ಪಿಕೊಂಡು ಅವನನ್ನು ಹುರಿಗೊಳಿಸಿ ಕಳುಹಿಸಿದರು. ಕರ್ಣನೂ ಧನುರ್ಬಾಣಗಳನ್ನು ಹಿಡಿದು ಯುದ್ಧಕ್ಕೆ ಬಂದು ನಿಂತನು. ಇಷ್ಟರಲ್ಲಿಯೇ ಆಕಾಶದಲ್ಲಿ ಮೇಘಗಳು ಆವರಿಸಿಕೊಂಡುವು. ಮಿಂಚು ಗುಡುಗುಗಳ ಆರ್ಭಟವು ಹೆಚ್ಚಿತು. ಇಂದ್ರಧನುಸ್ಸು ಮೊದಲಾದ ಮಳೆಯ ಚಿಹ್ನೆಗಳೆಲ್ಲವೂ ಕಾಣಿಸಿದುವು. ಕೊಕ್ಕರೆಗಳೆಂಬ ಹಲ್ಲನ್ನು ಬಿಟ್ಟು ನಗುವಂತಿರುವ ಮೇಘಗಳು ದಟ್ಟವಾಗಿ ಆವರಿಸಿಕೊಂಡಿದ್ದುವು ಕರ್ಣಾರ್ಜುನರಿಬ್ಬರೂ ಯುದ್ಧೋದ್ಯುತರಾಗಿದ್ದುದನ್ನು ಕೇಳಿ, ಇಂದ್ರನೂ ಕುತೂಹಲದಿಂದ ಅಂತರಿಕ್ಷದಲ್ಲಿ ಬಂದು ಸೇರಿದನು. ಆ ಇಂದ್ರನೇ ಪುತ್ರಸ್ನೇಹದಿಂದ ಕರ್ಣನ ಪರಾಕ್ರಮುಕ್ಕೆ ವಿಘ್ನವನ್ನು ತರಬೇಕೆಂದು ಮೇಘಗಳನ್ನು ಪ್ರೇರಿಸಿ ಅರ್ಜುನನು ಕಣ್ಣಿಗೆ ಕಾಣದಂತೆ ಮಾಡಿದನು. ಇದನ್ನು ನೋಡಿ ಸೂರ್ಯನು ತನ್ನ ಮಗನಮೇಲಿನ ಅಭಿಮಾನದಿಂದ ಆ ಮೇಘಗಳನ್ನೆಲ್ಲ ಅಡಗಿಸುತ್ತ ಬರಲು, ಆಗ ಮೇಘಛಾಯೆಯಲ್ಲಿ ಮರೆಸಿಹೋಗಿದ್ದ ಅರ್ಜುನನು ತಿರುಗಿ ಕಾಣಿಸಿದನು. ಸೂರ್ಯಾತಪದಿಂದ ಕರ್ಣನೂ ಅಲ್ಲಿ ಸ್ಪಷ್ಟವಾಗಿ ತೋರಿದನು. ಕರ್ಣನಿದ್ದ ಕಡೆಯಲ್ಲಿ ಧೃತರಾಷ್ಟ್ರಪುತ್ರರೆಲ್ಲರೂ ನಿಂತಿದ್ದರು. ಅರ್ಜುನನಿದ್ದ ಕಡೆಯಲ್ಲಿ ಭೀಷ್ಮ, ದ್ರೋಣ, ಕೃಪಾಚಾರ್ಯರು ನಿಂತಿದ್ದರು. ಅಲ್ಲಿದ್ದ ಜನಸಮೂಹವೆಲ್ಲ ಎರಡು ಕಕ್ಷಿಗಳಾಗಿ ಬೇರ್ಪಟ್ಟಿದ್ದುವು. ಸ್ತ್ರೀಯರೂ ಎರಡು ಪಾರ್ಶ್ವಗಳಲ್ಲಿ ಬೇರೆಬೇರೆಯಾಗಿ ನಿಂತಿದ್ದರು. ಇಷ್ಟರಲ್ಲಿಯೇ ಆ ಸ್ತ್ರೀಯರ ನಡುವೆ ಇದ್ದ ಕುಂತಿಭೋಜನ ಮಗಳಾದ ಪೃಥೆಗೆ, ಕರ್ಣಾರ್ಜುನರ ಯುದ್ಧಪ್ರಸಂಗವು ಕಿವಿಗೆ ಬಿದ್ದಿತು. ಭಯದಿಂದ ಅವಳು ಮೂರ್ಛಿತಳಾದಳು. ಆಗ ಸಮೀಪದಲ್ಲಿದ್ದ ಧರ್ಮಜ್ಞನಾದ ವಿದುರನು ಗೌಡಿಯರ ಮೂಲಕವಾಗಿ ಚಂದನೋದಕಗಳನ್ನು ತರಿಸಿ, ಶೈತ್ಯೋಪಚಾರವನ್ನು ಮಾಡಿ, ಅವಳಿಗೆ ಪ್ರಜ್ಞೆ ಬರುವಂತೆ ಮಾಡಿದನು. ಕುಂತಿಗೆ ಪ್ರಜ್ಞೆ

ಬಂದು ಚೇತರಿಸಿಕೊಂಡಮೇಲೆಯೂ, ಯುದ್ಧಸನ್ನಾಹದಿಂದ ಕವಚವನ್ನು ಧರಿಸಿ ನಿಂತಿರುವ ತನ್ನ ಪುತ್ರರಿಬ್ಬರನ್ನೂ ಕಂಡು ಭಯದಿಂದ ಏನೊಂದೂ ಬುದ್ಧಿಗೆ ತೋರದೆ ಸ್ತಬ್ಧಳಾಗಿ ನಿಂತಿದ್ದಳು. ಹೀಗೆ ಧನುರ್ಬಾಣಗಳನ್ನು ಸಿದ್ಧವಾಗಿ ಹಿಡಿದು ದ್ವಂದ್ವಯುದ್ಧಕ್ಕಾಗಿ ನಿಂತಿರುವ ಕರ್ಣಾರ್ಜುನರನ್ನು ನೋಡಿ, ದ್ವಂದ್ವಯುದ್ಧದ ಕ್ರಮವನ್ನು ಚೆನ್ನಾಗಿ ತಿಳಿದ ಕೃಪಾಚಾರ್ಯನು "ಕರ್ಣಾ! ಈ ಅರ್ಜುನನೊಡನೆ ನೀನು ದ್ವಂದ್ವಯುದ್ಧವನ್ನು ಮಾಡುವುದಕ್ಕೆ ಸಿದ್ಧನಾಗಿ ನಿಂತಿರುವೆ. ಅವನೂ ಸಿದ್ಧನಾಗಿರುವನು. ಇವನೋ ಲೋಕಪ್ರಸಿದ್ಧವಾದ ಕುರುವಂಶದಲ್ಲಿ ಹುಟ್ಟಿದವನು. ಪಾಂಡುಮಹಾರಾಜನ ಪ್ರಿಯಪುತ್ರನು. ಕುಂತಿಯ ಕನಿಷ್ಠಪುತ್ರನು. ಇವನೊಡನೆ ನೀನು ದ್ವಂದ್ವಯುದ್ಧವನ್ನು ಆರಂಭಿಸುವವೊದಲು, ನಿನ್ನ ಕುಲಗೋತ್ರಗಳಾವುವು? ನಿನ್ನ ತಂದೆತಾಯಿಗಳಾರು? ಎಂಬುದನ್ನು ತಿಳಿಸಬೇಕಾದುದು ನ್ಯಾಯವು. ಏಕೆಂದರೆ, ಹಾಗೆ ಕುಲದಲ್ಲಿ ಸಮಾನರಾದವರೇ ಅನ್ಯೋನ್ಯವಾಗಿ ಕೈಕಲೆತು ಯುದ್ಧಮಾಡುವುದಕ್ಕೆ ಅರ್ಹರು. ಓ ಮಹಾಬಾಹೂ! ಕರ್ಣಾ! ನಿನ್ನ ಕುಲವನ್ನು ಸ್ವಲ್ಪ ತಿಳಿಸು. ಈ ರಾಜರೆಲ್ಲರೂ ಕೇಳಲಿ! ನೀನು ಯಾವ ವಂಶಕ್ಕೆ ಅಲಂಕಾರಪ್ರಾಯನಾಗಿ ಹುಟ್ಟಿರುವೆಯೋ, ಅದನ್ನು ತಿಳಿದುಕೊಂಡು ಅದರಮೇಲೆ ಅರ್ಜುನನು ಯುದ್ಧಮಾಡಿದರೆ ಮಾಡಲಿ! ಬಿಟ್ಟರೆ ಬಿಡಲಿ! ಕುಲಗೋತ್ರಗಳೊಂದೂ ತಿಳಿಯದವರೊಡನೆ ಉತ್ತಮರಾಜಕುಮಾರರು ಯುದ್ಧಮಾಡಲಾರರು" ಎಂದನು. ಈ ಮಾತನ್ನು ಕೇಳಿ ಕರ್ಣನಿಗೆ ನಾಚಿಕೆಯಿಂದ ತಲೆಯು ತಗ್ಗಿತು. ವರ್ಷಪಾತದಿಂದ ಕಂದಿಹೋದ ಕಮಲದಂತೆ, ಅವನ ಮುಖವು ಬಣ್ಣಗೆಟ್ಟಿತು. ಇದನ್ನು ನೋಡಿ ದುರ್ಯೋಧನನಿಗೆ ಸಹಿಸಲಾರದಂತಾಯಿತು. ಆಗ ಅವನು ಕೃಪಾಚಾರ್ಯರನ್ನು ನೋಡಿ "ಎಲೈ ಆಚಾರ್ಯರೆ! ಶಾಸ್ತ್ರನಿರ್ಣಯದಂತೆ ರಾಜರಲ್ಲಿ ಮೂರು ವರ್ಗಗಳುಂಟು. ಒಳ್ಳೇ ಕುಲದಲ್ಲಿ ಹುಟ್ಟಿದವನೊಬ್ಬನು. ಶೂರನೊಬ್ಬನು. ಸೇನೆಯನ್ನು ನಡೆಸತಕ್ಕವನೊಬ್ಬನು. ನೀರಿನಿಂದ ಅಗ್ನಿಯೂ, ಬ್ರಾಹ್ಮಣರಿಂದ ಕ್ಷತ್ರಿಯಕುಲವೂ, ಕಲ್ಲಿನಿಂದ ಲೋಹವೂ ಉಂಟಾದುವಲ್ಲವೆ? ಈ ಮೂರುವಸ್ತುಗಳ ಶಕ್ತಿಗಳು ಬೇರೆ ಕಡೆಗಳಲ್ಲಿ ಸಾಗಿದರೂ, ತಮ್ಮತಮ್ಮ ಉತ್ಪತ್ತಿಕಾರಣಗಳಲ್ಲಿ ಅದು ವಿಫಲವಾಗಿ ಅಡಗಿ

ಹೋಗುವುದು. ಈಗ ಈ ಅರ್ಜುನನು ತಾನು ರಾಜಕುಲದವನೆಂದೂ, ಈ ಕರ್ಣನು ರಾಜಕುಲದವನಲ್ಲವೆಂದೂ, ಅವನಲ್ಲಿ ನಿಕೃಷ್ಟಭಾವದಿಂದ ಒಂದುವೇಳೆ ಯುದ್ಧಮಾಡುವುದಕ್ಕೆ ಇಷ್ಟಪಡದಿದ್ದರೆ, ಇದೋ ! ಈಗಲೇ ನಾನು ಈ ಕರ್ಣನನ್ನು ರಾಜನನ್ನಾಗಿ ಮಾಡಿ ಈಗಲೇ ಇವನನ್ನು ಅಂಗ ರಾಜ್ಯದಲ್ಲಿ ಅಭಿಷೇಕಿಸುವೆನು ” ಎಂದನು.

ಓ ಜನಮೇಜಯರಾಜಾ ! ಆಗಲೇ ದುರ್ಯೋಧನನು ತಂದೆಯಾದ ಧೃತರಾಷ್ಟ್ರನನ್ನೂ, ಪಿತಾಮಹನಾದ ಭೀಷ್ಮನನ್ನೂ ಕರೆಸಿಕೊಂಡನು. ಬ್ರಾಹ್ಮಣರಿಂದ ಅಭಿಷೇಕಸಾಮಗ್ರಿಗಳನ್ನೆಲ್ಲ ತರಿಸಿದನು. ಸಹಸ್ರಸಂಖ್ಯೆ ಯಿಂದ ಗೋವುಗಳನ್ನೂ ತರಿಸಿದನು. ವೈದಿಕಕಾರ್ಯಗಳನ್ನು ನಡೆಸುವು ದಕ್ಕಾಗಿ ಬ್ರಾಹ್ಮಣರನ್ನು ಕರೆಸಿ, ಆ ಬ್ರಾಹ್ಮಣರನ್ನೆಲ್ಲ ಗೋದಾನಗಳಿಂದ ಸಂತೋಷಗೊಳಿಸಿ, “ ಈ ಕರ್ಣನು ಅಂಗರಾಜ್ಯಕ್ಕೆ ರಾಜನಾಗುವುದಕ್ಕೆ ಅರ್ಹನು ” ಎಂಬ ಮಾತನ್ನು ಅವರ ಬಾಯಿಂದ ಹೇಳಿಸಿದನು. ಒಡನೆ ಯೇ ಕರ್ಣನನ್ನು ತಂದು ಸುವರ್ಣಪೀಠದಲ್ಲಿ ಕುಳ್ಳಿರಿಸಿದರು. ಮಂತ್ರಜ್ಞ ರಾದ ಬ್ರಾಹ್ಮಣರು, ಅರಳು, ಅಕ್ಷತೆ, ಹೂ, ಗಂಧ, ಮುಂತಾದ ಮಂಗಳ ದ್ರವ್ಯಗಳನ್ನೆಲ್ಲ ತಂದಿಟ್ಟು, ಸುವರ್ಣಕಲಶಗಳಿಂದ ಆ ಕರ್ಣನಿಗೆ ಅಭಿಷೇಕ ಕಾರ್ಯಗಳನ್ನು ನಡೆಸಿದರು. ಅವನಿಗೆ ರಾಜಯೋಗ್ಯಗಳಾದ ಕಿರೀಟ, ಕುಂಡಲ, ಹಾರ, ಕೇಯೂರಾದಿ ಭೂಷಣಗಳನ್ನೆಲ್ಲ ತೊಡಿಸಿದರು. ಛತ್ರ ಚಾಮರಾದಿ ರಾಜಚಿಹ್ನಗಳೆಲ್ಲವೂ ಸಿದ್ಧವಾದುವು. ಸುತ್ತಲೂ ಜಯಶಬ್ದ ಗಳು ಮೊಳಗುತಿದ್ದುವು. ಆಗ ಆ ಕರ್ಣನ ಸಂತೋಷವನ್ನು ಕೇಳಬೇಕೆ! ಅವನು ಅತ್ಯಾನಂದತಿಂದ ಉಬ್ಬಿ ದುರ್ಯೋಧನನನ್ನು ಕುರಿತು “ ಮಿತ್ರಾ! ನೀನು ನನಗೆ ದೊಡ್ಡ ರಾಜ್ಯವನ್ನೇ ಕೊಟ್ಟೆಯಲ್ಲವೆ? ಇದಕ್ಕೆ ತಕ್ಕ ಪ್ರತಿ ಫಲವಾಗಿ ನಾನು ಯಾವುದನ್ನು ತಾನೇ ನಿನಗೆ ಕೊಡಬಲ್ಲೆನು? ಓ ವೀರಾ! ನನ್ನಿಂದ ಆಗಬೇಕಾದುದೇನಿದ್ದರೂ ಹೇಳು! ಅವಶ್ಯವಾಗಿ ನಡೆಸುವೆನು ” ಎಂದನು. ಆಗ ದುರ್ಯೋಧನನು “ ಕರ್ಣಾ! ನನಗೆ ಬೇಕಾದುದು ಬೇರೇನೂ ಇಲ್ಲ. ನನ್ನೊಡನೆ ನಿನಗೆ ಎಂದಿಗೂ ಚ್ಯುತಿಯಿ ಲ್ಲದ ಆತ್ಯಂತಿಕ ಸ್ನೇಹವಿದ್ದರೆ ಅದೇ ಸಾಕು. ಇಷ್ಟೇ ನನಗೆ ಬೇಕಾ

ದುದು" ಎಂದನು. ಆಗ ಕರ್ಣನು "ಆಹಾ! ಅದಕ್ಕೆ ತಡೆಯೇನು? ಹಾಗೆಯೇ ಆಗಲಿ!" ಎಂದನು ಅವರಿಬ್ಬರೂ ಪರಮ ಸಂತೋಷದಿಂದ ಬಾರಿಬಾರಿಗೂ ಒಬ್ಬರನ್ನೊಬ್ಬರು ಆಲಿಂಗಿಸಿಕೊಂಡರು.

ಇದು ನೂರ ನಾಲ್ವತ್ತಾರನೆಯ ಅಧ್ಯಾಯವು.

( ಕರ್ಣನ ತಂದೆಯಾದ ಅಧಿರಥನು ರಂಗಮಧ್ಯಕ್ಕೆ ಬಂದುದು. )
( ಭೀಮನು ಕರ್ಣನನ್ನು ಧಿಕ್ಕರಿಸಿದುದು. )

ಓ ಜನಮೇಜಯರಾಜಾ! ಕೇಳು. ಇದನ್ನೆಲ್ಲ ನೋಡುತಿದ್ದ ಕರ್ಣನ ತಂದೆಯಾದ ಅಧಿರಥನಿಗೆ ಸಂತೋಷವು ಉಕ್ಕಿಹೋಯಿತು. ಥಟ್ಟನೆ ರಂಗಮಧ್ಯಕ್ಕೆ ಬಂದು ನಿಂತನು. ಅವನಿಗೆ ಆ ಸಂತೋಷಸಂಭ್ರಮದಲ್ಲಿ ಮೈಮೇಲೆ ಹೊದೆದ ಬಟ್ಟೆಯೂ ಸಡಿಲಿತು. ಮೈಯೊಳಗೆಲ್ಲ ಬೆವರು ಕಿತ್ತುಕೊಂಡಿತು. ದೇಹದಲ್ಲಿ ನಡುಕವು ಕಾಣಿಸಿತು. ಸೂತಕುಲದವನಾದ ಆ ಅಧಿರಥನು, ಕೈಯಲ್ಲಿ ಹಿಡಿದ ತನ್ನ ದಂಡದೊಡನೆಯೇ ಕರ್ಣನನ್ನು ಪುತ್ರಪ್ರೇಮದಿಂದ ಕರೆಯುತ್ತಾ ರಂಗದೊಳಗೆ ಪ್ರವೇಶಿಸಿದನು. ಇವನನ್ನು ಕಂಡೊಡನೆ ಕರ್ಣನು ಆತನಲ್ಲಿ ತನಗಿದ್ದ ಪಿತೃಭಕ್ತಿಯಿಂದ ತನ್ನ ಕೈಯಲ್ಲಿದ್ದ ಧನುಸ್ಸನ್ನು ಕೆಳಗೆ ಬಿಸುಟು, ಆಗಲೇ ಅಭಿಷೇಕದಿಂದ ನೆನೆದ ತಲೆಯೊಡನೆ ಬಂದು ಆತನಿಗೆ ತಲೆಬಗ್ಗಿ ನಮಸ್ಕರಿಸಿದನು. ಆಗ ಅಧಿರಥನು ಅತ್ಯಾತುರದಿಂದ ತಾನು ಹೊದೆದಿದ್ದ ಬಟ್ಟೆಯ ಸೆರಗಿನಿಂದ ತನ್ನ ಕಾಲನ್ನು ಮರೆಸಿಟ್ಟುಕೊಂಡು "ಪುತ್ರಾ!" ಎಂದು ಕರೆದು, ಪ್ರೇಮದಿಂದ ಅಪ್ಪಿಕೊಂಡನು. ಮೊದಲೇ ಅಭಿಷೇಕಜಲದಿಂದ ನನೆದ ಅವನ ತಲೆಯನ್ನು ತನ್ನ ಕಣ್ಣುಗಳಲ್ಲಿ ತುಳುಕುವ ಆನಂದಬಾಷ್ಪಗಳಿಂದ ಮತ್ತಷ್ಟು ನೆನೆಸಿದನು. ಸೂತನೊಬ್ಬನು ಬಂದು ಕರ್ಣನನ್ನು "ಮಗನೇ" ಎಂದು ಕರೆದು, ಅಪ್ಪಿ ಮುದ್ದಾಡುವುದನ್ನು ನೋಡಿದಮೇಲೆ, ಭೀಮನಿಗೆ ಅವನು ಸೂತಪುತ್ರನೆಂದು ತಿಳಿದುಹೋಯಿತು. ಆಗ ನಗುತ್ತಾ ಕರ್ಣನನ್ನು ನೋಡಿ "ಎಲೆ ಸೂತಪುತ್ರಾ! ನೀನು ಅರ್ಜುನನೊಡನೆ ಯುದ್ಧದಲ್ಲಿ ನಿಲ್ಲುವುದಕ್ಕೆ ಯೋಗ್ಯನಲ್ಲವೆಂಬುದು ಈಗ ಸ್ಪಷ್ಟವಾಯಿತಲ್ಲವೆ? ಅಷ್ಟೇಕೆ?

ಅರ್ಜುನನಿಗೆ ಯುದ್ಧದಲ್ಲಿ ನಿನ್ನನ್ನು ಕೊಲ್ಲುವುದೂ ಯೋಗ್ಯವಲ್ಲ. ನೀನು ಕೈಯಲ್ಲಿ ಧನುಸ್ಸನ್ನು ಹಿಡಿಯುವುದಕ್ಕೆ ಅರ್ಹನಲ್ಲ. ನಿನ್ನ ಕುಲಕ್ಕೆ ಯೋಗ್ಯವಾದ ಕುದುರೆಯ ಚಾಟಿಯನ್ನು ಹಿಡಿ. ಹೋಗು. ನರಾಧಮಾ! ನೀನು ಅಂಗರಾಜ್ಯಕ್ಕೂ ಯೋಗ್ಯನಲ್ಲವೆಂದು ನಿಶ್ಚಯವಾಯಿತು. ಯಾಗದಲ್ಲಿ ಪುರೋಡಾಶವೆಂಬ ಹವಿಸ್ಸನ್ನು ತಿನ್ನುವುದಕ್ಕಾಗಿ ಅಗ್ನಿಯಿಂದ ಬಂದು, ಅದರ ಪಕ್ಕದಲ್ಲಿ ನಿಂತಿರುವ ನಾಯಿಯಂತೆ, ನೀನು ಈ ಅಂಗರಾಜ್ಯದಲ್ಲಿ ಈಗ ದುರ್ಯೋಧನನಿಂದ ಅಭಿಷಿಕ್ತನಾಗಿದ್ದರೂ, ಅದನ್ನು ಅನುಭವಿಸುವ ಯೋಗ್ಯತೆಯು ನಿನಗಿಲ್ಲ" ಎಂದನು.

ಓ ಜನಮೇಜಯರಾಜಾ! ಈ ಮಾತುಗಳನ್ನು ಕೇಳಿ ಕರ್ಣನಿಗೆ ಕೋಪದಿಂದ ತುಟಿಗಳು ನಡುಗಲಾರಂಭಿಸಿದುವು. ಹಾಗೆಯೇ ಬಿಸಿಬಿಸಿಯಾಗಿ ನಿಟ್ಟುಸಿರನ್ನು ಬಿಡುತ್ತಾ ಆಕಾಶದಕಡೆಗೆ ತಲೆಯೆತ್ತಿ ಸೂರ್ಯನನ್ನು ನೋಡಿದನು. ತನ್ನ ತಮ್ಮಂದಿರ ನಡುವೆ ಕುಳಿತಿದ್ದ ದುರ್ಯೋಧನನುಕೂಡ ಭೀಮನ ಮಾತನ್ನು ಕೇಳಿ ಸಹಿಸಲಾರದೆ, ಕಮಲವನದಿಂದ ಮೇಲೆದ್ದು ಬರುವ ಮದದಾನೆಯಂತೆ ತನ್ನ ಆಸನದಿಂದ ಮೇಲೆದ್ದು ಭೀಮನನ್ನು ನೋಡಿ "ಎಲ ವೃಕೋದರಾ! ನೀನು ಇಂತಹ ಮಾತನ್ನಾಡಬಾರದು. ಕ್ಷತ್ರಿಯರಿಗೆ ಬಲವು ಮುಖ್ಯವೇಹೊರತು ಕುಲವು ಮುಖ್ಯವಲ್ಲ. ಕ್ಷತ್ರಿಯನಿಗೆ ಯುದ್ಧವೇ ಮುಖ್ಯ ಧರ್ಮವು. ಮತ್ತು ಶೂರರಿಗೂ, ನದಿಗಳಿಗೂ ಜನ್ಮಸ್ಥಾನವನ್ನು ವಿಚಾರಿಸತಕ್ಕದಲ್ಲ. ಚರಾಚರಾತ್ಮಕ ಪ್ರಪಂಚವನ್ನೆಲ್ಲ ಆವರಿಸಿ ದಹಿಸುವುದು. ಅಗ್ನಿಯು ನೀರಿನಿಂದುಂಟಾದುದು. ದಾನವರನ್ನೆಲ್ಲ ಕೊಲ್ಲತಕ್ಕ ವಜ್ರಾಯುಧವು ಹುಟ್ಟಿದುದೆಲ್ಲಿ ಬಲ್ಲೆಯಾ? ದಧೀಚಿಯೆಂಬ ಬ್ರಾಹ್ಮಣನ ಎಲುಬಿನಿಂದಲ್ಲವೆ? ಲೋಕಪೂಜ್ಯನೂ, ದೇವನೂ, ಸರ್ವರಹಸ್ಯಗಳಿಗೆ ನಿಧಿಯೂ ಆದ ಷಣ್ಮುಖನು ಎಲ್ಲಿಂದ ಬಂದವನು? ಅವನನ್ನು ಅಗ್ನಿಪುತ್ರನೆಂದೂ, ಕೃತ್ತಿಕಾಪುತ್ರನೆಂದೂ, ರುದ್ರನ ಮಗನೆಂದೂ, ಗಂಗೆಯ ಮಗನೆಂದೂ, ನಾನಾವಿಧವಾಗಿ ಹೇಳುವರು. ಕ್ಷತ್ರಿಯಕುಲದಲ್ಲಿ ಹುಟ್ಟಿದವರೆಷ್ಟೋಮಂದಿ ಬ್ರಾಹ್ಮಣರೆಂದು ಪ್ರಖ್ಯಾತಿಗೊಂಡಿರುವರು. ವಿಶ್ವಾಮಿತ್ರನೇ ಮೊದಲಾದವರು ಕ್ಷತ್ರಿಯಕುಲದಲ್ಲಿ ಹುಟ್ಟಿ ಶಾಶ್ವತವಾದ

ಬ್ರಾಹ್ಮಣ್ಯವನ್ನು ಪಡೆಯಲಿಲ್ಲವೆ? ಅಷ್ಟೇಕೆ? ಶಸ್ತ್ರಧಾರಿಗಳಲ್ಲಿ ಮೇಲೆನಿಸಿದ ನಮ್ಮ ಆಚಾರ್ಯನಾದ ಈ ದ್ರೋಣನು ಎಲ್ಲಿ ಹುಟ್ಟಿದವನು? ಒಂದು ಕಲಶದಿಂದಲ್ಲವೆ? ಗೌತಮವಂಶದಲ್ಲಿ ಹುಟ್ಟಿದವನೆಂದು ಪ್ರಸಿದ್ಧನಾದ ಕೃಪನು ಒಂದು ಸೊಡೆಹುಲ್ಲಿನ ತೆನೆಯಿಂದ ಹುಟ್ಟಿದವನಲ್ಲವೆ? ಭೀಮಾ! ಅಣ್ಣತಮ್ಮಂದಿರಾದ ನಿಮ್ಮ ಜನ್ಮವು ಹೇಗೆಂಬುದನ್ನೂ ನಾನು ತಿಳಿಯದೇ ಇಲ್ಲ. ನಿಮ್ಮ ಉತ್ಪತ್ತಿಕ್ರಮವನ್ನು ನಾನೂ ಚೆನ್ನಾಗಿ ಕೇಳಿರುವೆನು. ಈ ಕರ್ಣನಾದರೋ ಸಹಜವಾದ ಕವಚಕುಂಡಲಗಳೊಡನೆ ಹುಟ್ಟಿದವನು. ಎಲ್ಲಾ ಶುಭಲಕ್ಷಣಗಳಿಂದ ಕೂಡಿದವನು ಸಾಕ್ಷಾತ್ಸೂರ್ಯದೇವನಿಗೆ ಸಮಾನವಾದ ತೇಜಸ್ಸುಳ್ಳವನು. ಇಂತವನನ್ನು ಸೂತಕುಲದವನೆಂದು ಹೇಳುವೆಯಾ! ಹೆಣ್ಣುಜಿಂಕೆಯ ಗರ್ಭದಿಂದ ಎಂದಾದರೂ ಹುಲಿಯು ಹುಟ್ಟುವುದೇ? ಇವನು ಅಂಗರಾಜ್ಯವನ್ನು ಮಾತ್ರವಲ್ಲ! ಈ ಸಮಸ್ತ ಭೂಮಂಡಲವನ್ನೇ ಆಳುವುದಕ್ಕೆ ಅರ್ಹನು ಅವನು ತನ್ನ ಬಾಹುವೀರ್ಯದಿಂದಲೇ ಈ ಪ್ರಪಂಚವನ್ನೆಲ್ಲ ಸಾಧಿಸಬಲ್ಲನು. ಇದರ ಮೇಲೆ ಅವನ ಆಜ್ಞಾಧೀನನಾಗಿ ನಾನು ನಡೆಯಲು ಸಿದ್ಧನಾಗಿರುವಾಗ ಅವನ ಪ್ರಭಾವವನ್ನು ಕೇಳಬೇಕಾದುದೇನು? ಈಗ ನಾನು ಮಾಡಿದ ಪಟ್ಟಾಭಿಷೇಕಕಾರ್ಯಕ್ಕೆ ಯಾವನು ಸಹಿಸುವುದಿಲ್ಲವೋ, ಅವನು ಈಗಲೇ ಮುಂದೆ ಬಂದು ಯುದ್ಧರಥವನ್ನೇರಿ ತನ್ನ ಬಿಲ್ಲನ್ನು ಬಾಗಿಸಲಿ!" ಎಂದು ಆರ್ಭಟಿಸಿದನು. ಇಷ್ಟರಲ್ಲಿಯೇ ರಂಗಸ್ಥಳದಲ್ಲಿ ಜನಗಳ ಹಾಹಾಕಾರದೊಡನೆ ಪ್ರಬಲವಾದ ಗದ್ದಲವುಂಟಾಯಿತು. "ಭಲೆ! ಭಲೆ!" ಎಂದು ದುರ್ಯೋಧನನ ಕಡೆಯವರು ಕೊಂಡಾಡುತಿದ್ದರು. ಇಷ್ಟರಲ್ಲಿ ಸೂರ್ಯನು ಅಸ್ತಂಗತನಾಗಿ ಕತ್ತಲೆ ಕವಿಯಿತು. ಆಗಲೇ ದುರ್ಯೋಧನನ ಮುಂದೆ ದೀವಟಿಗೆಗಳನ್ನು ಹಿಡಿಸಿಕೊಂಡು ಕರ್ಣನನ್ನು ಕೈಹಿಡಿದು ಕರೆದುಕೊಂಡು ರಂಗಸ್ಥಳದಿಂದ ಹೊರಟುಬಿಟ್ಟನು. ಅತ್ತಲಾಗಿ ಪಾಂಡವರುಕೂಡ ದ್ರೋಣಕೃಪರೊಡನೆ ಭೀಷ್ಮನನ್ನು ಮುಂದಿಟ್ಟುಕೊಂಡು ರಂಗಸ್ಥಲವನ್ನು ಬಿಟ್ಟು ತಮ್ಮತಮ್ಮ ಮನೆಗಳಿಗೆ ಹೊರಟುಬಿಟ್ಟರು. ಜನರೆಲ್ಲರೂ ಹಿಂತಿರುಗಿ ಹೋಗುವಾಗ, ದಾರಿಯಲ್ಲಿ ಕೆಲವರು ಅರ್ಜುನನ ಹೆಸರನ್ನು ಹೇಳುತ್ತ, ಅವನನ್ನು ಸುತ್ತಿಮುತ್ತಿ ಸ್ತೋತ್ರಮಾಡುತ್ತ ಬಂದರು.

ಕೆಲವರು ಕರ್ಣನನ್ನೂ, ಕೆಲವರು ದುರ್ಯೋಧನನನ್ನೂ, ಬೆನ್ನುತಟ್ಟುತ್ತ ಹೊರಟುಹೋದರು.

ಓ ಜನಮೇಜಯರಾಜಾ! ಈ ಸಮಯದಲ್ಲಿ ಕುಂತಿಯು ರಂಗಸ್ಥಳಕ್ಕೆ ಬಂದ ಕರ್ಣನನ್ನು ಕಣ್ಣಿಟ್ಟು ನೋಡಿದಾಗ, ಅವನಲ್ಲಿದ್ದ ಉತ್ತಮ ರಾಜಲಕ್ಷಣಗಳನ್ನು ಕಂಡು ಅವನೇ ತನ್ನ ಮಗನೆಂಬ ಸ್ಮರಣೆಯು ಮನಸ್ಸಿಗೆ ತೋರಿತು. ಅವಳಿಗೆ ಅವನಲ್ಲಿ ಗೂಢವಾದ ಪುತ್ರಪ್ರೀತಿಯುಂಟಾಯಿತು. ದುರ್ಯೋಧನನಿಗೆ ಕರ್ಣನಲ್ಲಿ ತನ್ನ ಸ್ನೇಹವು ಸ್ಥಿರಪಟ್ಟದರಿಂದ ಅದುವರೆಗೆ ಅರ್ಜುನನ ವಿಷಯವಾಗಿ ಅವನ ಮನಸ್ಸಿನಲ್ಲಿದ್ದ ಅಲ್ಪಸ್ವಲ್ಪ ಭಯವೂ ಬಿಟ್ಟುಹೋಯಿತು. ವೀರನೂ, ಶಸ್ತ್ರಾಸ್ತ್ರಗಳಲ್ಲಿ ನಿಶ್ಚಯಜ್ಞಾನವುಳ್ಳವನೂ ಆದ ಆ ಕರ್ಣನು, ಪ್ರಿಯವಾಕ್ಯದಿಂದ ದುರ್ಯೋಧನನನ್ನು ಕುರಿತು ಅವನಿಗೆ ಧೈರ್ಯವನ್ನು ಹುಟ್ಟಿಸುವ ಮಾತುಗಳನ್ನಾಡಿದನು. ಆಗ ಧರ್ಮರಾಜನಿಗೂ ಕೂಡ ಕರ್ಣನಿಗೆ ಸಮಾನನಾದ ಧನುರ್ಧಾರಿಗಳು ಲೋಕದಲ್ಲಿ ಬೇರೆ ಯಾರೂ ಇಲ್ಲವೆಂಬ ಅಭಿಪ್ರಾಯವು ನೆಲೆಗೊಂಡಿತು.

ಇದು ನಾಲ್ವತ್ತೇಳನೆಯ ಅಧ್ಯಾಯವು.

---

ಗುರುದಕ್ಷಿಣಾರೂಪವಾಗಿ ದ್ರುಪದನನ್ನು ಜೀವದೊಡನೆ ಹಿಡಿದುತರಬೇಕೆಂದು ದ್ರೋಣನು ಆಜ್ಞಾಪಿಸಿದುದು. ಪಾಂಡವರು ಹೊರತು ಉಳಿದ ಶಿಷ್ಯರೆಲ್ಲರೂ ಪಾಂಚಾಲನಗರಕ್ಕೆ ಹೋಗಿ, ಅಲ್ಲಿ ಪರಾಜಿತರಾಗಿ ಬಂದುದು. ಅರ್ಜುನನು ದ್ರುಪದನನ್ನು ಹಿಡಿದು ತಂದುದು. ದ್ರೋಣ ದ್ರುಪದರ ಸಂವಾದವು. ದ್ರೋಣನು ಅರ್ಧರಾಜ್ಯವನ್ನು ಕಿತ್ತುಕೊಂಡುದು. ದ್ರುಪದನು ದ್ರೋಣನಮೇಲೆ ಹಗೆತೀರಿಸಿಕೊಳ್ಳಲು ಯತ್ನಿಸಿದುದು.

ಓ ಜನಮೇಜಯರಾಜಾ! ಶಿಷ್ಯರಾದ ಕೌರವಪಾಂಡವರಿಬ್ಬರೂ ಅಸ್ತ್ರದಲ್ಲಿ ಸುಶಿಕ್ಷಿತರಾದಮೇಲೆ ಅವರಿಂದ ಗುರುದಕ್ಷಿಣೆಯನ್ನು ಕೇಳಿ ತೆಗೆ

ಯುವುದಕ್ಕೆ ಅವನಿಗೆ ಉಚಿತಕಾಲವೆಂದು ದ್ರೋಣನ ಮನಸ್ಸಿಗೆತೋರಿತು. ರಂಗಸ್ಥಳದಲ್ಲಿ ತೋರಿಸಿದ ಅವರ ಸಾಧನೆಗಗಳನ್ನು ನೋಡಿ ಅವರ ಅಸ್ತ್ರ ಶಿಕ್ಷಾನೈಪುಣ್ಯವನ್ನು ಎಲ್ಲರೂ ಮೆಚ್ಚಿದಮೇಲೆ, ಅವನು ರಂಗದ್ವಾರಕ್ಕೆ ಹೊರಟುಬರುತ್ತಿರುವಾಗ ದ್ರೋಣನು ಅವರೆಲ್ಲರನ್ನೂ ನೋಡಿ "ಎಲೈ! ನಿಮ್ಮೆಲ್ಲರಿಗೂ ಅಸ್ತ್ರವಿದ್ಯಾಭ್ಯಾಸವು ಮುಗಿಯಿತು. ಇನ್ನು ನೀವೆಲ್ಲರೂ ಒಟ್ಟಾಗಿ ಸೇರಿ ನನಗಾಗಿ ಉತ್ತಮವಾದ ಗುರುದಕ್ಷಿಣೆಯೊಂದನ್ನು ಸಲ್ಲಿಸಬೇಕು" ಎಂದನು. ಆಗ ಶಿಷ್ಯರೆಲ್ಲರೂ ದ್ರೋಣನನ್ನು ಕುರಿತು "ಆಚಾರ್ಯ! ಅದಕ್ಕೆ ತಡೆಯೇನು? ನಮ್ಮಿಂದ ನಿಮಗೆ ಬೇಕಾದುದೇನಿದ್ದರೂ ಸಿದ್ಧವಾಗಿ ನಡೆಸುವೆವು. ನಿಮಗೆ ನಾವು ಸಲ್ಲಿಸಬೇಕಾದ ಗುರುದಕ್ಷಿಣೆಯೇನೆಂಬುದನ್ನು ಈಗಲೇ ಹೇಳಬೇಕು" ಎಂದರು ಆಗ ದ್ರೋಣನು "ಎಲೈ ಶಿಷ್ಯರೇ! ನೀವು ಪಾಂಚಾಲರಾಜ್ಯದ ಅಧಿಪತಿಯಾದ ದ್ರುಪದನನ್ನು ಯುದ್ಧದಲ್ಲಿ ಸೆರೆಹಿಡಿದು ನನ್ನಲ್ಲಿಗೆ ತರಬೇಕು. ಇದೇ ಈಗ ನೀವು ನನಗೆ ಸಲ್ಲಿಸಬೇಕಾದ ಉತ್ತಮವಾದ ಗುರುದಕ್ಷಿಣೆ. ನಿಮಗೆ ಮಂಗಳವಾಗಲಿ. ಆ ಕಾರ್ಯವನ್ನು ನಡೆಸಿರಿ" ಎಂದನು. ಈ ಮಾತನ್ನು ಕೇಳಿದೊಡನೆ ಎಲ್ಲರೂ ಉತ್ಸಾಹದಿಂದ "ಹಾಗೆಯೇ ಆಗಲಿ" ಎಂದು ಹೇಳಿ ಸರ್ವಾಯುಧಗಳನ್ನೂ ಸಂಗ್ರಹಿಸಿಕೊಂಡು, ರಥಾರೂಢರಾಗಿ, ದ್ರೋಣನನ್ನೂ ಸಂಗಡಲೇ ಕರೆದುಕೊಂಡು ಪಾಂಚಾಲದೇಶಕ್ಕೆ ದಂಡೆತ್ತಿ ಹೊರಟರು. ಅಲ್ಲಿಗೆ ಹೋದೊಡನೆ ಅಲ್ಲಿ ಕಣ್ಣಿಗೆ ಸಿಕ್ಕಿದ ಪಾಂಚಾಲಸೈನಿಕರನ್ನು ಹೊಡೆದೋಡಿಸುತ್ತಾ, ದ್ರುಪದನ ನಗರದೊಳಗೆ ಪ್ರವೇಶಿಸಿ, ಆ ಪುರವನ್ನೆಲ್ಲ ಲೂಟಿಮಾಡುತ್ತಾ ಬಂದರು. ದುರ್ಯೋಧನನು, ಕರ್ಣನು, ಯುಯುತ್ಸು, ದುಶ್ಯಾಸನನು, ವಿಕರ್ಣನು, ಜಲಸಂಧನು, ಸುಲೋಚನನು, ಇವರೇ ಮೊದಲಾಗಿ ಇನ್ನೂ ಅಮಿತ ಪರಾಕ್ರಮಿಗಳೆನಿಸಿದ ರಾಜಕುಮಾರರೆಲ್ಲ "ನಾನು ಮುಂದೆ, ತಾನು ಮುಂದೆ" ಎಂಬ ರಣೋತ್ಸಾಹದಿಂದ ರಥಾರೂಢರಾಗಿ, ಅನೇಕ ಗಜಸೈನಿಕರೊಡನೆ ಆ ಪಟ್ಟಣದ ರಾಜಮಾರ್ಗವನ್ನು ಪ್ರವೇಶಿಸಿದರು. ಈ ಸಮಯದಲ್ಲಿ ಪಾಂಚಾಲರಾಜನಾದ ದ್ರುಪದನು ಆ ದೊಡ್ಡ ಸೈನ್ಯಗಳನ್ನು ನೋಡಿಯೂ, ಮತ್ತು ಚಾರರಿಂದ ಕೇಳಿಯೂ ಅತ್ಯಾಕ್ರೋಶಗೊಂಡವನಾಗಿ, ಒಡನೆಯೇ ತನ್ನ ಸಹೋದರರನ್ನೆಲ್ಲ ಸೇರಿಸಿ ಕರೆದುಕೊಂ

ಡು ಅರಮನೆಯಿಂದ ಹೊರಟುಬಂದನು. ಯಜ್ಞಸೇನರಾಜನ (ದ್ರುಪದನ) ಸಹೋದರರೆಲ್ಲರೂ, ಸಮಸ್ತ ಯುದ್ಧಸನ್ನಾಹಗಳೊಡನೆ ಸಿದ್ಧರಾಗಿ ದಾರಿಯಲ್ಲಿ ಬರುವಾಗಲೇ ಬಾಣವರ್ಷಗಳನ್ನು ಕರೆಯುತ್ತಾ, ಎಲ್ಲರೂ ಒಟ್ಟಿಗೆ ಸಿಂಹನಾದಗಳನ್ನು ಮಾಡಿದರು. ಯಜ್ಞಸೇನನೂ ತನ್ನ ಬಿಳೀ ರಥವನ್ನೇರಿ ಕೌರವರನ್ನಿದಿರಿಸಿ, ಅವರಮೇಲೆ ಭಯಂಕರವಾದ ಬಾಣವರ್ಷವನ್ನು ಕರೆಯುತಿದ್ದನು.

ಜನಮೇಜಯರಾಜಾ! ಇದು ಹೀಗಿರಲು, ಇತ್ತಲಾಗಿ ಅರ್ಜುನನು ಆ ರಾಜಕುಮಾರರ ಗರ್ವವನ್ನು ನೋಡಿ ಮೊದಲೇ ತನ್ನ ಮನಸ್ಸಿನಲ್ಲಿ ಆಲೋಚಿಸಿ, ದ್ರೋಣಾಚಾರ್ಯನನ್ನು ಕುರಿತು "ಆಚಾರ್ಯಾ! ಆ ಕೌರವಾದಿಗಳ ಪರಾಕ್ರಮಕಾರ್ಯಗಳೆಲ್ಲ ಮೊದಲೇ ತೀರಿಹೋಗಲಿ! ಆಮೇಲೆ ನಾವು ಮುಂದೆ ಹೋಗಿ ನಮ್ಮ ಸಾಹಸವನ್ನು ತೋರಿಸುವೆವು. ಹೇಗಿದ್ದರೂ ದುರ್ಜಯನಾದ ಆ ಪಾಂಚಾಲನನ್ನು ಯುದ್ಧದಲ್ಲಿ ಜಯಿಸಿಬರುವುದಕ್ಕೆ ಅವರಿಂದ ಸಾಧ್ಯವಲ್ಲ. ಅವರು ಆ ದ್ರುಪದನನ್ನು ಹಿಡಿದು ತರಲಾರರು. ಇದು ನಿಜವು" ಎಂದು ಹೇಳಿ ಗುರುವಿನ ಅನುಮತಿಯನ್ನು ಪಡೆದು, ಪಾಂಚಾಲನಗರದ ಹೊರಗೆ, ಅರ್ಧಹರಿದಾರಿಯ ದೂರದಲ್ಲಿಯೇ ತನ್ನ ಸಹೋದರರೊಡನೆ ನಿಂತುಬಿಟ್ಟನು ಅತ್ತಲಾಗಿ ದ್ರುಪದನಾದರೋ ಕೌರವರನ್ನು ನಾನಾಕಡೆಗಳಿಂದ ಸುತ್ತಿಮುತ್ತಿ, ದೊಡ್ಡ ಬಾಣವರ್ಷದಿಂದ ಆ ಸೈನ್ಯಗಳಿಗೆಲ್ಲ ದಿಗ್ಭ್ರಮೆಹಿಡಿಯುವಂತೆ ಮಾಡಿ, ಅವರನ್ನು ನಾನಾಕಡೆಗಳಿಗೆ ಚದರಿಸಿ ಓಡಿಸುತ್ತಾ ಬಂದನು. ಆ ದ್ರುಪದನೊಬ್ಬನೇ ಏಕರಥನಾಗಿ ತನ್ನ ಹಸ್ತವೇಗದಿಂದ ಕೌರವಸೈನ್ಯಗಳನ್ನು ಸುತ್ತಿಸುತ್ತಿ ಹೊಡೆದೋಡಿಸುತಿದ್ದರೂ, ಭಯಗ್ರಸ್ತರಾದ ಕೌರವರಿಗೆ, ತಮ್ಮನ್ನು ಏಕಕಾಲದಲ್ಲಿ ಅನೇಕಜನರು ಸುತ್ತಿಮುತ್ತಿ ಹೊಡೆಯುತ್ತಿರುವಂತೆ ತೋರಿತು. ಎಲ್ಲೆಲ್ಲಿ ನೋಡಿದರೂ ದ್ರುಪದನ ಭಯಂಕರಬಾಣಗಳೇ ಹಾರಾಡುತಿದ್ದುವು. ಕೌರವರು ಹಿಂದುಮುಂದು ತೋರದೆ ತಬ್ಬಿಬ್ಬಾಗಿ ಓಡುತ್ತಿರುವುದನ್ನು ನೋಡಿ, ಪಾಂಚಾಲಸೈನಿಕರ ಶಿಬಿರದಲ್ಲಿ ಜಯಸೂಚಕಗಳಾದ ಶಂಖ, ಭೇರೀ, ಮೃದಂಗಾದಿ ವಾದ್ಯಗಳು ಸಾವಿರಲೆಕ್ಕದಿಂದ ಮೊಳಗಲಾ

ರಂಭಿಸಿದುವು. ಪಾಂಚಾಲರ ಕಡೆಯಲ್ಲಿ ದೊಡ್ಡ ಸಿಂಹನಾದಗಳೂ ಕೇಳಿಸಿದುವು. ಅವರ ಧನುಃಷಂಕಾರ ಧ್ವನಿಯು ಆಕಾಶವನ್ನೆಲ್ಲ ಆವರಿಸುವಂತೆ ಹೆಚ್ಚಿತು. ಇದನ್ನು ನೋಡಿ ಇತ್ತಲಾಗಿ ಕೌರವರಿಗೆ ದುಸ್ಸಹವಾದ ಆ ಕ್ರೋಶವು ಹೆಚ್ಚಿತು. ದುರ್ಯೋಧನ, ವಿಕರ್ಣ, ಸುಬಾಹು, ದೀರ್ಘಲೋಚನ, ದುಶ್ಶಾಸನಾದಿ ವೀರರೆಲ್ಲ ಬಹಳ ವೇಗದಿಂದ ಎಡೆಬಿಡದೆ ಬಾಣವರ್ಷಗಳನ್ನು ಕರೆಯಲಾರಂಭಿಸಿದರು. ಇವರ ಬಾಣಗಳಿಂದ ಬಹಳವಾಗಿ ನೊಂದ ದ್ರುಪದನಿಗೆ ಮತ್ತಷ್ಟು ರೇಗಿತು. ಮಹಾಧನುರ್ಧಾರಿಗಳಲ್ಲಿ ಮೇಲೆನಿಸಿದ ಆ ಪಾಂಚಾಲನು, ಒಡನೆಯೇ ತನ್ನ ಹಸ್ತಲಾಘವದಿಂದ ಬಾಣಗಳನ್ನು ಸುರಿಸು, ಕ್ಷಣಮಾತ್ರದಲ್ಲಿ ಆ ಶತ್ರುಸೈನ್ಯಗಳನ್ನೆಲ್ಲ ಛೇದಿಸುತ್ತ ಬಂದನು. ಆ ಕೌರವಸೈನ್ಯದಲ್ಲಿ ಅಲಾತ ಚಕ್ರದಂತೆ ರಥವನ್ನು ಸುತ್ತಿಸುತ್ತಿ, ದುರ್ಯೋಧನ, ವಿಕರ್ಣ, ಕರ್ಣನೇ ಮೊದಲಾದ ಇನ್ನೂ ಅನೇಕ ರಾಜಕುಮಾರರನ್ನೂ, ಅವರ ಸೈನ್ಯಗಳನ್ನೂ ಹೊಡೆದೋಡಿಸುತ್ತ ಬಂದನು. ಇದೇ ಸಮಯದಲ್ಲಿ ಪಾಂಚಾಲನಗರದಲ್ಲಿದ್ದ ಪುರಜನರಲ್ಲಿ ಒಬ್ಬೊಬ್ಬರೂ ತಮ್ಮತಮ್ಮ ಕೈಗೆ ಸಿಕ್ಕಿದ ದೊಣ್ಣೆಗಳನ್ನೂ, ಒನಕೆಗಳನ್ನೂ ಬೀಸಿ ಬಡಿಯುತ್ತಾ ಕಂಡಕಂಡಲ್ಲಿ ಕೌರವರನ್ನು ಬಡಿಯುತ್ತಿದ್ದರು. ಮುಸ್ಕರು, ಮುದುಕರು ಮೊದಲುಗೊಂಡು ಆ ಪುರವಾಸಿಗಳೆಲ್ಲರೂ, ಮಳೆಯನ್ನು ಕರೆಯುವ ಮೇಘಗಳಂತೆ, ತಮ್ಮ ಕೈಗೆ ಸಿಕ್ಕಿದುದನ್ನು ಕೌರವಸೈನ್ಯಗಳ ಮೇಲೆ ಬೀಸಿ ಬಡಿಯುತ್ತ ಬೆನ್ನಟ್ಟಿ ಓಡಿಸುತಿದ್ದರು ಈ ದೊಡ್ಡ ದೊಂಬಿಯುದ್ಧದಲ್ಲಿ ಕೌರವರ ಕೈಸಾಗದೆಹೋಯಿತು. ಕೌರವರು ಭಯದಿಂದ ಕೂಗಿಡುತ್ತ ಪಲಾಯನಮಾಡತೊಡಗಿದರು. ಕೆಲವರು ಪಾಂಡವರನ್ನು ಕೂಗಿಕೊಳ್ಳುತ್ತಾ ಅವರಿದ್ದ ಕಡೆಗೆ ಓಡಿಬಂದರು. ಮೈಯಲ್ಲಿ ರೋಮಾಂಚವನ್ನು ಹುಟ್ಟಿಸುವಂತೆ ಕೂಗುತ್ತಿರುವ ಆ ಕೌರವರ ಆರ್ತಧ್ವನಿಯು ಪಾಂಡವರ ಕಿವಿಗೆ ಬಿದ್ದೊಡನೆ, ಆ ಐದುಮಂದಿ ಪಾಂಡವರೂ ದ್ರೋಣನ ಪಾದಗಳಿಗೆ ವಂದಿಸಿ, ಅವನ ಅನುಮತಿಯನ್ನು ಪಡೆದು ತಮ್ಮತಮ್ಮ ಯುದ್ಧರಥವನ್ನೇರಿದರು. ಇಷ್ಟರಲ್ಲಿ ಅರ್ಜುನನು ಅಣ್ಣನಾದ ಧರ್ಮರಾಜನನ್ನು ಯುದ್ಧಕ್ಕೆ ಬರಬೇಡವೆಂದು ನಿಲ್ಲಿಸಿ, ನಕುಲಸಹರಿಬ್ಬರನ್ನೂ ತನಗೆ ಉಭಯಪಾರ್ಶ್ವದ ಚಕ್ರರಕ್ಷಣೆಗಾಗಿ ನಿಯಮಿಸಿಕೊಂ

ಡನು. ಭೀಮನು ಗದೆಯನ್ನು ಹಿಡಿದು, ಸೈನ್ಯಕ್ಕೆ ಮುಂದಾಳಾಗಿ ಹೊರಟನು. ಇವರು ಹೊರಟುಬರುವ ದಾರಿಯಲ್ಲಿಯೇ ಪಾಂಚಾಲ ಸೈನಿಕರ ಉತ್ಸಾಹಧ್ವನಿಯೂ ಅರ್ಜುನನ ಕಿವಿಗೆ ಬಿದ್ದಿತು. ಒಡನೆಯೇ ಅರ್ಜುನನ ನೇಮಿಧ್ವನಿಯಿಂದ ದಿಕ್ಕುಗಳು ಮೊಳಗುವಂತೆ ವೇಗದಿಂದ ರಥವನ್ನು ಬಿಟ್ಟುಕೊಂಡು ತನ್ನ ಸಹೋದರರೊಡನೆ ಮುಂದೆ ಹೋದನು. ಉಲ್ಲೋಲಕಲ್ಲೋಲವಾದ ಸಮುದ್ರಘೋಷದಂತೆ ಕೂಗಿಡುತ್ತಿರುವ ಪಾಂಚಾಲಸೈನ್ಯವನ್ನು ನೋಡಿ ಗದಾಪಾಣಿಯಾದ ಭೀಮನು ದಂಡಪಾಣಿಯಾದ ಯಮನಂತೆ ಅದರೊಳಗೆ ಪ್ರವೇಶಿಸಿದನು. ಮಹಾಮಕರವು ಸಮುದ್ರವನ್ನು ಹೇಗೋ ಹಾಗೆ ಭೀಮನು ಚತುರಂಗಬಲಾಕೀರ್ಣವಾದ ಆ ಸೈನ್ಯದಲ್ಲಿ ನುಗ್ಗಿ, ಮೊದಲು ಅಲ್ಲಿದ್ದ ಗಜಸೈನ್ಯವನ್ನು ತಾನೊಬ್ಬನೇ ಗದಾಪಾಣಿಯಾಗಿ ಇದಿರಿಸಿದನು. ಬಾಹುಬಲದಲ್ಲಿ ಎಣೆಯಿಲ್ಲದವನೂ, ಗದಾಯುದ್ಧದಲ್ಲಿ ಕುಶಲನೂ ಆದ ಆ ಭೀಮನು, ತನ್ನ ಗದೆಯಿಂದ ಗಜಸೈನ್ಯವನ್ನೆಲ್ಲ ಬಡಿದು ಕೆಡಹುತ್ತಾ ಬಂದನು. ಆಗ ಬೆಟ್ಟದಂತಿದ್ದ ಆನೆಗಳೆಲ್ಲವೂ, ಭೀಮನ ಗದೆಯಿಂದ ತಲೆಯೊಡೆದು, ರಕ್ತವನ್ನು ಕಾರುತ್ತಾ, ವಜ್ರಾಹತವಾದ ಪರ್ವತದಂತೆ ಕೆಳಗೆ ಬೀಳುತಿದ್ದುವು. ಭೀಮನು ಆನೆ, ಕುದುರೆ, ರಥ, ಪದಾತಿಗಳನ್ನೆಲ್ಲ ಕೊಂದು ಕೆಡಹುತಿದ್ದನು. ಕಾಡಿನಲ್ಲಿ ಗೊಲ್ಲನು ಕೈಯಲ್ಲಿ ಹಿಡಿದ ಕೋಲಿನಿಂದ ದನಗಳ ಮಂದೆಯನ್ನೋಡಿಸುವಂತೆ ಪಾಂಚಾಲ ಸೈನ್ಯಗಳನ್ನೆಲ್ಲ ಓಡಿಸುತ್ತ ಬಂದನು. ಇದಿರಾಗಿ ಬಂದ ಆನೆಗಳನ್ನೂ, ರಥಗಳನ್ನೂ ಭೀಮನು ಕೈಯಿಂದಲೇ ಹಿಡಿದು ಆಡಿಸುತಿದ್ದನು. ಇದೇ ಸಮಯದಲ್ಲಿ ಬೇರೊಂದು ಕಡೆಯಲ್ಲಿ ಅರ್ಜುನನೂ ದ್ರುಪದನಮೇಲೆ ಬಾಣವಷ್ತಗಳನ್ನು ಕರೆಯುತ್ತಾ, ಜ್ವಲಿಸುವ ಕಾಲಾಗ್ನಿಯಂತಿರುವ ತೀವ್ರಬಾಣಗಳಿಂದ ಕುದುರೆಗಳನ್ನೂ, ರಥಗಳನ್ನೂ ತಂಡತಂಡವಾಗಿ ಕೆಡಹುತ್ತ ಬಂದನು. ಅರ್ಜುನನ ಪೆಟ್ಟನ್ನು ತಡೆಯಲಾರದೆ ಪಾಂಚಾಲರೂ, ಸೃಂಜಯರೂ, ಉಗ್ರಕೋಪದಿಂದ ಸಿಂಹನಾದಗಳನ್ನು ಮಾಡಿ, ನಾನಾತರದ ಬಾಣಗಳಿಂದ ಅರ್ಜುನನನ್ನು ಮರೆಸಿಬಿಟ್ಟು, ತಮಗೆ ಜಯವಾಯಿತೆಂದು ಸಂತೋಷ ಸಿಂಹನಾದಗಳನ್ನು ಮಾಡಿದರು. ಆ ಯುದ್ಧವು ನೋಡುವವರಿಗೆ ಅತ್ಯಾಶ್ಚರ್ಯಕರವಾಗಿದ್ದಿತು. ಪಾಂಚಾಲರ ಸಿಂಹನಾದ

ವನ್ನು ಕೇಳಿ ಅರ್ಜುನನಿಗೆ ಮತ್ತಷ್ಟು ಕೋಪವುಂಟಾಯಿತು. ಶತ್ರುಸೈನಿಕರಿಗೆಲ್ಲಾ ದಿಗ್ಭ್ರಮೆಹಿಡಿಯುವಂತೆ ಅವರನ್ನು ಬಾಣಗಳಿಂದ ಮುಚ್ಚುತ್ತ ಬಂದನು. ಆಗ ಅರ್ಜುನನು ಬತ್ತಳಿಕೆಯಿಂದ ಬಾಣಗಳನ್ನು ಯಾವಾಗ ತೆಗೆಯುವನೋ, ಯಾವಾಗ ಅದನ್ನು ಬಿಲ್ಲಿನಲ್ಲಿ ಸೇರಿಸುವನೋ, ಅದೊಂದೂ, ಯಾರಿಗೂ ತಿಳಿಯದಂತಾಯಿತು. ಅರ್ಜುನನು ತನ್ನ ಹಸ್ತಲಾಘವದಿಂದ ಪ್ರಯೋಗಿಸಿದ ಬಾಣಗಳಿಂದ, ದಿಕ್ಕುಗಳಾಗಲಿ, ಅಂತರಿಕ್ಷವಾಗಲಿ, ಭೂಮಿಯಾಗಲಿ, ಯಾವುದೂ ತಿಳಿಯದಂತೆ ಮರೆಸಿಹೋಯಿತು. ಹೀಗೆ ಗಾಂಡೀವಧಾರಿಯಾದ ಅರ್ಜುನನ ಬಾಣಗಳಿಂದ ರಣರಂಗದಲ್ಲಿ ಕತ್ತಲೆ ಕವಿದುದನ್ನು ನೋಡಿ ಅತ್ತಲಾಗಿ ಪಾಂಚಾಲರೂ, ಇತ್ತಲಾಗಿ ಕೌರವರೂ "ಭಲೆ! ಭಲೆ!" ಎಂದು ಕೊಂಡಾಡಿದರು. ಈ ಸಾಧುವಾದಗಳೊಡನೆ ಕೌರವಸೈನ್ಯದಲ್ಲಿ ಸಂತೋಷ ಸಿಂಹನಾದಗಳೂ, ಶಂಖತೂರ್ಯನಾದಗಳೂ ಹೊರಟುವು. ಇದನ್ನು ಕೇಳಿ ಸಹಿಸಲಾರದೆ ದ್ರುಪದನು, ಸತ್ಯಜಿತ್ತೆಂಬವನೊಡನೆ ಸೇರಿ, ದೇವೇಂದ್ರನು ಶಂಬರಾಸುರನನ್ನು ಇದಿರಿಸುವಂತೆ ಅರ್ಜುನನಿಗಿದಿರಾಗಿ ಬಾಣಗಳನ್ನು ಕರೆಯುತ್ತ ಓಡಿಬಂದನು. ಅಷ್ಟರಲ್ಲಿಯೇ ಅರ್ಜುನನು ದೊಡ್ಡ ಬಾಣವರ್ಷದಿಂದ ದ್ರುಪದನನ್ನು ಮರೆಸಿಬಿಟ್ಟನು. ಆನೆಗಳ ಸಲಗವು ಸಿಂಹದ ಕೈಗೆ ಸಿಕ್ಕಿಬಿದ್ದಂತೆ, ಅರ್ಜುನನ ಕೈಯಲ್ಲಿ ದ್ರುಪದನು ಸಿಕ್ಕಿದುದನ್ನು ನೋಡಿ ಪಾಂಚಾಲಸೈನ್ಯದಲ್ಲಿ ದೊಡ್ಡ ಹಾಹಾಕಾರವೆದ್ದಿತು. ಆಗ ಸತ್ಯಜಿತ್ತು ಪಾಂಚಾಲನನ್ನು ರಕ್ಷಿಸುವುದಕ್ಕಾಗಿ, ಅರ್ಜುನನಿಗಿದಿರಾದನು. ಅರ್ಜುನಪಾಂಚಾಲರಿಬ್ಬರೂ ಇಂದ್ರ ಬಲಿಗಳಂತೆ ಯುದ್ಧಕ್ಕೆ ನಿಂತು, ಒಬ್ಬರ ಸೈನ್ಯಗಳನ್ನೊಬ್ಬರು ಚದರಿಸುತಿದ್ದರು. ಅರ್ಜುನನು ಮರ್ಮಭೇದಕಗಳಾದ ಹತ್ತು ಬಾಣಗಳಿಂದ ಸತ್ಯಜಿತ್ತನ್ನು ಹೊಡೆದನು. ಪಾಂಚಾಲನು ನೂರು ಬಾಣಗಳನ್ನು ಅರ್ಜುನನ ಮೇಲೆ ಬಿಟ್ಟನು. ದ್ರುಪದನ ಬಾಣವರ್ಷದಿಂದ ಮರೆಸಲ್ಪಟ್ಟಾಗಲೂ, ಅರ್ಜುನನು ಮಹಾವೇಗದಿಂದ ತನ್ನ ಧನುಸ್ಸಿನ ನಾಣನ್ನು ನೀವುತ್ತ, ಸತ್ಯಜಿತ್ತಿನ ಕೈಯಲ್ಲಿದ್ದ ಧನುಸ್ಸನ್ನು ಕತ್ತರಿಸಿ, ದ್ರುಪದನನ್ನಿದಿರಿಸಿದನು. ಇಷ್ಟರಲ್ಲಿಯೇ ಸತ್ಯಜಿತ್ತು ಬೇರೊಂದು ಬಿಲ್ಲನ್ನು ತೆಗೆದುಕೊಂಡು, ಅರ್ಜುನನನ್ನೂ, ಅವನ ಸಾರಥಿಯನ್ನೂ, ರಥಾಶ್ವಗಳನ್ನೂ

ಭೇದಿಸಿದನು. ಅರ್ಜುನನು ಇದನ್ನು ಸಹಿಸಲಾರದೆ, ಅವರಿಬ್ಬರನ್ನೂ ತೀರಿಸಿಯೇ ಬಿಡಬೇಕೆಂದು ತೀವ್ರಬಾಣಗಳನ್ನು ಪ್ರಯೋಗಿಸಿ, ಆ ದ್ರುಪದನ ರಥಾಶ್ವಗಳು, ಬಿಲ್ಲು, ಧ್ವಜ, ಅವನ ಹಸ್ತಮುಷ್ಟಿ, ಅವನ ಪಕ್ಷರಕ್ಷಕರು, ಸಾರಥಿಗಳು, ಇವನ್ನೆಲ್ಲ ಏಕಕಾಲದಲ್ಲಿ ಹೊಡೆಯುತ್ತಾ ಬಂದನು. ಹೀಗೆ ಕ್ಷಣಕ್ಷಣಕ್ಕೂ ಅರ್ಜುನನಿಂದ ತನ್ನ ಧನುಸ್ಸೂ, ಕುದುರೆಗಳೂ, ಭಿನ್ನವಾಗುತ್ತಿರುವುದನ್ನು ನೋಡಿ ಸತ್ಯಜಿತ್ತು, ಇನ್ನುಮೇಲೆ ತನ್ನ ಕೈಯೇನೂ ಸಾಗದೆಂದು ತಿಳಿದು, ಯುದ್ಧರಂಗದಿಂದ ವಿಮುಖನಾಗಿ ಓಡುವುದಕ್ಕಾರಂಭಿಸಿದನು. ಆಗ ಅರ್ಜುನನು ಅವನನ್ನು ಬಿಟ್ಟು, ದ್ರುಪದನನ್ನೂ ಇದಿರಿಸಿದನು. ಅರ್ಜುನದ್ರುಪದರಿಬ್ಬರಿಗೂ ದೊಡ್ಡ ಯುದ್ಧವಾಯಿತು. ಆಗ ಅರ್ಜುನನು ದ್ರುಪದನ ಬಿಲ್ಲನ್ನೂ, ಧ್ವಜವನ್ನೂ ಕತ್ತರಿಸಿ ಕೆಡಹಿದನು. ಐದು ಬಾಣಗಳಿಂದ ಅವನ ರಥಾಶ್ವಗಳನ್ನೂ, ಸಾರಥಿಯನ್ನೂ ಭೇದಿಸಿದನು. ಆಮೇಲೆ ಅರ್ಜುನನು ತನ್ನ ಕೈಯಲ್ಲಿದ್ದ ಬಿಲ್ಲುಬಾಣಗಳನ್ನು ಬಿಸುಟು, ಕತ್ತಿಯನ್ನು ಕೈಗೆತ್ತಿಕೊಂಡು ದೊಡ್ಡ ಸಿಂಹನಾದವನ್ನು ಮಾಡುತ್ತಾ ಮುಂದೆ ಬಂದು, ಪಾಂಚಾಲರಾಜನ ರಥದ ಮೂಕಿಯ ಮೇಲಕ್ಕೆ ಹಾರಿ, ರಥಮಧ್ಯದಲ್ಲಿ ಕುಳಿತಿದ್ದ ಪಾಂಚಾಲರಾಜನನ್ನು ಸಮೀಪಿಸಿ, ಪೂರ್ವದಲ್ಲಿ ಗರುಡನು ಸಮುದ್ರವನ್ನು ಕಲಕಿ, ಸರ್ಪವನ್ನು ಹಿಡಿದಂತೆ ಆ ದ್ರುಪದನನ್ನು ನಿರ್ಭಯವಾಗಿ ಹಿಡಿದುಬಿಟ್ಟನು. ಇದನ್ನು ಕಂಡೊಡನೆ ಪಾಂಚಾಲರೆಲ್ಲರೂ ಭಯದಿಂದ ದಿಕ್ಕುದಿಕ್ಕಿಗೆ ಓಡಿದರು. ಅರ್ಜುನನು ಜಯಶೀಲನಾಗಿ ಬರುವುದನ್ನು ನೋಡಿ ಧೃತರಾಷ್ಟ್ರಕುಮಾರರಿಗೆಲ್ಲ ಧೈರ್ಯೋತ್ಸಾಹಗಳು ಹುಟ್ಟಿದುವು ಆಮೇಲೆ ಎಲ್ಲರೂ ಒಂದಾಗಿ ಸೇರಿ, ದ್ರುಪದನಗರಿಗೆ ಪ್ರವೇಶಿಸಿ, ಅದನ್ನು ಕೊಳ್ಳೆಹೊಡೆಯಲಾರಂಭಿಸಿದರು. ಆಗ ಅರ್ಜುನನು ಜಯೋತ್ಸಾಹದಿಂದ ಮತ್ತರಾದ ತನ್ನ ಕಡೆಯ ವೀರರನ್ನೂ, ಭೀಮನನ್ನೂ ನೋಡಿ "ಅಣ್ಣಾ! ಇನ್ನುಮೇಲೆ ನಾವು ಸೈನಿಕರನ್ನು ಹಿಂಸಿಸಬಾರದು. ಈ ದ್ರುಪದನಾದರೋ ಕ್ಷತ್ರಿಯಶ್ರೇಷ್ಠನು. ಅಲ್ಲದೆ ನಮ್ಮ ಕುರುಕುಲಕ್ಕೆ ಬಂಧುವೆನಿಸಿಕೊಂಡವನು. ಅವನ ಸೈನ್ಯವನ್ನು ಕೊಲ್ಲುವುದೇಕೆ? ನಮ್ಮ ಆಚಾರ್ಯನು ಕೋರಿದ ಗುರುದಕ್ಷಿಣೆಯನ್ನು ಅವನಿಗೆ ಕೊಟ್ಟು ಬರುವೆನು" ಎಂದನು.

ಭೀಮನಿಗೆ ಯುದ್ಧವನ್ನು ನಿಲ್ಲಿಸಲು ತೃಪ್ತಿಯಿಲ್ಲದಿದ್ದರೂ, ಅರ್ಜುನನ ನಿರ್ಬಂಧಕ್ಕಾಗಿ ಸುಮ್ಮನಾದನು. ಆಮೇಲೆ ನಾಲ್ಕು ಮಂದಿ ಪಾಂಡವರೂ ಸೇರಿ, ದ್ರುಪದನನ್ನು ಅವನ ಮಂತ್ರಿಗಳೊಡನೆ ಸೆರೆಹಿಡಿದು, ದ್ರೋಣನ ಬಳಿಗೆ ತಂದರು. ದ್ರುಪದನಿಗಾದರೋ ಮುಖದಲ್ಲಿ ಸ್ವಲ್ಪವಾದರೂ ಕಳೆಯಿಲ್ಲ. ಅವನ ಹಿಂದಿನ ಹೆಮ್ಮೆಯೆಲ್ಲವೂ ಅಡಗಿಹೋಯಿತು. ಅವನ ಸಮಸ್ತ ಧನವೂ ಅಪಹರಿಸಲ್ಪಟ್ಟಿತು. ಪಾಂಡವರ ಕೈಯಲ್ಲಿ ಸಿಕ್ಕಿಬಿದ್ದು, ಅತ್ಯಂತ ದೈನ್ಯದಶೆಯಲ್ಲಿರುವ ಆ ದ್ರುಪದನನ್ನು ನೋಡಿ ದ್ರೋಣನು ತನ್ನ ಪೂರ್ವವೈರವನ್ನು ಮನಸ್ಸಿನಲ್ಲಿಟ್ಟುಕೊಂಡು, ಮರ್ಮಭೇದಕವಾದ ಮಾತಿನಿಂದ "ಓ ದ್ರುಪದರಾಜಾ! ಈಗ ನಿನ್ನ ದೇಶವೂ, ನಿನ್ನ ಪಟ್ಟಣವೂ, ನಿನ್ನ ರಾಜಪದವಿಯೂ ಏನಾಯಿತು ನೋಡು? ಇವನ್ನೆಲ್ಲ ನಿಮಿಷಮಾತ್ರದಲ್ಲಿ ಧ್ವಂಸಮಾಡಿಸಿದೆನು. ಜೀವದೊಡನೆ ನೀನು ಈಗ ನಿನ್ನ ಶತ್ರುವಿನ ಕೈಗೆ ಸಿಕ್ಕಿರುವೆ. ಈಗಲಾದರೂ ನೀನು ನನ್ನನ್ನು ಸ್ನೇಹಿತನೆಂದು ಭಾವಿಸಬಹುದಲ್ಲವೆ? ಈಗಲೂ ಬಡಬ್ರಾಹ್ಮಣನಾದ ನನ್ನೊಡನೆ ಸ್ನೇಹವು ಬೇಕಿಲ್ಲವೋ ಹೇಳು!" ಎಂದು ಹೇಳಿ ನಗುತ್ತಾ "ರಾಜಾ! ಹೆದರಬೇಡ! ಈಗಲೂ ನಿನಗೇನೂ ಪ್ರಾಣಭಯವಿಲ್ಲ. ನಾವು ಬ್ರಾಹ್ಮಣರು! ಕ್ಷಮೆಯೇ ಸ್ವಭಾವವಾಗಿ ಉಳ್ಳವರು. ಓ ಕ್ಷತ್ರಿಯಶ್ರೇಷ್ಠನೇ! ನೀನು ಬಾಲ್ಯದಿಂದಲೂ ಆಶ್ರಮದಲ್ಲಿ ನನ್ನೊಡನೆ ಆಟವಾಡುತ್ತಿದ್ದವನು. ಆದುದರಿಂದ ನಮ್ಮಿಬ್ಬರಲ್ಲಿ ಸ್ನೇಹವೂ, ಪ್ರೀತಿಯೂ, ಮೇಲೆಮೇಲೆ ಹೆಚ್ಚಿತು. ಈಗಲೂ ಆ ಸ್ನೇಹಕ್ಕೆ ಭಂಗವು ಬಾರದು. ಈಗಲೂ ನಿನ್ನೊಡನೆ ಸ್ನೇಹವನ್ನು ಬೆಳೆಸಬೇಕೆಂಬುದೇ ನನ್ನ ಕೋರಿಕೆ. ಈಗ ನಾನೇ ನಿನಗೊಂದು ವರವನ್ನು ಕೊಡುವೆನು. ಈಗ ನನ್ನ ವಶವಾಗಿರುವ ಪಾಂಚಾಲರಾಜ್ಯದಲ್ಲಿ ಅರ್ಧಭಾಗವನ್ನು ನಿನಗೇ ಧರ್ಮಾರ್ಥವಾಗಿ ಒಪ್ಪಿಸಿಬಿಡುವೆನು. ನಾನು ಬಡಬ್ರಾಹ್ಮಣನೆಂದೂ, ರಾಜನಲ್ಲದವನು ರಾಜನಿಗೆ ಹೇಗೆ ಸ್ನೇಹಿತನಾಗುವನೆಂದೂ ನೀನು ಹಿಂದೆ ನನ್ನನ್ನು ಅವಮಾನಪಡಿಸಿ ಕಳುಹಿಸಿದೆಯಲ್ಲವೆ? ಈಗ ನೋಡು! ನಾನೂ ನಿನ್ನಂತೆ ರಾಜನೆನಿಸಿಕೊಂಡವನು. ನೀನು ರಾಜ್ಯಭ್ರಷ್ಟನಾಗಿದ್ದರೂ, ನಾನೇ ಈಗ ನಿನ್ನೊಡನೆ ಸ್ನೇಹಿತನಾಗಿರಬೇಕೆಂದು ಬಯಸುವೆನು. ಅರ್ಧರಾಜ್ಯವು ನನಗೂ, ಅರ್ಧ

ರಾಜ್ಯವು ನಿನಗೂ ಇರಲಿ. ಗಂಗೆಯ ದಕ್ಷಿಣಕ್ಕಿರುವ ದೇಶವನ್ನೆಲ್ಲ ನೀನು ಅನುಭವಿಸು. ಅದರ ಉತ್ತರತೀರದ ಭಾಗವು ನನಗಿರಲಿ! ನಿನಗೆ ಇಷ್ಟವಿದ್ದಂತೆ ಈಗಲಾದರೂ, ನನ್ನನ್ನು ಸ್ನೇಹಿತನೆಂದು ಭಾವಿಸು! ನಾನು ನಿನ್ನ ಸ್ನೇಹವನ್ನು ಬಯಸಿಯೇ, ರಾಜತ್ವವನ್ನು ಪಡೆಯಲು ಪ್ರಯತ್ನಿಸಿದೆನೇ ಹೊರತು, ರಾಜ್ಯದಾಸೆಯು ನನಗೆ ಮುಖ್ಯವಲ್ಲ" ಎಂದನು. ಆಗ ದ್ರುಪದನು "ಓ ಬ್ರಾಹ್ಮಣೋತ್ತಮಾ! ಮಹಾತ್ಮರೂ, ಪರಾಕ್ರಮಶಾಲಿಗಳೂ ಆದ ನಿಮ್ಮಲ್ಲಿ ಇಂತಹ ಉದಾರಗುಣವೇನೂ ಆಶ್ಚರ್ಯವಲ್ಲ. ನಿನ್ನನ್ನು ನಾನು ಪ್ರೀತಿಸುವೆನು. ಮತ್ತು ನಿನ್ನ ಶಾಶ್ವತವಾದ ಪ್ರೀತಿಯನ್ನು ನಾನೂ ಕೋರುವೆನು" ಎಂದನು. ಆಮೇಲೆ ದ್ರೋಣನು ಶಾಶ್ವತವಾದ ಪ್ರೀತಿಯಿಂದ ಆ ದ್ರುಪದನಿಗೆ ಅವನ ಅರ್ಧರಾಜ್ಯವನ್ನು ಕೊಟ್ಟು ಕಳುಹಿಸಿಬಿಟ್ಟನು. ದ್ರುಪದನು ಮನಸ್ಸಿನಲ್ಲಿ ನಾಚಿಕೆಯಿಂದಲೂ, ದುಃಖದಿಂದಲೂ ಹಿಂತಿರುಗಿ ಗಂಗಾತೀರದಲ್ಲಿ ಅನೇಕ ದೇಶಗಳಿಂದ ಕೂಡಿದ ಮಾಕಂದಿಯೆಂಬ ಪಟ್ಟಣವನ್ನೂ, ಕಾಂಪಿಲ್ಯವೆಂಬ ನಗರವನ್ನೂ, ಚರ್ಮಣ್ವತೀ ನದಿಯ ವರೆಗಿರುವ ದಕ್ಷಿಣಪಾಂಚಾಲದೇಶವನ್ನೂ ತನ್ನ ರಾಜ್ಯವನ್ನಾಗಿ ಮಾಡಿಕೊಂಡು ಅಲ್ಲಿ ಆಳುತ್ತಿದ್ದನು. ಓ ಜನಮೇಜಯರಾಜಾ! ಹೀಗೆ ದ್ರುಪದನು ದ್ರೋಣನಿಂದ ಅವಮಾನಿತನಾಗಿ ಕೊನೆಗೆ ಅವನಿಂದಲೇ ರಕ್ಷಿಸಲ್ಪಟ್ಟನು. ತನ್ನ ಕ್ಷತ್ರಿಯಬಲದಿಂದ ಆ ಬ್ರಾಹ್ಮಣನಿಗೆ ಪರಾಜಯವಿಲ್ಲವೆಂದು ನಿಶ್ಚಯಿಸಿಕೊಂಡನು. ಬ್ರಹ್ಮಬಲಕ್ಕಿಂತ ಕ್ಷತ್ರಿಯಬಲವು ಕಡಿಮೆಯೆಂಬುದೂ ಅವನ ಮನಸ್ಸಿಗೆ ಹತ್ತಿತು.

ಇತ್ತಲಾಗಿ ದ್ರೋಣನು ಅಹಿಛತ್ರವೆಂಬ ದೇಶವನ್ನು ತನ್ನ ವಶಮಾಡಿಕೊಂಡು ಆಳುತ್ತಿದ್ದನು. ಹೀಗೆ ಅರ್ಜುನನಿಂದ ದ್ರೋಣನಿಗೆ ಅನೇಕ ದೇಶದೇಶಗಳಿಂದ ಕೂಡಿದ ಅಹಿಛತ್ರವು ಗುರುದಕ್ಷಿಣಾರೂಪವಾಗಿ ಅರ್ಪಿಸಲ್ಪಟ್ಟಿತು.

ಇದು ನೂರನಾಲ್ವತ್ತೆಂಟನೆಯ ಅಧ್ಯಾಯವು.



ದ್ರುಪದನು ಯಾಜೋಪಯಾಜರೆಂಬ ಋಷಿಗಳ ಬಳಿಗೆ ಹೋದುದು. ಯಾಜನು ದ್ರೋಣನನ್ನು ಕೊಲ್ಲುವ ಪುತ್ರನನ್ನು ಹುಟ್ಟಿಸಲು ಯಜ್ಞವನ್ನಾರಂಭಿಸಿದುದು. ಸಂತಾನಪ್ರದವಾದ ಹವಿಸ್ಸನ್ನು ತಿನ್ನುವುದಕ್ಕೆ ಕೊಟ್ಟಾಗ, ದ್ರುಪದಪತ್ನಿಯು ಗರ್ವದಿಂದ ಸಿರಾಕರಿಸಿದುದು. ಯಾಜೋಪಯಾಜರು ಕೋಪದಿಂದ ಆ ಹವಿಸ್ಸನ್ನು ಅಗ್ನಿಯಲ್ಲಿ ಬಿಸುಡಲು ಆ ಅಗ್ನಿಯಿಂದ ಧೃಷ್ಟದ್ಯುಮ್ನನೂ ದ್ರೌಪದಿಯೂ ಹುಟ್ಟಿದುದು.

ಓ ಜನಮೇಜಯರಾಜಾ! ದ್ರುಪದನಿಗೆ ದ್ರೋಣನಮೇಲೆ ಉಂಟಾದ ವೈರದಿಂದ ರಾತ್ರಿಯಲ್ಲಿ ನಿದ್ರೆಯೇ ಬಾರದಂತಾಯಿತು. ಕ್ಷತ್ರಿಯಬಲದಿಂದ ದ್ರೋಣನನ್ನು ಜಯಿಸಲು ತನಗೆ ಸಾಧ್ಯವಿಲ್ಲವೆಂಬ ನಿಶ್ಚಯವೂ ಹುಟ್ಟಿತು. ಬ್ರಹ್ಮತೇಜಸ್ಸಿಗಿಂತಲೂ ತನ್ನ ಬಲವು ಹೀನವೆಂದು ತಿಳಿದು, ಹೇಗಾದರೂ ಅವನನ್ನು ನಿಗ್ರಹಿಸಬೇಕೆಂದು ನಿಶ್ಚಯಿಸಿ, ಕರ್ಮಸಿದ್ಧರಾದ ಬ್ರಾಹ್ಮಣರನ್ನು ಹುಡುಕಿಕೊಂಡು ಹೊರಟನು. ಕಂಡಕಂಡ ಬ್ರಾಹ್ಮಣರ ನಿವಾಸಗಳಿಗೆ ಹೋಗಿ ವಿಚಾರಿಸುತಿದ್ದನು. ಎಷ್ಟೋ ಆಶ್ರಮಗಳನ್ನು ಸುತ್ತಿ ಕೊನೆಗೆ ವ್ಯಸನದಿಂದ "ಅಯ್ಯೋ! ನನಗೆ ಈ ಕಷ್ಟವನ್ನು ತೀರಿಸತಕ್ಕ ಪುತ್ರನೂ ಇಲ್ಲ. ನನ್ನ ಬಂಧುಗಳನ್ನು ನುಡಬೇಕಲ್ಲವೆ? ಈ ಲೋಕದಲ್ಲಿ ನನಗೆ ಸಹಾಯಮಾಡತಕ್ಕ ಮಿತ್ರರೂ ಇಲ್ಲವೇ? ಪ್ರಪಂಚದಲ್ಲಿ ಒಳ್ಳೇ ವೀರ್ಯವುಳ್ಳ ಕ್ಷತ್ರಿಯನೇ ಇಲ್ಲವೇ?" ಎಂದು ಕೊರಗುತಿದ್ದನು. ತಾನೇ ಅಂತಹ ಪುತ್ರನೊಬ್ಬನನ್ನು ಪಡೆಯಲು, ಅದಕ್ಕೆ ಮಾರ್ಗವೇನೆಂದು ಹುಡುಕುತ್ತಾ ಭೂಮಿಯನ್ನೆಲ್ಲ ಸುತ್ತುತಿದ್ದನು. ಮಹಿಮೆಯಿಂದಾಗಲಿ, ಅಸ್ತ್ರಶಿಕ್ಷೆಯಿಂದಾಗಲಿ, ವಿನಯದಿಂದಾಗಲಿ, ಆ ದ್ರೋಣನಿಗೆ ಪರಾಜಯವನ್ನುಂಟುಮಾಡಲು ತಾನು ಅಶಕ್ತನೆಂಬುದನ್ನು ತಿಳಿದು ಅಲ್ಲಲ್ಲಿ ತೊಳಲುತ್ತಾ ಗಂಗಾತೀರಕ್ಕೆ ಹೋದನು. ಅಲ್ಲಿ ಕಲ್ಮಾಷಿಯೆಂಬ ನಗರದ ಸಮೀಪದಲ್ಲಿ, ಶುದ್ಧವಾದೊಂದು ಬ್ರಾಹ್ಮಣರ ಅಗ್ರಹಾರವು ಸಿಕ್ಕಿತು. ಅಲ್ಲಿ ಸ್ನಾತಕನೂ, ತಪಸ್ವಿಯೂ, ಅಲ್ಲದ ಬ್ರಾಹ್ಮಣನೊಬ್ಬನಾದರೂ ಇರಲಿಲ್ಲ. ಅಲ್ಲಿ ವಿಚಾರಿಸುತ್ತಿರುವಾಗ ಮಹಾಮಹಿಮೆಯುಳ್ಳವರೂ, ತಪ

ಸ್ವಿಗಳೂ ಆದ ಯಾಜೋಪಯಾಜರೆಂಬ ಬ್ರಾಹ್ಮಣಸಹೋದರರಿಬ್ಬರನ್ನು ಕಂಡನು. ಅವರಿಬ್ಬರೂ ಯಾವಾಗಲೂ ವೇದಾಧ್ಯಯನಪರರು. ಕಶ್ಯಪ ಗೋತ್ರದವರು. ಅರಣ್ಯದಲ್ಲಿ ಮೃಗಚರ್ಯೆಯಿಂದ ಜೀವಿಸುತ್ತಿದ್ದವರು. ಋಷಿಶ್ರೇಷ್ಠರು. ಅವರನ್ನು ಕಂಡೊಡನೆ ಆ ಸಹೋದರರಿಬ್ಬರ ಶಕ್ತಿಯೂ, ಬುದ್ಧಿಯೂ ಅಪಾರವಾದುದೆಂದು ಆ ದ್ರುಪದನ ಮನಸ್ಸಿಗೆ ನಿರ್ಧಾರವುಂಟಾಯಿತು. ಮೊದಲು ಅವರಲ್ಲಿ ಕಿರಿಯುವನಾದ ಉಪಯಾಜನೆಂಬವನನ್ನು ಏಕಾಂತವಾಗಿ ಕರೆದು, ಅವನಿಗೆ ಬೇಕಾದುದನ್ನೆಲ್ಲ ಕೊಡುವಹಾಗೆ ಆಸೆಹುಟ್ಟಿಸಿದನು. ಆ ಬ್ರಾಹ್ಮಣನಾದರೋ, ವ್ರತನಿಷ್ಠನು. ಗುರುಶುಶ್ರೂಷೆಯಲ್ಲಿ ನಿರತನಾದವನು. ಆ ಬ್ರಾಹ್ಮಣನು ತನ್ನಲ್ಲಿಗೆ ಅತಿಥಿಯಾಗಿ ಬಂದ ರಾಜನಿಗೆ ಯಥೋಚಿತವಾಗಿ ಅರ್ಘ್ಯಪಾದ್ಯಗಳನ್ನೂ, ಫಲಮೂಲಗಳನ್ನೂ ಕೊಟ್ಟು ಸತ್ಕರಿಸಿ, "ಮಹಾರಾಜಾ! ನಿನಗೆ ನಮ್ಮಿಂದ ಆಗಬೇಕಾದ ಕಾರ್ಯವೇನು? ನೀನು ಇಷ್ಟು ಶ್ರಮಪಟ್ಟು ಇಲ್ಲಿಗೆ ಬಂದುದೇಕೆ?" ಎಂದನು. ಅದಕ್ಕಾ ದ್ರುಪದನು "ಮಹರ್ಷೀ! ನನ್ನದೊಂದು ಕೋರಿಕೆಯುಂಟು. ದ್ರೋಣನನ್ನು ಕೊಲ್ಲುವ ಮಗನೊಬ್ಬನು ನನಗೆ ಹುಟ್ಟುವಂತೆ ನಾನೊಂದು ಕರ್ಮವನ್ನು ಮಾಡಿಸಬೇಕು. ನಿನಗೆ ಬೇಕಾದಷ್ಟು ಹಣವನ್ನು ಕೊಡುವೆನು" ಎಂದನು. ಆಗ ಬ್ರಾಹ್ಮಣನು ಕೋಪದಿಂದ "ರಾಜಾ! ನಾನು ಯಾವ ಫಲದಲ್ಲಿಯೂ ಆಶೆಯುಳ್ಳವನಲ್ಲ ನಿನ್ನಿಂದ ಪ್ರತಿಫಲವನ್ನಪೇಕ್ಷಿಸುವವರಾರೋ ಅವರಲ್ಲಿಗೆ ಹೋಗು" ಎಂದು ನಿರಾಕರಿಸಿದನು. ಅನೇಕ ಸಜ್ಜನರ ನಡುವೆ ತನಗೆ ಆ ಬ್ರಾಹ್ಮಣತಿರಸ್ಕಾರವುಂಟಾದುದಕ್ಕಾಗಿ ದ್ರುಪದನು ಮನಸ್ಸಿನಲ್ಲಿ ಕೊರಗುತ್ತಾ ತಿರುಗಿ ಹೇಗಾದರೂ ಅವನನ್ನು ತನ್ನ ವಶಮಾಡಿಕೊಳ್ಳಬೇಕೆಂದು ಅವನ ಸಮೀಪದಲ್ಲಿಯೇ ಇದ್ದು ಉಪಚರಿಸುವುದಕ್ಕೆ ತೊಡಗಿದನು. ಹೀಗೆ ಒಂದು ವರ್ಷಕಾಲವು ಕಳೆಯಿತು. ಆಮೇಲೆ ಉಪಯಾಜನು ದ್ರುಪದನನ್ನು ನೋಡಿ ಮೃದುವಾಕ್ಯದಿಂದ "ಓ ದ್ರುಪದಮಹಾರಾಜಾ! ಹಿಂದೊಮ್ಮೆ ನನ್ನ ಜ್ಯೇಷ್ಠಸಹೋದರನಾದ ಯಾಜನು ನಿರ್ಜನವಾದ ಕಾಡಿನಲ್ಲಿ ಸಂಚರಿಸುತ್ತಾ ಅಶುದ್ಧವಾದ ಕಡೆಯಲ್ಲಿ ಬಿದ್ದಿದ್ದ ಒಂದು ಹಣ್ಣನ್ನು ಕೈಗೆ ತೆಗೆದುಕೊಂಡನು. ಹಿಂದೆ ಹೋಗುತ್ತಿದ್ದ ನಾನು ಅದನ್ನು ನೋಡಿದೆನು.

ನನ್ನ ಅಣ್ಣನು ತನಗೆ ಪ್ರಯೋಜನವುಂಟಾಗುವ ಸಂದರ್ಭದಲ್ಲಿ ವಿವೇಚನೆ ಯಿಲ್ಲದೆ ಪ್ರವರ್ತಿಸತಕ್ಕವನೆಂದು ನನಗೆ ತಿಳಿದಿದೆ. ನನ್ನ ಅಣ್ಣನು ಆ ಹಣ್ಣನ್ನು ಕಂಡೊಡನೆ ಅದರಲ್ಲಿರುವ ದೋಷವನ್ನು ನೆನೆಸಲಿಲ್ಲ. ಅದ ರಲ್ಲಿ ಮುಂದೆ ಬರಬಹುದಾದ ಅಪಾಯವನ್ನೂ ಯೋಚಿಸಲಿಲ್ಲ, ಇತರ ವಿಷಯಗಳಲ್ಲಿ ಅವನು ಹಾಗೆಯೇ ಇರತಕ್ಕವನು. ಅಲ್ಲದೆ ಓ ಮಹಾ ರಾಜಾ! ನನ್ನಣ್ಣನು ವೇದಸಂಹಿತೆಗಳನ್ನೆಲ್ಲ ಅಧ್ಯಯನಮಾಡಿರುವನು. ಪಂಚಮಹಾಯಜ್ಞಗಳನ್ನು ಮಾಡಿದವನು. ಕ್ಷೇತ್ರದಲ್ಲಿ ಬಿದ್ದ ಕಾಳ ನ್ನಾಯ್ದು, ಅಥವಾ ಭಿಕ್ಷವನ್ನು ತಂದು ಆಗಾಗ ಸಿಕ್ಕಿದುದನ್ನು ಭುಜಿಸು ತ್ತಿರುವುದುಂಟು. ಅವನು ಆಗಾಗ ಆಹಾರದ ರುಚಿಯನ್ನು ಕುರಿತು ನನ್ನೊಡನೆ ವರ್ಣಿಸುತ್ತಿರುವುದುಂಟು. ಕಾಡಿನಲ್ಲಿ ಗುರುಕುಲವಾಸದಲ್ಲಿ ದ್ದು ವೇದಾಧ್ಯಯನಮಾಡುತ್ತಿರುವಾಗಲೂ, ಅವನು ಇತರರು ನಿರಾಕರಿಸಿ ಬಿಟ್ಟ ಭಿಕ್ಷೆಯನ್ನು ತೆಗೆದು ಭುಜಿಸುತಿದ್ದನು. ತಾನು ತಿಂದ ಅನ್ನದ ಗುಣವನ್ನು ಕೊಂಡಾಡಿ ಆಗಾಗ ಸಂತೋಷಪಡುತಿದ್ದನು. ಹೀಗೆ ಅವನಿಗೆ ಸ್ವಪ್ರಯೋಜನದಲ್ಲಿ ವ್ಯಷ್ಟಿಯು ಹೆಚ್ಚು. ಅಂತವನಲ್ಲಿ ನೀನು ಹೋದರೆ ಒಂದುವೇಳೆ ಅವನು ನಿನ್ನ ಹಣಕ್ಕೆ ಆಸೆಪಟ್ಟು ಯಾಗವನ್ನು ಮಾಡಿಸಬಹುದು" ಎಂದನು ಒಡನೆಯೇ ದ್ರುಪದನು, ಮನಸ್ಸಿನಲ್ಲಿ ಬಹಳ ಬೇಸರದಿಂದ ಚಿಂತಿಸುತ್ತಾ ಅಲ್ಲಿಂದ ಯಾಜನ ಆಶ್ರಮಕ್ಕೆ ಹೋಗಿ ಅವನನ್ನು ವಿಶೇಷವಾಗಿ ಪೂಜಿಸಿ "ಓ ಬ್ರಾಹ್ಮಣೋತ್ತಮಾ! ನಿನಗೆ ಎಂಟುನೂರು ಗೋವುಗಳನ್ನು ಕೊಡುವೆನು. ನನ್ನಿಂದ ಒಂದು ಯಾಗ ವನ್ನು ಮಾಡಿಸು. ದ್ರೋಣನಲ್ಲಿರುವ ವೈರದಿಂದ ನಾನು ಸಂಕಟಪಟ್ಟು ಕುದಿಯುತ್ತಾ ನಿನ್ನಲ್ಲಿ ಮರೆಹೊಕ್ಕಿರುವೆನು. ಬ್ರಾಹ್ಮಣನಲ್ಲಿ ನೆಲೆಗೊಂ ಡಿರುವ ಕ್ಷತ್ರಿಯ ತೇಜಸ್ಸನ್ನು ಯಾವ ಕ್ಷತ್ರಿಯನೂ ಜಯಿಸಲಾರನು. ಆದುದರಿಂದ ಆ ದ್ರೋಣನ ಭಯದಿಂದ ಪೀಡಿತನಾದ ನನ್ನನ್ನು ನೀನೇ ಕಾಪಾಡಬೇಕು. ಯಾವ ಕರ್ಮದಿಂದ ನನಗೆ, ದ್ರೋಣನನ್ನು ಕೊಲ್ಲತಕ್ಕ ಒಬ್ಬ ಪುತ್ರನೂ, ಅರ್ಜುನನಿಗೆ ಕೊಡತಕ್ಕ ಒಬ್ಬ ಕನ್ಯೆಯೂ ಉಂಟಾಗು ವದೋ ಅಂತಹ ಕರ್ಮವನ್ನು ನನ್ನಿಂದ ಮಾಡಿಸಬೇಕು. ಆ ದ್ರೋಣ ನಾದರೋ ಬ್ರಹ್ಮಜ್ಞರಲ್ಲಿ ಮೇಲೆನಿಸಿದವನು. ಬ್ರಹ್ಮಕ್ಷತ್ರಿಯ ಬಲಗಳೆರಡ

ರಲ್ಲಿಯೂ ಅವನಿಗೆ ಸಮಾನರು ಬೇರೊಬ್ಬರಿಲ್ಲ. ಆ ದ್ರೋಣನು ಏನೋ ಒಂದು ಪ್ರೀತಿಯ ಕಲಹವನ್ನು ನೆವವಾಗಿಟ್ಟುಕೊಂಡು ನನ್ನನ್ನು ಜಯಿಸಿ ಅವಮಾನಗೊಳಿಸಿದನು. ಆ ದ್ರೋಣನಿಗೆ ಸಮಾನನಾದ ಕ್ಷತ್ರಿಯವೀರನು ಈ ಭೂಮಿಯಲ್ಲಿಯೇ ಇಲ್ಲವು. ಕೌರವರಿಗೆಲ್ಲ ಮುಖ್ಯಾಚಾರ್ಯನೂ, ಭಾರದ್ವಾಜಗೋತ್ರದವನೂ ಆದ ಆ ದ್ರೋಣನ ಬಾಣಗಳು ಎಂತಹ ಶತ್ರುಗಳ ದೇಹವನ್ನಾದರೂ ಭೇದಿಸತಕ್ಕವುಗಳು. ಅವನ ಧನುಸ್ಸೇ ಆರು ಮೊಳಗಳ ಉದ್ದವುಳ್ಳುದು. ಅವನ ಕತ್ತಿಯು ಅಸಾಧಾರಣವಾದುದು. ಅವನು ಬ್ರಾಹ್ಮಣವೇಷದಿಂದಿದ್ದುಕೊಂಡೇ ಕ್ಷತ್ರಿಯ ತೇಜಸ್ಸನ್ನು ನಿಗ್ರಹಿಸಿ ಬಿಡುವುದರಲ್ಲಿ ಸಂದೇಹವಿಲ್ಲ. ಮಹಾಧನುರ್ಧಾರಿಯೂ, ಮಹಾಮನಸ್ವಿಯೂ ಆದ ಆ ದ್ರೋಣನು ಯುದ್ಧದಲ್ಲಿ ಕಾರ್ತವೀರ್ಯನಿಗೂ, ಖಟ್ವಾಂಗನಿಗೂ ಸಮಾನನು. ಕ್ಷತ್ರಿಯ ನಾಶಕ್ಕಾಗಿ ಅವತಾರವನ್ನೆತ್ತಿದ ಜಾಮದಗ್ನ್ಯನಂತೆಯೇ ಇರುವನು. ಬ್ರಹ್ಮಕ್ಷತ್ರ ತೇಜಸ್ಸುಗಳೆರಡೂ ಕಲೆತಿರುವ ಆ ದ್ರೋಣನಿಗೆ ಅಸಾಧಾರಣಶೂರನೆಂಬ ಖ್ಯಾತಿಯು ಯುಕ್ತವೆಂದೇ ನನಗೆ ತೋರಿದೆ. ಬಾಣಗಳಾಗಲಿ, ಕತ್ತಿಗಳಾಗಲಿ, ಪ್ರಾಸಗಳಾಗಲಿ, ಅವನನ್ನು ನಿಗ್ರಹಿಸಲಾರವು. ಮಂತ್ರಪೂರ್ವಕವಾದ ಆಹುತಿಯಿಂದ ಹೋಮನಾಡ ಮಾಡಲ್ಪಟ್ಟ ಅಗ್ನಿಯಂತೆ ಅವನ ಬ್ರಹ್ಮತೇಜಸ್ಸು ಎಂತವರಿಗೂ ಅಡಗಿಸಲಸಾಧ್ಯವು. ಭಯಂಕರವಾದ ಅವನ ಅಸ್ತ್ರಬಲವನ್ನು ಲೋಕದಲ್ಲಿ ಯಾರೂ ಸಹಿಸಲಾರರು. ಬ್ರಹ್ಮತೇಜಸ್ಸನ್ನು ಮುಂದಿಟ್ಟುಕೊಂಡಿರುವ ಅವನ ಕ್ಷತ್ರಿಯ ತೇಜಸ್ಸು ಶತ್ರುಗಳನ್ನು ಸಮೀಪಿಸಿದೊಡನೆಯೇ ದಹಿಸಿ ಬಿಡುವುದು. ಬ್ರಹ್ಮಬಲವೂ ಕ್ಷತ್ರಿಯಬಲವೂ ಸಂಧಿಸಿದಾಗ ಬ್ರಹ್ಮಬಲವೇ ಮೇಲೆನಿಸುವುದು ನಿಶ್ಚಯವು. ಆದುದರಿಂದಲೇ ಕ್ಷತ್ರಿಯಬಲ್ಲವಿದ್ದರೂ, ಅವನ ಮುಂದೆ ಕೆಲಸಕ್ಕೆ ಬಾರದ ನಾನು ಅವನನ್ನು ಬ್ರಹ್ಮತೇಜಸ್ಸಿನಿಂದಲೇ ನಿಗ್ರಹಿಸಬೇಕೆಂದೆಣಿಸಿ, ನಿನ್ನಲ್ಲಿ ಮರೆಹೊಕ್ಕಿರುವೆನು. ಬ್ರಹ್ಮವಾದಿಗಳಲ್ಲಿ ಮೇಲೆನಿಸಿದ ನೀನು ಆ ದ್ರೋಣನಿಗಿಂತಲೂ ಪ್ರಬಲನೆಂದು ನಂಬಿ ಬಂದಿರುವೆನು. ಆದುದರಿಂದ ಮುನೀಂದ್ರಾ! ನಿನ್ನಿಂದ ನಾನು ಈಗ ಆ ದ್ರೋಣನನ್ನು ತೀರಿಸಿಬಿಡತಕ್ಕ ಮತ್ತು ಯುದ್ಧದಲ್ಲಿ ದುರ್ಜಯನಾದ ಪುತ್ರನನ್ನು ಪಡೆಯಬೇಕೆಂದು ಬಯಸುವೆನು. ದ್ರೋಣನಿಗೆ ಮೃ

ತ್ಯುವೆಸಿಸಿದ ಪುತ್ರನೊಬ್ಬನು ನನಗೆ ಹುಟ್ಟಬೇಕಾದರೆ ಎಂತಹ ಕರ್ಮವನ್ನು ನಡೆಸಬೇಕೋ ಅಂತಹ ಕರ್ಮವನ್ನು ನೀನು ನನ್ನಿಂದ ಮಾಡಿಸಬೇಕು. ನಿನಗೆ ಅರ್ಬುದ ಸಂಖ್ಯೆಯಷ್ಟು ಗೋವುಗಳನ್ನು ಬೇಕಾದರೂ ಕೊಡುವೆನು'' ಎಂದನು. ಅದಕ್ಕಾ ಯಾಜನು ''ಹಾಗೆಯೇ ಆಗಲಿ'' ಎಂದು ಹೇಳಿ ಯಾಗಕಾರ್ಯವನ್ನು ಸಿದ್ಧಪಡಿಸಿದನು. ತನ್ನ ತಮ್ಮನಾದ ಉಪಯಾಜನಿಗೆ ಅಂತಹ ಫಲಾಪೇಕ್ಷೆಯೇನೂ ಇಲ್ಲದಿದ್ದರೂ, ಅವನನ್ನು ಜ್ಯೇಷ್ಠನಾದ ತನಗಾಗಿ ಆ ಕೆಲಸವನ್ನು ಮಾಡಬೇಕಾದುದು ಅವನ ಕರ್ತವ್ಯವೆಂದು ಪ್ರೋತ್ಸಾಹಿಸಿ, ಅವನನ್ನೂ ಸಹಾಯುಕ್ಕಿಟ್ಟುಕೊಂಡನು. ಆ ಮೇಲೆ ದ್ರುಪದನನ್ನು ನೋಡಿ ''ರಾಜಾ! ನೀನು ಹೆದರಬೇಡ! ನಾನು ನನ್ನ ಕರ್ಮಬಲದಿಂದ ನಿನಗೆ ಅಂತಹ ಪುತ್ರನೇ ಉಂಟಾಗುವಂತೆ ಮಾಡುವೆನು. ಬೇಗನೆ ಏಳು! ಯಜ್ಞಸಂಭಾರಗಳನ್ನೆಲ್ಲ ತರಿಸಿಡು'' ಎಂದು ವಾಗ್ದಾನಮಾಡಿ, ಆ ಕಾರ್ಯಕ್ಕಾಗಿ ಕಂಕಣವನ್ನು ಕಟ್ಟಿ ನಿಂತನು. ವಿಧ್ಯುಕ್ತವಾಗಿ ಕಾರ್ಯಗಳನ್ನು ನಡೆಸುತ್ತ, ದ್ರೋಣನ ವಿನಾಶಕ್ಕಾಗಿ ದ್ರುಪದನಿಂದ ಹೋಮಕಾರ್ಯಗಳನ್ನು ನಡೆಸಿದನು. ಮಹಾತಪಸ್ವಿಯಾದ ಉಪಯಾಜನೂ ಕೂಡ, ತನಗೆ ಗುರುವಾದ (ಅಣ್ಣನಾದ) ಆ ಯಾಜನಿಗಾಗಿ ಅವನ ಸಮೀಪದಲ್ಲಿಯೇ ಇದ್ದು ಸಹಾಯುಮಾಡುತಿದ್ದನು. ಪುತ್ರಫಲವನ್ನುದ್ದೇಶಿಸಿ ನಡೆಸತಕ್ಕ ಆ ಯಾಗಕಾರ್ಯವನ್ನು ಕುರಿತು ಯಾಜನು ''ಓ ರಾಜಾ! ಈ ಯಾಗದಿಂದ ನೀನು ಕೋರಿದಂತಹ ಪುತ್ರನನ್ನೇ ಪಡೆಯುವೆ'' ಎಂದು ಉತ್ಸಾಹಗೊಳಿಸಿದನು. ದ್ರುಪದನೂ ಹಾಗೆಯೇ 'ತನಗೆ ದ್ರೋಣಸಂಹಾರಕನಾದ ಪುತ್ರನೇ ಹುಟ್ಟಲಿ' ಎಂದು ಸಂಕಲ್ಪಿಸಿ, ಅದೇ ದೃಢಮನಸ್ಸಿನಿಂದ ಕರ್ಮಸಿದ್ಧಿಯನ್ನುದ್ದೇಶಿಸಿ ಕಾರ್ಯಗಳನ್ನು ನಡೆಸುತಿದ್ದನು. ಆ ಬ್ರಾಹ್ಮಣನೂ ಯಥಾವಿಧಿಯಾಗಿ ಹೋಮಮಾಡುತಿದ್ದನು. ಪುತ್ರಾರ್ಥಿಯಾದ ದ್ರುಪದನ ಪತ್ನಿಯು ಕೌಸಲಿಯೆಂಬವಳು. (ಸೌತ್ರಾಮಣಿಯೆಂದು ಕರೆಯಲ್ಪಡುವ) ಆ ಯಜ್ಞದ ಪೂರ್ಣಾಹುತಿ ಕಾಲದಲ್ಲಿ, ಯಾಜನು ಅವಳಲ್ಲಿಗೆ ಹೋಗಿ ಅವಳನ್ನು ಕರೆಸಿಕೊಂಡು ''ಮಹಾರಾಜ್ಞೀ! ಪೃಷತೀ! ನನ್ನ ಬಳಿಗೆ ಬಾ! ನಿನಗೆ ಒಂದು ಗಂಡು, ಒಂದು ಹೆಣ್ಣು, ಹೀಗೆ ಎರಡು ಮಕ್ಕಳಾಗುವುದಕ್ಕಿದೆ. ಅದರಿಂದ ಪಿತೃ

ವಂಶವು ಉದ್ಧಾರವಾಗಬೇಕಾಗಿದೆ. ನೀನು ಈ ಯಜ್ಞದ ಹವಿಸ್ಸನ್ನು ಭುಜಿಸುವುದಕ್ಕಾಗಿ ಬಾ!" ಎಂದನು. ಅದಕ್ಕಾ ಪೃಷತಿಯು "ಓ ಬ್ರಾಹ್ಮಣಾ! ಇರಲಿ ತಾಳು. ನಾನಿನ್ನೂ ಮುಖವನ್ನು ತೊಳೆದಿಲ್ಲ. (ಸ್ನಾನಮಾಡಿ ಮುಖಕ್ಕೆ ಅರಿಸಿನವನ್ನು ಪೂಸಲಿಲ್ಲ!) ನನ್ನ ಮೈಯಲ್ಲಿ ಇನ್ನೂ ಪವಿತ್ರವಾದ ಹಳೀಗಂಧವೇ ಇದೆ. ನನ್ನ ಇಷ್ಟವಿದ್ದಾಗ ಬರುವೆನು. ನನ್ನ ಇಷ್ಟವನ್ನು ನೀನು ಅನುವರ್ತಿಸಬೇಕು" ಎಂದಳು. ಅದಕ್ಕಾ ಯಾಜನು "ಪೃಷತೀ! ಯಾಜನು ಹೋಮಮಾಡಿದುದುದು, ಮತ್ತು ಮಂತ್ರಿಸಿದುದು, ಇಂತಹ ಹವಿಸ್ಸು ಮನಸ್ಸಿಗೆ ಕೋರಿಕೆಯನ್ನು ಹೇಗಾದರೂ ಕೈಗೂಡಿಸದಿರುವುದೆ? ನೀನು ಬಂದರೆ ಬಾ! ಇಲ್ಲದಿದ್ದರೆ ಇಲ್ಲಿಯೇ ಇರು" ಎಂದು ಹೇಳಿ ಮಂತ್ರಸಂಸ್ಕೃತವಾದ ಆ ಹವಿಸ್ಸನ್ನು ಆ ಯಜ್ಞಾಗ್ನಿಯಲ್ಲಿಯೇ ಹೋಮಮಾಡಲು, ಒಡನೆಯೇ ಆ ಯಜ್ಞಕುಂಡದಿಂದ ದೇವಸಮಾನನಾದ ಕುಮಾರನೊಬ್ಬನು ಮೇಲಕ್ಕೆದ್ದು ಬಂದನು. ಅವನ ಅದ್ಭುತರೂಪವನ್ನು ಕೇಳಬೇಕೆ? ಅವನ ದೇಹವು ಅಗ್ನಿಜ್ವಾಲೆಯಂತೆ ಹೊಂಬಣ್ಣವಾಗಿ ಥಳಥಳಿಸುತ್ತಿರುವುದು. ರೂಪವು ನೋಡುವವರಿಗೆ ಭಯವನ್ನು ಹುಟ್ಟಿಸುವಂತಿರುವುದು. ಮೈಯಲ್ಲಿ ಕವಚವೂ, ತಲೆಯಲ್ಲಿ ಕಿರೀಟವೂ ಶೋಭಿಸುತ್ತಿರುವುದು. ಕೈಯಲ್ಲಿ ಕತ್ತಿಯನ್ನೂ, ಧನುರ್ಬಾಣಗಳನ್ನೂ ಹಿಡಿದಿರುವನು. ಆಗಾಗ ಭಯಂಕರವಾಗಿ ಗರ್ಜಿಸುತ್ತಿರುವನು. ಹೀಗೆ ಮೇಲೆದ್ದ ಕುಮಾರನು, ಆಗಲೇ ಸಿದ್ಧವಾಗಿದ್ದ ಒಂದು ಉತ್ತಮ ರಥವನ್ನೇರಿ, ಆ ಯಾಗಮಂಟಪದಲ್ಲಿ ಸುತ್ತಾಡಿದನು. ಆ ಕುಮಾರನು ಹುಟ್ಟಿದೊಡನೆ ಆಕಾಶದಿಂದ ಅಶರೀರವಾಣಿಯೊಂದು ಹೀಗೆ ನುಡಿಯಿತು "ಈ ಕುಮಾರನು ದ್ರೋಣನಿಗೆ ಶಿಷ್ಯನಾಗಿದ್ದು, ಅವನಿಗೆ ಮೃತ್ಯುವೂ ಆಗುವನು. ಇವನಿಂದ ಪಾಂಚಾಲರಿಗೆ ಶತ್ರುಭಯವು ನೀಗಿ ಉತ್ತಮವಾದ ಯಶಸ್ಸೂ ಲಭಿಸುವುದು. ಇವನು ದ್ರುಪದನ ದುಃಖನಿವಾರಣೆಗಾಗಿ, ದ್ರೋಣನ ವಧಕ್ಕಾಗಿಯೇ ಹುಟ್ಟಿದವನು" ಹೀಗೆಂದು ಗಗನಸಂಚಾರಿಯಾದ ಅದೃಶ್ಯವಾದ ಮಹಾಭೂತವೊಂದು ನುಡಿಯಿತು. ಪಾಂಚಾಲರ ಕಡೆಯಲ್ಲಿ "ಭಲೆ! ಭಲೆ!" ಎಂಬ ಸಂತೋಷಕೋಲಾಹಲವುಂಟಾಯಿತು. ಓ ಜನಮೇಜಯರಾಜಾ! ಆಮೇಲೆ ಯಾಜಮುನಿಯು ಎರಡನೆ

ಯಸಾರಿ ಮತ್ತೊಮ್ಮೆ ಮಂತ್ರಿಸಿದ ಹವಿಸ್ಸನ್ನು ಅಗ್ನಿಯಲ್ಲಿ ಬಿಟ್ಟೊಡನೆ, ವೇದಿಮಧ್ಯದಿಂದ ಕನ್ಯೆಯೊಬ್ಬಳು ಎದ್ದು ಬಂದಳು. ಈ ಎರಡನೆಯಸಾರಿ ಹೋಮಮಾಡುವುದಕ್ಕೆ ಮೊದಲೂ ಪೃಷತೀಯು ಯಾಜಮುನಿಯ ಮಾತನ್ನು ನಿರಾಕರಿಸಲು, ಆ ಪುರೋಹಿತನು ತಿರುಗಿ ಆ ಹವಿಸ್ಸನ್ನು ಅಗ್ನಿಯಲ್ಲಿಯೇ ಹೋಮಮಾಡಿದುದರಮೇಲೆ, ಪರಮಸುಂದರಿಯಾದ ಆ ಕುಮಾರಿಯೂ ವೇದಿಮಧ್ಯದಿಂದಲೇ ಹುಟ್ಟಿದಳು. ಅವಳ ಅದ್ಭುತಸೌಂದರ್ಯವನ್ನು ಕೇಳಬೇಕೇ? ಅಗ್ನಿವೇದಿಕೆಯಂತೆ ಅಂದವಾದ ನಡು! ಶ್ಯಾಮಲವಾದ ಮೈ! ಕಮಲದಳದಂತೆ ಕಣ್ಣು! ಮನೋಹರವಾದ ರೂಪಸಂಪತ್ತಿ! ಕಪ್ಪಾಗಿ ಸುರುಳಿಗಟ್ಟಿದ ಮುಂಗುರುಳು! ಸಾಕ್ಷಾಲ್ಲಕ್ಷ್ಮೀದೇವಿಯೇ ಮನುಷ್ಯರೂಪವನ್ನು ತಾಳಿ ಬಂದಂತಿರುದಳು. ಮತ್ತು ಅವಳಿಗೆ ಕೆಂಪಾಗಿ ಉಬ್ಬಿದ ನಖಗಳು! ಅಂದವಾದ ಹುಬ್ಬುಗಳು! ಉಬ್ಬಿದ ಸ್ತನಗಳು! ಪದ್ಮಿನೀ ಜಾತಿಯ ಸ್ತ್ರೀಯಾದುದರಿಂದ, ಅವಳ ದೇಹದಿಂದ ಕರೀನೈದಿಲೆಹೂವಿನ ಸುಗಂಧವು ಒಂದು ಹರಿದಾರಿಯ ದೂರಕ್ಕೇ ಘಮಘಮಿಸುವುದು. ಅಸಮಾನವಾದ ಆಕೆಯ ರೂಪಸಂಪತ್ತಿಯು ದೇವ ದಾನವ ಯಕ್ಷರೆಲ್ಲರೂ ಆಶೆಪಡತಕ್ಕುದಾಗಿರುವುದು. ಇಂತಹ ಕನ್ಯೆಯು ಅಗ್ನಿಯಿಂದ ಹೊರಟ ಕೂಡಲೆ ಅಶರೀರವಾಣಿಯು "ಇವಳು ಸ್ತ್ರೀಜಾತಿಯೊಳಗೆಲ್ಲ ಮೇಲೆನಿಸಿವವಳು. ಇವಳು ದುಷ್ಟ ಕ್ಷತ್ರಿಯಕುಲವನ್ನೆಲ್ಲ ಕೊನೆಗಾಣಿಸುವುದಕ್ಕಾಗಿ ಹುಟ್ಟಿರುವಳು. ಇವಳು ದೇವಕಾರ್ಯಾರ್ಥವಾಗಿಯೇ ಹುಟ್ಟಿದವಳಾದುದರಿಂದ, ಕಾಲವು ಬಂದಾಗ ಆ ಕಾರ್ಯವನ್ನು ನೆರವೇರಿಸತಕ್ಕವಳು. ಇವಳ ದೆಸೆಯಿಂದ ಕ್ಷತ್ರಿಯರಿಗೆ ಮಹಾಭಯವೊಂದು ಒದಗುವುದು" ಎಂದು ನುಡಿಯಿತು. ಈ ಮಾತನ್ನು ಕೇಳಿ ಪಾಂಚಾಲರೆಲ್ಲರೂ ಸಿಂಹಗಳ ಹಿಂಡಿನಂತೆ ಸಂತೋಷಗರ್ಜನದಿಂದ ಅಟ್ಟಹಾಸಮಾಡಿದರು, ಆಗಿನ ಆ ಪಾಂಚಾಲರ ಸಂತೋಷವನ್ನು ಭೂಮಿಯು ತಡೆಯಲಾರದೆ ಹೋಯಿತು.

ಓ ಜನಮೇಜಯರಾಜಾ! ಹೀಗೆ ದ್ರುಪದನಿಗೆ ದಿವ್ಯತೇಜೋವಿಶಿಷ್ಟರಾದ ಒಬ್ಬ ಕುಮಾರನೂ, ಒಬ್ಬ ಕುಮಾರಿಯೂ ಉಂಟಾದರು. ಇದ

ನ್ನೆಲ್ಲ ನೋಡುತಿದ್ದ ದ್ರುಪದಪತ್ನಿಯಾದ ಪೃಷತಿಗೆ ಆಗ ಮನಸ್ಸಿನಲ್ಲಿ ತನ್ನ ಕಾರ್ಯಕ್ಕಾಗಿ ಪಶ್ಚಾತ್ತಾಪವು ಹುಟ್ಟಿತು. ಅವಳು ಯಾಜನ ಬಳಿಗೆ ಬಂದು "ಬ್ರಾಹ್ಮಣೋತ್ತಮಾ! ಈ ಮಕ್ಕಳಿಬ್ಬರೂ ನನ್ನನ್ನು ಹೊರತು ಬೇರೆಯವರನ್ನು ತಾಯಿಯಂತೆ ಭಾವಿಸದಿರಲಿ!" ಎಂದು ಕೇಳಿಕೊಂಡಳು. ಆಗ ಯಾಜನಿಗೆ ಅವಳಮೇಲೆ ಕೋಪವಿದ್ದರೂ, ರಾಜನ ಪ್ರೀತಿಗಾಗಿ 'ಹಾಗೆಯೇ ಆಗಲಿ' ಎಂದು ಹೇಳಿದನು. ಆಮೇಲೆ ಬ್ರಾಹ್ಮಣರೆಲ್ಲ ಸೇರಿ ಆಮಕ್ಕಳಿಬ್ಬರಿಗೂ ನಾಮಕರಣವನ್ನು ಮಾಡಿದರು. ಆ ಕುಮಾರನು ಮಹಾ ಧೈರ್ಯಶಾಲಿಯೂ, ಬೇರೊಬ್ಬರಿಗೂ ಅಪ್ರಧೃಷ್ಯನೂ, ತೇಜಸ್ವಿಯೂ, ಸುವರ್ಣಾಭರಣಗಳೊಡನೆ (ದ್ಯುಮ್ನದೊಡನೆ) ಸಂಭವಿಸಿದವನೂ ಆದುದರಿಂದ ಅವನಿಗೆ ಧೃಷ್ಟದ್ಯುಮ್ನನೆಂದು ಹೆಸರಿಟ್ಟರು. ಬಣ್ಣದಲ್ಲಿ ಆ ಕುಮಾರಿಯು ಕೃಷ್ಣವರ್ಣವುಳ್ಳವಳಾಗಿರುವುದನ್ನು ನೋಡಿ ಅವಳಿಗೆ ಕೃಷ್ಣೆಯೆಂದು ಹೆಸರಿಟ್ಟರು. ಹೀಗೆ ಯಜ್ಞದಲ್ಲಿ ದ್ರುಪದನಿಗೆ ಇಬ್ಬರು ಮಕ್ಕಳಾದರು. ಕ್ರಮವಾಗಿ ಆ ಧೃಷ್ಟದ್ಯುಮ್ನನಿಗೆ ವೇದಾಭ್ಯಾಸಗಳೆಲ್ಲ ನಡೆದಮೇಲೆ, ದ್ರೋಣನೇ ಅವನನ್ನು ತನ್ನ ಮನೆಗೆ ಕರೆತಂದಿಟ್ಟುಕೊಂಡು ಅವನಿಗೆ ಅಸ್ತ್ರವಿದ್ಯೆಗಳನ್ನು ಕಲಿಸಿದನು. ಮಹಾ ಧೀಮಂತನಾಗಿದ್ದರೂ ದ್ರೋಣನು ಮುಂದೆ ಬರತಕ್ಕ ದೈವಗತಿಯು ಹೇಗಿದ್ದರೂ ನಿವಾರತಕ್ಕುದಲ್ಲವೆಂದು ತಿಳಿದೇ ತನ್ನ ಕೀರ್ತಿಯನ್ನು ಕಾಪಾಡುವುದಕ್ಕಾಗಿ, ಆ ಕಾರ್ಯವನ್ನು ಕೈಕೊಂಡನು. ಧೃಷ್ಟದ್ಯುಮ್ನನು ತನ್ನ ಅಪಾರವಾದ ಬುದ್ಧಿಚಾತುರ್ಯದಿಂದ ಸರ್ವಾಸ್ತ್ರಗಳನ್ನೂ ಅವನಿಂದ ಶೀಘ್ರದಲ್ಲಿ ಕಲಿತನು.

ಇದು ನೂರ ನಾಲ್ವತ್ತೊಂಭತ್ತನೆಯ ಅಧ್ಯಾಯವು.

---

## ದ್ರುಪದನು ಹುಟ್ಟಿದ ಕಥೆ.

ಆಗ ಜನಮೇಜಯನು "ಮುನೀಂದ್ರಾ! ದ್ರುಪದನು ಹುಟ್ಟಿದ ರೀತಿಯೇನು? ಅವನು ಅಸ್ತ್ರವಿದ್ಯೆಗಳನ್ನು ಕಲಿತುದೆಲ್ಲಿ? ಅವನ್ನೆಲ್ಲ ನನಗೆ ತಿಳಿಸಬೇಕು. ಅಂತವರ ಜನ್ಮಚರಿತ್ರೆಗಳನ್ನೆಲ್ಲ ಕೇಳುವುದರಲ್ಲಿ ನನಗೆ

ತುಂಬ ಆಸೆಯುಂಟು" ಎಂದನು. ಅದಕ್ಕಾ ವೈಶಂಪಾಯನನು "ರಾಜಾ! ಕೇಳು! ಪೂರ್ವದಲ್ಲಿ ಪಾಂಚಾಲದೇಶದ ರಾಜನು ಸಂತಾನವಿಲ್ಲದೆ, ಪುತ್ರಾರ್ಥಿಯಾಗಿ ತಪಸ್ಸುಮಾಡಬೇಕೆಂದು ವನಕ್ಕೆ ಹೋಗಿ ಅಲ್ಲಿ ದೊಡ್ಡ ತಪಸ್ಸನ್ನು ಹಿಡಿದನು. ಆಗ ಅವನು ಆ ಕಾಡಿನಲ್ಲಿ ವ್ರತನಿಷ್ಠರಾದ ಮಹರ್ಷಿಗಳನ್ನೆಲ್ಲ ಭಕ್ತಿಯಿಂದ ಶುಶ್ರೂಷೆಮಾಡುತ್ತಬಂದನು. ಅನೇಕ ಮೃಗಗಣಗಳಿಂದ ತುಂಬಿದ ಆ ಕಾಡಿನಲ್ಲಿ ಅವನು ಬಹುಕಾಲದವರೆಗೆ ತಪಸ್ಸುಮಾಡುತ್ತಿದ್ದರೂ ಅವನ ಕೋರಿಕೆಯು ಕೈಗೂಡದಿರಲು, ಇನ್ನೂ ಅತ್ಯುಗ್ರವಾದ ತಪಸ್ಸನ್ನು ಹಿಡಿದು, ಆಹಾರವನ್ನು ಬಿಟ್ಟು, ಕೆಲವುಕಾಲದವರೆಗೆ ವಾಯುಭಕ್ಷಕನಾಗಿದ್ದನು. ಆಮೇಲೆ ಆ ವಾತಾಹಾರವನ್ನೂ ಬಿಟ್ಟು ನಿರಾಹಾರನಾಗಿದ್ದನು. ಹೀಗಿರುವಾಗ ಒಮ್ಮೆ ಕಾಮೋದ್ದೀಪಕವಾದ ವಸಂತಕಾಲವು ತಲೆದೋರಿತು. ಅಶೋಕವೃಕ್ಷಗಳೆಲ್ಲವೂ ಪುಷ್ಪಸಮೃದ್ಧವಾಗಿ ಜನಗಳ ಮನಸ್ಸನ್ನು ಮೋಹಗೊಳಿಸುವಂತಿದ್ದುವು. ಆಗ ಅವನು ಗಂಗಾತೀರಕ್ಕೆ ಹೋಗಿ ಅಲ್ಲಿಯೂ ನಿಯಮನಿಷ್ಠನಾಗಿ ತಪಸ್ಸನ್ನು ಮಾಡತೊಡಗಿದನು. ಹೀಗೆ ಸ್ವಲ್ಪ ದಿನಗಳು ಕಳೆಯುವಷ್ಟರಲ್ಲಿಯೇ ಅಕಸ್ಮಾತ್ತಾಗಿ ಅಲ್ಲಿಗೆ ಮೇನಕೆಯೆಂಬ ಪ್ರಸಿದ್ಧಿಗೊಂಡ ಅಪ್ಸರಸಿಯು ಹೂಗಿಡಗಳನ್ನು ನೋಡುತ್ತ ಆ ವನಪ್ರದೇಶಕ್ಕೆ ಬಂದು ರಾಜನ ಕಣ್ಣಿಗೆ ಬಿದ್ದಳು. ಅವಳಿಗೆ ಮಾತ್ರ ಯೋಗಾಸನದಲ್ಲಿದ್ದ ರಾಜನು ದೃಷ್ಟಿಗೆ ಬೀಳಲಿಲ್ಲ. ಆ ರೂಪವತಿಯನ್ನು ನೋಡಿದೊಡನೆ ಆ ರಾಜನ ಮನಸ್ಸು ಕದಲಿ, ಇಂದ್ರಿಯಸ್ಖಲನವಾಗಿ, ಆ ರೇತಸ್ಸು ನೆಲದಮೇಲೆ ಬಿದ್ದಿತು. ಅದನ್ನು ನೋಡಿ ಲಜ್ಜೆಯಿಂದ ಆ ರಾಜನು ಕಾಲುಗಳಿಂದ ಆ ವೀರ್ಯವನ್ನು (ಒಂದು ಮರದಡಿಗೆ) ಒತ್ತರಿಸಿ ಮರೆಸಿಟ್ಟನು. ಮರದಡಿಗೆ ಕಾಲಿಂದ ತಳ್ಳಿದ ಆ ವೀರ್ಯವೇ ಆ ಪಾಂಚಾಲನ ತಪಃಫಲದಿಂದ ಶೀಘ್ರದಲ್ಲಿ ಪುತ್ರರೂಪವನ್ನು ಹೊಂದಿತು. ಋಷಿಗಳೆಲ್ಲರೂ ಸೇರಿ "ಆ ಕುಮಾರನಿಗೆ ದ್ರುಪದನೆಂದು ಹೆಸರಿರಲಿ" ಎಂದರು. ಆ ದ್ರುಪದಕುಮಾರನು ತಾನು ಹುಟ್ಟಿದ ಆ ಭರದ್ವಾಜಾಶ್ರಮದಲ್ಲಿ, ತನಗೆ ಬೇಕಾದುದನ್ನೆಲ್ಲ ಪಡೆಯುತ್ತ ಅಲ್ಲಿಯೇ ಬೆಳೆಯುತ್ತಿದ್ದನು. ಪಾಂಚಾಲರಾಜನಾದರೋ ಆ ಪುತ್ರನು ಲಭಿಸಿದೊಡನೆ ಅವನನ್ನು ವಿದ್ಯಾಭ್ಯಾಸಕ್ಕಾಗಿ ಭರದ್ವಾಜನಲ್ಲಿ ಬಿಟ್ಟು ತಾನು ಮಾತ್ರ ತನ್ನ

ರಾಜ್ಯಕ್ಕೆ ಹೊರಟುಹೋದನು. ಈ ರಾಜಕುಮಾರನು ಆ ಭರದ್ವಾಜನಲ್ಲಿ ಮೊದಲೇ ಶಿಷ್ಯನಾಗಿದ್ದ ದ್ರೋಣನೊಡನೆ ಸಹಪಾಠಿಯಾಗಿದ್ದು, ವೇದಗಳನ್ನೂ, ಧನುರ್ವೇದಗಳನ್ನೂ ಸಾಂಗವಾಗಿ ಅಭ್ಯಸಿಸಿದನು. ಇವರಿಬ್ಬರೂ ಆ ಆಶ್ರಮದಲ್ಲಿ ಅತಿಸ್ನೇಹದಿಂದ ಸಂತೋಷಗೊಂಡು ತಿರುಗುತಿದ್ದರು. ಹೀಗೆ ದ್ರುಪದಕುಮಾರನು ವನಚರರಾದ ಮುನಿಕುಮಾರರೊಡನೆ ಉಲ್ಲಾಸದಿಂದ ಇರುತ್ತಿರುವಾಗಲೇ, ಅತ್ತಲಾಗಿ ಅವನ ತಂದೆಯು ಸ್ವಲ್ಪಕಾಲದಲ್ಲಿಯೇ ಸ್ವರ್ಗಸ್ಥನಾದನು. ಆಮೇಲೆ ಈ ಕುಮಾರನನ್ನು ಕರೆಸಿಕೊಂಡು ಪಾಂಚಾಲದೇಶದ ಪ್ರಜೆಗಳೆಲ್ಲರೂ ರಾಜ್ಯದಲ್ಲಿ ಅಭಿಷೇಕಮಾಡಿದರು. ಇವನು ಇಂದ್ರನು ಸ್ವರ್ಗವನ್ನು ಹೇಗೋ ಹಾಗೆ ಧರ್ಮದಿಂದ ರಾಜ್ಯವನ್ನು ಪಾಲಿಸುತ್ತ ಇಷ್ಟಮಿತ್ರರಿಗೆಲ್ಲ ಆನಂದವರ್ಧಕನಾಗಿದ್ದನು. ಓ ಜನಮೇಜಯ ರಾಜಾ! ಇದೇ ದ್ರುಪದನ ಉತ್ಪತ್ತಿಕ್ರಮವು ” ಎಂದನು.

ಇದು ನೂರೈವತ್ತನೆಯ ಅಧ್ಯಾಯವು.

ಯುಧಿಷ್ಠಿರನಿಗೆ ಯೌವರಾಜ್ಯದಲ್ಲಿ ಅಭಿಷೇಕವಾದುದು.
ಭೀಮನಿಗೆ ಬಲರಾಮನಲ್ಲಿ ಗದಾಯುದ್ಧಾಭ್ಯಾಸವು.
ದ್ರೋಣನು ಅರ್ಜುನನಿಗೆ ಬ್ರಹ್ಮಶಿರೋಸ್ತ್ರವನ್ನು
ಉಪದೇಶಿಸಿದುದು. ಭೀಮಾರ್ಜುನರ ದಿಗ್ವಿಜ
ಯವನ್ನು ಕೇಳಿ ಧೃತರಾಷ್ಟ್ರನ ಅಸೂಯೆ.

ಓ ಜನಮೇಜಯರಾಜಾ! ಧೃತರಾಷ್ಟ್ರನಿಗೆ ಯುಧಿಷ್ಠಿರನೇ ತನ್ನ ಮಕ್ಕಳೆಲ್ಲರಿಗಿಂತಲೂ ರಾಜ್ಯಸಮರ್ಥನೆಂದು ತಿಳಿದುದರಿಂದ, ಅವನಿಗೆ ಯೌವರಾಜ್ಯದಲ್ಲಿ ಅಭಿಷೇಕಮಾಡಬೇಕೆಂದು ಯೋಚಿಸಿ, ತನ್ನ ಮಂತ್ರಿಗಳೊಡನೆ ಆಲೋಚನೆಮಾಡುತಿದ್ದನು. ಧೃತರಾಷ್ಟ್ರಪುತ್ರರಿಗೆ ಈ ಸಂಗತಿಯು ತಿಳಿದು, ಅವರ ಮನಸ್ಸಿನಲ್ಲಿ ಅಸೂಯೆ ಹುಟ್ಟಿದುದರಿಂದ ಅವರು ಒಳಗೊಳಗೇ ಕುದಿಯುತಿದ್ದರು. ಕೊನೆಗೆ ಒಂದು ವರ್ಷಕಾಲವು ಕಳೆದಮೇಲೆ ಧೃತರಾಷ್ಟ್ರನು ಯುಧಿಷ್ಠಿರನನ್ನು ಯುವರಾಜಪದವಿಯಲ್ಲಿಟ್ಟು ಪಟ್ಟಾಭಿಷೇಕಮಾಡಿದನು. ಸ್ವಲ್ಪಕಾಲದಲ್ಲಿಯೇ ಯುಧಿಷ್ಠಿರನು

ತನ್ನ ಗುಣಗಳಿಂದಲೂ, ನಡತೆಯಿಂದಲೂ, ಚಿತ್ತಸ್ಥೈರ್ಯದಿಂದಲೂ ತನ್ನ ತಂದೆಯ ಕೀರ್ತಿಯನ್ನೂ ಮೀರಿಸಿ ಮೆರೆಸುವಂತಾದನು. ಆಮೇಲೆ ಭೀಮನು ಖಡ್ಗಯುದ್ಧ, ಗದಾಯುದ್ಧ, ರಥಯುದ್ಧಾದಿಗಳನ್ನೆಲ್ಲ ಬಲರಾಮನಲ್ಲಿ ಅಭ್ಯಾಸಮಾಡಿ ಕಲಿತು ಅದರಲ್ಲಿ ಪೂರ್ಣನೈಪುಣ್ಯವನ್ನು ಪಡೆದನು. ಯುದ್ಧಶಿಕ್ಷೆಯೆಲ್ಲ ಮುಗಿಸಿಕೊಂಡ ಭೀಮನು ಬಲದಲ್ಲಿ ದ್ಯುಮತ್ಸೇನನಿಗೆ ಸಾಟಿಯೆನಿಸಿಕೊಂಡನು. ಬಲಪರಾಕ್ರಮದಿಂದ ಎಲ್ಲರನ್ನೂ ಮೀರಿಸಿದವನಾಗಿದ್ದರೂ ಅವನು ತನ್ನ ಸಹೋದರರ ವಶನಾಗಿ, ಅವರ ಮಾತಿಗೆ ಕಟ್ಟುಬಿದ್ದು ನಡೆಯುತ್ತಿದ್ದನು. ಹೀಗೆಯೇ ಅರ್ಜುನನೂಕೂಡ, ಧನುರ್ಯುದ್ಧಕ್ಕೆ ಬೇಕಾದ ದೃಢಮುಷ್ಟಿ, ಹಸ್ತಲಾಘವ, ಗುರಿತಪ್ಪದೆ ಹೊಡೆಯುವುದು, ಇವುಗಳೊಳಗೆಲ್ಲ ಅಸಮಾನವಾದ ಚಾತುರ್ಯವನ್ನು ತೋರಿಸುತಿದ್ದನು. ಮತ್ತು ಕ್ಷುರ, ನಾರಾಚ, ಭಲ್ಲ, ವಿಪಾಠಗಳೆಂಬ ಬೇರೆಬೇರೆ ತರದ ಬಾಣಗಳ ಪ್ರಯೋಗಸಂಧಾನಮಾರ್ಗಗಳನ್ನೆಲ್ಲ ತಿಳಿದವನಾಗಿದ್ದನು. ಋಜುಬಾಣಗಳು, ವಕ್ರಬಾಣಗಳು, ಅರ್ಧಚಂದ್ರಬಾಣದಂತಿರುವ ಅಗಲವಾದ ಬಾಣಗಳು, ಇವುಗಳ ಪ್ರಯೋಗವಿಧಿಗಳೊಳಗೆಲ್ಲ ನೈಪುಣ್ಯವನ್ನು ಪಡೆದನು. ಹಸ್ತಲಾಘವದಲ್ಲಿಯೂ, ಸಲಿಗೆಯಲ್ಲಿಯೂ ಅರ್ಜುನನಿಗೆ ಸಮಾನನು ಬೇರೊಬ್ಬನಿಲ್ಲವೆಂದೇ ದ್ರೋಣನು ನಿರ್ಧರಿಸಿದನು. ಆಗ ಆ ದ್ರೋಣನು ಒಮ್ಮೆ ಕೌರವರೆಲ್ಲರೂ ನೆರೆದಿದ್ದಾಗ ಗುಡಾಕೇಶನನ್ನು (ಗುಡಾಕವೆಂದರೆ ನಿದ್ರೆ ಅದನ್ನು ಜಯಿಸಿದ ಅರ್ಜುನನನ್ನು) ನೋಡಿ ಹೀಗೆಂದು ಹೇಳುವನು. "ಧನುರ್ವೇದದಲ್ಲಿ ನನಗೆ ಗುರುವು ಅಗಸ್ತ್ಯಶಿಷ್ಯನಾದ ಅಗ್ನಿವೇಶ್ಯನೆಂಬವನು. ಆತನಲ್ಲಿ ನಾನು ಶಿಷ್ಯನಾಗಿ ಧನುರ್ವಿದ್ಯೆಯನ್ನು ಕಲಿತೆನು. ನಾನು ಅವನಿಂದ ಕಲಿತ ಧನುರ್ವೇದವನ್ನು ನನಗೆ ಮುಂದೆ ಒಳ್ಳೇ ಸತ್ಪಾತ್ರದಲ್ಲಿ ವಿನಿಯೋಗಿಸಬೇಕು. ಹಾಗೆಯೇ ಸತ್ಪಾತ್ರಪರಂಪರೆಯಾಗಿ ಬಂದ ಆ ವಿದ್ಯೆಯು ಸತ್ಪಾತ್ರಪರಂಪರೆಯಾಗಿಯೇ ಮುಂದುವರಿಯಬೇಕಾಗಿದೆ. ಈಗ ನಾನೂ ಅದಕ್ಕಾಗಿ ಪ್ರಯತ್ನಿಸುತಿದ್ದೆನು. ಅರ್ಜುನಾ! ಈಗ ನೀನು ತಕ್ಕ ಪಾತ್ರವಾಗಿ ದೊರೆತಿರುವೆ. ನಾನು ಬಹುಕಾಲದ ತಪಸ್ಸಿನಿಂದ ಸಾಧಿಸಿದ ಬ್ರಹ್ಮಶಿರವೆಂಬ ಅಮೋಘವಾದ ಅಸ್ತ್ರವೊಂದುಂಟು. ಅದು ವಜ್ರಕ್ಕೆ ಸಮಾನವಾದುದು. ಅದು ಎಲ್ಲಾ ಭೂಮಿಯನ್ನಾದರೂ ನಿಶ್ಶೇಷವಾಗಿ

ದಹಿಸಬಲ್ಲುದು. ನನ್ನ ಗುರುವು ಇದನ್ನು ನನಗೆ ಉದೇಶಿಸಿದಾಗಲೇ ನನ್ನನ್ನು ನೋಡಿ "ನೀನು ಯುದ್ಧದಲ್ಲಿ ಮನುಷ್ಯರಮೇಲೆ ಇದನ್ನು ಬಿಡಬಾರದು. ಅವರು ಅಲ್ಪ ವೀರ್ಯವುಳ್ಳವರು. ಯುದ್ಧಕಾಲದಲ್ಲಿ ಮಾಯೆಯಿಂದ ನಿನಗೆ ಕಣ್ಮರೆಯಾಗಿ ಯುದ್ಧಮಾಡತಕ್ಕ ದೇವಾಸುರರಲ್ಲಿ ಯಾರೇ ಆಗಿದ್ದರೂ ಅವರಮೇಲೆ ನೀನು ಈ ಶಸ್ತ್ರವನ್ನುಪಯೋಗಿಸಿ ಕೊಲ್ಲಬಹುದು. ಇದು ದೇವಲೋಕದ ಸಂಬಂಧವಾದುದು" ಎಂದು ಹೇಳಿರುವರು. ಓ ವೀರಾ! ಈಗ ನಿನಗೆ ಅದನ್ನು ಉಪದೇಶಿಸುವೆನು. ನೀನು ಹೊರತು ಅದಕ್ಕೆ ಬೇರೆ ಸತ್ಪಾತ್ರವಿಲ್ಲ. ಆದರೆ ನೀನೂ ಆ ಮಹರ್ಷಿಯು ನಿರ್ಣಯಿಸಿರುವ ಕಟ್ಟುಪಾಡಿಗೆ ಒಳಪಟ್ಟು ನಡೆಯಬೇಕು. ನಿನ್ನ ಈ ಎಲ್ಲಾ ಜ್ಞಾತಿಗಳ ಕಣ್ಣೆದಿರಾಗಿ ನನಗೆ ಇದನ್ನು ನೀನು ಗುರುದಕ್ಷಿಣೆಯಂತೆ ವಾಗ್ದಾನ ಮಾಡಬೇಕು" ಎಂದನು. ಅರ್ಜುನನು 'ಹಾಗೆಯೇ ಆಗಲಿ ಕೊಡುವೆನು' ಎಂದು ಹೇಳಲು, ಆಗ ತಿರುಗಿ ದ್ರೋಣನು "ನೀನು ಸಮಯವು ಬಂದಾಗ ನನ್ನಿದಿರಾಗಿ ನಿಂತು ಯುದ್ಧಮಾಡುವುದಕ್ಕೂ ಹಿಂಜರಿಯಬಾರದು" ಎಂದನು. ಅದಕ್ಕೂ ಅರ್ಜುನನು ಸಮ್ಮತಿಸಿ ಹಾಗೆಯೇ ಪ್ರತಿಜ್ಞೆ ಮಾಡಿಕೊಟ್ಟು, ಅವನ ಪಾದಗಳೆರಡನ್ನೂ ಹಿಡಿದು ನಮಸ್ಕರಿಸಿದನು. ಆಗ ದ್ರೋಣನು ಅರ್ಜುನನ್ನಾಲಿಂಗಿಸಿ, "ಅರ್ಜುನಾ! ಹಿಂದೆ ನಾನು ನಿನಗೆ 'ಲೋಕದಲ್ಲಿ ನಿನಗೆ ಸಮಾನರೊಬ್ಬರೂ ಇಲ್ಲದಂತೆ ಮಾಡುವೆ'ನೆಂದು ಹೇಳಿದ್ದೆನಲ್ಲವೆ? ಅದರಂತೆಯೇ ಎಲ್ಲಾ ಶಸ್ತ್ರಾಸ್ತ್ರಗಳಲ್ಲಿಯೂ ನಿನಗೆ ಸಮಾನರಿಲ್ಲದಂತೆ ಮಾಡಿರುವೆನು. ದೇವತೆಗಳಾಗಲಿ, ದೈತ್ಯರಾಗಲಿ, ದಾನವರಾಗಲಿ, ನಿನಗಿದಿರಾಗಿ ನಿಂತು ಯುದ್ಧಮಾಡಲು ಶಕ್ತರಲ್ಲ. ಅಷ್ಟೇಕೆ? ನಿನಗಿಂತಲೂ ನಾನೂ ಹೆಚ್ಚಲ್ಲವೆಂದು ತಿಳಿ. ಇನ್ನು ಇತರ ಮನುಷ್ಯರನ್ನು ಹೇಳತಕ್ಕುದೇನು? ನಿನಗಿಂತಲೂ ಮೇಲಾದವನು ಈಗ ಈ ಭೂಲೋಕದಲ್ಲಿ ಒಬ್ಬನು ಮಾತ್ರ ಇರುವನು. ಯಾವನು ಬಲ್ಲೆಯಾ? ಪುಂಡರೀಕಾಕ್ಷನೂ, ಕಂಸಕಾಳೀಯರನ್ನು ಕೊಂದವನೂ ಆದ ಆ ಕೃಷ್ಣನು. ಅವನು ಸಮಸ್ತ ಲೋಕಗಳನ್ನೂ ಜಯಿಸಬಲ್ಲವನು. ಸಮಸ್ತ ಶಸ್ತ್ರಾಸ್ತ್ರಗಳೂ ಅವನಿಗೆ ವಶವಾಗಿರುವುವು. ಪಾರ್ಥಾ! ಇನ್ನು ನಾನು ನಿನ್ನ ಮುಂದೆ ಸುಳ್ಳಾಡುವೆನೆಂದು ತಿಳಿಯಬೇಡ. ಎಲ್ಲಾ ಜಗತ್ತೇ ಅವನಿಗೆ ಅಧೀ

ನವು. ಅವನಲ್ಲಿಯೇ ಜಗತ್ತೆಲ್ಲ ಲೀನವಾಗಿರುವುದು. ಅವನಿಂದಲೇ ಜಗತ್ತೆಲ್ಲವೂ ಹುಟ್ಟಿದುದು. ಬ್ರಹ್ಮರುದ್ರಾದಿಗಳೂ ಕೂಡ ಅವನ ಸ್ಥಿತಿಯನ್ನು ತಿಳಿಯಲಾರರು. ಅವನ ನಾಭಿಯಿಂದಲೇ ಲೋಕಸೃಷ್ಟಿಕರ್ತನಾದ ಬ್ರಹ್ಮನು ಹುಟ್ಟಿದುದು. ಸಮಸ್ತಕ್ಕೂ ಆತನೇ ಕರ್ತನು. ಎಲ್ಲವನ್ನೂ ಅನುಭವಿಸತಕ್ಕ ಭೋಕ್ತೃವೂ ಆತನೇ! ಕೊನೆಗೆ ಜಗತ್ತನ್ನೆಲ್ಲ ತನ್ನಲ್ಲಿ ಉಪಸಂಹರಿಸಿಕೊಳ್ಳುವವನೂ ಅವನೇ! ಜಗತ್ತೆಲ್ಲವೂ ಅವನ ಸ್ವರೂಪವೇ. ಆದುದರಿಂದ ಅವನು ಜಗನ್ಮಯನು. ಭೂತಭವಿಷ್ಯದ್ವರ್ತಮಾನಗಳೆಲ್ಲವೂ ಅವನೇ. ಅವನು ಪರಮಪುರುಷನು. ನಿತ್ಯನು. ಸರ್ವಾಂತರ್ಯಾಮಿ! ಸ್ಥಿರವಾದವನು. ಅಚಲನು. ಅನಾದಿಯೆನಿಸಿದವನು. ಯೋಗಸ್ವರೂಪಿಯಾದ ಆತನು ಜಗದ್ರಕ್ಷಣಾರ್ಥವಾಗಿಯೇ ಇಂತಹ ಅವತಾರಗಳನ್ನೆತ್ತುವನು. ಅವನಿಗೆ ಸಮಾನನಾದವನು ಹಿಂದೆ ಹುಟ್ಟಿದುದಿಲ್ಲ. ಈಗಲೂ ಇಲ್ಲ. ಮುಂದೆಯೂ ಹುಟ್ಟುವಹಾಗಿಲ್ಲ ಅರ್ಜುನಾ! ಚರಾಚರಗಳಿಗೆಲ್ಲ ಗುರುವೂ, ತಂದೆಯೂ ಆದ ಆ ಪರಮಪುರುಷನೇ ಕೃಷ್ಣನೆಂಬ ಹೆಸರಿನಿಂದ ನಿನ್ನ ಮಾವನ ಮಗನಾಗಿ ಹುಟ್ಟಿರುವನೆಂದು ತಿಳಿ. ತನ್ನ ಹಿತದಲ್ಲಿ ದೃಷ್ಟಿಯುಳ್ಳ ಯಾವನು ತಾನೇ ಆ ಕೃಷ್ಣನನ್ನು ಜಯಿಸಬೇಕೆಂದು ಮನಸ್ಸಿನಲ್ಲಿಯಾದರೂ ಇಚ್ಛಿಸುವನು? ಅರ್ಜುನಾ! ಆ ಕೃಷ್ಣನು ನಿನಗೆ ಭಾವಮೈದುನನೂ, ಮಿತ್ರನೂ ಆಗುವನು. ಅವನಿಗೆ ನೀನು ಪ್ರಾಣಪ್ರಿಯನೆನಿಸುವೆ. ನಿನಗೆ ಅವನು ಪ್ರಾಣದಂತೆ ಪ್ರಿಯನು. ಅರ್ಜುನಾ! ಅವನೊಡನೆ ನಿನಗೆ ವಿನೋದಕ್ಕಾದರೂ ಕಲಹವುಂಟಾಗದು. ಹಿಂದೆ ಆ ಕೃಷ್ಣನು ನಂದಗೋಕುಲದಲ್ಲಿ ಬೆಳೆಯುತ್ತಿರುವಾಗಲೇ ಇಂದ್ರನು ಅವನೊಡನೆ ನಿನ್ನ ವಿಷಯವಾಗಿ "ನನ್ನ ಅಂಶದಿಂದ ಕುಂತಿಯಲ್ಲಿ ಕೊನೆಯಮಗನಾಗಿ ಹುಟ್ಟಿದ ಅರ್ಜುನನೆಂಬವನು ಭೂಭಾರವನ್ನು ಪರಿಹರಿಸುವ ಕಾರ್ಯದಲ್ಲಿ ಮುಂದೆ ನಿನಗೆ ಸಹಾಯಕನಾಗುವನು. ದೇವಕಾರ್ಯಕ್ಕಾಗಿ ಅವನನ್ನು ನೀನು ಕೈಬಿಡದೆ ಅಭಯವನ್ನು ಕೊಟ್ಟು ಕಾಪಾಡಬೇಕು" ಎಂದು ಕೇಳಿಕೊಂಡನು. ಸಾಕ್ಷಾತ್ ಲಕ್ಷ್ಮೀಪತಿಯೂ, ಶಂಖಚಕ್ರಗದಾಧರನೂ ಪುಂಡರೀಕಾಕ್ಷನೂ ಆದ ಕೃಷ್ಣನು ಆಗ ದೇವೇಂದ್ರನನ್ನು ನೋಡಿ "ದೇವೇಂದ್ರಾ! ಆ ಅರ್ಜುನನು ನನಗೆ ಬೇರೆಯವನಲ್ಲ. ನನ್ನ ಆತ್ಮೀಯ

ಮಗನು. ಅವನು ಧರ್ಮಿಷ್ಠನೆಂದೂ, ಶಸ್ತ್ರಧಾರಿಗಳಲ್ಲಿ ಶ್ರೇಷ್ಠನೆಂದೂ ಲೋಕೈಕವೀರನಾದ ಆತನು ನಿನ್ನ ಅಂಶವೆಂದೂ ಬಲ್ಲೆನು. ಇಂದ್ರಾ! ನಮ್ಮಿಬ್ಬರಲ್ಲಿರುವ ಮೈತ್ರಿಯು ಬೇರೆ ಯಾರಲ್ಲಿಯೂ ಇರದು. ಅವನಲ್ಲಿ ಭಕ್ತಿಯುಳ್ಳವನು ನನ್ನ ಭಕ್ತನು. ಅವನ ವಿರೋಧಿಯೇ ನನ್ನ ವಿರೋಧಿ. ನನ್ನ ಧನವಾವುದೋ ಅದು ಅವನ ಧನವೇ. ಅವನಿಲ್ಲದೆ ನಾನೂ ಭೂಲೋಕದಲ್ಲಿ ಜೀವಿಸಿರಲಾರೆನು' ಎಂದು ಸರ್ವೇಶ್ವರನಾದ ಕೃಷ್ಣನೇ ಇಂದ್ರನಿಗೆ ಹೇಳಿರುವುದರಿಂದ ನಿನಗೆ ಸಮಾನನೂ, ಕೆಲವು ವಿಷಯಗಳಲ್ಲಿ ನಿನಗಿಂತಲೂ ಮೇಲಾದವನೂ, ಭೂಲೋಕದಲ್ಲ ಆ ಕೃಷ್ಣನೊಬ್ಬನು ಹೊರತು ಬೇರೊಬ್ಬನಿಲ್ಲ. ದೇವದೇವನಾದ ಆ ಕೃಷ್ಣನೇ ಎಲ್ಲವನ್ನೂ ಕಾಪಾಡಬಲ್ಲವನು" ಎಂದನು.

ಓ ಜನಮೇಜಯರಾಜಾ! ಆಮೇಲೆ ಅರ್ಜುನನು ದ್ರೋಣನ ಮಾತನ್ನು ಅನುಮೋದಿಸಿ, ಅವನ ಪಾದಗಳನ್ನು ಹಿಡಿದು ನಮಸ್ಕರಿಸಿ, ಧರ್ಮರಾಜನಿಗೆ ಅತ್ಯಂತ ವಿಧೇಯನಾಗಿ ನಡೆಯುತ್ತಿದ್ದನು. ಅರ್ಜುನನಿಗೆ ಸಮಾನರಾದ ಧನುರ್ಧಾರಿಗಳು ಲೋಕದಲ್ಲಿ ಬೇರೊಬ್ಬರಿಲ್ಲವೆಂಬ ಪ್ರತೀತಿಯು ಪ್ರಪಂಚವನ್ನೆಲ್ಲ ಹರಡುವಂತೆ, ಗದಾಯುದ್ಧ, ಖಡ್ಗಯುದ್ಧ, ರಥಯುದ್ಧ, ಧನುರ್ಯುದ್ಧಗಳಲ್ಲೆಲ್ಲ ಅವನು ಪಾರಂಗತನೆನಿಸಿದನು. ಸಹದೇವನೂ ಕೂಡ ಎಲ್ಲಾ ನೀತಿಶಾಸ್ತ್ರಗಳನ್ನೂ, ದೇವೇಂದ್ರನಿಂದಲೇ ಪಡೆದವನಾಗಿ, ಶಾಸ್ತ್ರಗಳಲ್ಲಿಯೂ, ಶಸ್ತ್ರಾಸ್ತ್ರಗಳಲ್ಲಿಯೂ, ಎಲ್ಲಾ ತರದ ಯುದ್ಧಕಾರ್ಯಗಳಲ್ಲಿಯೂ, ಆನೆಕುದುರೆಗಳನ್ನು ಪಳಗಿಸುವುದರಲ್ಲಿಯೂ ನಿಪುಣನಾಗಿ ಅಣ್ಣಂದಿರಿಗೆ ವಿಧೇಯನಾಗಿರುತ್ತಿದ್ದನು. ನಕುಲನು ಚಿತ್ರಯುದ್ಧಗಳಲ್ಲಿ ನಿಪುಣನೆನಿಸಿ ಅತಿರಥನೆಂಬ ಖ್ಯಾತಿಯನ್ನು ಪಡೆದು ತನ್ನ ಸಹೋದರರಲ್ಲಿ ವಿನೀತನಾಗಿದ್ದನು. ಗಂಧರ್ವರ ವಿರೋಧಕ್ಕೆ ಪಾತ್ರನಾಗಿದ್ದರೂ ಮೂರುವರ್ಷಗಳವರೆಗೆ ಯಜ್ಞಕಾರ್ಯವನ್ನು ನಡೆಸಿ ಪ್ರಖ್ಯಾತಿಹೊಂದಿದ್ದ ಸೌವೀರನೆಂಬ ಯವನದೇಶದ ರಾಜನು ಅರ್ಜುನನೇ ಮೊದಲಾದ ಪಾಂಡವರಿಂದ ಯುದ್ಧದಲ್ಲಿ ಕೊಲ್ಲಲ್ಪಟ್ಟನು. ವೀರನಾದ ಪಾಂಡುವು ಕೂಡ ಹಿಂದೆ ಯಾವನನ್ನು ನಿಗ್ರಹಿಸಲಾರದೆಹೋದನೋ, ಆ ಯವನಾಧಿಪತಿಯು

ಅರ್ಜುನನಿಂದ ಪರಾಜಿತನಾದನು. ಮತ್ತು ಕೌರವರಿಗೆ ಸದಾ ವಿರೋಧಿಯಾಗಿ, ಬಲಾಢ್ಯನೆನಿಸಿಕೊಂಡ ವಿಪುಲನೆಂಬ ಹೆಸರುಳ್ಳ ಸೌವೀರರಾಜನು ಪಾರ್ಥನಿಂದ ಕೊಲ್ಲಲ್ಪಟ್ಟನು. ಯಾವಾಗಲೂ ಎಂತಹ ಯುದ್ಧದಲ್ಲಿಯೂ ಜಯನಿಶ್ಚಯವುಳ್ಳ ದತ್ತಾಮಿತ್ರನೆಂದೂ, ಸುಮಿತ್ರನೆಂದೂ ಹೆಸರುಳ್ಳ ಸೌವೀರರಾಜನನ್ನೂ ಅರ್ಜುನನು ತನ್ನ ಬಾಣಗಳಿಂದ ನಿಗ್ರಹಿಸಿದನು. ಮತ್ತು ಆ ಅರ್ಜುನನು ಭೀಮನ ಸಹಾಯದಿಂದ ಪೂರ್ವದೇಶೀಯರಾದ ಹತ್ತುಸಾವಿರಮಂದಿ ಮಹಾರಥರನ್ನೂ, ತಾನು ಏಕರಥನಾಗಿಯೇ ಜಯಿಸಿದನು. ಹಾಗೆಯೇ ಏಕರಥನಾಗಿ ದಕ್ಷಿಣದಿಕ್ಕನ್ನೂ ಜಯಿಸಿದನು. ಧನಂಜಯನೆಂಬ ಹೆಸರಿಗೆ ತಕ್ಕಂತೆ ಅಪಾರ ಧನವನ್ನು ಕುರುದೇಶಕ್ಕೆ ತಂದು ಸೇರಿಸಿದನು. ಅರ್ಜುನನು ತನ್ನ ಹದಿನೈದನೆಯ ವರ್ಷದಲ್ಲಿಯೇ ಇಷ್ಟೆಲ್ಲವನ್ನೂ ಮಾಡಿದುದರಿಂದ ಧೃತರಾಷ್ಟ್ರಪುತ್ರರಿಗೆ ಅವನಲ್ಲಿ ಭೀತಿ ಹುಟ್ಟಿತು. ಅಲ್ಲದೆ ಬಲಾಢ್ಯನಾಗಿದ್ದ ಭೀಮಸೇನನು ಮನಃಪೂರ್ವಕವಾದ ದುರಭಿಪ್ರಾಯವಿಲ್ಲದಿದ್ದರೂ ಆ ಕೌರವರನ್ನು ಆಗಾಗ ತನ್ನ ಬಲದಿಂದ ಅಡಗಿಸುತ್ತ ಬಂದುದರಿಂದ, ಧಾರ್ತರಾಷ್ಟ್ರರು ಅವನಲ್ಲಿ ದೋಷವನ್ನೇ ಗ್ರಹಿಸುತಿದ್ದರು. ಹೀಗೆ ಧೃತರಾಷ್ಟ್ರಪುತ್ರರೆಲ್ಲರೂ ಭೀಮಾರ್ಜುನರ ವಿಷಯದಲ್ಲಿ ಭಯಪಟ್ಟು, ಪಾಂಡವರ ಕೀರ್ತಿಯು ಮೇಲೆಮೇಲೆ ಪ್ರಬಲವಾಗುತ್ತಿರುವುದನ್ನು ನೋಡಿ, ಮುಂದೆ ಅವರಿಂದ ತಮ್ಮ ಅಭಿವೃದ್ಧಿಗೆ ಕುಂದಕವೆಂದೆಣಿಸಿ, ಅವರಿಗೆ ಕೆಡುಕುಮಾಡುವುದರಲ್ಲಿಯೇ ದೃಷ್ಟಿಯುಳ್ಳವರಾಗಿದ್ದರು. ಹೀಗಿದ್ದರೂ ಪಾಂಡವರು ಕುರುದೇಶವನ್ನು ವೃದ್ಧಿಗೆ ತರುವ ಒಂದೇ ದೃಢೋದ್ದೇಶದಿಂದ ಬೇರೆ ರಾಜ್ಯಗಳನ್ನೆಲ್ಲ ಆಗಾಗ ಜಯಿಸಿ, ಕೌರವರಾಜ್ಯವನ್ನು ಬಹಳ ಅಭಿವೃದ್ಧಿಗೆ ತಂದರು. ಇದನ್ನು ನೋಡಿದಹಾಗೆಲ್ಲ ಕೌರವರಿಗೆ ಪಾಂಡವರಮೇಲೆ ದ್ವೇಷವು ಹೆಚ್ಚಾಗುತ್ತ ಬಂದಿತು. ಅವರಮೇಲಿನ ಅಸೂಯೆಯಿಂದಲೂ, ಭಯದಿಂದಲೂ ದುರ್ಯೋಧನನು ರಾತ್ರಿ ಹಗಲು ನಿದ್ರೆಯಿಲ್ಲದೆ ಕೊರಗುತಿದ್ದನು.

ಇದು ನೂರ ಐವತ್ತೊಂದನೆಯ ಅಧ್ಯಾಯವು.



ಯುಧಿಷ್ಠಿರನಿಗೆ ಯೌವರಾಜ್ಯಾಭಿಷೇಕವಾಗಬೇಕೆಂದು ಪುರ
ರಜನರು ಆಡಿಕೊಳ್ಳುತ್ತಿದ್ದುದನ್ನು ಕೇಳಿ ದುರ್ಯೋಧನನು
ಸಂಕಟದಿಂದ ತಂದೆಯೊಡನೆ ವಾದಿಸಿದುದು.

ಓ ಜನಮೇಜಯರಾಜಾ! ಭೀಮನ ಬಲಾಢ್ಯತೆಯನ್ನೂ, ಅರ್ಜುನನ ಧನುರ್ವಿದ್ಯಾಚಾತುರ್ಯವನ್ನೂ ನೋಡಿ ಸಹಿಸಲಾರದೆ, ದುರ್ಯೋಧನನು ಮನಸ್ಸಿನಲ್ಲಿಯೇ ಕುದಿಯುತ್ತಿದ್ದನು. ಆಮೇಲೆ ಕರ್ಣಶಕುನಿಗಳೊಡನೆ ಸೇರಿ ದುರಾಲೋಚನೆಯನ್ನು ಮಾಡಿ, ಪಾಂಡವರನ್ನು ಹೇಗಾದರೂ ತೀರಿಸಿಬಿಡಬೇಕೆಂದು ಆ ಮೂವರೂ ಯೋಚಿಸುತ್ತಿದ್ದರು. ಪಾಂಡವರೂ ಆಗಾಗ ತಮ್ಮ ಹಿತೈಷಿಗಳ ಮೂಲಕವಾಗಿ, ಆ ಸಂಗತಿಯನ್ನು ತಿಳಿದು, ಆತ್ಮರಕ್ಷಣೆಯಲ್ಲಿ ಎಚ್ಚರಗೊಂಡು, ಆಗಾಗ ಅವಕ್ಕೆಲ್ಲ ಪ್ರತೀಕಾರವನ್ನು ಮಾಡುತ್ತಿದ್ದರು. ಆದರೆ, ವಿದುರನ ಮಾತಿಗೆ ಕಟ್ಟುಬಿದ್ದು ಅವರು ಬಹಿರಂಗವಾಗಿ ಕೌರವರಲ್ಲಿ ದ್ವೇಷವನ್ನು ಹೆಚ್ಚಿಸಿಕೊಳ್ಳದೆ, ಮನಸ್ಸಿನಲ್ಲಿಯೇ ಅಡಗಿಸಿಟ್ಟುಕೊಂಡಿದ್ದರು. ಆಗ ಪುರಜನರೆಲ್ಲರೂ, ಎಲ್ಲೆಲ್ಲಿಯೂ ಆ ಪಾಂಡವರ ಗುಣಗಳನ್ನು ಕೊಂಡಾಡುತ್ತಿದ್ದರು. ಪಾಂಡುಪುತ್ರನಾದ ಯುಧಿಷ್ಠಿರನೇ ಎಲ್ಲರಿಗೂ ವಯಸ್ಸಿನಿಂದಲೂ, ಗುಣಗಳಿಂದಲೂ ಜ್ಯೇಷ್ಠನಾಗಿರುವುದರಿಂದ ಅವನೇ ರಾಜ್ಯಾರ್ಹನೆಂದು ಅಲ್ಲಲ್ಲಿ ಸಭಾಸ್ಥಾನಗಳಲ್ಲಿಯೂ, ಬೀದಿಯ ಚೌಕಗಳಲ್ಲಿಯೂ, ನಾಲ್ಕಾರು ಜನರು ಎಲ್ಲಿ ಕೂಡಿದರೆ, ಅಲ್ಲಿ ಈ ಪಾಂಡವರ ಮಾತುಗಳನ್ನೇ ಆಡಿಕೊಳ್ಳುತ್ತಿದ್ದರು. ಮತ್ತು ಅಲ್ಲಲ್ಲಿ ಜನರು ಯುವರಾಜಪದವಿಗೆ ತಕ್ಕವರಾರೆಂದು ತಮ್ಮೊಳಗೆ ತಾವು ಚರ್ಚಿಸುತ್ತಿರುವಾಗ, "ಧೃತರಾಷ್ಟ್ರನು ಪಾಂಡುವಿಗಿಂತಲೂ ವಯಸ್ಸಿನಲ್ಲಿ ಹಿರಿಯವನಾಗಿದ್ದರೂ, ಕಣ್ಣಿಲ್ಲದ ಕುರುಡನಾದುದರಿಂದ ಮೊದಲಿಂದಲೂ ಅವನಿಗೆ ರಾಜ್ಯಕ್ಕೆ ಅರ್ಹತೆಯಿಲ್ಲದೆ ಹೋಗಿ, ಪಾಂಡುವಿಗೆ ರಾಜ್ಯವು ಸೇರಿತು. ಹೀಗಿರುವಾಗ ಧೃತರಾಷ್ಟ್ರನು ಹೇಗೆ ರಾಜನೆನಿಸುವನು? ಶಂತನುಪುತ್ರನಾದ ಭೀಷ್ಮನು ಸರ್ವವಿಷಯದಲ್ಲಿಯೂ ಸಮರ್ಥನಾಗಿದ್ದರೂ, ತನ್ನ ಸತ್ಯಕ್ಕೂ, ದೃಢವ್ರತಕ್ಕೂ ಕಟ್ಟುಬಿದ್ದು, ರಾಜ್ಯವನ್ನು ನಿರಾಕರಿಸಿಬಿಟ್ಟನು. ಅವನು ಅದನ್ನು ತಿರುಗಿ ಗ್ರಹಿಸುವಹಾಗಿಲ್ಲ. ಆದುದರಿಂದ ನಾವೆಲ್ಲರೂ ಯುಧಿಷ್ಠಿರನಿಗೆ ರಾಜ್ಯದಲ್ಲಿ ಅಭಿಷೇಕವನ್ನು ಮಾಡಿಬಿಡುವುದೊಳ್ಳೆಯದು

ಆವನು ಪಾಂಡುಕುಮಾರರಲ್ಲಿ ಹಿರಿಯನು. ಇನ್ನೂ ತರುಣ ವಯಸ್ಸುಳ್ಳವನು. ವಯಸ್ಸು ಚಿಕ್ಕದಾದರೂ ಒಳ್ಳೇ ಅನುಭವವುಳ್ಳ ವೃದ್ಧರಂತೆ ನಡತೆಯುಳ್ಳವನು. ಸತ್ಯ, ದಯೆ, ಮುಂತಾದ ಗುಣಗಳಿಂದ ಕೂಡಿದವನು. ಧರ್ಮಜ್ಞನಾದ ಅವನು ರಾಜ್ಯಾಧಿಕಾರಕ್ಕೆ ಬಂದರೆ, ಎಲ್ಲರಿಗೂ ಸುಖವುಂಟು. ಅವನು ಪಿತಾಮಹನಾದ ಭೀಷ್ಮನನ್ನೂ, ದೊಡ್ಡ ತಂದೆಯಾದ ಧೃತರಾಷ್ಟ್ರನನ್ನೂ, ಅವನ ನೂರುಮಂದಿ ಪುತ್ರರನ್ನೂ ಸುಖವಾಗಿ ಪೋಷಿಸುವನು. ಅವರಿಗೆ ಬೇಕುಬೇಕಾದ ಭೋಗಗಳನ್ನೆಲ್ಲ ಒದಗಿಸಿಕೊಟ್ಟು ಸತ್ಕರಿಸಿ ಆದರಿಸುವನು '' ಎಂದು ಹೇಳುತಿದ್ದರು.

ಹೀಗೆ ಅಲ್ಲಲ್ಲಿ ಜನರು ಯುಧಿಷ್ಠಿರನ ವಿಷಯವಾಗಿ ಆಡಿಕೊಳ್ಳುತ್ತಿದ್ದ ಮಾತುಗಳು ದುರ್ಯೋಧನನ ಕಿವಿಗೂ ಬೀಳುತಿದ್ದುವು. ಅವನು ಮನಸ್ಸಿನಲ್ಲಿಯೇ ಕೊರಗುತಿದ್ದರು. ಅವನಿಗೆ ಪಾಂಡವರ ವಿಷಯದಲ್ಲಿ ಅಸಹನವು ಹೆಚ್ಚಾಗುತ್ತಾ ಬಂದಿತು. ಹೀಗಿರುವಾಗ ಧೃತರಾಷ್ಟ್ರನು ಏಕಾಂತವಾಗಿ ಕುಳಿತಿದ್ದ ಸಮಯದಲ್ಲಿ ಅವನ ಬಳಿಗೆ ಬಂದು ವಿನಯ ನಟನೆಗಳಿಂದ ಅವನನ್ನು ಪೂಜಿಸಿ ಹೀಗೆಂದು ಹೇಳುವನು. '' ಜನಕಾ ! ನಮ್ಮ ಊರಿನ ಜನರು ಆಡಿಕೊಳ್ಳುವ ಮಾತುಗಳನ್ನು ಕೇಳಿದೆಯಾ ? ನಾವು ಕಿವಿಯಿಂದ ಕೇಳಬಾರದ ಮಾತುಗಳನ್ನೆಲ್ಲ ಆಡುತ್ತಿರುವರು. ಈ ರಾಜ್ಯಕ್ಕೆ ನೀನೂ ಬೇಡವಂತೆ! ತಾತನಾದ ಭೀಷ್ಮನೂ ಬೇಡವಂತೆ! ನಿಮ್ಮಿಬ್ಬರನ್ನೂ ಹೊರಗುಮಾಡಿ, ಯುಧಿಷ್ಠಿರನೇ ಅವರಿಗೆ ರಾಜನಾಗಿರಬೇಕಂತೆ ! ಅಪ್ಪಾ ! ಭೀಷ್ಮನಿಗೂ ಇದು ಸಮ್ಮತವಾಗಿರುವಂತಿದೆ. ಅದಕ್ಕಾಗಿಯೇ ಅವನು ರಾಜ್ಯವನ್ನು ಅನುಭವಿಸಲು ಇಷ್ಟಪಡುವುದಿಲ್ಲ. ಊರಿನ ಜನರೆಲ್ಲರೂ ಈಗ ನಿನ್ನ ಮಕ್ಕಳಾದ ನಮ್ಮೆಲ್ಲರನ್ನೂ ಹಾಳುಮಾಡಬೇಕೆಂದು ಯೋಚಿಸುತ್ತಿರುವರು. ಪಾಂಡುವು ತನ್ನ ಗುಣಗಳಿಂದ ತಂದೆಯಿಂದಲೇ ರಾಜ್ಯವನ್ನು ನೇರವಾಗಿ ಪಡೆದನಂತೆ ! ನೀನು ಕುರುಡನಾದುದರಿಂದ ನಿನಗೆ ಬರಬೇಕಾದ ರಾಜ್ಯವೂ ತಪ್ಪಿಹೋಯಿತಂತೆ ! ಪಾಂಡುವಿನ ಮಗನಾದುದಕ್ಕಾಗಿ ಈಗ ಯುಧಿಷ್ಠಿರನಿಗೆ ರಾಜ್ಯವು ಹೋಗುವುದಾದರೆ, ಆ ಮೇಲೆ ಆ ಯುಧಿಷ್ಠಿರನ ಮಗನಿಗೇ ರಾಜ್ಯವು ಸೇರಬೇಕು. ನಾವು ನಿನ್ನ

ಹೊಟ್ಟೆಯಲ್ಲಿ ಹುಟ್ಟಿಯೂ ರಾಜಸಂತತಿಗೆ ಹೊರಗಾದೆವು. ಮುಂದೆ ನಮ್ಮ ಮಕ್ಕಳು, ಮುಮ್ಮಕ್ಕಳಿಗೂ ರಾಜ್ಯದಲ್ಲಿ ಬಾಧ್ಯತೆಯೇನೂ ಇರುವುದಿಲ್ಲವಷ್ಟೇ ? ಲೋಕದೊಳಗೆ ನಾವು ಎಲ್ಲರ ತಿರಸ್ಕಾರಕ್ಕೂ, ಅವಮಾನಕ್ಕೂ ಗುರಿಯಾಗುವೆವು. ಆ ಪಾಂಡವರ ಕೈಕೆಳಗೆ ಸೇರಿಕೊಂಡು, ಅವರ ಪಿಂಡದಿಂದಲೇ ಜೀವಿಸತಕ್ಕ ನಮಗೆ ನಿತ್ಯವೂ ನರಕವಾಸವೇ ಅಲ್ಲವೆ? ರಾಜೇಂದ್ರಾ! ನಮ್ಮ ಜೀವನವು ಅಂತಹ ಹೀನಸ್ಥಿತಿಗೆ ಬಾರದಂತೆ ನೀನು ಮಾರ್ಗವನ್ನು ಹುಡುಕು. ಮುಖ್ಯವಾಗಿ ನೀನೇ ಇದನ್ನು ಮೊದಲು ಕೆಡಿಸಿಕೊಂಡವನು. ಮೊದಲೇ ನೀನು ಈ ರಾಜ್ಯವನ್ನು ಬಿಡದೆ ನಿನ್ನಲ್ಲಿಯೇ ಇಟ್ಟುಕೊಂಡಿದ್ದರೆ, ಈಗ ನಮಗೆ ಆ ರಾಜ್ಯವು ನಿಸ್ಸಂದೇಹವಾಗಿ ಕೈಸೇರುತಿದ್ದಿತಲ್ಲವೆ? ಜನಗಳಿಗೆ ಇಷ್ಟವಿದ್ದರೂ, ಇಲ್ಲದಿದ್ದರೂ ನಾನೇ ರಾಜನಾಗುತಿದ್ದೆನು'' ಎಂದನು.

ತನ್ನ ಮಗನು ಹೇಳಿದ ಈ ಮಾತನ್ನು ಕೇಳಿ ಧೃತರಾಷ್ಟ್ರನು, ಸ್ವಲ್ಪ ಹೊತ್ತು ತನ್ನಲ್ಲಿ ತಾನೇ ಆ ಮಗನ ದುರ್ಬುದ್ಧಿಗಾಗಿ ಚಿಂತಿಸುತ್ತ, ಆತನನ್ನು ಕುರಿತು ''ಕುಮಾರಾ! ನನ್ನ ತಮ್ಮನಾದ ಪಾಂಡುವಾದರೋ ಯಾವಾಗಲೂ ಧರ್ಮನಿರತನಾಗಿದ್ದವನು. ನನ್ನಲ್ಲಿ ಬಹಳ ಪ್ರೇಮವುಳ್ಳವನು. ಎಲ್ಲಾ ಬಂಧುಗಳಲ್ಲಿಯೂ ಹಾಗೆಯೇ ಇದ್ದವನು. ಅದರಲ್ಲಿಯೂ ನನ್ನಲ್ಲಿ ಮತ್ತು ನನ್ನ ಕಡೆಯವರಲ್ಲಿ ವಿಶೇಷ ಪ್ರೇಮವನ್ನು ತೋರಿಸುತಿದ್ದವನು. ಆ ಪಾಂಡುವು ಭೋಜನಪನಾರ್ಥಗಳು ಮೊದಲುಗೊಂಡು ಯಾವುದನ್ನಾದರೂ ನನ್ನಲ್ಲಿಗೆ ತಂದೊಪ್ಪಿಸದೆ, ತಾನಾಗಿ ಉಪಯೋಗಿಸುತಿದ್ದವನಲ್ಲ. ಈಗ ಅವನ ಮಗನಾದ ಯುಧಿಷ್ಠಿರನೂ ಅವನಂತೆಯೇ ಧರ್ಮನಿರತನಾಗಿರುವನು. ಲೋಕಪ್ರಖ್ಯಾತನು. ಒಳ್ಳೇ ಗುಣಾಢ್ಯನು. ಪ್ರಜೆಗಳ ಆದರಕ್ಕೆ ಪಾತ್ರನಾಗಿ ನಮ್ಮ ರಾಜ್ಯದಲ್ಲಿ ಆಗಲೇ ಅವನು ಸ್ಥಿರಪಟ್ಟಿರುವನು. ಅಂತಹ ಗುಣಾಢ್ಯನನ್ನು ನಾವು ತಳ್ಳಿಬಿಡಬೇಕೆಂದರೆ ಹೇಗೆ ತಾನೇ ಸಾಧ್ಯವು ? ಅಲ್ಲದೆ ಅವನಿಗೆ ವಿಶೇಷ ಸಹಾಯಸಂಪತ್ತೂ ಇರುವುದು. ಮತ್ತು ಪಾಂಡುವು ಎಲ್ಲಾ ಮಂತ್ರಿಗಳನ್ನೂ, ಸೈನಿಕರನ್ನೂ, ಅವರ ಪುತ್ರಪೌತ್ರಾದಿಗಳೊಡನೆ ಆದರಿಸಿ ಪೋಷಿಸುತಿದ್ದನು. ಅವರೆಲ್ಲ

ರೂ ಪಾಂಡುವಿನಲ್ಲಿ ಪ್ರೇಮವುಳ್ಳವರಾಗಿರುವಾಗ, ನಾವು ಯುಧಿಷ್ಠಿರನಿಗೆ ಏನಾದರೂ ಅಪಕಾರವನ್ನು ಮಾಡಿದರೆ ಅವರು ಸಹಿಸುವರೆ? ಎಲ್ಲರೂ ಸೇರಿ ನಮ್ಮನ್ನು ಕೊಂದುಬಿಡುವರೆಂದೇ ತಿಳಿ! ಪುತ್ರಾ! ನಾನು ಧರ್ಮ ವನ್ನು ಬಿಟ್ಟುಹೋದರೆ, ಈ ಪ್ರಜೆಗಳೆಲ್ಲರೂ ನಮ್ಮ ದೇಶದಲ್ಲಿಯೇ ಇರಲು ಇಷ್ಟಪಡುವುದಿಲ್ಲ. ಆಗ ಕೌರವಪ್ರಧಾನರಿಗೂ, ಈ ಪ್ರಜಾಮುಖರಿಗೂ ನಮ್ಮಲ್ಲಿ ಹೇಗೆ ತಾನೇ ನಂಬಿಕೆಯುಂಟಾಗುವುದು? ನಾವು ಲೋಕನಿಂದೆ ಗೆ ಹೇಗೆ ತಾನೇ ಪಾತ್ರರಾಗದಿರುವೆವು" ಎಂದನು.

ಆಗ ದುರ್ಯೋಧನನು "ಅಪ್ಪಾ! ನಿನಗೇಕೆ ಈ ಹೆದರಿಕೆ? ಭೀ ಷ್ಮನು ಯಾವಾಗಲೂ ಕೌರವಪಾಂಡವರಿಬ್ಬರಲ್ಲಿಯೂ ಸಮಾನವಾಗಿ ವರ್ತಿ ಸತಕ್ಕವನು. ದ್ರೋಣಪುತ್ರನು ನಮ್ಮ ಕಡೆಗೇ ಇರತಕ್ಕವನು. ಮಗನು ಯಾವ ಕಡೆಯಿದ್ದರೆ ತಂದೆಯೂ ಆ ಪಕ್ಷವನ್ನೇ ಹಿಡಿಯುವನೆಂಬುದರಲ್ಲಿ ಸಂದೇಹವಿಲ್ಲ. ಸೋದರಳಿಯನೂ ಭಾವನೂ ಇದ್ದ ಕಡೆಯಲ್ಲಿ ಕೃಪನೂ ಇರುವನೆಂಬುದು ನಿಜವು. ಆದುದರಿಂದ ನಮ್ಮ ಕಡೆಗೆ ಕೃಪನೂ ಇರು ವನು. ವಿದುರನೊಬ್ಬನು ನಮಗೆ ಬಂಧುವಿನಂತೆ ತೋರಿಸಿಕೊಳ್ಳುತಿದ್ದ ರೂ, ಅಂತರಂಗದಲ್ಲಿ ಪಾಂಡವರ ಪಕ್ಷವನ್ನೇ ಹಿಡಿದಿರುವನು. ಆದರೆ, ಅವನೊಬ್ಬನು ಪಾಂಡವರ ಪಕ್ಷದಲ್ಲಿದ್ದರೆ ತಾನೇ ನಮ್ಮನ್ನೇನು ಮಾಡ ಬಲ್ಲನು? ಅವನಿಂದೇನೂ ಸಾಗದು. ಆದುದರಿಂದ ಜನಕಾ! ಪಾಂಡು ಪುತ್ರರಿಗೆ ನಿನ್ನಲ್ಲಿ ಇನ್ನೂ ಚೆನ್ನಾಗಿ ನಂಬಿಕೆಯಿರುವಾಗಲೇ ಅವರನ್ನೂ, ಅವರ ತಾಯಿಯನ್ನೂ ಇಲ್ಲಿಂದ ಹೊರಡಿಸಿ, ವಾರಣಾವತಕ್ಕೆ ಕಳುಹಿಸಿ ಬಿಡು. ಅದರಿಂದೇನೂ ಜನಗಳು ನಿನ್ನಲ್ಲಿ ತಪ್ಪನ್ನೆಣಿಸಲು ಅವಕಾಶ ವಿರುವುದಿಲ್ಲ. ಜನಕಾ! ಭಯಂಕರವಾದ ಈ ಹೃದಯಶಲ್ಯವು ನನಗೆ ರಾತ್ರಿಹಗಲು ನಿದ್ರೆಯಿಲ್ಲದಂತೆ ಮಾಡಿದೆ. ನಾನು ಈಗ ಹೇಳಿದಂತೆ ಮಾಡಿ ನನ್ನ ಮನಸ್ಸಿನಲ್ಲಿರುವ ಶೋಕಾಗ್ನಿಯನ್ನು ನಂದಿಸು" ಎಂದನು.

ಇದು ನೂರ ಐವತ್ತೆರಡನೆಯ ಅಧ್ಯಾಯವು.



## ಧೃತರಾಷ್ಟ್ರಾದಿಗಳಿಗೆ ಕಣಿಕನು ದುರ್ನೀತಿಗಳನ್ನು ಬೋಧಿಸಿದುದು. ಜಂಬುಕೋಪಾಖ್ಯಾನವು.

ಓ ಜನಮೇಜಯರಾಜಾ! ಪಾಂಡುಪುತ್ರರು ಬಲಾಧಿಕರೆಂದೂ, ಮಹಾತೇಜಸ್ವಿಗಳೆಂದೂ ಕೇಳಿದಮೇಲೆ, ಧೃತರಾಷ್ಟ್ರನಿಗೂ ಮನಸ್ಸಿನಲ್ಲಿ ಸ್ವಲ್ಪ ಚಿಂತೆಯು ಹುಟ್ಟಿತು. ಅದರಿಂದ ಕಳವಳಗೊಂಡವನಾಗಿ ಸಮಯೋಚಿತವಾದ ಮಂತ್ರಾಲೋಚನೆಗಳನ್ನು ಹೇಳುವುದರಲ್ಲಿ ನಿಪುಣನೂ, ರಾಜನೀತಿಯನ್ನು ಚೆನ್ನಾಗಿ ತಿಳಿದವನೂ ಆದ ಕಣಿಕನೆಂಬ ಮಂತ್ರಿಶ್ರೇಷ್ಠನನ್ನು ಕರೆದು ಹೀಗೆಂದು ಹೇಳುವನು. “ಓ ಬ್ರಾಹ್ಮಣೋತ್ತಮಾ! ಪಾಂಡುವಿನ ಮಕ್ಕಳು ನನ್ನ ಮಕ್ಕಳಿಗಿಂತಲೂ ಎಲ್ಲಾ ವಿಧದಲ್ಲಿಯೂ ಮೇಲೆನಿಸಿಕೊಂಡು, ಮೇಲೆಮೇಲೆ ಪ್ರಖ್ಯಾತಿಗೆ ಬರುತ್ತಿರುವರು. ಅವರ ವಿಷಯದಲ್ಲಿ ಸಂಧಿವಿಗ್ರಹಗಳ ಯುಕ್ತಾಯುಕ್ತತೆಯನ್ನು ನೀನು ಚೆನ್ನಾಗಿ ಪರ್ಯಾಲೋಚಿಸಿ, ನಿನ್ನ ನಿಶ್ಚಯವೇನೆಂಬುದನ್ನು ನನಗೆ ತಿಳಿಸಬೇಕು. ಕಣಿಕಾ! ನೀನು ಹೇಗೆ ಹೇಳಿದರೆ ಹಾಗೆ ಮಾಡಲು ಸಿದ್ಧನಾಗಿರುವೆನು” ಎಂದನು. ಓ ಜನಮೇಜಯರಾಜಾ! ಧೃತರಾಷ್ಟ್ರನು ಕಣಿಕನೊಡನೆ ಆಲೋಚನೆಮಾಡುತ್ತಿರುವ ಸಂಗತಿಯು ದುರ್ಯೋಧನನಿಗೂ ತಿಳಿಯಿತು. ಒಡನೆಯೇ ಅವನು ಕರ್ಣನನ್ನೂ, ದುಶ್ಶಾಸನನನ್ನೂ ಕರೆದುಕೊಂಡು ಕಣಿಕನಲ್ಲಿಗೆ ಬಂದನು. ಆ ಕಣಿಕನು ಸೌಬಲರಾಜರ ಮಂತ್ರಿಯಾದುದರಿಂದ, ಶಕುನಿಯನ್ನೇ ಮುಂದಿಟ್ಟುಕೊಂಡು ಬಂದು, ಪಾಂಡವರ ವಿಷಯವಾಗಿ ಅವನಲ್ಲಿ ಅನೇಕಪ್ರಶ್ನೆಗಳನ್ನು ಕೇಳತೊಡಗಿದರು. “ಓ ಮಂತ್ರಿಶ್ರೇಷ್ಠಾ! ಪಾಂಡವರು ಮೇಲೆಮೇಲೆ ಪ್ರಬಲರಾಗುತ್ತಿರುವರು. ಅವರಿಗಾಗಿ ನಾವೆಲ್ಲರೂ ಹೆದರುತ್ತಿರಬೇಕಾಗಿದೆ. ಓ ಭರದ್ವಾಜಾ! ನಮ್ಮ ಕಡೆಯವರೆಲ್ಲರಿಗೂ ಯಾವ ಕೊರತೆಯೂ ಇಲ್ಲದೆ, ಕ್ಷೇಮಕ್ಕೆ ದಾರಿ ಯಾವುದೋ ಅದನ್ನು ನೀನು ತಿಳಿಸಬೇಕು. ನಿನ್ನ ಮಾತಿನಂತೆ ನಡೆಸುವೆವು” ಎಂದರು. ಇವರ ಮಾತನ್ನು ಕೇಳಿ ಆ ಕಣಿಕನು ಮನಸ್ಸಿನಲ್ಲಿ ತಿಳಿವಿನಿಂದ ಅವರನ್ನು ಕುರಿತು, ರಾಜನೀತಿಶಾಸ್ತ್ರಕ್ಕೆ ಅನುಸಾರವಾದ ಒಂದು ಕೃತ್ರಿಮಸಂಧಾನಗಳನ್ನೇ ಅವರಲ್ಲಿ ತಿಳಿಸಲಾರಂಭಿಸಿದನು. “ರಾಜಾ! ನಾನು ಹೇಳುವುದನ್ನು ಸಾವಧಾನವಾಗಿ ಕೇಳು! ನಾನು ಮುಚ್ಚುಮರೆ

ಯಿಲ್ಲದೆ ಹೇಳುವೆನು. ನನ್ನ ವಿಷಯದಲ್ಲಿ ಆಮೇಲೆ ನೀವು ಕೋಪಿಸ ಬಾರದು. ರಾಜನಾದವನು ತನ್ನ ಕ್ಷೇಮವನ್ನು ಬಯಸುವವನಾದರೆ, ಯಾವಾಗಲೂ ದಂಡೋಪಾಯಕ್ಕೆ ಸಿದ್ಧನಾಗಿರಬೇಕು. ಯಾವಾಗಲೂ ಅವನು ತನ್ನ ಪೌರುಷವನ್ನು ಹೊರಪಡಿಸುತ್ತಲೇ ಇರಬೇಕು. ತನ್ನ ಹುಳುಕನ್ನು ಹೊರಕ್ಕೆ ಬಿಡದೆ, ಇತರರ (ಶತ್ರುಗಳ) ಹುಳುಕನ್ನು ಕಂಡು ಹಿಡಿಯುವುದರಲ್ಲಿಯೇ ಆಸಕ್ತನಾಗಿರಬೇಕು. ಇತರರು ಅಶಕ್ತರಾಗಿರುವ ಕಾಲವನ್ನೇ ನಿರೀಕ್ಷಿಸುತಿದ್ದು, ಆಗ ಅವರನ್ನು ಅಡಗಿಸಿಬಿಡಬೇಕು. ಯಾವಾಗಲೂ ದಂಡೋಪಾಯದಲ್ಲಿ ನಿರತನಾದ ರಾಜನನ್ನು ಕಂಡರೆಮಾತ್ರವೇ ಜನರು ಭಯಪಡುವರು. ಆದುದರಿಂದ ಎಲ್ಲಾ ಕಾರ್ಯಗಳನ್ನೂ ರಾಜನು ದಂಡದಿಂದಲೇ ಸಾಧಿಸಬೇಕು. ತನ್ನ ಲೋಪವು ಇತರರಿಗೆ ತಿಳಿಯಬಾರದು. ಇತರರಲ್ಲಿ ಲೋಪವನ್ನು ಕಂಡಾಗ ಅವರಮೇಲೆ ಬೀಳಬೇಕು. ಆಮೆಗಳು ತಮ್ಮ ಅವಯವಗಳನ್ನು ರಹಸ್ಯವಾಗಿ ಬಚ್ಚಿಟ್ಟುಕೊಂಡಿರುವಂತೆ, ರಾಜನು ರಾಜಾಂಗಗಳನ್ನು ರಹಸ್ಯವಾಗಿ ಕಾಪಾಡಿಟ್ಟಿರಬೇಕು. ಯಾವಾಗಲೂ ಬ್ರಾಹ್ಮಣರನ್ನು ಅವಮಾನಗೊಳಿಸದೆ ಆದರಿಸುತ್ತಿರಬೇಕು. (ರಾಜನಾದವನು ಬ್ರಾಹ್ಮಣರಕ್ಷಣೆಗೂ, ದುಷ್ಟನಿಗ್ರಹಕ್ಕೂ ಸೃಷ್ಟಿಸಲ್ಪಟ್ಟಿರುವನು. ಬ್ರಹ್ಮಕ್ಷತ್ರಗಳೆರಡೂ ಒಂದಾಗಿದ್ದಾಗಲೇ ಧರ್ಮವು ವೃದ್ಧಿಹೊಂದುವುದು. ಧರ್ಮವೃದ್ಧಿಯಿಂದಲೇ ಇಹಪರಗಳೆರಡೂ ಸಿದ್ಧಿಸುವುವು. ಆದುರಿಂದ ಧರ್ಮವನ್ನು ಬಿಡಬಾರದು.) ತಪ್ಪುಮಾಡಿದ ಪುರುಷನನ್ನು ಯಾವ ರಾಜನು ದಂಡಿಸದೆ ಮನ್ನಿಸುವನೋ, ಆ ರಾಜನು ಮುಂದೆ ಅವನಿಂದಲೇ ಅವಮಾನವನ್ನು ಹೊಂದುವನು. ಅಪರಾಧಿಗಳನ್ನು ದಂಡಿಸದೆ ಬಿಡುವುದು, ಇಹಪರಗಳೆರಡರಲ್ಲಿಯೂ ಪಾಪಕಾರಣವು. ಯಾವನು ರಾಜನಿಂದ ದೊಡ್ಡ ಐಶ್ವರ್ಯವನ್ನು ಹೊಂದಿ, ಆಮೇಲೆ ರಾಜನನ್ನೇ ವಿರೋಧಿಸುವನೋ, ಅವನನ್ನು ಹಿಡಿದುತಂದು ಸಂಹರಿಸಿ, ಅವನ ಧನವನ್ನೆಲ್ಲ ಬಡಬಗ್ಗರಿಗೆ ಹಂಚಿಬಿಡಬೇಕಾದುದು ರಾಜನ ಕರ್ತವ್ಯವು. ಯಾವುದಾದರೂ ರಾಜಕಾರ್ಯಗಳಲ್ಲಿ ನಿಯಮಿಸಲ್ಪಟ್ಟಿದ್ದವರು, ರಾಜನಿಗೆ ವಶವರ್ತಿಗಳಲ್ಲದೆ ಅತಿಕ್ರಮಿಸಿಹೋಗುವರೆಂದು ತೋರಿದಪಕ್ಷದಲ್ಲಿ, ಒಡನೆಯೇ ಅವರ ಸ್ಥಾನದಲ್ಲಿ ಧರ್ಮಾರ್ಥನಿಪುಣರೂ, ಆಪ್ತರೂ ಆದವ

ರನ್ನು ನಿಯಮಿಸಬೇಕು. ಹೀಗೆ ಹೊಸಬರನ್ನು ನಿಯಮಿಸುವಾಗ, ಅವರಿಂದ ರಾಷ್ಟ್ರಕ್ಕಾಗಲಿ, ನಗರಕ್ಕಾಗಲಿ, ಗ್ರಾಮಗಳಿಗಾಗಲಿ, ಜನಪದಕ್ಕಾಗಲಿ, ಬಾಧೆಯೇನಾದರೂ ಆಗುವುದೇ ಅಥವಾ ಅವರು ಸರಿಯಾಗಿ ನಡೆದುಕೊಳ್ಳುವರೇ ಎಂಬವನ್ನು ಆಗಾಗ ಪರೀಕ್ಷಿಸಿ ಬರುವುದಕ್ಕಾಗಿ, ತನಗೆ ವಿಧೇಯರಾದ ಗೂಢಚಾರರನ್ನು ವೇಷಾಂತರಗಳಿಂದ ಕಳುಹಿಸಿ, ಆ ಸಂಗತಿಯನ್ನು ತಿಳಿಯುತ್ತಿರಬೇಕು. ಅವನಲ್ಲಿ ದೋಷವೇನಾದರೂ ತಿಳಿದರೆ ಅವನ ಧನವನ್ನೆಲ್ಲ ಕಿತ್ತುಕೊಂಡು ಹೊರಡಿಸಿಬಿಡಬೇಕು. ಒಂದು ಕಾರ್ಯವನ್ನಾರಂಭಿಸಿದಮೇಲೆ ಅದನ್ನು ಕ್ರಮವಾಗಿ ಮತ್ತು ಪೂರ್ಣವಾಗಿ ನಡೆಸದೆ ಬಿಡಕೂಡದು. ಕಾಲಿಗೆ ಚುಚ್ಚಿದ ಸಣ್ಣ ಮುಳ್ಳಾದರೂ ಅದನ್ನು ಸರಿಯಾಗಿ ಕತ್ತರಿಸಿ ತೆಗೆಯದಿದ್ದರೆ, ಅದು ಬಹುಕಾಲದವರೆಗೆ ರಕ್ತಸ್ರಾವವನ್ನುಂಟುಮಾಡುತ್ತಲೇ ಇರುವುದು. ಆದುದರಿಂದ ಕಂಟಕಪ್ರಾಯರಾದ ಶತ್ರುಗಳನ್ನು ಕೊಲ್ಲುವುದೇ ಮೇಲೆಂದು ನೀತಿಜ್ಞರು ಹೇಳುವರು. ವೀರನೂ, ನಿಪುಣನೂ ಆದ ಶತ್ರುವು ಆಪತ್ತಿನಲ್ಲಿ ಸಿಕ್ಕಿರುವ ಸಮಯವನ್ನು ನೋಡಿ, ಆಗಲೇ ಚೆನ್ನಾಗಿ ನಿಗ್ರಹಿಸಿ ಓಡಿಸಿಬಿಡಬೇಕೇಹೊರತು, ಆ ವಿಷಯದಲ್ಲಿ ನ್ಯಾಯಾನ್ಯಾಯಗಳನ್ನು ಆಲೋಚಿಸಲೇ ಕೂಡದು. ರಾಜಾ! ಶತ್ರುವು ದುರ್ಬಲನೆಂದು ತೋರಿದ್ದಾಗಲೂ, ಅವನನ್ನು ಅಲಕ್ಷ್ಯವಾಗಿ ಬಿಡಬಾರದು. ಒಂದು ಸಣ್ಣ ಕಿಡಿಯಾಗಿದ್ದರೂ, ತನಗೆ ಸ್ವಲ್ಪ ಆಶ್ರಯವು ಸಿಕ್ಕಿದರೆ, ತನಗೆತಾನೇ ಪ್ರಬಲವಾಗಿ ದೊಡ್ಡ ವನವನ್ನೆಲ್ಲ ದಹಿಸಿಬಿಡುವುದು. ರಾಜನು ತನಗೆ ಎಲ್ಲಾ ಇಂದ್ರಿಯಗಳೂ ಪಟುವಾಗಿದ್ದರೂ, ಕುರುಡನಾಗಿರಬೇಕಾದ ಸಂದರ್ಭದಲ್ಲಿ ಕುರುಡನಾಗಿರಬೇಕು. ಕಿವುಡನಾಗಿರಬೇಕಾದ ಸಂದರ್ಭದಲ್ಲಿ ಕಿವುಡನಾಗಿರಬೇಕು. ಬಿಲ್ಲನ್ನು ಕೆಲವು ಸಮಯಗಳಲ್ಲಿ ಹುಲ್ಲಿನಂತೆ ನಿಷ್ಪ್ರಯೋಜನವಾಗಿ ಬಿಟ್ಟುಬಿಡಬೇಕು. ಜಿಂಕೆಯಂತೆ ಬಹಳ ಎಚ್ಚರಿಕೆಯಿಂದ ಮಲಗಬೇಕು. ಸಾಮಾದ್ಯುಪಾಯಗಳಿಂದ ಶತ್ರುಗಳನ್ನು ವಶಮಾಡಿಕೊಂಡು, ಅವನು ಕೈಗೆ ಸಿಕ್ಕಿರುವಾಗ ಕೊಂದುಬಿಡಬೇಕು. ಶತ್ರುವು ತನಗೆ ಶರಣಾಗತನಾದನೆಂದು ದಯೆತೋರಿಸಿ ಸುಮ್ಮನೆ ಬಿಡಬಾರದು. ಅವನಿಗಾಗಿ ಸದಾ ಭಯಪಡುತ್ತಲೇ ಇರಬೇಕಾಗುವುದು. ಅವನನ್ನು ಕೊಂದರೆ, ಆಮೇಲೆ ನಿರ್ಭಯವಾಗಿರಬಹುದು.

ಶತ್ರುವನ್ನೂ, ಹಿಂದೆ ತನಗೆ ಅಪಕಾರಮಾಡಿದವನನ್ನೂ, ಮೊದಲು ದಾನಾದಿಗಳಿಂದ ವಶೀಕರಿಸಿಕೊಂಡು, ಆಮೇಲೆ ಕೊಲ್ಲಬೇಕು. ಶತ್ರುಪಕ್ಷದಲ್ಲಿರುವ ಪ್ರಭೂತ್ಸಾಹ ಮಂತ್ರಶಕ್ತಿಗಳೆಂಬಿವು ಮೂರನ್ನೂ, ಮಂತ್ರಿ, ರಾಷ್ಟ್ರ. ದುರ್ಗ, ಕೋಶ, ಸೇನೆಗಳೆಂಬೀ ಐದನ್ನೂ, ರಾಜ್ಯದ ಸಪ್ತಾಂಗಗಳನ್ನೂ, ಕೆಡಿಸಬೇಕು. ಮೊದಲು ಶತ್ರುಪಕ್ಷಕ್ಕೆ ಬೇರಿನಂತಿರುವ ರಾಜನನ್ನೇ ಸರ್ವಪ್ರಯತ್ನದಿಂದಲೂ ತೀರಿಸಿಬಿಡಬೇಕು. ಮೊದಲು ಅವನನ್ನು ತೀರಿಸಿ, ಆಮೇಲೆ ಅವನ ಸಹಾಯಕರನ್ನೂ, ಅವನ ಕಡೆಯವರನ್ನೂ, ಕ್ರಮವಾಗಿ ನಾಶಮಾಡುತ್ತಾ ಬರಬೇಕು. ಮುಖ್ಯವಾಗಿ ಬೇರನ್ನು ಕಡಿದು ಬಿಟ್ಟರೆ, ಶಾಖೆಗಳಂತೆ ಅದನ್ನಾಶ್ರಯಿಸಿದ ಇತರರೆಲ್ಲರೂ ಸತ್ತಹಾಗೆಯೇ ! ಬುಡವನ್ನು ಕಡಿದಮೇಲೆ ಕೊಂಬೆಗಳು ಹೇಗೆತಾನೇ ಉಳಿಯುವುವು. ರಾಜನು ತನ್ನ ರಹಸ್ಯವನ್ನು ಹೊರಪಡಿಸದೆ, ಶತ್ರುವಿನ ರಹಸ್ಯವನ್ನು ತಿಳಿದುಕೊಳ್ಳುತ್ತಲೇ ಇರಬೇಕು. ಶತ್ರುಗಳ ವಿಷಯದಲ್ಲಿ ಯಾವಾಗಲೂ ಭಯಪಟ್ಟು ಎಚ್ಚರಿಕೆಯಿಂದಿರಬೇಕು ಅಗ್ನಿಹೋತ್ರಗಳನ್ನು ನಡೆಸುವುದು, ಯಾಗವನ್ನು ಮಾಡುವುದು, ಕಾವಿಬಟ್ಟೆಯನ್ನುಡುವುದು, ಜಡೆಯನ್ನು ಬೆಳೆಸುವುದು, ನಾರುಮಡಿಗಳನ್ನುಡುವುದು, ಇಂತಹ ವಿರಕ್ತವೇಷಗಳಿಂದ ಇತರರನ್ನು ನಂಬಿಸಿ, ಅವರು ಎಚ್ಚರತಪ್ಪಿದಾಗ ತೋಳದಂತೆ ಮೇಲೆಬಿದ್ದು, ಅವರನ್ನು ತೀರಿಸಿಬಿಡಬೇಕು. ಧನಸಂಪಾದನೆಗೂ, ಅಗ್ನಿಹೋತ್ರಾದಿನಟನೆಗಳೇ ಕೊಕ್ಕೆಯ ಕೋಲುಗಳೆಂದು ತಿಳಿ ! ಮರದ ಶಾಖೆಯನ್ನು ಕೊಕ್ಕೆಯ ಕೋಲನಿಂದ ಬಗ್ಗಿಸಿಕೊಂಡು, ಮಾಗಿದ ಹಣ್ಣುಗಳನ್ನು ಕಿತ್ತುಕೊಳ್ಳುವಂತೆ, ನಟನೆಗಳಿಂದಲೇ ಬೇರೆಯವರನ್ನು ನಂಬಿಸಿ, ಅವರಲ್ಲಿರುವ ಹಣವನ್ನು ಕಿತ್ತುಕೊಳ್ಳಬೇಕು. ಬುದ್ಧಿಶಾಲಿಯಾದವನು ಸ್ವಕಾರ್ಯಸಾಧನೆಗಾಗಿ ಮಾಡತಕ್ಕ ಉಪಾಯವೇ ಇದು. ಆತನು ಅನುಕೂಲವು ಬರುವವರೆಗೂ ಶತ್ರುವನ್ನು ತನ್ನ ಹೆಗಲಮೇಲೆ ಹೊತ್ತುಕೊಂಡಿದ್ದು, ತನಗೆ ಅನುಕೂಲಕಾಲವು ಬಂದೊಡನೆ ಗಡಿಗೆಯನ್ನು ಕಲ್ಲಿನಮೇಲೆ ಹಾಕಿ ಒಡೆಯುವಂತೆ, ಅವನನ್ನು ಎತ್ತಿಹಾಕಿ ಕೊಲ್ಲಬೇಕು. ಶತ್ರುವು ಎಷ್ಟೇ ನಯವಾದ ಮಾತುಗಳನ್ನಾಡಿದರೂ ಅವನನ್ನು ನಂಬಿರಬಾರದು. ಅವನಲ್ಲಿ ದಯೆಯನ್ನೂ ತೋರಿಸಬಾರದು. ಹಣಕೊಟ್ಟಾಗಲಿ,

ಒಳ್ಳೆಯ ಮಾತಿನಿಂದಾಗಲಿ ಅವನನ್ನು ಮೂಲ ನಾಶಮಾಡಬೇಕು. ಸಾಮ ದಿಂದಲೋ, ದಾನದಿಂದಲೋ, ಭೇದದಿಂದಲೋ, ದಂಡೋಪಾಯದಿಂದ ಲೋ, ಕೆಲವುವೇಳೆ ಈ ಎಲ್ಲಾ ಉಪಾಯಗಳನ್ನೂ ಮಾಡಿಯೋ ಶತ್ರು ವನ್ನಡಗಿಸಬೇಕು" ಎಂದನು.

ಆಗ ಧೃತರಾಷ್ಟ್ರನು "ಅಮಾತ್ಯಾ! ಶತ್ರುವನ್ನು ಸಾಮದಾನ, ಭೇದ ದಂಡೋಪಾಯಗಳಿಂದ ಅಡಗಿಸುವ ಕ್ರಮವೇನು?" ಎನಲು, ಕಣಿಕನು "ಎ ಮಹಾರಾಜಾ! ಪೂರ್ವಕಾಲದಲ್ಲಿ ಮರ್ಮವನ್ನರಿತ ಒಂದು ನರಿಯು, ಮಾಡಿದ ತಂತ್ರವನ್ನು ಇದಕ್ಕೆ ನಿದರ್ಶನವಾಗಿ ಹೇಳುವೆನು ಕೇಳು. ಸ್ವಕಾರ್ಯಸಾಧನೆಯಲ್ಲಿ ತಂತ್ರಿಯಾದ ಒಂದು ನರಿಯು ಕಾಡಿ ನಲ್ಲಿ ವಾಸಿಸುತಿತ್ತು. ಆ ನರಿಗೆ ಒಂದು ಹುಲಿ, ಒಂದು ಇಲಿ, ಒಂದು ತೋಳ, ಒಂದು ಮುಂಗುಸಿ ಇವುಗಳೊಡನೆ ಮೈತ್ರಿಯಿದ್ದಿತು. ಇವೆಲ್ಲವೂ ಒಗ್ಗಟ್ಟಾಗಿ ಕಾಡಿನಲ್ಲಿ ಆಹಾರವನ್ನು ಹುಡುಕುತಿದ್ದುವು. ಒಮ್ಮೆ ಇವು ಕಾಡಿನಲ್ಲಿ ತಿರುಗುವಾಗ, ಒಳ್ಳೇ ಬಲಶಾಲಿಗಳಾದ ಒಂದು ಮೃಗಗಳ ಹಿಂಡಿ ನ ಪ್ರಧಾನಮೃಗವನ್ನು ಕಂಡಿತು. ಅದನ್ನು ಹಿಡಿದು ತಿನ್ನಬೇಕೆಂದು ಇವೆ ಲ್ಲಕ್ಕೂ ಆಶೆ ಹುಟ್ಟಿತು. ಆ ಕಾರ್ಯಕ್ಕೆ ತಮಗೆ ಶಕ್ತಿಯಿಲ್ಲದುದರಿಂದ ಅವೆಲ್ಲವೂ ಕೂಡಿ ಆಲೋಚಿಸತೊಡಗಿದುವು. ಆಗ ನರಿಯು ಹುಲಿಯನ್ನು ನೋಡಿ "ಎಲೈ ಮಿತ್ರನೇ! ನೀನು ಹಿಂದೆ ಹಲವು ಸಾರಿ ಈ ಕಾಡಿನಲ್ಲಿ ಇದೇ ಮೃಗವನ್ನು ಕೊಲ್ಲುವುದಕ್ಕಾಗಿ ಪ್ರಯತ್ನಿಸಿದೆಯಲ್ಲವೆ? ಆ ಮೃಗವು ಇನ್ನೂ ಪ್ರಾಯವುಳ್ಳದು. ಅದಕ್ಕೆ ವೇಗವೂ, ಬುದ್ಧಿಯೂ ಹೆಚ್ಚಾಗಿರು ವುದು. ಆದುದರಿಂದ ಅದನ್ನು ನಿನ್ನಿಂದ ಹಿಡಿಯಲು ಸಾಧ್ಯವಾಗಲಿಲ್ಲ. ಇದಕ್ಕಾಗಿ ನಾನೊಂದು ಉಪಾಯವನ್ನು ಹೇಳುವೆನು. ಆ ಮೃಗವು ಮಲಗಿರುವಾಗ, ನಮ್ಮ ಸ್ನೇಹಿತನಾದ ಇಲಿಯು ಮೆಲ್ಲಗೆ ಹೋಗಿ ಅದರ ಕಾಲನ್ನು ಕಚ್ಚಿಬಿಡಲಿ. ಆಮೇಲೆ ನೀನು ಅದನ್ನು ಹಿಡಿದು ಕೊಂದು ಬಿಡು. ಆಮೇಲೆ ನಾವೆಲ್ಲರೂ ಸೇರಿ ಸಂತೋಷದಿಂದ ಸಹಭೋಜನ ಮಾಡುವೆವು" ಎಂದಿತು. ನರಿಯ ಮಾತಿಗೆ ಅವೆಲ್ಲವೂ ಏಕವಾಕ್ಯದಿಂದ ಸಮ್ಮತಿಸಿದುವು. ಇಲಿಯು ಮಲಗಿ ನಿದ್ರೆಮಾಡುತಿದ್ದ ಮೃಗದ ಕಾಲನ್ನು

ಕಚ್ಚಿ ಬಿಟ್ಟಿತು. ಓಡಲಾರದೆ ಹೋದ ಆ ಮೃಗವನ್ನು ಹುಲಿಯು ಆಗಲೇ ಕೊಂದುಬಿಟ್ಟಿತು. ಮೃಗವು ಸತ್ತು ಬಿದ್ದ ಮೇಲೆ, ನರಿಯು ಇತರ ಸ್ನೇಹಿ ರನ್ನು ನೋಡಿ "ಎಲೈ ಮಿತ್ರರೇ! ಇಲ್ಲಿ ನಾನು ಕಾದಿರುವೆನು. ಬೇಗ ನೆ ನೀವೆಲ್ಲರೂ ಸ್ನಾನಮಾಡಿ ಬನ್ನಿರಿ. ಆಮೇಲೆ ನಾನು ಸ್ನಾನಕ್ಕೆ ಹೋ ಗುವೆನು. ಮುಖ್ಯವಾಗಿ ಇದಕ್ಕಾಗಿ ಶ್ರಮಪಟ್ಟ ನೀವು ಸುಖವಾಗಿರಬೇ ಕು" ಎಂದಿತು. ಒಡನೆಯೇ ಅವೆಲ್ಲವೂ ನದಿಗೆ ಸ್ನಾನಕ್ಕಾಗಿ ಹೊರಟು ಹೋದುವು. ಆಗ ನರಿಯು ಅಲ್ಲಿಯೇ ಕುಳಿತು ಏನನ್ನೋ ಚಿಂತಿಸು ತಿತ್ತು. ಇಷ್ಟರಲ್ಲಿ ಹುಲಿಯು ಆತುರದಿಂದ ಸ್ನಾನಮಾಡಿ ಬಂದು, ಅಲ್ಲಿ ಚಿಂತಾಕುಲವಾಗಿ ಕುಳಿತಿದ್ದ ನರಿಯನ್ನು ನೋಡಿ "ಓಹೋ! ಮಿತ್ರನೆ! ಏತಕ್ಕಾಗಿ ವ್ಯಸನಪಡುವೆ? ನಮ್ಮೆಲ್ಲರಲ್ಲಿಯೂ ನೀನೇ ಬುದ್ಧಿಶಾಲಿ. ಈಗ ನಾವೆಲ್ಲರೂ ಸೇರಿ ಇದರ ಮಾಂಸವನ್ನು ಪುಷ್ಕಲವಾಗಿ ತಿಂದು ವಿನೋದಿಸ ಬಹುದಲ್ಲವೆ?" ಎಂದಿತು. ಅದಕ್ಕಾ ನರಿಯು 'ಎಲೈ ಮಹಾವೀರನೇ! ನಾನೇನು ಹೇಳಲಿ! ನೀವು ಹೊರಟುಹೋದಮೇಲೆ ಬಹಳ ಮಿತ್ರನಂತೆ ನಟಿಸುತಿದ್ದ ಇಲಿಯು ನಿನ್ನ ವಿಷಯವಾಗಿ ಹೇಳಿದ ಮಾತನ್ನು ನಾನು ಬಾಯಿಂದ ಹೇಳಲಾರೆನು. "ಮೃಗಗಳಿಗೆಲ್ಲ ತಾನೇ ರಾಜನೆನಿಸಿಕೊಂಡ ಹುಲಿಯ ಪರಾಕ್ರಮವು ಏನೂ ಪ್ರಯೋಜನಕ್ಕೆ ಬಂದುದಲ್ಲ! ಆ ದೊಡ್ಡ ಮೃಗವನ್ನು ಕೊಲ್ಲುವುದಕ್ಕೆ ನಾನೇ ಬರಬೇಕಾಯಿತು. ನನ್ನ ಪರಾಕ್ರಮ ದಿಂದಲೇ ಈಗ ಹುಲಿಯೂ, ತನ್ನ ಹಸಿವನ್ನು ತೀರಿಸಿಕೊಳ್ಳುವುದು" ಎಂ ದು ನಿನ್ನನ್ನು ಬಹಳವಾಗಿ ನಿಂದಿಸಿತು. ಆ ಇಲಿಯು ಹೇಳಿದ ಮಾತನ್ನು ಕೇಳಿದಮೇಲೆ ನನಗೂ ಆ ಆಹಾರವನ್ನು ತಿನ್ನುವುದಕ್ಕೇ ಇಷ್ಟವಿಲ್ಲ" ಎಂ ದಿತು. ಇದನ್ನು ಕೇಳಿದೊಡನೆ ಹುಲಿಯು, ಒಂದಾವರ್ತಿ ಕೋಪದಿಂದ ಗರ್ಜಿಸಿ, "ಆಹಾ! ಇಲಿಯು ನನ್ನನ್ನು ಕುರಿತು ಹೀಗೆ ಹೇಳಿತೇ? ಮೊ ದಲೇ ನೀನು ನನಗೆ ಈ ಸಂಗತಿಯನ್ನು ತಿಳಿಸಿದುದು ಬಹಳ ಒಳ್ಳೆಯ ದಾಯಿತು. ಇರಲಿ! ಮೊದಲು ಆ ತುಚ್ಛಪ್ರಾಣಿಯಾದ ಇಲಿಯು ಕಚ್ಚಿ ಎಂಜಲುಮಾಡಿದ ಈ ಆಹಾರವು ನನಗೂ ಬೇಡ! ನಾನು ನನ್ನ ಕೈಯಿಂದಲೇ ಕಾಡಿನಲ್ಲಿ ಬೇರೆ ಮೃಗಗಳನ್ನು ಕೊಂದು, ಆಹಾರ ವನ್ನು ಸಂಪಾದಿಸಿಕೊಳ್ಳುವೆನು" ಎಂದು ಹೇಳಿ ಅಲ್ಲಿಂದ ಹೊರಟುಹೋ

ಯಿತು. ಅತ್ತಲಾಗಿ ಹುಲಿಯು ಹೊರಟುಹೋದಮೇಲೆ, ಇಲಿಯು ನರಿಯಬಳಿಗೆ ಬಂದು ಸೇರಿತು. ಆಗ ನರಿಯು ಇಲಿಯನ್ನು ಕುರಿತು "ಎಲೈ ಮಿತ್ರನೆ! ನಿನಗೆ ಕ್ಷೇಮವಾಗಲಿ! ಈಗಲೇ ಮುಂಗುಸಿಯು ಬಂದು, ಈ ಮೃಗವನ್ನು ನೋಡಿ, "ತಾನು ಜಿಂಕೆಯ ಮಾಂಸವನ್ನು ತಿನ್ನುವುದಿಲ್ಲವೆಂದೂ, ಅದು ವಿಷವೆಂದೂ, ಅದು ತನಗೆ ಸೇರದೆಂದೂ ಹೇಳಿತು. ಅದಕ್ಕೆ ಇಲಿಯನ್ನು ತಿನ್ನುವುದರಲ್ಲಿ ಪ್ರಿಯವಂತೆ. ಅದಕ್ಕಾಗಿ ನಿನ್ನನ್ನು ತಿನ್ನುವುದಕ್ಕೆ ನನ್ನ ಅನುಮತಿಯನ್ನು ಕೇಳಿತು" ಎಂದಿತು. ಈ ಮಾತನ್ನು ಕೇಳಿದೊಡನೆ, ಇಲಿಯು ತಾನು ಬದುಕಿದರೆ ಸಾಕೆಂದು ಭಯಪಟ್ಟು, ಸಮೀಪದಲ್ಲಿದ್ದ ಬಿಲದಲ್ಲಿ ಹೊಕ್ಕುಬಿಟ್ಟಿತು. ಆಮೇಲೆ ತೋಳವು ಸ್ನಾನಮಾಡಿಕೊಂಡು ಬರಲು, ನರಿಯು ಅದನ್ನು ನೋಡಿ, "ಓ ವೃಕರಾಜಾ! ಹುಲಿಗೆ ನಿನ್ನಮೇಲೆ ಬಹಳ ಕೋಪವುಂಟಾಗಿದೆ. ನೀನು ಇಲ್ಲಿದ್ದರೆ ನಿನಗೆ ಕ್ಷೇಮವುಂಟಾಗದು. ಅದು ಹೆಣ್ಣು ಹುಲಿಯೊಡನೆ ಈಗಲೇ ಇಲ್ಲಿಗೆ ಬರುವುದು. ಇದರಮೇಲೆ ನಿನಗೆ ಹೇಗೆ ತೋರುವುದೋ ಹಾಗೆ ನಡೆಸು" ಎಂದಿತು. ಈ ಮಾತನ್ನು ಕೇಳಿ ತೋಳವು ಭಯದಿಂದ ಮೈಯನ್ನುಡುಗಿಸಿಕೊಂಡು ಹಿಂದೆ ನೋಡದೆ ಓಡಿಹೋಯಿತು. ಆಮೇಲೆ ಮುಂಗುಸಿಯು ಸ್ನಾನಮಾಡಿಕೊಂಡು ಬಂದಿತು. ನರಿಯು ಅದನ್ನು ನೋಡಿ, "ಓ ಮುಂಗುಸೀ! ಈಗ ನಮ್ಮ ಮಿತ್ರರೆಲ್ಲರೂ, ಒಬ್ಬೊಬ್ಬರಾಗಿ ಬಂದು, ನನ್ನೊಡನೆ ಜಗಳಮಾಡಿ, ನನ್ನ ಭುಜಬಲದ ಮುಂದೆ ನಿಲ್ಲಲಾರದೆ, ಈ ಆಹಾರವನ್ನು ಬಿಟ್ಟು ಓಡಿಹೋದರು. ಈಗ ನೀನೂ ನನ್ನೊಡನೆ ದ್ವಂದ್ವಯುದ್ಧಕ್ಕೆ ನಿಂತು, ನನ್ನನ್ನು ಜಯಿಸಿದರೆ, ನೀನೊಬ್ಬನೇ ಬೇಕಾದಹಾಗೆ ಇದರ ಮಾಂಸವನ್ನು ತಿನ್ನಬಹುದು" ಎಂದಿತು. ಆಗ ಮುಂಗುಸಿಯು "ಎಲೆ ಜಂಬುಕವೇ! ಮೃಗರಾಜನೆನಿಸಿದ ಹುಲಿಯನ್ನೂ, ತೋಳನನ್ನೂ, ಒಳ್ಳೇ ಬುದ್ಧಿಶಾಲಿಯಾದ ಇಲಿಯನ್ನೂ ಜಯಿಸಿ ವೀರಾಧಿವೀರನೆನೆಸಿಕೊಂಡ ನಿನ್ನೊಡನೆ ನಿಂತು ಯುದ್ಧಮಾಡುವುದಕ್ಕೆ ನನಗೆ ಹೇಗೆ ತಾನೇ ಧೈರ್ಯವಿದೆ? ನನಗೆ ಈ ಯುದ್ಧವೂ ಬೇಡ. ಈ ಮೃಗದ ಮಾಂಸವೂ ಬೇಡ" ಎಂದು ಹೇಳಿ ಹೊರಟುಹೋಯಿತು. ಹೀಗೆ ಅವೆಲ್ಲವೂ

ಬಿಟ್ಟುಹೋದಮೇಲೆ, ನರಿಯು ಸಂತೋಷದಿಂದ ತಾನೊಂದೇ ನಿಶ್ಚಿಂತ ವಾಗಿ ಕುಳಿತು, ಆ ಮಾಂಸವನ್ನು ಪುಷ್ಕಲವಾಗಿ ಭೋಜನಮಾಡಿತು.

ಓ ರಾಜೇಂದ್ರಾ! ಹೀಗೆ ಯಾವನು ಒಳ್ಳೇ ಯುಕ್ತಿಯಿಂದ ಮಂ ತ್ರಾಲೋಚನೆಯನ್ನು ನಿಶ್ಚಯಿಸಿಕೊಂಡು, ಕೆಲಸವನ್ನು ಸಾಧಿಸುವನೋ ಅಂತಹ ದೊರೆಯು ಸೌಖ್ಯದಿಂದ ವೃದ್ಧಿಗೆ ಬರುವನು. ಭಯಸ್ವಭಾವ ವುಳ್ಳವನಿಗೆ ಭಯವನ್ನು ತೋರಿಸಬೇಕು. ಶೂರನಾದವನಿಗೆ ಕೈಮುಗಿದು ಅವನನ್ನು ವಶಮಾಡಿಕೊಳ್ಳಬೇಕು. ಹಣದಾಸೆಯುಳ್ಳವನನ್ನು ಹಣದಿಂದ ವಶಮಾಡಿಕೊಳ್ಳಬೇಕು. ಸಮಾನ ಬಲವುಳ್ಳವನನ್ನೂ, ತನಗಿಂತಲೂ ದುರ್ಬಲನನ್ನೂ ತನ್ನ ಪರಾಕ್ರಮದಿಂದ ಅಡಗಿಸಬೇಕು. ರಾಜಾ! ಮ ತ್ತೊಂದು ವಿಷಯವನ್ನು ಹೇಳುವೆನು ಕೇಳು! ಶತ್ರುಪಕ್ಷದಲ್ಲಿ ರತಕ್ಕವ ನು ಹೊಟ್ಟೆಯಲ್ಲಿ ಹುಟ್ಟಿದ ಮಗನಾಗಿದ್ದರೂ, ಸ್ನೇಹಿತನಾಗಿದ್ದರೂ, ಸಹೋದರನಾಗಿದ್ದರೂ, ತಂದೆಯಾಗಿದ್ದರೂ, ಕೊನೆಗೆ ಗುರುವಾಗಿದ್ದರೂ ತನ್ನ ಮೇಲ್ಮೆಯನ್ನು ಕೋರತಕ್ಕವನು ಅಂತವರನ್ನು ಕೊಂದೇ ಬಿಡ ಬೇಕು. ಶತ್ರುವನ್ನು ಕಾಪಾಡುವುದಾಗಿ ಪ್ರತಿಜ್ಞೆಮಾಡಿ ಆಸೆತೋರಿಸಿಯಾ ದರೂ, ಹಣವನ್ನು ಕೊಟ್ಟಾದರೂ, ಮೊದಲು ತನಗೆ ವಶಮಾಡಿಕೊಂಡು, ಆಮೇಲೆ ಕೊಂದುಬಿಡಬೇಕು. ವಿಷದಿಂದಾಗಲಿ, ವಂಚನೆಯಿಂದಾಗಲಿ ಶತ್ರುವನ್ನು ಕೊಲ್ಲಬೇಕೇಹೊರತು ಉಪೇಕ್ಷಿಸಲೇ ಬಾರದು. ಅನ್ಯೋ ನ್ಯ ವಿರೋಧಿಗಳಲ್ಲಿ ಯಾರು ಜಯಿಸುವರೆಂಬ ಸಂದೇಹವುಂಟಾದರೂ ಅದ ರಲ್ಲಿ ಈಗ ನಾನು ಹೇಳಿದ ವಿಷಯಗಳಲ್ಲಿ ಯಾವನು ಅಕ್ಕರೆಯುಳ್ಳವನೋ ಅವನೇ ಮುಂದಕ್ಕೆ ಬರುವನು. ಕಾರ್ಯಾಕಾರ್ಯಗಳನ್ನರಿಯದೆ ಗರ್ವ ದಿಂದ ದುರ್ಮಾರ್ಗಗಳಲ್ಲಿ ಹೋಗತಕ್ಕವನು ಗುರುವಾಗಿದ್ದರೂ, ಅವನನ್ನು ದಂಡಿಸಬೇಕಾದುದೇ ನ್ಯಾಯವು. ಮನಸ್ಸಿನಲ್ಲಿ ಕೋಪವಿದ್ದರೂ, ಕೋಪ ವಿಲ್ಲದವನಂತೆ ನಗುತ್ತಾ ಮಾತನಾಡುತ್ತಿರಬೇಕು. ತಾನು ಕೋಪಗೊಂ ಡಂತೆ ಶತ್ರುಗಳಿಗೆ ತಿಳಿಯಲೇ ಬಾರದು. ಕೋಪವಿದ್ದಾಗಲೂ ಶತ್ರುವನ್ನು ತಿರಸ್ಕರಿಸಿ ಮಾತನಾಡಬಾರದು. ಶತ್ರುವನ್ನು ಹೊಡೆಯುತ್ತಿರುವಾಗಲೂ, ಹೊಡೆದ ಮೇಲೆಯೂ ಬಾಯಲ್ಲಿಮಾತ್ರ ಪ್ರಿಯವನ್ನೇ ನುಡಿಯುತ, ಅವ

ನ ಪೆಟ್ಟಿಗಾಗಿ ತಾನು ದುಃಖಿಸುವಂತೆಯೂ,ಅಳುವಂತೆಯೂ ನಟಿಸಿ ಸಮಾಧಾನಗೊಳಿಸಬೇಕು. ಪ್ರಿಯವಾಕ್ಯದಿಂದಲೋ, ಧರ್ಮದಿಂದಲೋ, ಅರ್ಥದಿಂದಲೋ ಅವನಿಗೆ ತನ್ನಲ್ಲಿ ನಂಬಿಕೆ ಹುಟ್ಟುವಂತೆ ಮಾಡಿಕೊಳ್ಳಬೇಕು. ಆ ಶತ್ರುವು ಎಚ್ಚರತಪ್ಪಿದಾಗ ಒಳ್ಳೇ ಸಮಯವನ್ನು ನೋಡಿ, ಕೊಂದು ಬಿಡಬೇಕು. ಒಂದುವೇಳೆ ದೊಡ್ಡ ಅಪರಾಧವನ್ನು ಮಾಡಿದ್ದರೂ, ಧರ್ಮವನ್ನಾಶ್ರಯಿಸಿರತಕ್ಕನಿಗೆ ಕಾಲಮೇಘಗಳಿಂದ ಪರ್ವತವು ಹೇಗೋ ಹಾಗೆ ಆ ದೋಷವು ಹೊರಗೆ ಕಾಣಿಸಲಾರದು. ಯಾವನನ್ನು ನಾವು ಕೊಲ್ಲಬೇಕೆಂದೆಣಿಸುವೆವೋ ಅಂತಹನ ಮನೆಗೆ ಬೆಂಕಿಯನ್ನಾದರೂ ಇಡಬೇಕು. ಇಲ್ಲವೇ ಧನಾಶೆಯುಳ್ಳವರೂ, ನಾಸ್ತಿಕರೂ, ಚೋರರೂ ಆದವರನ್ನು ಕರೆದು ಅವರ ಮೂಲಕವಾಗಿ ಶತ್ರುಗಳಿಗೆ ವಿಷವನ್ನು ಕೊಡಿಸಬೇಕು. ಶತ್ರುವು ಕಾಣಿಸಿದಾಗ ಅವನಲ್ಲಿ ಬಹಳ ಪ್ರೇಮವುಳ್ಳವನಂತೆ ನಟಿಸಿ, ಇದಿರೆದ್ದು ಆಸನವನ್ನು ಕೊಟ್ಟು, ಉಪಚಾರಗಳನ್ನೆಲ್ಲ ಮಾಡಿ, ಅವನಿಗೆ ಬಹುಮಾನವನ್ನೂ ಕೊಟ್ಟು, ನಂಬಿಕೆಹುಟ್ಟಿಸಿದಮೇಲೆ, ಪೂರ್ಣವಾಗಿ ನಮ್ಮನ್ನು ನಂಬಿದ ಆ ಶತ್ರುವನ್ನು ಸರ್ಪಗಳು ತಲೆತಗ್ಗಿಸಿ ತನ್ನ ವಿಷದ ಹಲ್ಲುಗಳಿಂದ ಕೊಲ್ಲುವಂತೆ ನಮ್ರತೆಯಿಂದಲೇ ಅವನನ್ನು ಕೊಂದುಬಿಡಬೇಕು. ತನ್ನಲ್ಲಿ ಶಂಕೆಯುಳ್ಳವರಾಗಿರಲಿ, ಶಂಕೆಯಿಲ್ಲದವರಾಗಿರಲಿ, ಅವರ ವಿಷಯದಲ್ಲಿ ತಾನುಮಾತ್ರ ನಂಬಿಕೆಯಿಂದಿರದೆ, ಯಾವಾಗಲೂ ಶಂಕೆಯುಳ್ಳವನಾಗಿಯೇ ಇರಬೇಕು. ನಾವು ನಂಬಿಕೆಯಿಂದ ನಂಬಿದ ಶತ್ರುಗಳಿಂದ ನಮಗುಂಟಾಗುವ ಭಯವು ನಿರ್ಮೂಲವಾಗಿ ನಮ್ಮನ್ನು ನಾಶಮಾಡಿ ಬಿಡುವುದು. ಆದುದರಿಂದ ಯಾರಲ್ಲಿಯೂ ನಿಶ್ಶಂಕೆಯಿಂದ ಧೈರ್ಯಗೊಂಡಿರಬಾರದು. ನಮ್ಮನ್ನು ನಂಬಿದವರನ್ನೂ ನಾವು ಅಧಿಕವಾಗಿ ನಂಬಿ ಬಿಡಬಾರದು. ನಂಬಿಕೆಯಿಂದ ಉಂಟಾಗತಕ್ಕ ಹಾನಿಯು ಮೂಲನಾಶಕ್ಕೆ ಕಾರಣವಾಗುವುದು. ತನ್ನ ದೇಶದಲ್ಲಿಯೂ, ಇತರ ದೇಶಗಳಲ್ಲಿಯೂ, ಚೆನ್ನಾಗಿ ಪರೀಕ್ಷಿಸಲ್ಪಟ್ಟ ಗೂಢಚಾರರನ್ನು ನಿಯಮಿಸಬೇಕು. ಪಾಷಂಡರು, ಋಷಿಗಳು, ಮೊದಲಾದವರನ್ನುಕೂಡ ರಹಸ್ಯವಾಗಿ ಪರರಾಷ್ಟ್ರಗಳಿಗೆ ಗೂಢಚಾರರನ್ನಾಗಿ ಕಳುಹಿಸಬೇಕು. ಈ ಗೂಢಚಾರರನ್ನು ಅಲ್ಲಲ್ಲಿನ ಉದ್ಯಾನಗಳಲ್ಲಿಯೂ, ವಿಹಾರಸ್ಥಾನಗಳಲ್ಲಿಯೂ, ಚೈತ್ಯಗಳು, ದೇವಾಲಯಗಳು

ಅರವಟಿಗೆಗಳು, ರಾಜಬೀದಿಗಳು, *ಪುಣ್ಯತೀರ್ಥಗಳು, ನಾಲ್ಕು ಬೀದಿಗಳು ಕೂಡತಕ್ಕ ಚೌಕಗಳು, ಕೊಳದ ತೀರಗಳು, ಬಾವಿಗಳು, ಪರ್ವತಾರಣ್ಯಗಳು, ಜನಗಳ ಕೂಟಗಳು, ನದಿಗಳು, ಇವುಗಳೊಳಗೆಲ್ಲ ಆಗಾಗ ನಡೆಯತಕ್ಕ ಸಂಗತಿಗಳನ್ನು ವಿಚಾರಿಸುವಂತೆ ಚಾರರನ್ನು ನಿಯಮಿಸಬೇಕು. ಮಾತಿನಲ್ಲಿ ವಿನೀತನಾಗಿ ಹೃದಯದಲ್ಲಿ ಕತ್ತಿಯಂತೆ ಕ್ರೂರನಾಗಿರಬೇಕು. ತಾನು ಅತಿಕ್ರೂರಕಾರ್ಯವನ್ನು ಮಾಡುವ ಪ್ರಯತ್ನದಲ್ಲಿದ್ದರೂ, ಮುಖದಲ್ಲಿ ಮುಗುಳ್ನಗೆಯೊಡನೆ ಪ್ರಿಯವಾಕ್ಯವನ್ನೇ ಆಡುತ್ತಿರಬೇಕು. ಕೈಜೋಡಿಸಿ ನಿಲ್ಲುವುದು, ಆಣೆಯಿಟ್ಟು ಶಪಥಮಾಡುವುದು, ಬಹಳ ಪ್ರಿಯವಾದ ಮಾತನ್ನು ನುಡಿಯುವುದು, ತಲೆಬಗ್ಗಿ ನಮಸ್ಕಾರಮಾಡುವುದು, ಕಾಲುಗಳನ್ನು ಹಿಡಿಯುವುದು, ಬೇಕಾದುದನ್ನು ಕೊಡುವಹಾಗೆ ಆಸೆಹುಟ್ಟಿಸುವುದು, ಮೊದಲಾದ ಯಾವ ಕಾರ್ಯಗಳಿಗೂ ಹಿಂಜರಿಯದವನೇ ಮುಂದಕ್ಕೆ ಬರುವನು. ಐಶ್ವರ್ಯವನ್ನಪೇಕ್ಷಿಸುವವನು ಸಮಯಕ್ಕೆ ತಕ್ಕಂತೆ ಕಾರ್ಯವನ್ನು ಮಾಡಬೇಕು. ಒಳ್ಳೇ §ಹೂಗಳನ್ನು ತೋರಿಸಿಯೂ, ಹಣ್ಣುಗಳನ್ನು ಕೊಡಬಾರದು. ಒಳ್ಳೇ ಹಣ್ಣುಗಳಿಂದ ತುಂಬಿದ್ದರೂ ಏರುವುದಕ್ಕೆ ಸಾಧ್ಯವಿಲ್ಲದಂತಿರಬೇಕು. ಒಳ್ಳೇ ಪಕ್ವವಾದಹಾಗೆ ತೋರಿಸಿ ಒಳಗೆ ಪಕ್ವವಾಗದೆ ಇರಬೇಕು. ಕಾಯಾಗಿಯೇ ಜೀರ್ಣಿಸಿಹೋಗಬಾರದು. ಧರ್ಮಾರ್ಥಕಾಮಗಳೆಂಬ ತ್ರಿವಿಧದಲ್ಲಿ ಕಷ್ಟಗಳೂ, ಫಲಗಳೂ ಮೂರು ವಿಧವಾಗಿವೆ. ಅವುಗಳಲ್ಲಿ ಫಲಕಾರಿಯಾದ ಮಾರ್ಗಗಳನ್ನು ಗ್ರಹಿಸಿ, ಕಷ್ಟವಾದವುಗಳನ್ನು ದೂರಮಾಡಬೇಕು. ಕೇವಲ ಧರ್ಮವನ್ನೇ ಅಧಿಕವಾಗಿ ನಂಬಿದವನಿಗೆ ಅಧರ್ಮವು ಕೆಲವು ವೇಳೆ ಅರ್ಥಕಾಮ

* ಇಲ್ಲಿ ತೀರ್ಥಗಳೆಂದರೆ ರಾಜನೀತಿ ಶಾಸ್ತ್ರೋಕ್ತಗಳಾದ ಮಂತ್ರಿ, ಪುರೋಹಿತ, ಯುವರಾಜ, ಸೇನಾಪತಿ, ದ್ವಾರಪಾಲಕ, ಅಂತಃಪುರಾಧಿಕಾರಿ, ಕಾರಾಗೃಹಾಧಿಕಾರಿ, ಪ್ರತ್ಯೇಕವಾಗಿ ಹಣದ ಆಯವ್ಯಯಾಧಿಕಾರಿಗಳಿಬ್ಬರು, ಆಜ್ಞಾನಿರ್ವಾಹಕ, ನಗರಾಧಿಕಾರಿ, ಕಾರ್ಯವಿಧಾಯಕನು, ಧರ್ಮಾಧಿಕಾರಿ, ಸಭಾಧ್ಯಕ್ಷನು, ದಂಡಾಧಿಕಾರಿ, ದುರ್ಗಪಾಲಕನು, ಸೀಮಾಪಾಲಕನು, ವನಪಾಲಕನೆಂಬೀ ಅಷ್ಟಾದಶ ತೀರ್ಥಗಳೆಂದೂ ಅರ್ಥಾಂತರವುಂಟು.

§ ಇಲ್ಲಿ ಹೂವೆಂದರೆ ಪ್ರಿಯವಾದ ಮಾತು. ಫಲವೆಂದರೆ ಕಾರ್ಯವೆಂದು ಭಾವವು.

ಗಳನ್ನು ಕೆಡಿಸುವುದರಿಂದ ಕಷ್ಟಕ್ಕೀಡಾಗುವನು. ಅದರಂತೆಯೇ ಕೇವಲ ಧನಲೋಭದಿಂದ ಹಣದಲ್ಲಿಯೇ ಆಶೆಯುಳ್ಳವನಿಗೆ ಧರ್ಮಕಾಮಗಳೆರಡೂ ಕೆಟ್ಟು ಅದರಿಂದ ಕಷ್ಟಕ್ಕೊಳಗಾಗುವನು. ಕೇವಲ ಕಾಮದಾಸೆಯೂ ಇದರಂತೆಯೇ ಧರ್ಮಾರ್ಥಗಳಿಗೆ ಹಾನಿಯನ್ನು ತಂದು ದುಃಖಕಾರಣವಾಗುವುದು. ಅದರಿಂದ ಇವೊಂದಕ್ಕೂ ಹಾನಿಯಿಲ್ಲದಂತೆನೋಡಿಕೊಂಡು, ಯಾವುದರಲ್ಲಿಯೂ ಮಿತಿಮೀರಿ ಹೋಗಬಾರದು. ರಾಜನಾದವನು ಗರ್ವವಿಲ್ಲದೆ ಯಾವಾಗಲೂ ಮೃದುವಾಕ್ಯಗಳನ್ನಾಡುತ್ತ, ಕೋಪವನ್ನು ನಿಗ್ರಹಿಸಿಕೊಂಡು ಸ್ವಪ್ರಯೋಜನವನ್ನು ಗಮನಿಸುತ್ತ, ಶುದ್ಧವಾದ ಬುದ್ಧಿಯಿಂದ ಒಳ್ಳೇ ಬುದ್ಧಿಶಾಲಿಗಳಾದ ಬ್ರಾಹ್ಮಣರೊಡನೆ ಆಲೋಚಿಸಿ, ಕಾರ್ಯಗಳನ್ನು ಮಾಡಬೇಕು. ತಾನು ದೈನ್ಯದೆಸೆಗೆ ಬಂದಾಗ ಮೃದುವಾದ ಕಾರ್ಯವನ್ನೋ, ಕ್ರೂರವಾದ ಕಾರ್ಯವನ್ನೋ ನಡೆಸಿ, ಹೇಗೋ ಒಂದು ವಿಧದಿಂದ ತಾನು ಮೇಲೇರುವುದಕ್ಕೆ ದಾರಿಯನ್ನು ಹುಡುಕಬೇಕು. ತನಗೆ ಶಕ್ತಿಯುಂಟಾದಮೇಲೆ ಧರ್ಮವನ್ನು ಮಾಡಬಹುದು. ಯಾವ ಮನುಷ್ಯನೇ ಆದರೂ, ಪ್ರಾಣಸಂದೇಹಕ್ಕೆ ಗುರಿಯಾಗದೆ ಐಶ್ವರ್ಯವನ್ನು ಕಾಣಲಾರನು. ಆ ಪ್ರಾಣಸಂದೇಹವಿದ್ದಾಗಲೂ, ಅಪಾಯಕ್ಕೀಡಾಗದೆ ಬದುಕಿಕೊಂಡರೆ ಐಶ್ವಯುವನ್ನು ತಾನಾಗಿಯೇ ಅನುಭವಿಸುವನು. ಯಾವನು ಬಹಳ ವ್ಯಸನಕ್ಕೆ ಗುರಿಯಾಗಿ ಕೊರಗುವನೋ, ಅವನಿಗೆ ಹಿಂದೆ ಕಷ್ಟಕ್ಕೊಳಗಾಗಿದ್ದು ಸುಖವನ್ನು ಹೊಂದಿದ ರಾಮ ನಳಾದಿಗಳ ಚರಿತ್ರೆಗಳನ್ನು ಹೇಳಿ ಹುರಿಗೊಳಿಸಬೇಕು. ನಂಬಿಕೆಯಿಲ್ಲದವನನ್ನು ಮುಂದೆ ಲಭಿಸಬಹುದಾದ ಲಾಭಗಳನ್ನು ವರ್ಣಿಸಿ ಉತ್ತೇಜನಗೊಳಿಸಬೇಕು. ಯಾವನು ಶತ್ರುವಿನೊಡನೆ ಸಂಧಿಯನ್ನು ಮಾಡಿಕೊಂಡು ಇನ್ನು ತನಗೆ ಭಯವಿಲ್ಲವೆಂದು ನೆಮ್ಮದಿಯಾಗಿ ಮಲಗುವನೋ, ಅವನು ಮರದ ಮೇಲೇರಿ ಕೊಂಬೆಯಮೇಲೆ ಮಲಗಿದವನು ಮರದಿಂದ ಕೆಳಕ್ಕೆ ಬಿದ್ದ ಮೇಲೆ ಎಚ್ಚರಗೊಂಡು ತನ್ನ ಹಾನಿಯನ್ನು ತಿಳಿಯುವಂತೆಯೇ ಶತ್ರುಗಳಿಂದ ಅಪಾಯಕ್ಕೀಡಾದಮೇಲೆಯೇ ಎಚ್ಚರಗೊಳ್ಳುವನು. ರಾಜನಾದವನು ಯಾವಾಗಲೂ ಕೋಪಿಸದೆ ತಾನು ನಡೆಸಿದ ಮಂತ್ರಾಲೋಚನೆಗಳನ್ನು ರಹಸ್ಯವಾಗಿಯೇ ಇಟ್ಟಿರಬೇಕು. ತನ್ನ ಗೂಢಚಾರನು ತನ್ನೊಡನೆ ಬಂದು

ಮಾತಾಡುವಾಗಲೂ, ತನ್ನ ಆಕಾರವನ್ನು ಅವನಿಗೆ ಹೊರಪಡಿಸದೆ ಮರೆಸಿಡಬೇಕು. ವಿವೇಕಿಯಾದವನು ರಾತ್ರಿಕಾಲಗಳಲ್ಲಿ ಮಂತ್ರಾಲೋಚನೆಯನ್ನು ಮಾಡಬಾರದು. ಅಕ್ಕಪಕ್ಕದಲ್ಲಿ ಯಾರಾದರೂ ಗಮನಿಸುತ್ತಿರುವಾಗಲೂ ಮಂತ್ರಾಲೋಚನೆ ಮಾಡಬಾರದು. ಪ್ರಾಸಾದಶಿಖರಗಳಲ್ಲಿಯೂ ಬೆಟ್ಟದ ತುದಿಯಲ್ಲಿಯೂ, ವಿಶಾಲವಾಗಿಯೂ, ನಿರ್ಜನವಾಗಿಯೂ ಇರುವ ಸ್ಥಳದಲ್ಲಿಯೂ ಸುತ್ತಲೂ ದೂರದಲ್ಲಿ ತನಗೆ ನಂಬಿಕೆಯಾದವರನ್ನು ಕಾವಲಿಟ್ಟು, ಆಮೇಲೆ ಮಂತ್ರಾಲೋಚನೆಗಳನ್ನು ಮಾಡಬೇಕು. ಮಂತ್ರಾಲೋಚನೆ ಮಾಡತಕ್ಕ ಸ್ಥಳದಲ್ಲಿ, ಶಾರಿಕೆಯನ್ನಾಗಲಿ, ಗಿಳಿಗಳನ್ನಾಗಲಿ, ಬಾಲಕರನ್ನಾಗಲಿ, ಮೂರ್ಖರು ಮುಂತಾಗಿ ಕೆಲಸಕ್ಕೆ ಬಾರದವರೆಂದು ತೋರಿದವರನ್ನಾಗಲಿ ಇರಿಸಬಾರದು. ಒಳಗೆ ಇದ್ದವರನ್ನೆಲ್ಲ ಹೊರಗೆ ಕಳುಹಿಸಿ, ತನಗೆ ನಂಬಿಕೆಯುಳ್ಳ ಬ್ರಾಹ್ಮಣರನ್ನು ಕರೆದು ಆಲೋಚಿಸಬೇಕು. ತಾನು ಆಲೋಚನೆಮಾಡತಕ್ಕ ಬ್ರಾಹ್ಮಣರು ಧಾರ್ಮಿಕರಾಗಿಯೂ, ನೀತಿಜ್ಞರಾಗಿಯೂ, ನ್ಯಾಯಶಾಸ್ತ್ರಗಳನ್ನೋದಿದವರಾಗಿಯೂ, ಇತಿಹಾಸಗಳನ್ನು ಬಲ್ಲವರಾಗಿಯೂ ಇರಬೇಕು. ಈ ಮಂತ್ರಾಲೋಚನೆಯನ್ನು ಮಾಡಿದಮೇಲೆ ಅದನ್ನು ಹೊರಕ್ಕೆ ಬಿಡದೆ, ಮುಂದಿನ ಕೆಲವು ಕಾರ್ಯವನ್ನು ಕುರಿತು ತನ್ನಲ್ಲಿತಾನೇ ಆಲೋಚಿಸಿ ನಿಶ್ಚಯಿಸಿಕೊಳ್ಳಬೇಕು. ತನ್ನ ಮಂತ್ರಿಗಳಿಗೂ ತನ್ನ ಆಲೋಚನೆಯು ತಿಳಿಯದಂತಿರಬೇಕು. ಇದಕ್ಕೆ ಮೊದಲು ಪುರಾತನವೀರರು ಸೂಚಿಸಿದ ಮಂತ್ರಾಲೋಚನೆಗಳನ್ನೇ ಅನುಸರಿಸಿ, ಅದರಮೇಲೆ ತನ್ನ ಸ್ವಬುದ್ಧಿಯಿಂದ ಧರ್ಮಾರ್ಥಗಳನ್ನನುಸರಿಸಿ, ತನ್ನಲ್ಲಿತಾನೇ ಆಗಲಿ, ತನಗೆ ಪರಮಾಪ್ತನೂ, ನೀತಿಜ್ಞನೂ ಆದ ಒಬ್ಬ ಬ್ರಾಹ್ಮಣನೊಡನೆಯಾಗಲಿ ಕಾರ್ಯನಿಶ್ಚಯವನ್ನು ಮಾಡಬೇಕು. ಈ ಇಬ್ಬರನ್ನು ಬಿಟ್ಟು ಮೂರನೆಯವನ ಕಿವಿಗೆ ಬೀಳಲೇಬಾರದು. “ಷಟ್ಕರ್ಣೋ ಭಿದ್ಯತೇ ಮಂತ್ರಃ” ಎಂದರೆ, ಆರು ಕಿವಿಗಳಿಗೆ ಬಿದ್ದ ಮಂತ್ರಾಲೋಚನೆಯು ಒಡೆದು (ಹೊರಬಿದ್ದು) ಹೋಗುವುವೆಂದು ನೀತಿಶಾಸ್ತ್ರವುಂಟು. ಹೊರಬಿದ್ದ ಮಂತ್ರಾಲೋಚನೆಯು ಕೈಗೆ ಬಂದ ಲಕ್ಷ್ಮಿಯನ್ನೂ ಕೆಡಿಸಿಬಿಡುವುದು. ಪ್ರಾಜ್ಞನಾದವನು ತನ್ನ ಮತ್ತು ಪರರ ಆಲೋಚನೆಯನ್ನೆಲ್ಲ ಅನೇಕಾವರ್ತಿ ಪರಿಶೀಲಿಸಿ, ಗುಣಭಾಗವನ್ನು

ಗ್ರಹಿಸಬೇಕು. ಸಾಕೆಂದು ತೃಪ್ತಿಪಡಬಾರದು. ಇತರರ ರಹಸ್ಯವನ್ನು ಹೊರಬೀಳಿಸದೆ, ಕ್ರೂರಕಾರ್ಯಗಳನ್ನು ಮಾಡದೆ, ಮೀನುಹಿಡಿಯುವವನಂತೆ ಹಿಂಸಿಸದೆ ಯಾವಾತನೂ ದೊಡ್ಡ ಐಶ್ವರ್ಯವನ್ನು ಹೊಂದಲಾರನು. ಶತ್ರುಸೈನ್ಯವು ಬಹಳ ಬಳಲಿರುವಾಗಲೂ, ರೋಗಗ್ರಸ್ತವಾಗಿರುವಾಗಲೂ, ಮಳೆಗೆ ಸಿಕ್ಕಿಬಿದ್ದಿರುವಾಗಲೂ, ಹುಲ್ಲುಕಡ್ಡಿಗಳಿಲ್ಲದಿದ್ದಾಗಲೂ, ಅನ್ನಪಾನಗಳಿಲ್ಲದಿದ್ದಾಗಲೂ, ನಂಬಿಕೆಯಿಂದ ಅಲಕ್ಷ್ಯವಾಗಿದ್ದಾಗಲೂ ಸಮಯವನ್ನು ನೋಡಿ ನಿಗ್ರಹಿಸಿಬಿಡಬೇಕು. ಲೋಕದಲ್ಲಿ ಹಣಗಾರನು ಹಣಗಾರನನ್ನು ಆಶ್ರಯಿಸಲಾರನು ತನ್ನ ಕೆಲಸವು ಮುಗಿದು ಕೃತಾರ್ಥನಾದವನು ತಿರುಗಿ ಸ್ನೇಹಕ್ಕಾಗಿ ನಮ್ಮಲ್ಲಿಗೆ ಬರಲಾರನು. ಆದುದರಿಂದ, ಯಾರ ಕಾರ್ಯವನ್ನಾದರೂ ಪೂರ್ತಿಯಾಗಿ ಮುಗಿಸದೆ ಸ್ವಲ್ಪ ಅವಶಿಷ್ಟವಾಗಿಯೇ ಬಿಟ್ಟಿರಬೇಕು. ಐಶ್ವರ್ಯವನ್ನು ಕೋರತಕ್ಕವನು ಕೋಪವನ್ನು ಬಿಟ್ಟು ಮಿತ್ರರನ್ನು ಸಂಗ್ರಹಿಸುವುದರಲ್ಲಿಯೂ, ಶತ್ರುಗಳನ್ನು ಅಡಗಿಸುವುದರಲ್ಲಿಯೂ ಎಡೆಬಿಡದೆ ಯತ್ನಮಾಡುತ್ತಿರಬೇಕು. ಸದಾ ಉತ್ಸಾಹಪರನಾಗಿರಬೇಕು. ರಾಜನು ಮಾಡತಕ್ಕ ಕೆಲಸವೇನೆಂಬುದು ಅವನ ಮಿತ್ರರಿಗಾಗಲಿ, ಶತ್ರುಗಳಿಗಾಗಲಿ ತಿಳಿಯಬಾರದು. ಆರಂಭಿಸಿ ಚೆನ್ನಾಗಿ ಕಾರ್ಯವು ಮುಗಿದಮೇಲೆಯೇ ಅದು ಇತರರಿಗೆ ತಿಳಿಯಬೇಕು. ಭಯವು ಬರುವುದಕ್ಕೆ ಮೊದಲು ನಾವು ಭಯಪಡುತ್ತಲೇ ಇರಬೇಕು. ಭಯವು ಬಂದಮೇಲೆ ನಿರ್ಭಯವಾಗಿ ಮೇಲೆಬಿದ್ದು ಹೊಡೆಯಬೇಕು. ದುರ್ದೈವದಿಂದ ಕೆಟ್ಟುಹೋದ ಶತ್ರುವಿನಲ್ಲಿ ಕನಿಕರವಿಟ್ಟು ಯಾವನು ಅವನಿಗೆ ಉಪಕಾರವನ್ನು ಮಾಡುವನೋ, ಹೇಸರಗತ್ತೆಯು ಗರ್ಭವನ್ನು ಧರಿಸುವಂತೆ ತನಗೆ ತಾನೇ ಮೃತ್ಯುವನ್ನು ತಂದುಕೊಳ್ಳುವನು. ಇನ್ನೂ ಬಾರದ ಕಾರ್ಯಗಳನ್ನೂ, ನಿಶ್ಚಯವಾಗಿ ಶೀಘ್ರದಲ್ಲಿಯೇ ಬರಬಹುದಾದುವುಗಳನ್ನೂ ಮುಂದಾಗಿಯೇ ತಿಳಿದುಕೊಳ್ಳಬೇಕು. ಅಜ್ಞತೆಯಿಂದ ಯಾವ ಪ್ರಯೋಜನವೂ ಕೆಟ್ಟುಹೋಗಲು ಅವಕಾಶಕೊಡಬಾರದು. ದೇಶಕಾಲಗಳನ್ನೂ ದೈವವನ್ನೂ, ಧರ್ಮಾರ್ಥಕಾಮಗಳನ್ನೂ ಪ್ರತ್ಯೇಕಿಸಿ ತಿಳಿದು, ಅದಕ್ಕನುಗುಣವಾದ ಉತ್ಸಾಹವನ್ನವಲಂಬಿಸಬೇಕು. ದೇಶಕಾಲಗಳೆರಡನ್ನೂ ಸರಿಯಾಗಿ ತಿಳಿಯುವುದೇ ಕಾರ್ಯಸಿದ್ಧಿಗೆ ಮುಖ್ಯವೆಂದು ತಿಳಿಯಬೇಕು. ಮೊಳೆ

ಯುವ ಶತ್ರುವನ್ನು ಮೊಳೆಯಲ್ಲಿಯೇ ಕಿತ್ತುಹಾಕದೆ ಅಲಕ್ಷ್ಯವಾಗಿ ಬಿಟ್ಟರೆ ಅವನು ತಾಳೆಯಮರದಂತೆ ದೃಢವಾಗಿ ಬೇರುಬಿಟ್ಟುಕೊಂಡು ಕಾಡಿನಲ್ಲಿ ಬಿದ್ದ ಕಿಡಿಯಂತೆ ಶೀಘ್ರದಲ್ಲಿಯೇ ಪ್ರಬಲವಾಗಿಬಿಡುವನು. ಬೆಂಕಿಯ ಕಿಡಿಯಂತೆ ತನಗೆತಾನೇ ವೃದ್ಧಿಯಾಗಲು ಅವಕಾಶವನ್ನು ಪಡೆದವನು, ಮೇಲೆಮೇಲೆ ಪ್ರಬಲನಾಗಿ ಆಮೇಲೆ ದೊಡ್ಡ ಕೂಟವನ್ನಾದರೂ ಭಕ್ಷಿಸಿ ಬಿಡುವನು. ಆರಂಭದಲ್ಲಿ "ಕೇಳಿದವರಿಗೆ ಬೇಕಾದುದನ್ನು ಯಥೇಷ್ಟವಾಗಿ ಕೊಡುವೆ"ನೆಂದು ನಿಸ್ಸಾರವಾದ ಇಂಪುಮಾತುಗಳನ್ನಾಡಿ ಜನರಿಗೆ ಆಶೆಹು ಟ್ಟಿಸಬೇಕು. ಆ ಆಶೆಯನ್ನು ಮುಂದೆಮುಂದೆ ಹಾಕುತ್ತ ಕಾಲವನ್ನು ತಳ್ಳುತ್ತಿರಬೇಕು. ಆ ಆಶೆಯನ್ನು ನೆರವೇರಿಸಬೇಕಾದ ಕಾಲವು ಬಂದಾಗ, ವಿಘ್ನಗಳನ್ನು ತಂದೊಡ್ಡಬೇಕು. ಆ ವಿಘ್ನಗಳಿಗೆ ಕಾರಣಗಳನ್ನೂ ಕಲ್ಪಿ ಸಬೇಕು. ಆ ಕಾರಣಗಳೂ ನ್ಯಾಯಯುಕ್ತವಾಗಿರುವಂತೆ ತೋರ ಬೇಕು. ಕಠಿನವಾದ ಲೋಹದಿಂದ ನಿರ್ಮಿತವಾಗಿಯೂ, ತೀಕ್ಷ್ಣವಾಗಿ ಯೂ ಇರುವ ಕ್ಷೌರದಕತ್ತಿಯು ಒರೆಯಲ್ಲಿಯೇ ಅಡಗಿದ್ದು, ಸಮಯದಲ್ಲಿ ಹೊರಬಿದ್ದು ಕಾರ್ಯಸಾಧನೆ ಮಾಡುವಂತೆ, ಮನುಷ್ಯನು ಕಾಲವನ್ನು ನಿರೀಕ್ಷಿಸುತ್ತ ತನ್ನ ರಹಸ್ಯವನ್ನು ಹೊರಪಡಿಸದೆ ಗೂಢವಾಗಿಟ್ಟಿದ್ದು ಶತ್ರು ಗಳನ್ನು ಕತ್ತರಿಸಿಬಿಡಬೇಕು.

ರಾಜಾ! ನೀನು ಪಾಂಡವರಲ್ಲಿಯಾಗಲಿ, ಇತರರಲ್ಲಿಯಾಗಲಿ, ನ್ಯಾ ಯರೀತಿಯಾಗಿ ವರ್ತಿಸಬೇಕಾದರೂ, ನೀನು ಮುಳುಗಿಹೋಗದ ರೀತಿ ಯಲ್ಲಿ ಸರಿಯಾದ ಮಾರ್ಗವನ್ನು ಹಿಡಿದು ಪ್ರವರ್ತಿಸು. ರಾಜೇಂದ್ರಾ! ಲೋಕದಲ್ಲಿ ಎಲ್ಲಾ ಭಾಗ್ಯಗಳಿಂದ ಕೂಡಿದ್ದವನೇ ಮೇಲೆನಿಸಿಕೊಳ್ಳುವನೆಂ ಬುದು ನಿಶ್ಚಯವು. ಆದುದರಿಂದ ನೀನು ಪಾಂಡುಕುಮಾರರ ವಿಷಯ ದಲ್ಲಿ ವ್ಯವಹರಿಸುವಾಗ, ನಿನ್ನ ರಕ್ಷಣೆಯಲ್ಲಿ ನೀನು ಜಾಗರೂಕನಾಗಿರು. ನಿನ್ನ ತಮ್ಮನ ಮಕ್ಕಳಾದ ಪಾಂಡವರೇನೋ ನಿನಗೆ ದಾಯಾದರೇ! ಮ ತ್ತು ಅವರು ಬಹಳ ಬಲಾಧಿಕರು. ಆದುದರಿಂದ ಮುಂದೆ ನಿನಗೆ ಸಂಕ ಟಕ್ಕೆ ಸಿಕ್ಕಿ ಕೊರಗದಹಾಗೆ ಈಗಲೇ ಎಚ್ಚರದಿಂದ ನಡೆ! ನಿನಗೆ ಮುಂದೆ ಹಾನಿಯಿಲ್ಲದ ನೀತಿಯನ್ನು ಹಿಡಿ" ಎಂದನು.

ಓ ಜನಮೇಜಯರಾಜಾ! ಕಣಿಕನು ಧೃತರಾಷ್ಟ್ರನಿಗೆ ಹೀಗೆಂದು ಹೇಳಿ, ತನ್ನ ಮನೆಗೆ ಹಿಂತಿರುಗಿಬಿಟ್ಟನು. ಈ ಮಾತುಗಳನ್ನು ಕೇಳಿ ಧೃತರಾಷ್ಟ್ರನ ಮನಸ್ಸಿಗೆ ಪ್ರಬಲವಾದ ಚಿಂತೆ ಹುಟ್ಟಿತು.

ಇದು ಸೂರ ಐವತ್ತುಮೂರನೆಯ ಅಧ್ಯಾಯವು.

**ಇಲ್ಲಿಗೆ ಸಂಭವಪರ್ವವು ಮುಗಿದುದು.**